# ಸೂತ್ರಾರ್ಥರತ್ನಾವಲೀ

ಕನ್ನಡ ಅನುವಾದ ಸಹಿತ



## ಭಾಗ-2 (3,4 ಅಧ್ಯಾಯಗಳು)


: ಅನುವಾದ :

**ಡಾ.ಕಾಂತೇಶಾಚಾರ್ಯ ಕದರಮಂಡಲಗಿ**



: ಪ್ರಕಾಶನ :

ದ್ವೈತವೇದಾಂತ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ,

ಬೆಂಗಳೂರು - 4

# ಸೂತ್ರಾರ್ಥರತ್ನಾವಲೀ

## ಕನ್ನಡ ಅನುವಾದ

ಭಾಗ - 2

ಅನುವಾದ
ಡಾ|| ಕಾಂತೇಶಾಚಾರ್ಯ ಕದರಮಂಡಲಗಿ

*This Volume is published with the grant from the Govt. of Karnataka*

ಪ್ರಕಾಶಕರು
ದ್ವೈತವೇದಾಂತ ಅಧ್ಯಯನ ಮತ್ತು ಸಂಶೋಧನ ಕೇಂದ್ರ, ಬೆಂಗಳೂರು-04.

ಶ್ರೀಗುರುಭ್ಯೋ ನಮಃ
ಹರಿಃ ಓಂ

# ಮುನ್ನುಡಿ

ಸಕಲಸಜ್ಜನರು ಕಲಿಕಾಲಬಲದಿಂದಾಗಿ, ಗೌತಮರ ಶಾಪದಿಂದಾಗಿ ಸಂಶಯ-ವಿಪರೀತಜ್ಞಾನಗಳಿಂದ ಜ್ಞಾನಾಂಧರಾಗುತ್ತಿರಲು ಬ್ರಹ್ಮ-ರುದ್ರಾದಿಗಳಿಂದ ಪ್ರಾರ್ಥಿತನಾದ ಭಗವಂತನು ಪರಾಶರರ ಮೂಲಕ ಸತ್ಯವತೀದೇವಿಯಲ್ಲಿ ವೇದವ್ಯಾಸರೂಪದಿಂದ ಅವತಾರ ಮಾಡಿದನು. ಅಧ್ಯಯನ ಪರಂಪರೆಯೇ ವಿಚ್ಛಿನ್ನವಾಗಿ, ಅಪಪಾಠಾದಿಗಳಿಂದಾಗಿ ವೇದಗಳ ನಿಜವಾದ ಅಭಿಪ್ರಾಯವೇ ನಿಲುಕದಂತಹ ಸಂದರ್ಭದಲ್ಲಿ ಶಾಖೆ-ಉಪಶಾಖೆಗಳ ಪ್ರಭೇದದಿಂದ ವೇದಗಳನ್ನು ಸರಿಯಾಗಿ ವಿಭಾಗ ಮಾಡಿ "ವೇದವ್ಯಾಸ"ರೆನಿಸಿದರು.

ವೇದಗಳು ಅಪೌರುಷೇಯವಾದರೂ ಅಧ್ಯೇತೃಗಳ ಬುದ್ಧಿದೋಷದಿಂದಾಗಿ ಅಪಾರ್ಥವಾಗುವ ಸನ್ನಿವೇಶವನ್ನು ಸೂಕ್ಷ್ಮವಾಗಿ ಅರಿತ ವೇದವ್ಯಾಸರು ಶ್ರುತಿಗಳ ಅರ್ಥನಿರ್ಣಯಕ್ಕಾಗಿ ಬ್ರಹ್ಮಸೂತ್ರಗಳನ್ನು ರಚಿಸಿದರು.

ಬ್ರಹ್ಮಸೂತ್ರಗಳು ಶ್ರುತ್ಯರ್ಥನಿರ್ಣಾಯಕವಾದವುಗಳು. ಶ್ರುತಿಗಳಲ್ಲಿ ಕೆಲವು ವಾಕ್ಯಗಳ ಅರ್ಥ ಸಂದಿಗ್ಧವಾಗಿರುತ್ತದೆ. ಇನ್ನು ಕೆಲವು ಸಂದರ್ಭಗಳಲ್ಲಿ ವಿಪರೀತವಾದ ಅರ್ಥವೇ ತೋರುತ್ತದೆ. ಮತ್ತೆ ಕೆಲವು ಪ್ರಸಂಗಗಳಲ್ಲಿ ಎರಡು ವಾಕ್ಯಗಳು ವಿರುದ್ಧವಾದ ಅರ್ಥಗಳನ್ನು ಹೊಂದಿರುತ್ತವೆ. ಇಂತಹ ಸಂದರ್ಭಗಳಲ್ಲಿ

**धर्मे प्रमीयमाणे हि वेदेन करणात्मना ।**
**इतिकर्तव्यताभागं मीमांसा पूरयिष्यति ।।**

ಎಂಬುದಾಗಿ ಹೇಳಿದಂತೆ ಬ್ರಹ್ಮಸೂತ್ರಗಳು ಇಂತಹ ಎಲ್ಲ ಶ್ರುತ್ಯರ್ಥಗಳನ್ನು ನಿರ್ಣಯ ಮಾಡುತ್ತವೆ. ಅಂತೆಯೇ ಬ್ರಹ್ಮಸೂತ್ರಗಳಿಗೆ "ನಿರ್ಣಾಯಕಶಾಸ್ತ್ರ" ಎಂದು ಕರೆಯುತ್ತಾರೆ. "ಇತಿಕರ್ತವ್ಯತಾ" ಎನ್ನುವುದು ಇದರ ಮತ್ತೊಂದು ಹೆಸರು.

ಈ ರೀತಿಯಾಗಿ ವೇದಾಂತಪ್ರಪಂಚದಲ್ಲಿಯೇ ಬಹಳ ವಿಶಿಷ್ಟವಾದ ಸ್ಥಾನ ಪಡೆದಿರುವ ಬ್ರಹ್ಮಸೂತ್ರಗಳು ಒಟ್ಟು 564 ಸಂಖ್ಯೆಯಲ್ಲಿವೆ. ಇಷ್ಟು ಸೂತ್ರಗಳನ್ನು ನಾಲ್ಕು ಅಧ್ಯಾಯಗಳಲ್ಲಿ ವಿಂಗಡಿಸಿದ್ದಾರೆ ವ್ಯಾಸರು.

1. ಸಮನ್ವಯಾಧ್ಯಾಯ
2. ಅವಿರೋಧಾಧ್ಯಾಯ
3. ಸಾಧನಾಧ್ಯಾಯ
4. ಫಲಾಧ್ಯಾಯ

1. ಮೊದಲನೇ ಅಧ್ಯಾಯವಾದ ಸಮನ್ವಯಾಧ್ಯಾಯದಲ್ಲಿ ವೇದಗಳಲ್ಲಿ ಬರುವ ಎಲ್ಲ ಶಬ್ದಗಳನ್ನೂ ಪರಮಾತ್ಮನಲ್ಲಿ ಸಮನ್ವಯ ಮಾಡುವ ಮೂಲಕ ಆ ಶಬ್ದಗಳ ಅರ್ಥವಾದ ಅನಂತಗುಣಗಳನ್ನು ಪರಮಾತ್ಮನಲ್ಲಿ ಸಮರ್ಥಿಸಲಾಗುತ್ತದೆ.

2. ಎರಡನೇ ಅಧ್ಯಾಯವಾದ ಅವಿರೋಧಾಧ್ಯಾಯದಲ್ಲಿ ಮಾಡುವ ಕಾರ್ಯ ಅದು ವಿರೋಧಪರಿಹಾರ. ಅಂದರೆ ಮೊದಲನೇ ಸಮನ್ವಯಾಧ್ಯಾಯದಲ್ಲಿ ಮಾಡಿದ ಶ್ರುತಿಸಮನ್ವಯಕ್ಕೆ ಯುಕ್ತಿವಿರೋಧ-ಶ್ರುತಿವಿರೋಧ- ಮತಾಂತರವಿರೋಧ ಹೀಗೆ ಅನೇಕ ವಿರೋಧಗಳು ತೋರಿಬಂದಾಗ ಆ ಎಲ್ಲವಿಧ ವಿರೋಧಗಳನ್ನೂ ಪರಿಹಾರ ಮಾಡುವ ಮೂಲಕ ಭಗವಂತನಿಗೆ ನಿರ್ದೋಷತ್ವವನ್ನು ದ್ವಿತೀಯಾಧ್ಯಾಯದಲ್ಲಿ ಸಮರ್ಥಿಸಲಾಗುತ್ತದೆ.

3. ಪರಮಾತ್ಮನನ್ನು ಅಪರೋಕ್ಷೀಕರಿಸಿಕೊಳ್ಳಲು ಬೇಕಾದ ಭಕ್ತಿ-ಜ್ಞಾನ-ಉಪಾಸನಾದಿ ಸಾಧನಗಳನ್ನು ಮೂರನೇ ಅಧ್ಯಾಯವಾದ ಸಾಧನಾಧ್ಯಾಯದಲ್ಲಿ ತಿಳಿಸಲಾಗಿದೆ.

4. ಇಂತಹ ಭಕ್ತಿ-ಜ್ಞಾನ-ಉಪಾಸನಾದಿ ಸಾಧನಗಳನ್ನು ಸಂಪಾದಿಸಿದ ವ್ಯಕ್ತಿಗೆ ಎಂತಹ ಫಲ ಸಿಗುತ್ತದೆ? ಎಂಬುದರ ವಿವರಣೆ ನಾಲ್ಕನೇ ಫಲಾಧ್ಯಾಯದಲ್ಲಿ ಸಿಗುತ್ತದೆ.

ಈ ರೀತಿಯಾಗಿ ನಾಲ್ಕು ಅಧ್ಯಾಯಗಳ ಮೂಲಕ ಭಗವಂತನಿಗೆ ಅನಂತಗುಣ-ಪರಿಪೂರ್ಣತ್ವ, ನಿರ್ದೋಷತ್ವ, ಜ್ಞೇಯತ್ವ, ಗಮ್ಯತ್ವಗಳನ್ನು ಒಟ್ಟಾಗಿ ಬ್ರಹ್ಮಸೂತ್ರ-ಗಳಲ್ಲಿ ಸಮರ್ಥಿಸಿದ್ದಾರೆ ವ್ಯಾಸರು.

ಈ ಗ್ರಂಥವು ಸೂತ್ರರೂಪದಲ್ಲಿ ಇದ್ದು ತಿಳಿಸಬೇಕಾದ ವಿಷಯಗಳನ್ನು ಸಂಕ್ಷಿಪ್ತವಾಗಿ ತಿಳಿಸುತ್ತದೆ. ಈ ಗ್ರಂಥದ ಮೇಲೆ ಶಂಕರ-ರಾಮಾನುಜ-ಮಧ್ವ ಎಂಬ ಪ್ರಸಿದ್ಧರಾದ ಮೂರು ಆಚಾರ್ಯರೂ ಭಾಷ್ಯ ಬರೆದಿದ್ದಾರೆ. ಮಧ್ವಾಚಾರ್ಯರ ಭಾಷ್ಯಕ್ಕೆ ಶ್ರೀಜಯತೀರ್ಥರು ತತ್ತ್ವಪ್ರಕಾಶಿಕಾ ಎಂಬ ಅದ್ಭುತ ಟೀಕೆಯನ್ನು ರಚಿಸಿದ್ದಾರೆ.

ಶ್ರೀಜಯತೀರ್ಥರ ತತ್ವಪ್ರಕಾಶಿಕಾ ಟೀಕೆಗೆ ಅನೇಕ ಟಿಪ್ಪಣಿಗಳಿವೆ. ಅವುಗಳಲ್ಲಿ ಶ್ರೀವಾದಿರಾಜರ ಗುರ್ವರ್ಥದೀಪಿಕಾ, ಶ್ರೀರಘೂತ್ತಮತೀರ್ಥರ ಭಾವಬೋಧ, ಶ್ರೀರಾಘವೇಂದ್ರಸ್ವಾಮಿಗಳ ಭಾವದೀಪ, ತಾಮ್ರಪರ್ಣೀ ಶ್ರೀನಿವಾಸಾಚಾರ್ಯರ ವ್ಯಾಖ್ಯಾರ್ಥಮುಕ್ತಾವಲೀ, ಪಾಂಡುರಂಗೀ ಶ್ರೀನಿವಾಸಾಚಾರ್ಯರ ತತ್ವಸುಬೋಧಿನೀ, ಶರ್ಕರಾ ಶ್ರೀನಿವಾಸಾಚಾರ್ಯರ ಶರ್ಕರಾ ಟಿಪ್ಪಣಿ ಇವು ಮುಖ್ಯವಾದವು. ಇವುಗಳಲ್ಲಿ ಸೂತ್ರಗಳ ಭಾಷ್ಯದ ವಿಸ್ತಾರವಾದ ನಿರೂಪಣೆ ಇದೆ.

ಟಿಪ್ಪಣೀಗ್ರಂಥಗಳಲ್ಲದೇ ಬ್ರಹ್ಮಸೂತ್ರಗಳ ಅಧ್ಯಯನದ ಸೌಕರ್ಯಕ್ಕಾಗಿ ಸೂತ್ರಗಳನ್ನೇ ವಿವರಿಸುವ ಕೆಲವು ಸ್ವತಂತ್ರ ಗ್ರಂಥಗಳೂ ಇವೆ.

ಅಂತಹ ಸ್ವತಂತ್ರಗ್ರಂಥಗಳಲ್ಲಿ ಸೂತ್ರಾರ್ಥರತ್ನಾವಲೀ ಎನ್ನುವುದು ಬಹಳ ಉಪಯುಕ್ತವಾದ ಗ್ರಂಥವಾಗಿದೆ. ಇದರಲ್ಲಿ ಪ್ರತಿಯೊಂದು ಸೂತ್ರಕ್ಕೂ ಪೀಠಿಕಾ-ರೂಪದಲ್ಲಿ ಸಂಗತಿ-ಪೂರ್ವಪಕ್ಷಗಳನ್ನು ಹೇಳಿ, ನಂತರ ಸೂತ್ರಾರ್ಥವನ್ನು ತಿಳಿಸಿ, ಕೊನೆಗೆ ಸಿದ್ಧಾಂತವನ್ನು ನಿರೂಪಿಸುತ್ತಾರೆ. ಇದರಿಂದ ಪ್ರತಿಯೊಂದು ಸೂತ್ರದ ಮತ್ತು ಅಧಿಕರಣದ ಅಭಿಪ್ರಾಯವನ್ನು ತಿಳಿದುಕೊಳ್ಳಲು ತುಂಬ ಸಹಾಯವಾಗುತ್ತದೆ.

ಈ ಗ್ರಂಥದ ಶೈಲಿಯು ಆಧುನಿಕರ ಶೈಲಿಯಂತೆ ಇದೆ. ಈ ಗ್ರಂಥಕ್ಕೆ ಮಂಗಳ ಶ್ಲೋಕವನ್ನು ಮತ್ತು ಉಪಸಂಹಾರ ಶ್ಲೋಕವನ್ನು ಬರೆದಿರುವುದಿಲ್ಲ. ಆದ್ದರಿಂದ ಈ ಗ್ರಂಥದ ಕರ್ತೃಗಳು ಯಾರು ಎಂಬುವುದು ತಿಳಿದುಬರುವುದಿಲ್ಲ.

ಈ ಗ್ರಂಥದ ಪ್ರಕಾಶಕರಾದ ಧಾರವಾಡದ ಸವಣೂರು ಗೋವಿಂದರಾಯರು "ಈ ಗ್ರಂಥಪ್ರಕಾಶನಕ್ಕೆ ಸವಣೂರು ಹತ್ತಿರದ ಕಡಕೋಳ ಗ್ರಾಮದ ಪಾಂಡುರಂಗೀ ಬೋಧರಾಚಾರ್ಯರ ಮತ್ತು ತಿರುಪತಿಯ ಪಾಂಡುರಂಗೀ ಹುಚ್ಚಾಚಾರ್ಯರ ಮಕ್ಕಳಾದ ಶ್ರೀನಿವಾಸಾಚಾರ್ಯರ ಸಹಾಯವು ಬಹಳವಾಗಿ ದೊರೆಯಿತು" ಎಂದು ಹೇಳಿರುತ್ತಾರೆ. ಇವರು ಈ ಗ್ರಂಥಕರ್ತೃಗಳೆಂದು ಸ್ಪಷ್ಟವಾಗಿ ಉಲ್ಲೇಖಿಸುವುದಿಲ್ಲ. ಮತ್ತು ಬೇರೆ ಗ್ರಂಥಕಾರರ ಹೆಸರನ್ನೂ ಉಲ್ಲೇಖಿಸುವುದಿಲ್ಲ. ಈ ಗ್ರಂಥದ ಶೈಲಿಯನ್ನು ನೋಡಿದರೆ ಮೇಲೆ ಹೇಳಿದ ಇಬ್ಬರು ಪಾಂಡುರಂಗೀ ಮನೆತನದ ವಿದ್ವಾಂಸರು ಇದರ ಕರ್ತೃಗಳಾಗಿರಬೇಕೆಂದು ತೋರುತ್ತದೆ.

ಭಾಷ್ಯದ ಮಂಗಳಶ್ಲೋಕವೇ ಈ ಗ್ರಂಥಕ್ಕೂ ಮಂಗಳಶ್ಲೋಕವೆಂದೂ ಭಾವಿಸಿ ಪ್ರತ್ಯೇಕವಾದ ಮಂಗಲಶ್ಲೋಕವನ್ನು ಬರೆದಿರಲಿಕ್ಕಿಲ್ಲ.

ಇದು ಏನೇ ಇದ್ದರೂ ಈ ಗ್ರಂಥವು ಬ್ರಹ್ಮಸೂತ್ರಗಳಲ್ಲಿ ಪ್ರತಿಪಾದಿತವಾದ ತತ್ವಗಳನ್ನು ತಿಳಿದುಕೊಳ್ಳಲು ತುಂಬ ಸಹಾಯಕವಾಗಿದೆ.

ವಿದ್ವಾನ್ ಕಾಂತೇಶಾಚಾರ್ಯ ಕದರಮಂಡಲಗಿ ಇವರು ಈ ಗ್ರಂಥದ ಕನ್ನಡ ಅನುವಾದವನ್ನು ಮಾಡಿದ್ದಾರೆ. ಇವರು ಈ ಮೊದಲೇ ಖಂಡನತ್ರಯಗಳು, ವಾದಾವಲೀ ಮೊದಲಾದ ಗ್ರಂಥಗಳ ಕನ್ನಡ ಅನುವಾದವನ್ನು ಸುಂದರವಾಗಿ ಮಾಡಿದ್ದಾರೆ.

ಸಂಸ್ಕೃತ ಗ್ರಂಥಗಳನ್ನು ಮೂಲದಿಂದಲೇ ತಿಳಿದುಕೊಳ್ಳಲು ಶ್ರಮವಾಗುತ್ತಿರುವ ಈ ಕಾಲದಲ್ಲಿ ಅವುಗಳ ಕನ್ನಡ ಅನುವಾದವನ್ನು ಮಾಡಿ ಸಜ್ಜನರಿಗೆ ತಿಳಿಸಿಕೊಡುವ ಕಾರ್ಯವು ಬಹಳ ಉಪಯುಕ್ತವಾದ ಕಾರ್ಯವಾಗಿದೆ.

ಕಾಂತೇಶಾಚಾರ್ಯರು ಈ ಕನ್ನಡ ಅನುವಾದ ಕಾರ್ಯವನ್ನು ಮುಂದು-ವರೆಸಲಿ. ಹಾಗೂ ಯುಕ್ತಿಮಲ್ಲಿಕಾ ಮೊದಲಾದ ಗ್ರಂಥಗಳ ಅನುವಾದವನ್ನೂ ಮಾಡಲಿ ಎಂದು ಹಾರೈಸುವೆವು.

**ಪ್ರೊ. ಕೆ.ಟಿ. ಪಾಂಡುರಂಗೀ**

ದರ್ಶನಕಲಾನಿಧಿ, ರಾಷ್ಟ್ರಪತಿ ಪ್ರಶಸ್ತಿ ಪುರಸ್ಕೃತರು,

ಮಹಾಮಹೋಪಾಧ್ಯಾಯರು

ಅಧ್ಯಕ್ಷರು

ದ್ವೈತವೇದಾಂತ ಅಧ್ಯಯನ ಮತ್ತು ಸಂಶೋಧನ ಕೇಂದ್ರ

# ವಿಷಯಾನುಕ್ರಮಣಿಕಾ

## ಅಥ ತೃತೀಯಾಧ್ಯಾಯ

### ಪ್ರಥಮಃ ಪಾದಃ



### ದ್ವಿತೀಯಃ ಪಾದಃ



### ತೃತೀಯಃ ಪಾದಃ

# ಸೂತ್ರಾರ್ಥ ರತ್ನಾವಲೀ

## तृतीयोऽध्यायः

### प्रथमः पादः

*ಅಧಿಕರಣ – 1*

## ತದಂತರಾಧಿಕರಣ

### ಅಧ್ಯಾಯ ಸಂಗತಿ

**ಸೂತ್ರಾರ್ಥ ರತ್ನಾವಲೀ : साधनविचारोऽयमध्यायः ।**

ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ ಎಂಬ ಸೂತ್ರದಲ್ಲಿ ಸಂಕ್ಷೇಪವಾಗಿ ಶಾಸ್ತ್ರಾರ್ಥವು ಸೂಚಿತವಾಗುತ್ತಿರಲು, 'ಕಿಂ ತದ್ ಬ್ರಹ್ಮ?' (ಬ್ರಹ್ಮ ಯಾರು? ಬ್ರಹ್ಮನ ಸ್ವರೂಪವೇನು?) ಎಂಬುದಾಗಿ ಶಂಕೆ ಬಂದಾಗ, ದ್ವಿತೀಯಸೂತ್ರದಲ್ಲಿ ನಿಗದಿತವಾದ ಬ್ರಹ್ಮಸ್ವರೂಪವನ್ನು ಮೊದಲನೇ ಅಧ್ಯಾಯದಲ್ಲಿ ಸಮರ್ಥಿಸಲಾಯಿತು.

ಬ್ರಹ್ಮಸ್ವರೂಪದ ವಿಷಯದಲ್ಲಿ (ಬ್ರಹ್ಮನ ಜಗಜ್ಜನ್ಮಾದಿಕರ್ತೃತ್ವದ ವಿಷಯದಲ್ಲಿ) ಬಂದ ವಿರೋಧಗಳನ್ನು ಎರಡನೇ ಅಧ್ಯಾಯದಲ್ಲಿ ಪರಿಹರಿಸಲಾಯಿತು.

ಹಾಗಾದರೆ 'ಕಿಂ ಕಾರ್ಯಂ ಮಯಾ ?' (ನಾನೇನು ಮಾಡಬೇಕು? ಏನೇನು ಸಾಧನೆ ಮಾಡಬೇಕು?) ಎಂಬುದಾಗಿ ಜಿಜ್ಞಾಸುವಿಗೆ ಶಂಕೆ ಬಂದಾಗ ಅಥ ಹಾಗೂ ಬ್ರಹ್ಮಜಿಜ್ಞಾಸಾ ಪದಗಳಿಂದ ಏನೇನು ಮೋಕ್ಷಸಾಧನಗಳು ವಿಹಿತವಾಗಿವೆಯೋ ಆ ಎಲ್ಲ ಸಾಧನಗಳ ವಿಚಾರವನ್ನು ಈ ಮೂರನೇ ಅಧ್ಯಾಯದಲ್ಲಿ ನಿರೂಪಿಸುತ್ತಾರೆ.

### ಪಾದಸಂಗತಿ

**ಸೂ.ರ.:– वैराग्यार्थे गत्यादिनिरूपणाऽस्मिन्पादे क्रियते ॥**

ವೈರಾಗ್ಯಕ್ಕಾಗಿ ಗತ್ಯಾದಿನಿರೂಪಣೆಯನ್ನು ಮಾಡುತ್ತಾರೆ ಈ ಮೊದಲನೇ ಪಾದದಲ್ಲಿ.

**ಆದರ ಭಾವ** :- ಸಾಕ್ಷಾತ್ ಮೋಕ್ಷಸಾಧನವಾದದ್ದು ಭಗವಂತನ ಪ್ರಸಾದ. ಆ ಪ್ರಸಾದವು ಭಗವಂತನ ಅಪರೋಕ್ಷಜ್ಞಾನದಿಂದ ಆಗುತ್ತದೆ. ಆದರೆ ಈ ಪ್ರಸಾದ-ಜ್ಞಾನ ಎರಡೂ ಪುರುಷಪ್ರಯತ್ನ ಅಗೋಚರವಾದ್ದರಿಂದ ವಿಧಾನ ಮಾಡಲು ಶಕ್ಯವಿಲ್ಲ. ಆದಕ್ಕಾಗಿ ಜ್ಞಾನಸಾಧನವನ್ನು ವಿಧಾನ ಮಾಡಬೇಕು. ಆ ಜ್ಞಾನಸಾಧನ ಎಂದರೆ ಶ್ರವಣ-ಮನನ-ನಿದಿಧ್ಯಾಸನರೂಪವಾದ ಜಿಜ್ಞಾಸಾ ಆಗಿದೆ. ಅಂತಹ ಜಿಜ್ಞಾಸೆಗೆ ಭಗವದ್ಭಕ್ತನೇ ಅಧಿಕಾರಿಯಾಗಿದ್ದಾನೆ. ಅಂತಹ ಭಕ್ತಿಯು ಯದ್ಯಪಿ ಮಾಹಾತ್ಮ್ಯ-ಶ್ರವಣದಿಂದ ಆಗುತ್ತದೆಯಾದರೂ ವೈರಾಗ್ಯದಿಂದ ದೃಢವಾಗುತ್ತದೆ. ಹಾಗಾಗಿ ಮೋಕ್ಷಸಾಧನಗಳಲ್ಲಿ ವೈರಾಗ್ಯವೇ ಮೊದಲಿಗೆ ಅಪೇಕ್ಷಿತವಾಗಿದೆ. ಅಂತಹ ವೈರಾಗ್ಯವೂ ಸಹ ಪುರುಷನ ಪ್ರಯತ್ನಕ್ಕೆ ವಿಷಯವಲ್ಲ. ಆದಕ್ಕಾಗಿ (ವೈರಾಗ್ಯ ಹುಟ್ಟಿಸುವುದಕ್ಕಾಗಿ) ಗತಿ-ಆಗತಿ-ಸ್ವರ್ಗ-ನರಕ-ಗರ್ಭವಾಸಾದಿಗಳ ಸ್ವರೂಪವನ್ನು ಇಲ್ಲಿ ನಿರೂಪಿಸುತ್ತಾರೆ. ಹೀಗೆ ವೈರಾಗ್ಯಕ್ಕಾಗಿ ಗತ್ಯಾದಿನಿರೂಪಣೆಯನ್ನು ಮಾಡಲು ಹೊರಟಿದೆ ಮೊದಲನೇ ಪಾದ ಎಂದು ಅಭಿಪ್ರಾಯ.

### ಅಧಿಕರಣಸಂಗತಿ

**ಸೂ.ರ.:– अत्र भगवत्प्राप्तिसाधनवैराग्याय जीवस्य भूतावियोगः समर्थ्यते ।**

ಭಗವತ್ಪ್ರಾಪ್ತಿಸಾಧನವಾದ ವೈರಾಗ್ಯವನ್ನು ಹುಟ್ಟಿಸುವುದಕ್ಕಾಗಿ ಜೀವನಿಗೆ ಭೂತ-ವಿಯೋಗಾಭಾವವನ್ನು ಸಮರ್ಥಿಸುತ್ತಾರೆ ಮೊದಲನೇ ಈ ತದಂತರಾಧಿಕರಣದಲ್ಲಿ.

### ಪೂರ್ವಪಕ್ಷ

**ಸೂ.ರ.:– ननु नानुष्ठेयमेव साधनम् । फलार्थं हि साधन-मनुष्ठेयम् । फलं च बन्धनिवृत्तिः न मरणादतिरिच्यते । भूतसम्बन्धो हि बन्धः । भूतबन्धस्तु संसार इति (वाराहे.) वचनात् । न च मरणार्थमेव साधनमनुष्ठेयम् । वैराग्याद्यननुष्ठानेऽपि मरणदर्शनात् । ततश्च शास्त्रमिदं व्यर्थमिति प्राप्ते सूत्रितम् ॥**

ಸಾಧನವು ಅನುಷ್ಠೇಯವಾಗಿಲ್ಲ. (ಸಾಧನಾನುಷ್ಠಾನ ಮಾಡಬಾರದು.)

ಏಕೆಂದರೆ – ಫಲವನ್ನು ಪಡೆಯುವುದಕ್ಕಾಗಿ ತಾನೇ ಸಾಧನವು ಅನುಷ್ಠೇಯವಾಗಿದೆ. ಫಲವಾದರೂ ಬಂಧನಿವೃತ್ತಿಯಾಗಿದೆ. ಈ ಬಂಧನಿವೃತ್ತಿ ಎಂದರೆ ಮರಣವೇ ಹೊರತು ಮರಣದಿಂದ ಭಿನ್ನವಾಗಿಲ್ಲ.

ಭೂತಬಂಧಸ್ತು ಸಂಸಾರೋ ಮುಕ್ತಿಸ್ತೇಭ್ಯೋ ವಿಮೋಚನಮ್ ।

ಎಂಬುದಾಗಿ ವರಾಹಪುರಾಣದಲ್ಲಿ ಹೇಳಿದಂತೆ ಭೂತಸಂಬಂಧವೇ ಬಂಧ ಎನಿಸಿದೆ.

ಭೂತಾನಾಂ ವಿನಿವೃತ್ತಿಸ್ತು ಮರಣಂ ಸಮುದಾಹೃತಮ್ ।
ಭೂತಾನಾಂ ಸಂಪ್ರಯೋಗಶ್ಚ ಜನಿರಿತ್ಯೇವ ಪಂಡಿತೈಃ ॥

ಎಂಬುದಾಗಿ ಭಾರತದಲ್ಲಿ ಹೇಳಿದಂತೆ ಭೂತಬಂಧವೇ ಜನನ, ಭೂತ-ನಿವೃತ್ತಿಯೇ ಮರಣ ಎನಿಸುತ್ತದೆ.

ಹಾಗಾಗಿ ಭೂತನಿವೃತ್ತಿಯೇ ಫಲ. ಆ ಭೂತನಿವೃತ್ತಿ ಎಂದರೆ ಮರಣ ಎಂದಮೇಲೆ ಮರಣಕ್ಕಾಗಿ ಯಾರೂ ಸಾಧನಾನುಷ್ಠಾನ ಮಾಡುವುದಿಲ್ಲ, ವೈರಾಗ್ಯಾದಿ ಸಾಧನಾನುಷ್ಠಾನ ಮಾಡದಿದ್ದರೂ ಮರಣವಾಗುವುದು ಕಂಡಿದೆಯಾದ್ದರಿಂದ, ಮರಣರೂಪಫಲಕ್ಕಾಗಿ ಸಾಧನಾನುಷ್ಠಾನ ಕೂಡುವುದಿಲ್ಲ, ಆದ್ದರಿಂದ ಫಲ ಇಲ್ಲದ ಕಾರಣ ಸಾಧನಾನುಷ್ಠಾನ ಅನುಪಪನ್ನ, ಸಾಧನಾನುಷ್ಠಾನ ಅನುಪಪನ್ನವಾದ್ದರಿಂದ ಈ ಶಾಸ್ತ್ರವು ವ್ಯರ್ಥ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ तदन्तरप्रतिपत्तौ रंहति सम्परिष्वक्तः प्रश्ननिरूपणाभ्याम् ॐ**

**(३-१-१)**

**ಸೂತ್ರಾರ್ಥ :- ತದಂತರಪ್ರತಿಪತ್ತೌ** = ಶರೀರಾಂತರವನ್ನು ಹೊಂದುವುದಕ್ಕಾಗಿ ಜೀವಃ = ಜೀವನು **ಸಂಪರಿಷ್ವಕ್ತಃ** = ಪೃಥಿವ್ಯಾದಿ ಭೂತಸಂಯುಕ್ತನಾಗಿಯೇ **ರಂಹತಿ** = ಈ ದೇಹವನ್ನು ತ್ಯಜಿಸಿ ಮತ್ತೊಂದು ಲೋಕಕ್ಕೆ ತೆರಳುತ್ತಾನೆ ಎಂದು ತಿಳಿಯುತ್ತದೆ. ಕುತಃ = ಯಾಕೆ? (ಯಾವ ಪ್ರಮಾಣದಿಂದ ?) ಎಂದರೆ, **ಪ್ರಶ್ನನಿರೂಪಣಾಭ್ಯಾಂ** = ''ವೇತ್ಥ ಯಥಾ'' (ಛಾಂ. 5-3-9) ಎಂಬುದಾಗಿ ಶ್ವೇತಕೇತು ಋಷಿಯನ್ನು ಕುರಿತು ಪ್ರವಾಹಣರಾಜನು ಪ್ರಶ್ನೆ ಮಾಡಿದ್ದರಿಂದ, ''ಇತಿ ತು'' ಎಂಬುದಾಗಿ ಪರಿಹಾರ ಹೇಳಿದ್ದರಿಂದ.

## ಸಿದ್ಧಾಂತ

**ಸೂ.ರ.:- एवं च बन्धनिवृत्तिरूपफलसद्भावात् । न च मरणमेव बन्धनिवृत्तिः । मरणे भूतसम्परिष्वक्तस्यैव जीवस्य गमनाङ्गीकारात् । तत्र वेत्थेति प्रश्नवाक्ये तस्यैव परिहारवाक्ये च मृतस्य भूत-परिष्वङ्गाभिधानात् । भूतानां विनिवृत्तिरिति (भारते.) वचनं तु भूतभागविनिवृत्यभिमतमिति न तद्विरोधः । अतो मरणमात्रेण मोक्षायोगात् अनुष्ठेयमेव साधनमिति सार्थकमेव शास्त्रमिति सिद्धम् ॥**

ಬಂಧನಿವೃತ್ತಿರೂಪವಾದ ಫಲ ಇರುವುದರಿಂದ ಶಾಸ್ತ್ರವು ಸಾರ್ಥಕವೇ ಆಗಿದೆ.

ಹೌದು, ಮರಣವೇ ಬಂಧನಿವೃತ್ತಿಯಾಗಿದ್ದರಿಂದ ಮರಣಕ್ಕಾಗಿ ಸಾಧನಾ-ನುಷ್ಠಾನ ಉಪಪನ್ನವಾಗುವುದಿಲ್ಲವಲ್ಲ? ಎಂದು ಶಂಕಿಸುವುದು ಸರಿಯಲ್ಲ. ಮರಣ-ಕಾಲದಲ್ಲಿ ಜೀವನು ಭೂತಸಂಪರಿಷ್ವಕ್ತನಾಗಿಯೇ ಲೋಕಾಂತರವನ್ನು ಕುರಿತು ಹೋಗುತ್ತಾನೆ ಎಂದು ಅಂಗೀಕರಿಸಿದ್ದರಿಂದ, ಮರಣವೇ ಬಂಧನಿವೃತ್ತಿಯಲ್ಲ.

"ವೇತ್ಥ ಯಥಾ ಪಂಚಮ್ಯಾಮಾಹುತಾವಾಪಃ ಪುರುಷವಚಸೋ ಭವಂತಿ" ಎಂಬ ಪ್ರಶ್ನವಾಕ್ಯದಲ್ಲಿ ಮತ್ತು ಆ ಪ್ರಶ್ನೆಗೆ ಶ್ವೇತಕೇತು ಋಷಿಗಳು ನೀಡಿದ "ಇತಿ ತು ಪಂಚಮ್ಯಾಮಾಹುತಾವಾಪಃ ಪುರುಷವಚಸೋ ಭವಂತಿ" ಎಂಬ ಪರಿಹಾರವಾಕ್ಯ-ದಲ್ಲಿಯೂ ಸಹ ಮೃತನಾದ ವ್ಯಕ್ತಿಗೂ ಭೂತಪರಿಷ್ವಂಗವನ್ನು ಹೇಳಿದ್ದರಿಂದ.

ಭೂತಾನಾಂ ವಿನಿವೃತ್ತಿಸ್ತು ಮರಣಂ ಸಮುದಾಹೃತಮ್ ।

ಎಂಬ ಭಾರತವಚನಕ್ಕೆ ಭೂತಭಾಗವಿನಿವೃತ್ತಿ ಎಂದು ಅರ್ಥವಾದ್ದರಿಂದ ಅದರ ವಿರೋಧವೂ ಬರುವುದಿಲ್ಲ. ಆದ್ದರಿಂದ ಮರಣಮಾತ್ರದಿಂದ ಮೋಕ್ಷವು ಉಪಪನ್ನವಾಗುವುದಿಲ್ಲವಾದ್ದರಿಂದ ಸಾಧನವು ಅನುಷ್ಠೇಯವೇ ಆಗಿದೆ. ಹೀಗಾಗಿ ಶಾಸ್ತ್ರವು ಸಾರ್ಥಕವೇ ಆಗಿದೆ ಎಂದು ಸಿದ್ಧವಾಗುತ್ತದೆ.

ತದಂತರಾಧಿಕರಣವು ಮುಗಿಯಿತು

# ತ್ರ್ಯಾತ್ಮಕತ್ವಾಧಿಕರಣ

## ಸಂಗತಿ

**ಸೂ.ರ.:– अत्र भगवत्प्राप्तिसाधनवैराग्यार्थं जीवस्य समस्तभूत-परिष्वक्तस्य गतिः समर्थ्यते ।**

ಭಗವತ್ಪ್ರಾಪ್ತಿಸಾಧನವಾದ ವೈರಾಗ್ಯಕ್ಕಾಗಿ ಸಮಸ್ತಭೂತಪರಿಷ್ವಕ್ತನಾದ ಜೀವನಿಗೆ ಗತಿಯನ್ನು ಸಮರ್ಥಿಸುತ್ತಾರೆ ಎರಡನೇ ಈ ತ್ರ್ಯಾತ್ಮಕತ್ವಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु जीवेन सह आप एव गच्छन्ति न सर्वाणि । आपः पुरुषवचसो भवन्तीति श्रुतेः । अन्यथा भूतानीति श्रुतिः स्यात् । अतो मृतस्य समस्तभूतबन्धाभावान्मरणमेव मोक्ष इति व्यर्थमेव वैराग्यादीति प्राप्ते सूत्रितम् ॥**

'ಆಪಃ ಪುರುಷವಚಸೋ ಭವಂತಿ' ಎಂಬುದಾಗಿ ಪ್ರಶ್ನವ್ಯಾಖ್ಯಾನಗಳಲ್ಲಿ ಅಪ್‌ಗಳು ಮಾತ್ರ ಶ್ರುತವಾಗುತ್ತಿರುವುದರಿಂದ, ಜೀವನ ಜೊತೆ ಅಪ್‌ಗಳು ಮಾತ್ರ ಹೋಗುತ್ತವೆ. ಹೊರತು ಎಲ್ಲ ಭೂತಗಳೂ ಹೋಗುವುದಿಲ್ಲ. ಹಾಗೆ ಒಂದುವೇಳೆ ಜೀವನ ಜೊತೆ ಎಲ್ಲ ಭೂತಗಳೂ ಹೋಗುವುದಾದರೆ 'ಭೂತಾನಿ ಪುರುಷವಚಸೋ ಭವಂತಿ' ಎಂದು ಶ್ರುತಿ ಇರಬೇಕಾಗಿತ್ತು.

ಆದ್ದರಿಂದ ಮೃತವಾದ ಜೀವನಿಗೆ ಸಮಸ್ತಭೂತಬಂಧ ಇಲ್ಲವಾದ್ದರಿಂದ 'ಮರಣವೇ ಮೋಕ್ಷ' ಎಂದಾಗುವುದರಿಂದ ವೈರಾಗ್ಯಾದಿಗಳು ವ್ಯರ್ಥವೇ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ त्र्यात्मकत्वात्तु भूयस्त्वात् ॐ (३-१-२)**

ಸೂತ್ರಾರ್ಥ :- ಜೀವಃ ಸರ್ವಭೂತಪರಿಷ್ವಕ್ತ ಏವ ಗಚ್ಛತಿ ನಾದ್ಭಿರೇವ =

ಜೀವನು ಸರ್ವಭೂತಪರಿಷ್ವಕ್ತನಾಗಿಯೇ ಹೋಗುತ್ತಾನೆ. ಹೊರತು ಕೇವಲ ಅಪ್-ನಿಂದ ಸಹಿತನಾಗಿ ಹೋಗುವುದಿಲ್ಲ. ಹಾಗಾದರೆ **ತು** = ಆಪಃ ಇತಿ ವಿಶೇಷೋಕ್ತಿಸ್ತು = 'ಆಪಃ ಪುರುಷವಚಸೋ ಭವಂತಿ' ಎಂಬ ಶ್ರುತಿಯಾದರೂ ಸಹ **ತ್ರ್ಯಾತ್ಮಕತ್ವಾತ್** = ಅಪ್ ಅದು ಪೃಥಿವೀ-ಅಪ್-ತೇಜೋರೂಪವಾದ್ದರಿಂದ ತೇಷು = ಅವುಗಳಲ್ಲಿ ಅಪಾಂ **ಭೂಯಸ್ತ್ವಾತ್** = ಅಪ್ ಬಹಳವಾದ್ದರಿಂದ ಯುಜ್ಯತೇ = ಉಪಪನ್ನ-ವಾಗುತ್ತದೆ. ಅತೋ ನ ತದ್ವಿರೋಧಃ = ಆದ್ದರಿಂದ ಆ ಶ್ರುತಿಯ ವಿರೋಧವೂ ಬರುವುದಿಲ್ಲ.

## ಸಿದ್ಧಾಂತ

**ಸೂ.ರ.:–** एवं च आप इति पुनरुत्पत्तिश्रवणात् । न च सर्वभूत-परिष्वङ्गाभावे पुनरुत्पत्तिर्युज्यते । भूतबन्धस्यैव संसारत्वेन तदभावे मुक्तत्वापातात् । एकभूतस्य चाबन्धकत्वात् । न च विशेषश्रुतिविरोधः । अपां त्रिवृत्कृतपृथिव्यप्तेजसो हेतुत्वेनाप्ग्रहणेनैव सर्वेषां प्राप्तेः । न चापामिव भूतेजसोरपि त्रिवृत्कृतभूतत्रयकारणत्वेन शब्दान्तरमपहायाप्-शब्दस्यैव ग्रहणे कारणाभाव इति । सर्वशरीरेषु सम्भूयापां बहुत्वस्यैव नियामकत्वात् । अतोऽस्ति सर्वभूतानां जीवं परिष्वज्य गमनमिति स्वाभाविकमरणेन मुक्त्यभावादनुष्ठेयं वैराग्यादीति सिद्धम् ॥

ಆಪಃ ಎಂಬುದಾಗಿ ಜೀವನಿಗೆ ಪುನಃ ಉತ್ಪತ್ತಿಯು ಶ್ರುತವಾಗುತ್ತಿರುವುದರಿಂದ, ಸರ್ವಭೂತಪರಿಷ್ವಂಗ ಇಲ್ಲದೇ ಹೋದರೆ ಪುನರುತ್ಪತ್ತಿಯು ಉಪಪನ್ನವಾಗದ ಕಾರಣ, ಜೀವನು ಸರ್ವಭೂತಪರಿಷ್ವಕ್ತನಾಗಿಯೇ ಹೋಗುತ್ತಾನೆ. ಹೊರತು ಕೇವಲ ಅಪ್‌ನಿಂದ ಸಹಿತನಾಗಿ ಅಲ್ಲ.

ಹಾಗಾದರೆ 'ಆಪಃ ಪುರುಷವಚಸೋ ಭವಂತಿ' ಎಂಬ ವಿಶೇಷಶ್ರುತಿಯ ವಿರೋಧ ಬರುವುದಲ್ಲ? ಎಂದರೆ, ಬರುವುದಿಲ್ಲ. ಅಪ್ ಅದು ಪೃಥಿವೀ-ಅಪ್-ತೇಜೋರೂಪವಾದ್ದರಿಂದ ಅಂತಹ ಅಪ್‌ಗ್ರಹಣದಿಂದ ಅನ್ಯಭೂತಗಳೂ ಪ್ರಾಪ್ತ-ವಾಗುತ್ತವೆ. ಅರ್ಥಾತ್ ಅಪ್ ಅದು ತ್ರಿವೃತ್‌ಕೃತ ಪೃಥಿವೀ-ಅಪ್-ತೇಜಸ್‌ಗೆ ಕಾರಣವಾದ್ದರಿಂದ ಅಪ್‌ಗ್ರಹಣದಿಂದಲೇ ಎಲ್ಲ ಭೂತಗಳೂ ಗೃಹೀತವಾಗುತ್ತವೆ.

ಅಪ್‌ನಂತೆ ಭೂ-ತೇಜಸ್‌ಗಳೂ ತ್ರಿವೃತ್‌ಕೃತಭೂತಕಾರಣವಾದ್ದರಿಂದ ಇತರ-ಶಬ್ದವನ್ನು ಬಿಟ್ಟು ಅಪ್‌ಶಬ್ದವನ್ನು ಗ್ರಹಿಸುವುದರಲ್ಲಿ ವಿಶೇಷ ಕಾರಣ ಏನೂ ಇಲ್ಲ ಎಂದು ಶಂಕಿಸುವುದು ಸರಿಯಲ್ಲ. ಎಲ್ಲ ಶರೀರಗಳಲ್ಲಿ ಸೇರಿ ಅಪ್‌ಭಾಗವೇ ಬಹಳ-ವಾದ್ದರಿಂದ, ಬಾಹುಲ್ಯವೇ ನಿಯಾಮಕವಾಗಿದೆ.

ಆದ್ದರಿಂದ ಜೀವನನ್ನು ಬಿಟ್ಟು ಎಲ್ಲ ಭೂತಗಳಿಗೂ ಗಮನ ಇದೆಯಾದ್ದರಿಂದ, ಸ್ವಾಭಾವಿಕ ಮರಣದಿಂದ ಮುಕ್ತಿ ಇಲ್ಲವಾದ್ದರಿಂದ, ವೈರಾಗ್ಯಾದಿಗಳು ಅನುಷ್ಠೇಯವೇ ಆಗಿವೆ ಎಂದು ಸಿದ್ಧವಾಗುತ್ತದೆ.

ತ್ರ್ಯಾತ್ಮಕತ್ವಾಧಿಕರಣವು ಮುಗಿಯಿತು.

*ಅಧಿಕರಣ – 3*

# ಪ್ರಾಣಗತ್ಯಧಿಕರಣ

## ಸಂಗತಿ

**ಸೂ.ರ.:– अत्र वैराग्यसिद्ध्यर्थं जीवस्य भूतैः सह गतिः समर्थ्यते ।**

ವೈರಾಗ್ಯಸಿದ್ಧಿಗಾಗಿ ಜೀವನಿಗೆ ಭೂತಗಳೊಡನೆ ಗತಿಯನ್ನು ಸಮರ್ಥಿಸುತ್ತಾರೆ ಈ ಪ್ರಾಣಗತ್ಯಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु न भूतानि जीवेन सह गच्छन्ति । प्रमाणाभावात् । न च प्रश्नव्याख्याने प्रमाणम् । तयोरपि भूतैः सह गमनाप्रतीतेः । आर्थिककल्पनायाश्च विशेषप्रमाणमन्तरेणासम्भवात् । अतः स्वाभाविकमरणमेव मुक्तिरित्यलं वैराग्यादिभिरिति प्राप्ते सूत्रमाह ॥**

ಭೂತಗಳು ಜೀವನ ಜೊತೆ ಹೋಗಲಾರವು. ಆ ವಿಷಯದಲ್ಲಿ ಯಾವ ಪ್ರಮಾಣವೂ ಇಲ್ಲವಾದ್ದರಿಂದ. ಪ್ರಶ್ನವ್ಯಾಖ್ಯಾನಗಳೇ ಪ್ರಮಾಣವಾಗಿವೆಯಲ್ಲ? ಎಂದರೆ, ಅದು ಸರಿಯಲ್ಲ. ಆ ಪ್ರಶ್ನವ್ಯಾಖ್ಯಾನಗಳಲ್ಲಿ ಭೂತಗಳೊಂದಿಗೆ ಗಮನವು ತೋರುವುದಿಲ್ಲ. ಆ ರೀತಿ ಆರ್ಥಿಕಕಲ್ಪನೆ ಮಾಡುತ್ತೇವೆ ಎಂದರೆ, ವಿಶೇಷಪ್ರಮಾಣ ಇರುತ್ತಿದ್ದರೆ ಹಾಗೆ ಕಲ್ಪಿಸಬಹುದಿತ್ತು. ಆದರೆ ಅಂತಹ ವಿಶೇಷಪ್ರಮಾಣ ಯಾವುದೂ ಇಲ್ಲವಾದ್ದರಿಂದ ಹಾಗೆ ಆರ್ಥಿಕಕಲ್ಪನೆ ಮಾಡಲು ಬರುವುದಿಲ್ಲ. ಆದ್ದರಿಂದ ಸ್ವಾಭಾವಿಕಮರಣವೇ ಮುಕ್ತಿಯಾದ್ದರಿಂದ ವೈರಾಗ್ಯಾದಿಗಳು ವ್ಯರ್ಥವೇ ಎಂಬುದಾಗಿ ಪೂರ್ವಪಕ್ಷ ಬಂದರೆ, ಸಿದ್ಧಾಂತ ಹೇಳಲು ಸೂತ್ರವನ್ನು ಹೇಳುತ್ತಾರೆ –

**ॐ प्राणगतेश्च ॐ (३-१-३)**

**ಸೂತ್ರಾರ್ಥ :-** ಪ್ರಾಣಗತೇಶ್ಚ = ಭೂತವ್ಯಾಪ್ತ ಪ್ರಾಣಶಬ್ದವಾಚ್ಯ ಇಂದ್ರಿಯ-ಗಳಿಗೆ ಜೀವನೊಂದಿಗೆ ಗಮನವು ಶ್ರುತವಾಗುತ್ತಿರುವುದರಿಂದಲೂ ಸಹ ಜೀವೋ ಭೂತಸಂಪರಿಷ್ವಕ್ತ ಏವ ಗಚ್ಛತಿ = ಜೀವನು ಭೂತಸಂಪರಿಷ್ವಕ್ತನಾಗಿಯೇ ಹೋಗುತ್ತಾನೆ.

## ಸಿದ್ಧಾಂತ

**ಸೂ.ರ.:– एवं च भूतानि जीवेन सह गतिमन्ति तत्सहगन्तृप्राण-व्यापकत्वात् इत्यनुमानसद्भावात् । न च व्याप्त्यभावः । यत्र वाव भूतानीति (भाल्लवेय.) श्रुत्या भूतानां प्राणानां च परस्परव्याप्य-व्यापकभावाभिधानात् । अतः समस्तभूतानां जीवपरिष्वङ्गसिद्धेर्न मरणमात्रेण मोक्षोऽतोऽपेक्षितं वैराग्यादीति सिद्धम् ॥**

ಭೂತಾನಿ, ಜೀವೇನ ಸಹ ಗತಿಮಂತಿ, ತತ್ಸಹಗಂತೃಪ್ರಾಣವ್ಯಾಪಕತ್ವಾತ್ । (ಭೂತಗಳು, ಜೀವನೊಂದಿಗೆ ಗಮನ ಉಳ್ಳದ್ದಾಗಿವೆ, ಭೂತಸಹಗಂತೃವಾದ ಇಂದ್ರಿಯಗಳಿಗೆ ವ್ಯಾಪಕವಾದ್ದರಿಂದ) ಎಂಬುದಾಗಿ ಅನುಮಾನಪ್ರಮಾಣ ಇರುವುದರಿಂದ ಭೂತಗಳು ಜೀವನೊಂದಿಗೆ ಹೋಗುತ್ತವೆ.

ಈ ಅನುಮಾನದಲ್ಲಿ ವ್ಯಾಪ್ತಿ ಇಲ್ಲ ಎಂದು ಶಂಕಿಸುವುದು ಸರಿಯಲ್ಲ.

"ಯತ್ರ ವಾವ ಭೂತಾನಿ ತತ್ರ ಕರಣಾನಿ ನಿತ್ಯಾನಿ ಹ ವಾ ಏತಾನಿ ಭೂತಾನಿ ಕರಣಾನಿ ಚ ..."

ಎಂಬುದಾಗಿ ಭಾಲ್ಲವೇಯಶ್ರುತಿಯಿಂದಾಗಿ ಭೂತಗಳಿಗೆ - ಇಂದ್ರಿಯಗಳಿಗೆ ಪರಸ್ಪರ ವ್ಯಾಪ್ಯವ್ಯಾಪಕಭಾವವು ತಿಳಿದುಬರುತ್ತದೆ. ಆದ್ದರಿಂದ ವ್ಯಾಪ್ತಿ ಇದ್ದೇ ಇದೆ.

ಆದ್ದರಿಂದ ಸಮಸ್ತಭೂತಗಳಿಗೂ ಜೀವನಿಂದ ಪರಿಷ್ವಂಗವು ಸಿದ್ಧಿಸುವುದರಿಂದ ಮರಣಮಾತ್ರದಿಂದ ಮೋಕ್ಷವಲ್ಲವಾದ್ದರಿಂದ, ಅಂತೆಯೇ ವೈರಾಗ್ಯಾದಿಗಳು ಅಪೇಕ್ಷಿತವಾಗಿವೆ ಎಂದು ಸಿದ್ಧವಾಗುತ್ತದೆ.

ಪ್ರಾಣಗತ್ಯಧಿಕರಣವು ಮುಗಿಯಿತು.

ಅಧಿಕರಣ – 4

# ಅಗ್ನ್ಯಾದಿಗತ್ಯಧಿಕರಣ

## ಸಂಗತಿ

**ಸೂ.ರ.:– अत्र प्राणानां जीवेन सह गतिः समर्थ्यते ।**

ಇಂದ್ರಿಯಗಳಿಗೆ ಜೀವನೊಂದಿಗೆ ಗತಿಯನ್ನು ಸಮರ್ಥಿಸುತ್ತಾರೆ ನಾಲ್ಕನೇ ಈ ಅಗ್ನ್ಯಾದಿಗತ್ಯಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु न प्राणा जीवेन सह गच्छन्ति । यत्रास्य पुरुषस्येत्यादिना (बृ.५-२-१३) प्राणानामग्न्यादौ गतिश्रवणात् । तथा च प्राणानां गत्यभावेन साधकाभावाद्भूतानामपि न सह गतिरिति मरणमेव मोक्ष इति व्यर्थं वैराग्यादीत्याक्षिप्य समादधत्सूत्रं पठति ॥**

"ಯತ್ರಾಸ್ಯ ಪುರುಷಸ್ಯ ಮೃತಸ್ಯಾಗ್ನಿಂ ವಾಗಪ್ಯೇತಿ ವಾತಂ ಪ್ರಾಣಃ" (ಬೃ. 5–2–13) ಇತ್ಯಾದಿಯಾಗಿ ಇಂದ್ರಿಯಗಳಿಗೆ ಅಗ್ನ್ಯಾದಿಗಳಲ್ಲಿ ಗತಿಯು ಶ್ರುತವಾಗುತ್ತಿರುವುದರಿಂದ ಇಂದ್ರಿಯಗಳು ಜೀವನ ಜೊತೆ ಹೋಗುವುದಿಲ್ಲ.

ಹಾಗಾಗಿ ಇಂದ್ರಿಯಗಳಿಗೆ ಗತಿ ಇಲ್ಲದ ಕಾರಣ, ಸಾಧಕ ಇಲ್ಲದ ನಿಮಿತ್ತ ಭೂತಗಳಿಗೂ ಸಹಗತಿ ಇಲ್ಲ ಎಂದು ಸಿದ್ಧವಾಗುವುದರಿಂದ, ಮರಣವೇ ಮೋಕ್ಷ ಎಂದಾಗಿ ವೈರಾಗ್ಯಾದಿಗಳು ವ್ಯರ್ಥ ಎಂದು ಪೂರ್ವಪಕ್ಷ ಬಂದರೆ, ಅದಕ್ಕೆ ಸಮಾಧಾನ ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ अग्न्यादिगतिश्रुतेरिति चेन्न भाक्तत्वात् ॐ (३-१-४)**

**ಸೂತ್ರಾರ್ಥ :- ಅಗ್ನ್ಯಾದಿಗತಿಶ್ರುತೇಃ** = 'ಯತ್ರಾಸ್ಯ ಪುರುಷಸ್ಯ' ಎಂಬ ಶ್ರುತಿಯಲ್ಲಿ ಇಂದ್ರಿಯಗಳಿಗೆ ಅಗ್ನ್ಯಾದಿಗಳನ್ನು ಕುರಿತು ಗಮನವನ್ನು ಹೇಳಿದ್ದರಿಂದ ನ ಜೀವೇನ ಸಹ ಗಮನಂ = ಇಂದ್ರಿಯಗಳಿಗೆ ಜೀವನ ಜೊತೆ ಗಮನ ಇಲ್ಲ **ಇತಿ ಚೇತ್** = ಎಂಬುದಾಗಿ ಆಕ್ಷೇಪ ಬಂದರೆ, ನ = ಅದು ಸರಿಯಲ್ಲ, ಕುತಃ = ಯಾಕೆ?

**ಭಾಕ್ತತ್ವಾತ್** = 'ಯತ್ರಾಸ್ಯ ಪುರುಷಸ್ಯ' ಎಂಬ ಶ್ರುತಿಯು ಪ್ರಾಣಭಾಗವಿಷಯಕ-ವಾಗಿದ್ದರಿಂದ.

## ಸಿದ್ಧಾಂತ

**ಸೂ.ರ.:– एवं च एतैर्वाव नेति श्रुतिसद्भावात् । प्राणानां भागेनाग्न्यादौ गत्यङ्गीकारेणाग्निमिति विशेषश्रुतेरविरोधः । पुरुषस्य मृताविति (ब्राह्मे.) वचनात् । पुनः शरीरप्राप्तिसमयेऽग्न्यादौ प्रविष्टानां भागानां जीवसहगतभागेषु प्रवेशाङ्गीकारेण सर्वापगमाभावात् । तथा च भूतानामपि मरणकाले भागेन जीवेन सह गतिः । भागेनाग्न्यादि-गतिर्भवति । पुनः शरीरप्राप्तौ जीवेन सह गतेषु भूतभागेष्वग्न्यादीन्प्रति गतानां भूतभागानां प्रवेशो भवतीति विवेकात् । अतोऽस्ति प्राणानां जीवेन सह गतिस्ततो भूतानामपीति न मरणमात्रेण मोक्षोऽतोऽनुष्ठेयं साधनमिति सिद्धम् ॥**

ಪುರುಷಸ್ಯ ಮೃತೌ ಬ್ರಹ್ಮನ್ ಪ್ರಾಣಾ ಭಾಗತ ಏವ ತು ।
ಅಧಿದೈವಂ ಪ್ರಾಪ್ನುವಂತಿ ಭಾಗತೋಽನುವ್ರಜಂತಿ ತಮ್ ॥
ಪುನಃ ಶರೀರಸಂಪ್ರಾಪ್ತೌ ತಮೇವಾನುವಿಶಂತಿ ಚ ।

ಎಂಬುದಾಗಿ ಬ್ರಾಹ್ಮವಚನ ಇರುವುದರಿಂದ ಇಂದ್ರಿಯಗಳಿಗೆ ಅಗ್ನ್ಯಾದಿಗಳಲ್ಲಿ ಭಾಗಶಃ ಗಮನವನ್ನು ಅಂಗೀಕಾರ ಮಾಡಿದ್ದರಿಂದ "ಅಗ್ನಿಂ ವಾಗಪ್ಯೇತಿ" ಎಂಬ ವಿಶೇಷಶ್ರುತಿಯ ವಿರೋಧ ಬರುವುದಿಲ್ಲ.

ಮತ್ತು ಶರೀರಪ್ರಾಪ್ತಿಸಮಯದಲ್ಲಿ ಅಗ್ನ್ಯಾದಿಗಳಲ್ಲಿ ಪ್ರವಿಷ್ಟವಾದ ಭಾಗಗಳು ಜೀವಸಹಗತವಾದ ಭಾಗಗಳಲ್ಲಿ ಪ್ರವೇಶ ಮಾಡುತ್ತವೆ ಎಂದು ಅಂಗೀಕರಿಸಿದ್ದರಿಂದ ಎಲ್ಲ ಇಂದ್ರಿಯಗಳ ಅಪಗಮ ಇಲ್ಲ.

ಆದ್ದರಿಂದ ಮರಣಕಾಲದಲ್ಲಿ ಭೂತಗಳಿಗೂ ಸಹ ಜೀವನ ಜೊತೆಗೆ ಭಾಗಶಃ ಗಮನ ಇದೆ. ಮತ್ತೊಂದು ಭಾಗದಿಂದ ಅಗ್ನ್ಯಾದಿಗಳಲ್ಲಿ ಗತಿ ಉಂಟು. ಮತ್ತೆ ಶರೀರವನ್ನು ಹೊಂದುವ ಸಂದರ್ಭದಲ್ಲಿ ಜೀವನೊಂದಿಗೆ ಗಮನ ಹೊಂದಿದ

ಭೂತಭಾಗಗಳಲ್ಲಿ ಅಗ್ನ್ಯಾದಿಗಳಲ್ಲಿ ಪ್ರವಿಷ್ಟವಾದ ಭೂತಭಾಗಗಳು ಪ್ರವೇಶ ಹೊಂದುತ್ತವೆ ಎಂಬುದಾಗಿ ವಿವೇಕ ಇದೆ.

ಹಾಗಾಗಿ ಇಂದ್ರಿಯಗಳಿಗೆ ಜೀವನ ಜೊತೆ ಗಮನ ಇರುವುದರಿಂದ ಭೂತಗಳಿಗೂ ಸಹಗತಿ ಇದೆಯಾದ್ದರಿಂದ, ಕೇವಲ ಮರಣಮಾತ್ರವೇ ಮೋಕ್ಷ-ವಲ್ಲವಾದ್ದರಿಂದ ವೈರಾಗ್ಯಾದಿಸಾಧನಗಳು ಅವಶ್ಯ ಅನುಷ್ಠೇಯವಾಗಿವೆ ಎಂದು ಸಿದ್ಧವಾಗುತ್ತದೆ.

ಅಗ್ನ್ಯಾದಿಗತ್ಯಧಿಕರಣವು ಮುಗಿಯಿತು.

ಅಧಿಕರಣ - 5

# ಪ್ರಥಮಾಧಿಕರಣ

## ಸಂಗತಿ

**ಸೂ.ರ.:– अत्र भूतानां जीवेन सह गतिराक्षिप्य समाधीयते ।**

ಭೂತಗಳಿಗೆ ಜೀವನ ಜೊತೆ ಗತಿಯನ್ನು ಆಕ್ಷೇಪಿಸಿ ಸಮಾಧಾನ ಹೇಳುತ್ತಾರೆ ಐದನೇ ಈ ಪ್ರಥಮಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु जीवेन सह भूतानां गमनं भवेत् । तस्मिन्नेतस्मिन्नितीत्युपक्रमे (छां.५-४-२) श्रद्धासहितस्यैव होमाभिधानात् । भूतानामपि सह गतावुपक्रमे तथोक्तिप्रसङ्गात् । अतो भूतानां सहगत्यभावेन भूतानां विनिवृत्तिरेव मोक्ष इति वदतो मरणस्यैव मोक्षत्वप्रसङ्गाद्व्यर्थं वैराग्यादीत्याक्षिप्य समादधत्सूत्रं पठति ॥**

"ತಸ್ಮಿನ್ನೇತಸ್ಮಿನ್ನಗ್ನೌ ದೇವಾಃ ಶ್ರದ್ಧಾಂ ಜುಹ್ವತಿ" (ಛಾಂ. 5-4-2) ಎಂಬುದಾಗಿ ಉತ್ಕ್ರಾಂತನಾದ ಶ್ರದ್ಧಾಸಹಿತನಾದವನಿಗೇನೇ ದ್ಯು ಎಂಬ ಪ್ರಥಮಾಗ್ನಿಯಲ್ಲಿ ಹೋಮವು ಶ್ರುತವಾಗುತ್ತಿರುವುದರಿಂದ, ಭೂತಗಳಿಗೆ ಜೀವನ ಜೊತೆ ಗತಿ ಇಲ್ಲ.

ಹಾಗೆ ಒಂದುವೇಳೆ ಭೂತಗಳಿಗೂ ಜೀವನೊಂದಿಗೆ ಗತಿ ಇದ್ದದ್ದಾದರೆ ಉಪಕ್ರಮದಲ್ಲಿ (ತಸ್ಮಿನ್ನೇತಸ್ಮಿನ್ ಎನ್ನುವಲ್ಲಿ) ಭೂತಸಹಿತನಾದವನಿಗೇನೇ ಹೋಮವು ಶ್ರುತವಾಗಬೇಕಾಗಿತ್ತು.

ಆದ್ದರಿಂದ ಭೂತಗಳಿಗೆ ಜೀವನೊಂದಿಗೆ ಗತಿ ಇಲ್ಲವಾದ್ದರಿಂದ, ಭೂತಗಳ ವಿನಿವೃತ್ತಿಯೇ ಮೋಕ್ಷ ಎಂದು ಹೇಳುವವರಿಗೆ ಮರಣವೇ ಮೋಕ್ಷವಾಗುವ ಪ್ರಸಂಗ ಇರುವುದರಿಂದ ವೈರಾಗ್ಯಾದಿಗಳು ವ್ಯರ್ಥವೇ ಎಂಬುದಾಗಿ ಆಕ್ಷೇಪ (ಪೂರ್ವಪಕ್ಷ) ಬಂದರೆ, ಆದನ್ನು ನಿರಾಕರಿಸಿ ಸಮಾಧಾನ ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ प्रथमेऽश्रवणादिति चेन्न ता एव ह्युपपत्तेः ॐ (३-१-५)**

**ಸೂತ್ರಾರ್ಥ** :- **ಪ್ರಥಮೇ** = ತಸ್ಮಿನ್ನೇತಸ್ಮಿನ್ ಎಂಬ ಉಪಕ್ರಮದಲ್ಲಿ ಪ್ರಥಮೇ = ದ್ಯು ಎಂಬ ಹೆಸರಿನ ಅಗ್ನಿಯಲ್ಲಿ **ಶ್ರವಣಾತ್** = ಶ್ರದ್ಧಾಸಹಿತನಾದವನಿಗೇನೇ ಹೋಮವು ಶ್ರುತವಾಗುತ್ತಿರುವುದರಿಂದ, **ಅಶ್ರವಣಾತ್** = ಜೀವಸಾಹಿತ್ಯವು ಶ್ರುತ-ವಾಗುತ್ತಿಲ್ಲವಾದ್ದರಿಂದಲೂ ನ ಜೀವೋ ಭೂತಸಹಿತೋ ಗಚ್ಛತಿ = ಜೀವನು ಭೂತಸಹಿತನಾಗಿ ಹೋಗುವುದಿಲ್ಲ **ಇತಿ ಚೇತ್** = ಎಂದು ಆಕ್ಷೇಪ ಬಂದರೆ, ನ = ಅದು ಸರಿಯಲ್ಲ, **ಕುತಃ** = ಯಾಕೆ? **ಹಿ** = ಯಾವ ಕಾರಣ **ತಾ ಏವ** = ಪ್ರಸ್ತುತ-ವಾದ ಅಪ್‌ಗಳೇ ಉಪಕ್ರಮಗತ ಶ್ರದ್ಧಾ ಶಬ್ದದಿಂದ ಹೇಳಲ್ಪಡುತ್ತವೆಯೋ, ಅತಃ = ಆ ಕಾರಣ. **ತತ್ ಕುತಃ** = ಅದು ಏಕೆ? ಎಂದರೆ **ಉಪಪತ್ತೇಃ** = 'ಆಪಃ ಪುರುಷ-ವಚಸೋ ಭವಂತಿ' (ಛಾಂ.5-9-1) ಎಂಬ ಉಪಸಂಹಾರವು ಉಪಪನ್ನ-ವಾಗುವುದರಿಂದ.

## ಸಿದ್ಧಾಂತ

**ಸೂ.ರ.:– एवं च प्रथमाग्नौ भूतसहितस्य होमश्रवणेन भूतानां सहगतेर्वक्तव्यत्वात् । श्रद्धाशब्दस्य जहत्स्वार्थलक्षणयाप्श्रद्धाविशिष्ट-जीववाचित्वात् । उपसंहारेऽपां जीवेन सह गतिश्रवणात् । उप-संहारानुसारेणैवोपक्रमस्य नेयत्वात् । न चागमनमात्रविषयत्व-मुपसंहारस्येति वाच्यम् । मरणकाले तत्परित्यागानुक्तेः । मध्ये संयोगमनभिधायाप इत्यनुवादेन सह गमनस्यैव कल्प्यत्वात् । अतो भूतानां जीवेन सह गतिसद्भावान्मरणस्य मुक्तित्वाभावेनापेक्षितं वैराग्यादिसाधनमिति सिद्धम् ॥**

"ತಸ್ಮಿನ್ನೇತಸ್ಮಿನ್ ಅಗ್ನೌ ದೇವಾಃ ಶ್ರದ್ಧಾಂ ಜುಹ್ವತಿ" ಎಂಬ ಉಪಕ್ರಮದಲ್ಲಿರುವ ಶ್ರದ್ಧಾಶಬ್ದವು ಅಜಹತ್ಸ್ವಾರ್ಥಲಕ್ಷಣಾವೃತ್ತಿಯಿಂದ ಶ್ರದ್ಧಾವಿಶಿಷ್ಟಜೀವವಾಚಿಯಾದ್ದ-ರಿಂದ, ಮತ್ತು ಉಪಸಂಹಾರದಲ್ಲಿ ಆಪಃ ಪುರುಷವಚಸೋ ಭವಂತಿ ಎಂಬುದಾಗಿ ಅಪ್‌ಗಳಿಗೆ ಜೀವನೊಂದಿಗೆ ಗತಿಯು ಶ್ರುತವಾಗುತ್ತಿರುವದರಿಂದ, ಹಾಗೂ ಉಪಸಂಹಾರಕ್ಕೆ ಅನುಗುಣವಾಗಿಯೇ ಉಪಕ್ರಮಕ್ಕೆ ಅರ್ಥೈಸಬೇಕಾದುದು ನ್ಯಾಯವಾದ್ದರಿಂದ, ಪ್ರಕೃತ ಪ್ರಥಮಾಗ್ನಿಯಲ್ಲಿ ಭೂತಸಹಿತನಾದ ಜೀವನ

ಹೋಮವು ಶ್ರುತವಾಗುತ್ತಿರುವುದರಿಂದ ಭೂತಗಳಿಗೆ ಜೀವನೊಂದಿಗೆ ಗತಿಯನ್ನು ಹೇಳಲೇಬೇಕಾಗಿದೆ.

ಆದ್ದರಿಂದ ಭೂತಗಳಿಗೆ ಜೀವನೊಂದಿಗೆ ಗತಿಯು ಇರುವುದರಿಂದ, ಮರಣವೇ ಮೋಕ್ಷ ಎಂದು ಆಗುವುದಿಲ್ಲವಾದ್ದರಿಂದ ವೈರಾಗ್ಯಾದಿ ಸಾಧನಗಳು ಅಪೇಕ್ಷಿತವೇ ಆಗಿವೆ ಎಂದು ಸಿದ್ಧವಾಗುತ್ತದೆ.

**ಪ್ರಥಮಾಧಿಕರಣವು ಮುಗಿಯಿತು.**

ಅಧಿಕರಣ - 6

## ಅಶ್ರುತತ್ವಾಧಿಕರಣ

### ಸಂಗತಿ

**ಸೂ.ರ.:- अत्र जीवस्य भूतैः सह गतिः समर्थ्यते ।**

ಜೀವನಿಗೆ ಭೂತಗಳ ಜೊತೆ ಗತಿಯನ್ನು ಸಮರ್ಥಿಸುತ್ತಾರೆ ಆರನೇ ಈ ಅಶ್ರುತತ್ವಾಧಿಕರಣದಲ್ಲಿ.

### ಪೂರ್ವಪಕ್ಷ

**ಸೂ.ರ.:- ननु मास्तु भूतानां जीवेन सह गमनम् । तथा श्रुत्यभावात् । न चापां प्राणानां च सहगतिः श्रूयतेऽतोऽर्थाद्भूतगतिरपि श्रुता भवतीति । अपां प्राणानां चेति श्रुतौ साक्षाच्छ्रवणाभावेनार्थिक-श्रुतेरपलपनीयत्वात् । वैदिकेऽर्थे साक्षाच्छ्रवणसद्भावादेव युक्तीनां प्रवृत्तेर्युक्त्याऽपि न तत्सिद्धिः । ततश्च मरणस्यैव मोक्षत्वप्रसङ्गा-दननुष्ठेयमेव वैराग्यादीत्याक्षिप्य पराकुर्वत्सूत्रं पठति ॥**

ಭೂತಗಳಿಗೆ ಜೀವನ ಜೊತೆ ಗಮನವನ್ನು ಹೇಳುವ ಶ್ರುತಿಯು ಇಲ್ಲವಾದ್ದರಿಂದ ಭೂತಗಳಿಗೆ ಜೀವನೊಂದಿಗೆ ಗಮನ ಬೇಡ.

ಶ್ರುತಿ ಇಲ್ಲ ಎಂದು ಏಕೆ ಹೇಳುತ್ತೀರಿ? ಅಪ್‌ಗಳಿಗೆ ಹಾಗೂ ಇಂದ್ರಿಯಗಳಿಗೆ ಸಹಗತಿಯು ಶ್ರುತವಾಗುತ್ತಿರುವುದರಿಂದ ಅರ್ಥಾತ್ ಭೂತಗತಿಯೂ ಶ್ರುತ-ವಾದಂತಾಗುತ್ತದೆಯಲ್ಲವೇ? ಎಂದು ಶಂಕಿಸುವುದು ಸರಿಯಲ್ಲ. ಶ್ರುತಿಯಲ್ಲಿ ಅಪಾಂ ಪ್ರಾಣಾನಾಂ ಎಂದು ಸಾಕ್ಷಾತ್ ಶ್ರವಣ ಇಲ್ಲವಾದ್ದರಿಂದ, ಆರ್ಥಿಕಶ್ರುತಿಯು ಅಪಲಪನೀಯವಾಗಿದೆ.

ಇನ್ನು ಯುಕ್ತಿಯನ್ನೂ ಹೇಳಲು ಬರುವುದಿಲ್ಲ. ವೈದಿಕವಾದ ಅರ್ಥದಲ್ಲಿ ಸಾಕ್ಷಾತ್ ಶ್ರವಣ ಇದ್ದಾಗ ಮಾತ್ರ ಯುಕ್ತಿಗಳು ಪ್ರವೃತ್ತವಾಗುವುದರಿಂದ ಯುಕ್ತಿ-ಯಿಂದಲೂ ಅದು ಸಿದ್ಧವಾಗುವುದಿಲ್ಲ.

ಆದ್ದರಿಂದ ಮರಣವೇ ಮೋಕ್ಷ ಎಂದಾಗುವುದರಿಂದ ವೈರಾಗ್ಯಾದಿ ಸಾಧನಗಳು ಅನುಷ್ಠೇಯವಲ್ಲ ಎಂದು ಆಕ್ಷೇಪ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ अश्रुतत्वादिति चेन्नेष्टादिकारिणां प्रतीतेः ॐ (३-१-६)**

**ಸೂತ್ರಾರ್ಥ :- ಅಶ್ರುತತ್ವಾತ್** = 'ಅಗ್ನಿಂ ವಾಗಪ್ಯೇತಿ' ಎಂದು ಪ್ರತ್ಯಕ್ಷವಾಗಿ ಶ್ರುತವಾಗುವಂತೆ, ಭೂತಗಳಿಗೆ ಜೀವನೊಂದಿಗೆ ಗಮನವು ಪ್ರತ್ಯಕ್ಷವಾಗಿ ಶ್ರುತ-ವಾಗುತ್ತಿಲ್ಲವಾದ್ದರಿಂದ ನ ತೇಷಾಂ ಸಹ ಗಮನಂ = ಭೂತಗಳಿಗೆ ಜೀವನೊಂದಿಗೆ ಗಮನವು ಇಲ್ಲ **ಇತಿ ಚೇತ್** = ಎಂದು ಆಕ್ಷೇಪ ಬಂದರೆ, **ನ** = ಅದು ಸರಿಯಲ್ಲ, **ಕುತಃ** = ಯಾಕೆ? 'ಅಥೈನಂ ಯಜಮಾನಂ' (ಕೌಂಡಿನ್ಯ) ಎಂಬುದಾಗಿ ಶ್ರುತಿಯಿಂದ **ಇಷ್ಟಾದಿಕಾರಿಣಾಂ** = ಯಾಗಹೋಮಮಾಡುವ **ಪ್ರತೀತೇಃ** = ಪ್ರತ್ಯಕ್ಷವಾಗಿಯೇನೇ ಭೂತವಿಯೋಗ-ಸಹಯೋಗಗಳು ತಿಳಿಯುವುದರಿಂದ.

## ಸಿದ್ಧಾಂತ

**ಸೂ.ರ.:- एवं च प्रत्यक्षश्रुत्यभावेनाश्रवणमङ्गीकृत्य भूतानाम-सहगतेर्मन्तव्यत्वायोगात् । आर्थिकश्रवणस्याप्यश्रवणबाधकत्वात् । यजमानमरणे भूतानां सहगतेर्विस्पष्टमभिहितत्वेन दृष्टान्तेन सर्वत्रापि भूतगतिसिद्धेश्च । अतोऽस्त्येव भूतानां जीवेन सह गतिरिति मरणे मोक्षाभावादनुष्ठेयमेव वैराग्यादीति सिद्धम् ॥**

ಪ್ರತ್ಯಕ್ಷಶ್ರುತಿಯು ಇಲ್ಲದ ಕಾರಣ ಶ್ರವಣಾಭಾವವನ್ನು ಅಂಗೀಕರಿಸಿ ಭೂತಗಳಿಗೆ ಸಹಗತ್ಯಭಾವವನ್ನು ತಿಳಿಯುವುದು ಸರಿಯಲ್ಲ, ಕಾರಣ – ಪ್ರತ್ಯಕ್ಷಶ್ರವಣವು ಅಶ್ರವಣಕ್ಕೆ ಬಾಧಕವಾಗುವಂತೆ ಆರ್ಥಿಕಶ್ರವಣವೂ ಸಹ ಅಶ್ರವಣಕ್ಕೆ ಬಾಧಕವಾಗುತ್ತದೆ.

ಮತ್ತು ಯಜಮಾನಮರಣವಾದಾಗ ಭೂತಗಳ ಸಹಗತಿಯನ್ನು ಸ್ಪಷ್ಟವಾಗಿ ಹೇಳಿದ್ದರಿಂದ ಆ ದೃಷ್ಟಾಂತದಿಂದ ಎಲ್ಲೆಡೆ ಭೂತಗತಿಯು ಸಿದ್ಧವಾಗುತ್ತದೆ.

ಆದ್ದರಿಂದ ಭೂತಗಳಿಗೆ ಜೀವನ ಜೊತೆ ಗತಿ ಇದ್ದೇ ಇದೆಯಾದ್ದರಿಂದ, ಮರಣವೇ ಮೋಕ್ಷವಾಗುವುದಿಲ್ಲವಾದ್ದರಿಂದ ವೈರಾಗ್ಯಾದಿಸಾಧನಗಳು ಅನುಷ್ಠೇಯವೇ ಆಗಿವೆ ಎಂದು ಸಿದ್ಧವಾಗುತ್ತದೆ.

**ಅಶ್ರುತತ್ವಾಧಿಕರಣವು ಮುಗಿಯಿತು**

ಅಧಿಕರಣ – 7

# ಭಾಕ್ತಾಧಿಕರಣ

## ಸಂಗತಿ

ಸೂ.ರ.:– अत्र भगवत्प्राप्त्यर्थं कर्मणामस्थिरफलकत्वोक्त्या वैराग्यादेरावश्यकसाधनत्वं समर्थ्यते ।

ಭಗವತ್ಪ್ರಾಪ್ತಿಗಾಗಿ ಕರ್ಮಗಳಿಗೆ ಅಸ್ಥಿರಫಲಕತ್ವವನ್ನು ಹೇಳುವುದರಿಂದ ವೈರಾಗ್ಯಾದಿ-ಗಳಿಗೆ ಆವಶ್ಯಕಸಾಧನತ್ವವನ್ನು ಸಮರ್ಥಿಸುತ್ತಾರೆ ಏಳನೇ ಈ ಭಾಕ್ತಾಧಿಕರಣದಲ್ಲಿ.

## ಪೂರ್ವಪಕ್ಷ

ಸೂ.ರ.:– ननु नानुष्ठेयं मुमुक्षुणा वैराग्यादि । कर्मणैव मोक्ष-सिद्धेः । अपाम सोममिति (ऋ.८-४८-३) श्रुतेः । न चोभयोरपि साधनत्वाद्वैराग्यादिकमप्यनुष्ठेयमिति वाच्यम् । सति हि लघीयस्युपाये गुरूपायस्यानादर्तव्यत्वात् । अतः सुशकेन कर्मणा मोक्षसिद्धौ वैराग्यादिना कृत्याभावादिति प्राप्ते सूत्रितम् ॥

ಮುಮುಕ್ಷುವಾದವನಿಂದ ವೈರಾಗ್ಯಾದಿಗಳು ಅನುಷ್ಠೇಯವಾಗಿಲ್ಲ. ಯಾಕೆಂದರೆ– "ಅಪಾಮ ಸೋಮಮಮೃತಾ ಅಭೂಮ" (ಋ.ಸಂ. 8-48-3) ಎಂಬುದಾಗಿ ಶ್ರುತಿ ಇರುವುದರಿಂದ ಕರ್ಮಾನುಷ್ಠಾನ ಮಾಡುವುದರಿಂದಲೇ ಮೋಕ್ಷವು ಸಿದ್ಧವಾಗುವುದರಿಂದ ವೈರಾಗ್ಯಾದಿಗಳು ಅನುಷ್ಠೇಯವಲ್ಲ.

ಕರ್ಮ ಹಾಗೂ ವೈರಾಗ್ಯಾದಿಗಳು ಎರಡೂ ಸಾಧನವೇ ಆದ್ದರಿಂದ ವೈರಾಗ್ಯಾದಿಗಳು ಅನುಷ್ಠೇಯವಾಗಿವೆ ಎಂದು ಹೇಳಬಹುದಲ್ಲ? ಎಂದರೆ, ಅದು ಸರಿಯಲ್ಲ. ಲಘೂಪಾಯವು ಇರುವಾಗ ಗುರೂಪಾಯವು ಅನಾದರಣೀಯ-ವಾಗಿದೆ. ಕರ್ಮಗಳು ಲಘೂಪಾಯವಾದ್ದರಿಂದ ಅದರಿಂದಲೇ ಮೋಕ್ಷ ಸಿಗುವಾಗ ವೈರಾಗ್ಯಾದಿ ಗುರೂಪಾಯವು ಅನಾದರಣೀಯವಾಗುತ್ತದೆ. ಹಾಗಾಗಿ ವೈರಾಗ್ಯಾದಿ-ಗಳಿಂದ ಕೃತ್ಯ ಇಲ್ಲದ ಕಾರಣ ವ್ಯರ್ಥವೇ ವೈರಾಗ್ಯಾದಿಗಳು ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

## ॐ भाक्तं वाऽनात्मवित्त्वात्तथा हि दर्शयति ॐ (३-१-७)

**ಸೂತ್ರಾರ್ಥ** :- ಕಾಮ್ಯಕರ್ಮಿಣಾಮುಕ್ತಮಮೃತತ್ವಂ = ಕಾಮ್ಯಕರ್ಮಿಗಳಿಗೆ ಹೇಳಿದ ಅಮೃತತ್ವವು **ಭಾಕ್ತಂ** = ಅಮುಖ್ಯವಾಗಿದೆ. ಕುತಃ = ಯಾಕೆ? **ಅನಾತ್ಮವಿತ್ವಾತ್** = ಕಾಮ್ಯಕರ್ಮಿಗಳು ಬ್ರಹ್ಮಜ್ಞಾನಿಗಳಾಗಿಲ್ಲವಾದ್ದರಿಂದ, ವಾ ಶಬ್ದದಿಂದ, ಜಿಜ್ಞಾಸುಜ್ಞಾನಿಕೃತವಾದ ಅಕಾಮ್ಯಕರ್ಮದಿಂದ ಜನ್ಯವಾದ ಅಮೃತತ್ವವೂ ಸಹ ಸಂಸಾರನಿವೃತ್ತಿರೂಪ ಮುಖ್ಯ ಅಮೃತತ್ವರೂಪವಲ್ಲ, ಕಿಂತು ಅಂತಃಕರಣಶುದ್ಧಿ - ಆನಂದಾತಿಶಯರೂಪ ನಿರತಿಶಯ ಪರಮಮುಖ್ಯರೂಪವಾದದ್ದು ಎಂಬುದಾಗಿ ಪಕ್ಷದ್ವಯವನ್ನು ಸೂಚಿಸುತ್ತಿದ್ದಾರೆ. ಕುತ ಏತತ್ ? = ಯಾವ ಪ್ರಮಾಣದ ಆಧಾರದ ಮೇಲೆ ಹಾಗೆ ಹೇಳುವುದು ? ಎಂದರೆ **ಹಿ** = ಯಾವ ಕಾರಣ "ಅಮೃತೋ ವಾ" "ಸ ಏನಮ್" (ಬೃ. 3-4-15) "ಕರ್ಮಣಾ" "ಆತ್ಮಾನಂ" ಎಂಬ ಶ್ರುತಿಯು **ತಥಾ** = ಆ ವಿಧವಾದ ಅರ್ಥಗಳನ್ನು **ದರ್ಶಯತಿ** = ಪ್ರತಿಪಾದಿಸುತ್ತಿದೆಯೋ ತಸ್ಮಾತ್ = ಆ ಕಾರಣ.

### ಸಿದ್ಧಾಂತ

**ಸೂ.ರ.:– एवं च वैराग्याद्यननुष्ठाने मोक्षासिद्धेः । न चैवं श्रुतिविरोधः । कर्म हि काम्यमकाम्यं चेति द्विविधम् । अकाम्यमपि ज्ञानात्पूर्वभावि पश्चाद्भावि चेति द्विविधम् । तत्सर्वमपि श्रुत्यर्थ एव । अधिकारिभेदात् । यदा श्रुतिः काम्यकर्मपरा न तदा मुख्यामृतत्वं किंतु बहुकालजीवनरूपभाक्तमर्थमाह । यदा तु ज्ञानात्पूर्वभाव्यकाम्यकर्मपरा तदा मुख्यामृतत्वसाधनत्वमेवाह । किं नाम न साक्षात्किन्तु कर्मणा शुद्धसत्त्वस्य वैराग्यादिद्वारा मोक्षसाधनत्वमाह । यदा तु ज्ञानोत्तरकर्मपरा तदा ज्ञानेन सिद्धति मोक्षेऽतिशयाधायकत्वमाहेति व्यवस्थायाः सद्भावात् । कथमपि कर्मणां साक्षान्मुख्यमोक्षसाधनत्वानभिधायकत्वात् । अतो वैराग्याद्यनुष्ठानमन्तरेण मोक्षासिद्धेर्न तत्प्रतिपादकशास्त्रवैयर्थ्यमिति सिद्धम् ॥**

ವೈರಾಗ್ಯಾದಿಗಳನ್ನು ಅನುಷ್ಠಾನ ಮಾಡದೇ ಹೋದರೆ ಮೋಕ್ಷವು ಸಿದ್ಧವಾಗದೇ ಇರುವುದರಿಂದ ವೈರಾಗ್ಯಾದಿಗಳು ಅವಶ್ಯ ಅನುಷ್ಠೇಯವಾಗಿವೆ.

ಹಾಗಾದರೆ 'ಅಪಾಮ ಸೋಮಮಮೃತಾ ಅಭೂಮ' ಎಂಬ ಶ್ರುತಿಯ ವಿರೋಧ ಬರುವುದಲ್ಲ? ಎಂದರೆ, ಬರುವುದಿಲ್ಲ, ಏಕೆಂದರೆ - ಕರ್ಮವು ಕಾಮ್ಯ-ಅಕಾಮ್ಯ ಎಂದು ಎರಡುವಿಧವಾಗಿದೆ. ಅಕಾಮ್ಯಕರ್ಮವೂ ಸಹ ಅಪರೋಕ್ಷ-ಜ್ಞಾನಕ್ಕಿಂತಲೂ ಪೂರ್ವಭಾವಿಯಾದದ್ದು ಮತ್ತು ಜ್ಞಾನದ ಅನಂತರಭಾವಿಯಾದದ್ದು ಎಂದು ಎರಡುವಿಧ. ಅಧಿಕಾರಿಭೇದದಿಂದ ಈ ಎಲ್ಲ ಕರ್ಮಗಳೂ ಶ್ರುತ್ಯರ್ಥವಾಗಿವೆ. ಯಾವಾಗ ಶ್ರುತಿಯು ಕಾಮ್ಯಕರ್ಮಪರವಾಗುವುದೋ ಆಗ ಶ್ರುತಿಯು ಮುಖ್ಯಾಮೃತತ್ವವನ್ನು ಹೇಳುವುದಿಲ್ಲ. ಕಿಂತು ಬಹುಕಾಲಜೀವನ ರೂಪವಾದ ಭಾಕ್ತ-ಅರ್ಥವನ್ನು ಹೇಳುತ್ತದೆ. ಇನ್ನು ಯಾವಾಗ ಜ್ಞಾನಕ್ಕಿಂತಲೂ ಪೂರ್ವಭಾವಿಕರ್ಮ-ಪರವಾಗುವುದೋ ಆಗ ಮುಖ್ಯಾಮೃತತ್ವ ಸಾಧನತ್ವವನ್ನೇ ಹೇಳುತ್ತದೆ. ಅದೂ ಸಾಕ್ಷಾತ್ ಆಗಿ ಅಲ್ಲ. ಕಿಂತು ಕರ್ಮಗಳಿಂದ ಅಂತಃಕರಣಶುದ್ಧಿ ಪಡೆದವನಿಗೆ ವೈರಾಗ್ಯಾದಿದ್ವಾರಾ ಮೋಕ್ಷಸಾಧನತ್ವವನ್ನು ಹೇಳುತ್ತದೆ. ಇನ್ನು ಯಾವಾಗ ಶ್ರುತಿಯು ಜ್ಞಾನೋತ್ತರ ಕರ್ಮಪರವಾಗುವುದೋ ಆಗ ಜ್ಞಾನದಿಂದ ಮೋಕ್ಷ ಸಿಕ್ಕರೂ ಅತಿಶಯಾಧಾಯಕತ್ವವನ್ನು ಹೇಳುತ್ತದೆ. ಹೀಗೆ ವ್ಯವಸ್ಥೆ ಇರುವುದರಿಂದ, ಹೇಗಾದರೂ ಕರ್ಮದಿಂದ ಸಾಕ್ಷಾತ್ ಮುಖ್ಯಮೋಕ್ಷಸಾಧನತ್ವವನ್ನು ಹೇಳುವುದಿಲ್ಲ 'ಅಪಾಮ ಸೋಮಂ' ಎಂಬ ಶ್ರುತಿ.

ಆದ್ದರಿಂದ ವೈರಾಗ್ಯಾದಿ ಅನುಷ್ಠಾನ ಇಲ್ಲದೇ ಮೋಕ್ಷವು ಸಿದ್ಧವಾಗುವುದಿಲ್ಲ-ವಾದ್ದರಿಂದ, ಅಂತಹ ವೈರಾಗ್ಯವನ್ನು ಪ್ರತಿಪಾದಿಸುವ ಶಾಸ್ತ್ರಕ್ಕೆ ವೈಯರ್ಥ್ಯ ಇಲ್ಲ ಎಂದು ಸಿದ್ಧವಾಗುತ್ತದೆ.

ಭಾಕ್ತಾಧಿಕರಣವು ಮುಗಿಯಿತು.

ಅಧಿಕರಣ – 8

# ಕೃತಾತ್ಯಯಾಧಿಕರಣ

## ಸಂಗತಿ

**ಸೂ.ರ.:– अत्र वैराग्यादिसाधनस्यावश्यानुष्ठेयत्वं समर्थ्यते ।**

ವೈರಾಗ್ಯಾದಿಸಾಧನಕ್ಕೆ ಅವಶ್ಯ ಅನುಷ್ಠೇಯತ್ವವನ್ನು ಸಮರ್ಥಿಸುತ್ತಾರೆ ಎಂಟನೇ ಈ ಕೃತಾತ್ಯಯಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु वैराग्यादिनाऽलम् । कृतस्य कर्मणो भोगेनैव क्षये बीजाभावेन संसाराभावसम्भवात् । न च भोगकाले पुनः कर्मान्तरा-नुष्ठानसम्भवेन न संसारान्निवृत्तिरिति वाच्यम् । इह लोके भोगसमये कर्मानुष्ठाननियमेऽपि स्वर्गादौ तदभावेन तत्रैव सर्वकर्मणां भोगेन क्षये संसारान्निवृत्तिसम्भावत् । कर्मणां भिन्नदेशकालविपाकत्वेऽपि यज्ञाद्या-राधितभगवत्प्रसादेन भवन्मते सौभर्यादिवत्स्वर्गादावेव सर्वकर्मक्षयो नानुपपन्नः । ततश्च वैराग्यादेरनावश्यकत्वमिति प्राप्ते सूत्रितम् ॥**

ಸಾಕು ವೈರಾಗ್ಯಾದಿಗಳಿಂದ. ಬಂಧವು ಕರ್ಮನಿಬಂಧನವಾಗಿದೆ. ಕರ್ಮಗಳ ಕ್ಷಯವಾದರೂ ಭೋಗದಿಂದ ಆಗುತ್ತದೆ. ಕರ್ಮಗಳ ಕ್ಷಯವಾದರೆ ತನ್ಮೂಲವಾದ ಬಂಧವು ಸ್ವಯಂ ನಿವೃತ್ತವಾಗುತ್ತದೆ.

ಭೋಗದಿಂದ ಕರ್ಮಕ್ಷಯ ಹೇಗೆ ಸಾಧ್ಯ? ಏಕೆಂದರೆ - ಭೋಗಕಾಲ-ದಲ್ಲಿಯೂ ಪುನಃ ಕರ್ಮಾಂತರಾನುಷ್ಠಾನ ಮಾಡುವುದರಿಂದ (ಕರ್ಮಗಳ ಭೋಗವು ಸಮಾಪ್ತಿಯಾಗುವುದೇ ಇಲ್ಲವಲ್ಲ?) ಬಂಧನಿವೃತ್ತಿಯೇ ಸಾಧ್ಯವಾಗುವುದಿಲ್ಲವಲ್ಲ? ಎಂದರೆ, ಅದು ಸರಿಯಲ್ಲ. ಈ ಲೋಕದಲ್ಲಿ ಭೋಗಸಮಯದಲ್ಲಿ ಕರ್ಮಾಂತ-ರಾನುಷ್ಠಾನವು ಸಂಭಾವಿತವಾದರೂ ಸಹ ಸ್ವರ್ಗಾದಿಗಳಲ್ಲಿ ಭೋಗಸಮಯದಲ್ಲಿ ಕರ್ಮಾಂತರಾನುಷ್ಠಾನಕ್ಕೆ ಅವಕಾಶವಿಲ್ಲವಾದ್ದರಿಂದ ಸ್ವರ್ಗಾದಿಗಳಲ್ಲಿ ಭೋಗ ಮಾಡಿ

ಪೂರ್ಣವಾಗಿ ಕರ್ಮಕ್ಷಯ ಮಾಡಿಕೊಳ್ಳಬಹುದಾಗಿದೆ. ಹಾಗಾಗಿ ಸಂಸಾರದಿಂದ ನಿವೃತ್ತಿಯು ಸಾಧ್ಯವಾಗಿದೆ. ಕರ್ಮಗಳಿಗೆ ಭಿನ್ನದೇಶ-ಕಾಲ-ವಿಪಾಕತ್ವ ಇದ್ದರೂ ಸಹ ಯಜ್ಞಾದಿಗಳಿಂದ ಆರಾಧಿತನಾಗುವ ಭಗವಂತನ ಪ್ರಸಾದದಿಂದ, ನಿಮ್ಮ ಮತದಲ್ಲಿ ಸೌಭರ್ಯಾದಿಗಳು ಭೋಗ ಮಾಡಿ ಮುಗಿಸಿದಂತೆ ಸ್ವರ್ಗಾದಿಗಳಲ್ಲಿಯೇ ಸರ್ವಕರ್ಮಕ್ಷಯವು ಉಪಪನ್ನವಾಗಿದೆ. ಅನುಪಪನ್ನವಲ್ಲ.

ಆದ್ದರಿಂದ ವೈರಾಗ್ಯಾದಿಗಳು ಅನಾವಶ್ಯಕವಾಗಿವೆ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರ ಹೇಳುತ್ತಾರೆ -

### ॐ कृतात्ययेऽनुशयवान् दृष्टस्मृतिभ्यां ॐ (३-१-८)

**ಸೂತ್ರಾರ್ಥ :- ಕೃತಾತ್ಯಯೇ** = ಮಾಡಿದ ಕರ್ಮಗಳನ್ನು ಸ್ವರ್ಗಾದಿಗಳಲ್ಲಿ ಭೋಗಿಸಿ ಕಳೆದುಕೊಳ್ಳುತ್ತಿರಲು ಪುನಃ **ಅನುಶಯವಾನ್** = ಭುಕ್ತಶೇಷವುಳ್ಳವ-ನಾಗಿಯೇ ಈ ಲೋಕಕ್ಕೆ ಬರುವನು ಎಂದು ತಿಳಿಯುತ್ತದೆ. ಕುತಃ = ಯಾಕೆ? **ದೃಷ್ಟಸ್ಮೃತಿಭ್ಯಾಂ** = 'ತತಃ ಶೇಷೇಣ' ಎಂದು ಶ್ರುತಿ ಇರುವುದರಿಂದ, ಮತ್ತು 'ಭುಕ್ತಶೇಷಾನುಶಯವಾನ್' ಎಂದು ಸ್ಮೃತಿ ಇರುವುದರಿಂದ.

### ಸಿದ್ಧಾಂತ

**ಸೂ.ರ.:- एवं च निर्दिष्टश्रुतिस्मृतिभ्यां स्वर्गाद्यापादककर्मण एव सामस्त्येन क्षयाभावेन सुतरां सर्वक्षयासम्भवात् । एकस्य कर्मणो भोगावसरे पुनरनन्तकर्मानुष्ठानेन भोगेनासमाप्तेर्द्वित्रावर्तनेषु सर्वक्षया-भावात् । आचतुर्दशमाद्वर्षादिति स्मृतेः । अतो वैराग्यादिसाधन-मावश्यकमिति सिद्धम् ॥**

"ತತಃ ಶೇಷೇಣೇಮಂ ಲೋಕಮಾಯಾತಿ ಪುನಃ ಕರ್ಮ ಕುರುತೇ ಪುನರ್ಗಚ್ಛತಿ ಪುನರಾಗಚ್ಛತಿ" ಎಂಬುದಾಗಿ ಶ್ರುತಿ ಇರುವುದರಿಂದ, ಹಾಗೂ

ಭುಕ್ತಶೇಷಾನುಶಯವಾನಿಮಾಂ ಪ್ರಾಪ್ಯ ಭುವಂ ಪುನಃ ।<br>
ಕರ್ಮ ಕೃತ್ವಾ ಪುನರ್ಗಚ್ಛೇತ್ಪುನರಾಯಾತಿ ನಿತ್ಯಶಃ ॥<br>
ಆಚತುರ್ದಶಮಾದ್ವರ್ಶಾತ್ಕರ್ಮಾಣಿ ನಿಯಮೇನ ತು ।<br>
ದಶಾವರಾಣಾಂ ದೇಹಾನಾಂ ಕಾರಣಾನಿ ಕರೋತ್ಯಯಮ್ ॥

ಅತಃ ಕರ್ಮಕ್ಷಯಾನ್ಮುಕ್ತಿಃ ಕುತ ಏವ ಭವಿಷ್ಯತಿ ।

ಎಂಬುದಾಗಿ ಸ್ಮೃತಿಯೂ ಇರುವುದರಿಂದ ಭೋಗದಿಂದ ಸ್ವರ್ಗಾದ್ಯಾಪಾದಕ ಕರ್ಮವೇ ಪೂರ್ಣವಾಗಿ ನಾಶವಾಗಲು ಸಾಧ್ಯವಿಲ್ಲ ಎಂದಮೇಲೆ ಸರ್ವಕರ್ಮ-ಕ್ಷಯವು ಸುತರಾಂ ಸಾಧ್ಯವಿಲ್ಲ. ಒಂದು ಕರ್ಮವನ್ನು ಭೋಗಿಸುವ ಸಂದರ್ಭದಲ್ಲಿ ಮತ್ತೆ ಅನಂತಕರ್ಮಗಳನ್ನು ಅನುಷ್ಠಾನ ಮಾಡುವುದರಿಂದ, ಭೋಗದಿಂದ ಕರ್ಮಸಮಾಪ್ತಿಯು ಆಗುವುದಿಲ್ಲವಾದ್ದರಿಂದ ಎರಡು-ಮೂರುಬಾರಿ ಭೂಮಿ-ಯಿಂದ ಸ್ವರ್ಗಕ್ಕೆ ಸ್ವರ್ಗದಿಂದ ಭೂಮಿಗೆ ಆವರ್ತನ ಮಾಡಿದರೂ ಸರ್ವಕರ್ಮ-ಕ್ಷಯವು ಸಾಧ್ಯವಾಗುವುದಿಲ್ಲ.

ಆದ್ದರಿಂದ ವೈರಾಗ್ಯಾದಿಸಾಧನವು ಅವಶ್ಯ ಅನುಷ್ಠೇಯವಾಗಿದೆ ಎಂದು ಸಿದ್ಧವಾಗುತ್ತದೆ.

**ಕೃತಾತ್ಯಯಾಧಿಕರಣವು ಮುಗಿಯಿತು.**

ಅಧಿಕರಣ – 9

# ಯಥೇತಾಧಿಕರಣ

## ಸಂಗತಿ

**ಸೂ.ರ.:– अत्र स्वर्गादागतिप्रकारो निरूप्यते ।**

ಜೀವನು ಸ್ವರ್ಗದಿಂದ ಬರುವ ಪ್ರಕಾರವನ್ನು ನಿರೂಪಿಸುತ್ತಾರೆ ಒಂಭತ್ತನೇ ಈ ಯಥೈತಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु गमनप्रकारेणैवागमनं जीवस्य भवेत् । यथेतमेवेति श्रुतेः । येन पथा स्वर्गं प्रति जीवो गतः स मार्गस्तावज्जीवस्य स्मृति-विषयः । न च स्मृतिमात्रपरित्यागेन मार्गान्तरेणागमने कारणमस्तीति तेनैवायातीति वक्तव्यम् । ततश्चातिक्लेशाभावान्न स्वर्गे वैराग्य-मापादनीयमिति प्राप्ते सूत्रितम् ॥**

ಜೀವನು ಯಾವ ದಾರಿಯಿಂದ ಹೋಗುತ್ತಾನೆ ಅದೇ ದಾರಿಯಿಂದಲೇ ಮರಳಿ ಬರುತ್ತಾನೆ. (ಗಮನಪ್ರಕಾರದಿಂದಲೇ ಆಗಮನ ಜೀವನಿಗೆ)

"ಯಥೇತಮೇವ ಗಚ್ಛತಿ ಯಥೇತಮಾಗಚ್ಛತಿ ಸ ಭುಂಕ್ತೇ ಸ ಕರ್ಮ ಕುರುತೇ ಸ ಪರಿವರ್ತತೇ" ಎಂಬುದಾಗಿ ಶ್ರುತಿಯು ಜೀವನು ಯಾವ ಮಾರ್ಗದಿಂದ ಸ್ವರ್ಗಕ್ಕೆ ತೆರಳಿದ್ದಾನೆಯೋ ಅದೇ ಮಾರ್ಗದಿಂದಲೇ ಮರಳಿ ಬರುತ್ತಾನೆ ಎಂದು ಹೇಳು-ತ್ತಿರುವುದರಿಂದ ಗಮನಪ್ರಕಾರದಿಂದಲೇ ಆಗಮನವನ್ನು ಹೇಳಬೇಕು. ವಿಜ್ಞಾತವಾದ ದಾರಿಯನ್ನು ಬಿಟ್ಟು ಅವಿಜ್ಞಾತವಾದ ದಾರಿಯಿಂದ ಬರುವುದಕ್ಕೆ ಯಾವ ಪ್ರಯೋಜನವೂ ಇಲ್ಲ.

ಆದ್ದರಿಂದ ಅತಿಕ್ಲೇಶವಿಲ್ಲದ ಕಾರಣ ಸ್ವರ್ಗಫಲವಿಷಯದಲ್ಲಿ ವೈರಾಗ್ಯವು ಆಪಾದನೀಯವಾಗಿಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ यथेतमनेवं च ॐ (३-१-९)**

**ಸೂತ್ರಾರ್ಥ** :- ಜೀವೇನ = ಜೀವನಿಂದ **ಯಥಾ** = ಯಾವ ಮಾರ್ಗದಿಂದ ಸ್ವರ್ಗಾದಿಕಂ = ಸ್ವರ್ಗಾದಿಗಳು **ಇತಂ** = ಹೊಂದಲ್ಪಟ್ಟಿವೆಯೋ ತಥಾ = ಆ ಮಾರ್ಗದಿಂದ **ಅನೇವಂ ಚ** = ಮತ್ತು ಬೇರೆ ಮಾರ್ಗದಿಂದಲೂ ಸಹ ಜೀವಃ ಇಮಂ ಲೋಕಮಾಗಚ್ಛತಿ = ಜೀವನು ಈ ಲೋಕಕ್ಕೆ ಬರುತ್ತಾನೆ.

## ಸಿದ್ಧಾಂತ

**ಸೂ.ರ.:– एवं च धूमादभ्रमिति (काषायण.) विशेषश्रुतिसद्भावात्। आकाशपर्यन्तं गत्यनुसारेणागमनस्याङ्गीकारेण पूर्वश्रुतेस्तत्परत्वेनाविरोधात्। आगमने जीवस्य स्वातन्त्र्याभावेन युक्तेरप्रयोजकत्वेन तदविरोधात् । तस्मादागमनादावतिक्लेशयुक्तत्वेन स्वर्गफलेऽपि विरक्तेन भवितव्यमिति सिद्धम् ॥**

''ಧೂಮಾದಭ್ರಮಭ್ರಾದಾಕಾಶಮಾಕಾಶಾಚ್ಚಂದ್ರಲೋಕಂ ಯಥೇತಮಾಕಾಶಮಾಕಾಶಾದ್ವಾಯುಂ ವಾಯುರ್ಭೂತ್ವಾ ಧೂಮೋ ಭವತಿ ಧೂಮೋ ಭೂತ್ವಾಽಭ್ರಂ ಭವತ್ಯಭ್ರಂ ಭೂತ್ವಾ ಮೇಘೋ ಭವತಿ ಮೇಘೋ ಭೂತ್ವಾ ಪ್ರವರ್ಷತಿ''

(ಕಾಷಾಯಣ ಶ್ರುತಿ)

ಎಂಬುದಾಗಿ ವಿಶೇಷಶ್ರುತಿ ಇರುವುದರಿಂದ ಜೀವನು ಯಾವ ಮಾರ್ಗದಿಂದ ಸ್ವರ್ಗಕ್ಕೆ ಹೋಗಿರುತ್ತಾನೋ ಆ ಮಾರ್ಗದಿಂದ ಹಾಗೂ ಬೇರೆ ಮಾರ್ಗದಿಂದ ಬರುತ್ತಾನೆ ಎಂದೇ ಹೇಳಬೇಕು.

ಹಾಗಾದರೆ 'ಯಥೇತಮೇವ ಗಚ್ಛತಿ' ಎಂಬ ಪೂರ್ವೋಕ್ತಶ್ರುತಿಯ ವಿರೋಧ ಬರುವುದಲ್ಲ? ಎಂದರೆ, ಶ್ರುತಿವಿರೋಧ ಬರುವುದಿಲ್ಲ, ಕಾರಣ - ಆಕಾಶಪರ್ಯಂತವಾಗಿ ಗತ್ಯನುಸಾರೇಣ ಆಗಮನವನ್ನು ಅಂಗೀಕಾರ ಮಾಡಿದ್ದರಿಂದ, 'ಯಥೇತಮೇವ' ಎಂಬ ಪೂರ್ವಶ್ರುತಿಯು ತತ್ಪರವಾಗಿದೆ. ಮತ್ತು ಆಗಮನವಿಷಯದಲ್ಲಿ ಜೀವನಿಗೆ ಸ್ವಾತಂತ್ರ್ಯ ಇಲ್ಲವಾದ್ದರಿಂದ, ಯುಕ್ತಿಯು ಅಪ್ರಯೋಜಕವಾದ್ದರಿಂದ ಶ್ರುತಿಯ ವಿರೋಧ ಬರುವುದಿಲ್ಲ.

ಆದ್ದರಿಂದ ಆಗಮನಾದಿಗಳಲ್ಲಿ ಅತಿಕ್ಲೇಶ ಇರುವುದರಿಂದ ಸ್ವರ್ಗಫಲವಿಷಯದಲ್ಲಿ ವಿರಕ್ತನಾಗಿ ಇರಬೇಕು ಎಂದು ಸಿದ್ಧವಾಗುತ್ತದೆ.

**ಯಥೇತಾಧಿಕರಣವು ಮುಗಿಯಿತು.**

*ಅಧಿಕರಣ - 10*

## ಚರಣಾಧಿಕರಣ

### ಸಂಗತಿ

**ಸೂ.ರ.:– अत्र गतागतस्य कर्मफलत्वं समर्थ्यते ।**

*ಗತಾಗತಕ್ಕೆ (ಗಮನಾಗಮನಗಳಿಗೆ) ಕರ್ಮಫಲತ್ವವನ್ನು ಸಮರ್ಥಿಸುತ್ತಾರೆ ಹತ್ತನೇ ಈ ಚರಣಾಧಿಕರಣದಲ್ಲಿ.*

### ಪೂರ್ವಪಕ್ಷ

**ಸೂ.ರ.:– ननु चरणफलमेव गतागतं न यज्ञादिकर्मणः । तद्य इहेति श्रुतेः । (छां. ५-१०-७) चरणस्य च स यथा कारीति श्रुते-राचार इति स्मृतेश्च कर्मणोऽन्यत्वात् । न चाथ इम इति (छां. ५-१० -३) श्रुतेर्गतागतं यज्ञफलमेव न चरणफलमिति । इष्टापूर्त्ते दत्तमित्युप-शब्देन यज्ञसमीपवर्त्तिवाचिना चरणमभिधायेष्टापूर्त्त इत्यनेन यज्ञं चाभिधायोभयफलस्य ते धूममभिसम्भवन्तीत्यादिना द्विविधस्वर्गाभि-धानेनाथ इति श्रुतेश्चरणफलत्वात् । अतो गतागतस्यान्यफलत्वा-त्कर्मणा पुनरावृत्तिशून्यस्वर्गसिद्धेर्न वैराग्यादिना कृत्यमिति प्राप्ते सूत्रितम् ॥**

*"ತದ್ಯ ಇಹ ರಮಣೀಯಚರಣಾ ರಮಣೀಯಾಂ ಯೋನಿಮಾಪದ್ಯಂತೇ ಕಪೂಯಚರಣಾಃ ಕಪೂಯಾಮಿ" (ಛಾಂ.ಉ. 5-10-7) ಎಂಬುದಾಗಿ ಶ್ರುತಿ ಇರುವುದರಿಂದ ಗತಾಗತಗಳು (ಗಮನಾಗಮನಗಳು) ಚರಣಫಲವೇ (ಆಚಾರ-ಅನಾಚಾರಗಳ ಫಲವೇ) ಆಗಿವೆ. ಹೊರತು ಯಜ್ಞಾದಿಕರ್ಮಗಳ ಫಲವಾಗಿಲ್ಲ.*

*ಯಜ್ಞಾದಿಕರ್ಮಗಳೇ ಚರಣವಾದ್ದರಿಂದ ಗತಾಗತಗಳು ಚರಣಫಲವೇ ಆಗುತ್ತವೆ ಎಂದು ಶಂಕಿಸುವುದು ಸರಿಯಲ್ಲ.*

*"ಸ ಯಥಾಕಾರೀ ಯಥಾಚಾರೀ ತಥಾ ಭವತಿ"*

ಎಂದು ಶ್ರುತಿ ಇರುವುದರಿಂದ ಹಾಗೂ

ಆಚಾರ ಇತಿ ಸಂಪ್ರೋಕ್ತಃ ಕರ್ಮಾಂಗತ್ವೇನ ಶುದ್ಧಿದಃ ।
ಅಶುದ್ಧಿದಸ್ತ್ವನಾಚಾರಶ್ಚರಣಂ ತೂಭಯಂ ಮತಮ್ ॥

ಎಂದು ಸ್ಮೃತಿಯೂ ಇರುವುದರಿಂದ ಚರಣವೇ ಕರ್ಮ ಅಲ್ಲ. ಕಿಂತು ಚರಣವು ಕರ್ಮದಿಂದ ಭಿನ್ನವಾಗಿದೆ.

ಆದರೂ ಸಹ "ಅಥ ಸ ಇಮೇ ಗ್ರಾಮಾ ಇಷ್ಟಾಪೂರ್ತೇ ದತ್ತಮಿತ್ಯುಪಾಸತೇ ತೇ ಧೂಮಮಭಿಸಂಭವಂತಿ" (ಛಾಂ. 5-10-3) ಎಂಬುದಾಗಿ ಶ್ರುತಿ ಇರುವುದ-ರಿಂದ ಗತಾಗತಗಳು ಯಜ್ಞಫಲವೇ ಹೊರತು ಚರಣಫಲವಲ್ಲ ಎಂದು ಶಂಕೆ ಬಂದರೆ, ಅದು ಸರಿಯಲ್ಲ.

ಯಜ್ಞಸಮೀಪವರ್ತಿವಾಚಿಯಾದ ಉಪಶಬ್ದದಿಂದ (ಇಷ್ಟಾಪೂರ್ತೇ ದತ್ತ-ಮಿತ್ಯುಪಾಸತೇ ಎನ್ನುವಲ್ಲಿ) ಚರಣವನ್ನು ಹೇಳಿ, ಇಷ್ಟಾಪೂರ್ತೇ ಎನ್ನುವುದರಿಂದ ಯಜ್ಞವನ್ನೂ ಹೇಳಿ, ತೇ ಧೂಮಮಭಿಸಂಭವಂತಿ ಇತ್ಯಾದಿಯಾಗಿ ಉಭಯಫಲ-ವಾದ ದ್ವಿವಿಧ ಸ್ವರ್ಗವನ್ನು ಹೇಳಿದ್ದರಿಂದ 'ಅಥ ಯ ಇಮೇ' ಎಂಬ ಶ್ರುತಿಯು ಚರಣಫಲಕವಾಗಿದೆ.

ಆದ್ದರಿಂದ ಗತಾಗತಗಳು ಮತ್ತೊಂದರ (ಚರಣದ) ಫಲವಾದ್ದರಿಂದ, ಕರ್ಮದಿಂದ ಪುನರಾವೃತ್ತಿಶೂನ್ಯವಾದ ಸ್ವರ್ಗವು ಸಿದ್ಧವಾಗುವುದಿಲ್ಲವಾದ್ದರಿಂದ ವೈರಾಗ್ಯಾದಿಗಳಿಂದ ಯಾವ ಕೃತ್ಯವೂ ಇಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

## ॐ चरणादिति चेन्न तदुपलक्षणार्थेति कार्ष्णाजिनिः ॐ (३-१-१०)

**ಸೂತ್ರಾರ್ಥ** :- ಗತಾಗತಂ ನ ಯಜ್ಞಾದೇರ್ಭವತಿ = ಗತಾಗತಗಳು ಯಜ್ಞಾದಿ-ಗಳಿಂದ ಆಗುವುದಿಲ್ಲ, ಕಿಂತು ಚರಣಾಚಾರಶ್ರುತಿಯಿರುವುದರಿಂದ **ಚರಣಾತ್** = ಯಜ್ಞಾಂಗಭೂತವಾದ ಆಚಾರದಿಂದಲೇ ಆಗುತ್ತವೆ **ಇತಿ ಚೇತ್** = ಎಂದು ಆಕ್ಷೇಪ ಬಂದರೆ ನ = ಅದು ಸರಿಯಲ್ಲ, ಕುತಃ = ಯಾಕೆ? ಯತಃ ಶ್ರುತಿಃ **ತದುಪಲಕ್ಷಣಾರ್ಥಾ** = ಯಾವ ಕಾರಣ ಶ್ರುತಿಯು ಅಜಹತ್ಸ್ವಾರ್ಥಲಕ್ಷಣಾವೃತ್ತಿಯಿಂದ ಯಜ್ಞ-ಆಚಾರ ಉಭಯಪ್ರತಿಪಾದಕವಾಗಿದೆ ಇತಿ = ಎಂಬುದಾಗಿ **ಕಾರ್ಷ್ಣಾಜಿನಿಃ** = ಕಾರ್ಷ್ಣಾಜಿನಿ ಆಚಾರ್ಯರು ತಿಳಿಯುತ್ತಾರೆಯೋ ಅತಃ = ಆ ಕಾರಣ.

## ಸಿದ್ಧಾಂತ

**ಸೂ.ರ.:- एवं च नान्यः पन्था इति (तै. आ. ३-१२-७) श्रुत्या गतागतशून्यफलस्य कर्मसाध्यताया निषिद्धत्वात् । इष्टापूर्त्तमिति (मुं. १-२-१०) श्रुत्या त्रैविद्या मामिति स्मृत्या च गतागतस्य कर्मफलत्वोक्तेश्च । न च तद्य इहेति श्रुतिविरोधः । तस्याः श्रुतेरुदाहृतश्रुत्याद्यनुरोधेनाजहत्स्वार्थलक्षणया यज्ञाद्यर्थत्वोपपत्तेः । अथ यज्ञेनेति विस्पष्टश्रुतेश्च । अपि चैवं कार्ष्णाजिनिराचार्यो मन्यते । अतो गतागतस्य कर्मफलत्वाभाव इति सिद्धम् ॥**

"ನಾನ್ಯಃ ಪಂಥಾಃ ಅಯನಾಯ ವಿದ್ಯತೇ" (ತೈ.ಆ. 3-12-7) ಎಂಬುದಾಗಿ ಶ್ರುತಿಯಿಂದ ಗತಾಗತಶೂನ್ಯಫಲಕ್ಕೆ ಕರ್ಮಸಾಧ್ಯತ್ವವನ್ನು ನಿಷೇಧಿಸಿದ್ದರಿಂದ, ಮತ್ತು

ಇಷ್ಟಾಪೂರ್ತಂ ಮನ್ಯಮಾನಾ ವರಿಷ್ಠಂ ನಾನ್ಯಚ್ಛ್ರೇಯೋ ವೇದಯಂತೇ ಪ್ರಮೂಢಾಃ।
ನಾಕಸ್ಯ ಪೃಷ್ಠೇ ಸುಕೃತೇ ತೇಽನುಭೂತ್ವಾ ಇಮಂ ಲೋಕಂ ಹೀನತರಂ ವಾ ವಿಶಂತಿ ॥
(ಅಥರ್ವಣಶ್ರುತಿ)

ಎಂಬ ಶ್ರುತಿಯಿಂದ, "ತ್ರೈವಿದ್ಯಾ ಮಾಂ ಸೋಮಪಾಃ ಪೂತಪಾಪಾಃ ಯಜ್ಞೈರಿಷ್ಟ್ವಾ ಸ್ವರ್ಗತಿಂ ಪ್ರಾರ್ಥಯಂತಃ ॥" (ಗೀತಾಸ್ಮೃತಿ)

ಎಂಬ ಸ್ಮೃತಿಯಿಂದಲೂ ಸಹ ಗತಾಗತಗಳಿಗೆ ಕರ್ಮಫಲತ್ವವನ್ನು ಹೇಳಿದ್ದರಿಂದಲೂ ಸಹ ಗತಾಗತಗಳು ಯಜ್ಞಾದಿಕರ್ಮಫಲಗಳೇ ಆಗಿವೆ.

ಹಾಗಾದರೆ - "ತದ್ಯ ಇಹ ರಮಣೀಯಚರಣಾ" ಎಂಬ ಪೂರ್ವೋಕ್ತ-ಶ್ರುತಿಯ ವಿರೋಧ ಬರುವುದಲ್ಲ? ಎಂದರೆ, ಶ್ರುತಿವಿರೋಧ ಬರುವುದಿಲ್ಲ. ಏಕೆಂದರೆ ತದ್ಯ ಇಹ ಎಂಬ ಶ್ರುತಿಯು ಉದಾಹೃತ ಶ್ರುತಿ-ಸ್ಮೃತಿಗಳಿಗೆ ಅನುಸಾರವಾಗಿ ಅಜಹತ್ಸ್ವಾರ್ಥಲಕ್ಷಣಾವೃತ್ತಿಯಿಂದ ಯಜ್ಞಾದ್ಯರ್ಥಪ್ರತಿಪಾದಕವಾಗಿದೆ. "ಅಥ ಯೇ ಯಜ್ಞೇನ ದಾನೇನ ತಪಸಾ ಲೋಕಾನ್ ಜಯಂತಿ ತೇ ಧೂಮಮಭಿಸಂಭವಂತಿ" ಎಂಬುದಾಗಿ ವಿಸ್ಪಷ್ಟಶ್ರುತಿಯಿರುವುದರಿಂದ ಕಾರ್ಷ್ಣಾಜಿನಿ ಆಚಾರ್ಯರು ಈ ರೀತಿ ತಿಳಿಯುತ್ತಾರೆ.

ಆದ್ದರಿಂದ ಗತಾಗತಗಳಿಗೆ ಕರ್ಮಫಲತ್ವವು ಸಿದ್ಧವಾಗುತ್ತದೆ.

## ಸೂತ್ರ - 11

**ಸೂ.ರ.:– उक्तमाक्षिप्य समादधत्सूत्रं व्याचष्टे ॥**

ಪೂರ್ವೋಕ್ತವಿಚಾರದ ಮೇಲೆ ಆಕ್ಷೇಪ ಮಾಡಿಕೊಂಡು ಸಮಾಧಾನ ಹೇಳುವ ಸೂತ್ರವನ್ನು ಹೇಳುತ್ತಾರೆ -

### ॐ आनर्थक्यमिति चेन्न तदपेक्षत्वात् ॐ (३-१-११)

**ಸೂತ್ರಾರ್ಥ** :- ಉಪಲಕ್ಷಣಾರ್ಥತ್ವೇ = ಶ್ರುತಿಗೆ ಉಪಲಕ್ಷಣಾರ್ಥತ್ವವನ್ನು ಹೇಳುವುದಾದರೆ ಚರಣಶಬ್ದಸ್ಯ **ಆನರ್ಥಕ್ಯಂ** = ಚರಣಶಬ್ದಕ್ಕೆ ಆನರ್ಥ್ಯಕ್ಯ ಬರುತ್ತದೆ. ಕುತಃ = ಯಾಕೆ? ರಮಣೀಯಕಪೂಯಪದಾಭ್ಯಾಮೇವ ಕರ್ಮೋಪಲಕ್ಷಣ-ಸಂಭವಾತ್ = ರಮಣೀಯ - ಕಪೂಯ ಪದಗಳಿಂದಲೇ ಕರ್ಮೋಪಲಕ್ಷಣ ಮಾಡಲು ಸಂಭವವಿರುವುದರಿಂದ **ಇತಿ ಚೇತ್** = ಎಂದು ಆಕ್ಷೇಪ ಬಂದರೆ ನ = ಅದು ಸರಿಯಲ್ಲ, **ಕುತಃ** = ಯಾಕೆ? **ತದಪೇಕ್ಷತ್ವಾತ್** = ಸಾಧು-ಅಸಾಧು ಯಜ್ಞಾದಿಮತ್ವವು ಆಚಾರಾದಿಸಾಪೇಕ್ಷವಾದ್ದರಿಂದ, ಹಾಗಾಗಿ ಅದನ್ನು ತಿಳಿಸು-ವುದಕ್ಕಾಗಿ ಚರಣಶಬ್ದಕ್ಕೆ ಸಾರ್ಥಕ್ಯವು ಸಂಭವಿಸುತ್ತದೆ.

**ಸೂ.ರ.:– एवं च चरणवैयर्थ्यप्रसङ्गे यज्ञाद्युपलक्षणत्वमेव नेत्यङ्गीकारे श्रुत्यादिविरोधस्योक्तत्वात् । यज्ञाद्युपलक्षणत्वमङ्गीकृत्य चरणकृत्यमात्रं चेद्यज्ञादिकारिणां साध्वसाधुचरणाभ्यामेव रमणीयत्वं भवतीति ज्ञापनाय चरणपदमित्यभ्युपगमात् । अतो गतागतस्य कर्मफलत्वात्क्लेशसाधने तस्मिंस्तत्साध्ये च विरक्तेन भवितव्यमिति सिद्धम् ॥**

ಚರಣಶಬ್ದಕ್ಕೆ ಆನರ್ಥಕ್ಯಪ್ರಸಂಗ ಇರುವುದರಿಂದ ಯಜ್ಞಾದ್ಯುಪಲಕ್ಷಣಾಭಾವ-ಸಾಧನ ಮಾಡುವುದೋ? ಅಥವಾ ಉಪಲಕ್ಷಣಪಕ್ಷವನ್ನು ಅಂಗೀಕರಿಸಿ ಚರಣಪದ-ಕೃತ್ಯವಿಚಾರ ಮಾಡುವುದೋ?

ಆನರ್ಥಕ್ಯಪ್ರಸಂಗ ಇರುವುದರಿಂದ ಯಜ್ಞಾದ್ಯುಪಲಕ್ಷಣಾಭಾವಸಾಧನ ಮಾಡುವುದು ಸರಿಯಲ್ಲ, ಹಾಗಾದಲ್ಲಿ ಶ್ರುತ್ಯಾದಿವಿರೋಧವನ್ನು ಹೇಳಿಯಾಗಿದೆ.

ಇನ್ನು ಚರಣಪದಕೃತ್ಯವಿಚಾರ ಮಾಡುವುದಾದರೆ - ರಮಣೀಯಾದಿ ಪದ-ದಿಂದ ಯಜ್ಞಾದ್ಯುಪಲಕ್ಷಣವು ಶಕ್ಯವಾದರೂ, ಅಷ್ಟೇ ಹೇಳಿದರೆ ಯಜ್ಞಾದಿಕರ್ತೃತ್ವವು ಸಮಾನವಾಗಿರುವಾಗ ಕೆಲವಕ್ಕೆ ರಮಣೀಯತ್ವ ಮತ್ತೆ ಕೆಲವಕ್ಕೆ ಕಪೂಯತ್ವ ಏಕೆ? ಎಂದು ಶಂಕೆ ಬರುತ್ತದೆ. ಅದನ್ನು ನಿರಾಕರಿಸಲು 'ಆಚಾರ ಇತಿ ಸಂಪ್ರೋಕ್ತಃ' ಎಂದು ಸ್ಮೃತಿ ಇರುವುದರಿಂದ ಸಾಧು-ಅಸಾಧು ಯಜ್ಞಾದಿಮತ್ವವು ಆಚಾರಾದ್ಯಪೇಕ್ಷ-ವಾದ್ದರಿಂದ, ರಮಣೀಯ-ಕಪೂಯ ಚರಣಗಳಿಂದ ಯಜ್ಞಾದಿಕಾರಿಗಳಿಗೂ ರಮಣೀಯತ್ವಾದಿಗಳು ಬರುತ್ತವೆ ಎಂದು ತಿಳಿಸುವುದಕ್ಕಾಗಿ ಚರಣಪದಕ್ಕೆ ಸಾರ್ಥಕ್ಯವು ಉಪಪನ್ನವಾಗುತ್ತದೆ.

ಆದ್ದರಿಂದ ಗತಾಗತಗಳು ಕರ್ಮಫಲವಾದ್ದರಿಂದ ಕ್ಲೇಶಸಾಧನವಾದ ಆ ವಿಷಯದಲ್ಲಿ ವಿರಕ್ತನಾಗಿ ಇರಬೇಕು ಎಂದು ಸಿದ್ಧವಾಗುತ್ತದೆ.

## ಸೂತ್ರ - 12

**ಸೂ.ರ.:– प्रकारान्तरेण चरणश्रुतिं व्याकुर्वत्सूत्रं पठति ।**

ಮತ್ತೊಂದು ಪ್ರಕಾರದಿಂದಲೂ ಸಹ ಚರಣಶ್ರುತಿಯನ್ನು ವ್ಯಾಖ್ಯಾನಿಸುವ ಸೂತ್ರವನ್ನು ಹೇಳುತ್ತಾರೆ -

**ॐ सुकृतदुष्कृते एवेति तु बादरिः ॐ (३-१-१२)**

**ಸೂತ್ರಾರ್ಥ :- ಸುಕೃತದುಷ್ಕೃತೇ** ಏವ = ಸಾಧು-ಅಸಾಧು ಕರ್ಮಗಳು ಮಾತ್ರವೇ ಶ್ರುತಿಸ್ಥಚರಣಶಬ್ದವಾಗಿವೆ. ನ ತು ತದಂಗಾಚರಣಂ = ಹೊರತು ತದಂಗವಾದ ಆಚರಣ ಅಲ್ಲ ಇತಿ = ಎಂಬುದಾಗಿ **ಬಾದರಿಃ** = ಬಾದರಿ ಆಚಾರ್ಯರು ತಿಳಿಯುತ್ತಾರೆ. ತು ಶಬ್ದದಿಂದ ಅದೇ ತಮ್ಮ ಸಿದ್ಧಾಂತವೂ ಆಗಿದೆ ಎಂದು ಸೂಚಿಸುತ್ತಿದ್ದಾರೆ.

**ಸೂ.ರ.:– एवं च चरणपदस्य यज्ञादिवाचकत्वमेव । धर्मं कुरुतेत्यर्थस्याङ्गीकारेऽपि बाधाभावात् । चरतीति प्रयोगात् । करोति-चरत्योः पर्यायत्वेन धर्मशब्दाभिधेये पुण्यसाधने यज्ञादिसर्वकर्मणि निष्पन्नकृतशब्दाभिधेयत्वस्य सर्वसिद्धत्वेन तत्पर्यायत्वे कर्मणि ल्युडन्तस्य चरणशब्दस्यापि शक्तेरवर्जनीयत्वात् । अपि चैवमेव**

**बादरिराचार्यो मन्यते । अतो गतागतस्य कर्मफलत्वात्क्लेशसाधने तस्मिंस्तत्साध्ये च विरक्तेन भवितव्यमिति सिद्धम् ॥**

ಚರಣಶ್ರುತಿಯು ಯಜ್ಞಾದ್ಯುಪಲಕ್ಷಣವಾಗಿದೆ ಎಂದು ಹೇಳಿದಾಗ ವಿರೋಧಿಯಾಗುವುದಿಲ್ಲ ಎಂದಷ್ಟೇ ಅಲ್ಲ, ಕಿಂತು ಸಾಧು-ಅಸಾಧುವಾಗಿ ಮಾಡಲ್ಪಟ್ಟ ಯಜ್ಞಾದಿಕರ್ಮವಾಚಕವೂ ಆಗಿದೆ.

ಯಾವ ರೀತಿಯಾಗಿ ಚರಣಶಬ್ದಕ್ಕೆ ಕರ್ಮಾಂಗವಾದ ಆಚಾರದಲ್ಲಿ ಪ್ರಯೋಗವಿದೆಯೋ ಅದರಂತೆಯೇ ಕರ್ಮದಲ್ಲಿಯೂ ಪ್ರಯೋಗವಿದೆ. ಉದಾ– ''ಧರ್ಮಂ ಕುರುತೆ'' ಎಂಬ ಅರ್ಥದಲ್ಲಿ ''ಧರ್ಮಂ ಚರತೆ'' ಎಂಬುದಾಗಿ ಪ್ರಯೋಗ ಮಾಡುವುದು ಕಂಡಿದೆ. ಸಾಧಾರಣವಾದ ಶ್ರುತಿಗೆ ಇಲ್ಲಿ ಬಾಧಕ ಇರುವುದರಿಂದ ಸಾಂಗಕರ್ಮಪ್ರತಿಪಾದಕತ್ವವೇ ಉಪಪನ್ನವಾಗುತ್ತದೆ ಎಂಬುದಾಗಿ ಬಾದರಿ ಆಚಾರ್ಯರು ಅಭಿಪ್ರಾಯಪಡುತ್ತಾರೆ.

ಕರೋತಿ–ಚರಿತಿ ಶಬ್ದಗಳು ಪರ್ಯಾಯವಾದ್ದರಿಂದ ಧರ್ಮಶಬ್ದವಾಚ್ಯವಾದ ಪುಣ್ಯಸಾಧನವಾದ ಯಜ್ಞಾದಿಸರ್ವಕರ್ಮಗಳು ಕೃತಶಬ್ದವಾಚ್ಯವಾಗಿವೆ ಎನ್ನುವುದು ಎಲ್ಲರಿಗೂ ಸಿದ್ಧವಾಗಿರುವುದರಿಂದ, ಆ ಶಬ್ದದ ಪರ್ಯಾಯತ್ವ ಇರುವುದಾದರೆ ಕರ್ಮಾರ್ಥದಲ್ಲಿ ಲ್ಯುಟ್‌ಪ್ರತ್ಯಯಾಂತವಾದ ಚರಣಶಬ್ದಕ್ಕೂ ಸಹ ಕರ್ಮಗಳಲ್ಲಿ ಶಕ್ತಿಯು ಅವರ್ಜನೀಯವಾಗಿದೆ. ಈ ರೀತಿಯಾಗಿ ಬಾದರಿ ಆಚಾರ್ಯರು ಅಭಿಪ್ರಾಯಪಡುತ್ತಾರೆ ಎಂದು ಅಭಿಪ್ರಾಯ.

ಆದ್ದರಿಂದ ಗತಾಗತಗಳು ಕರ್ಮಗಳ ಫಲವಾದ್ದರಿಂದ ಕ್ಲೇಶಸಾಧನವಾದ ಅದರ ವಿಷಯದಲ್ಲಿ ವಿರಕ್ತನಾಗಿ ಇರಬೇಕು ಎಂದು ಸಿದ್ಧವಾಗುತ್ತದೆ.

**ಚರಣಾಧಿಕರಣವು ಮುಗಿಯಿತು.**

ಅಧಿಕರಣ – 11

## ಅನಿಷ್ಟಾಧಿಕರಣ

### ಸಂಗತಿ

**ಸೂ.ರ.:– अत्रानिष्टादिकारिणामपि गतागतादिदुःखमस्तीति समर्थ्यते ।**

ಅನಿಷ್ಟಾದಿಕಾರಿಗಳಿಗೂ ಸಹ ಗತಾಗತಾದಿದುಃಖ ಇದೆ ಎಂದು ಸಮರ್ಥಿಸುತ್ತಾರೆ ಹನ್ನೊಂದನೇ ಈ ಅನಿಷ್ಟಾಧಿಕರಣದಲ್ಲಿ.

### ಪೂರ್ವಪಕ್ಷ

**ಸೂ.ರ.:– नन्विष्टादिपुण्यकृतामेव गतागतादिक्लेशः । तेषां विधिनिषेधभीतियुक्तत्वात् । बिभ्यत्पतति पादपादिति न्यायात् । किञ्च कामना हि कर्माङ्गसाङ्गमेव च कर्मफलहेतुर्न तु व्यङ्ग्यम् । कामनावन्तश्च ते इष्टादिकारिणस्तु स्वात्मानं स्वयमेव विधिनिषेधाभ्यां बध्नन्ति । उपनीतस्यैव विधिनिषेधविषयत्वात् । अनुपनीतास्तु मत्ताः । न ह्युपनीतं प्रत्यहरहः सन्ध्यामित्यादि शास्त्रं प्रवर्तत इति शक्यते वक्तुम् । शूद्रादीनां तत्प्रसङ्गात् । अतः पुण्यपापकृतामेव गमनागमनादिदुःखं न तु पापमात्ररतानां मत्तानां किन्तु मोक्ष एवेति पुण्ये तत्फले च विरक्त्या भवितव्यं न तु पापमात्रानुष्ठान इति प्राप्ते सूत्रमाह ॥**

ಇಷ್ಟಾದಿಪುಣ್ಯಕರ್ತೃಗಳು ವಿಧಿನಿಷೇಧಭೀತಿಯುಕ್ತರಾದ್ದರಿಂದ, 'ಬಿಭ್ಯತ್ ಪತತಿ ಪಾದಪಾತ್' ಎಂಬ ನ್ಯಾಯಕ್ಕನುಗುಣವಾಗಿ ಇಷ್ಟಾದಿಪುಣ್ಯಕರ್ತೃಗಳಾದವರಿಗೇನೇ ಗತಾಗತಾದಿಕ್ಲೇಶ ಇರುವುದು ಎಂದು ಅಂಗೀಕರಿಸಬೇಕು.

ಮತ್ತು ಇಷ್ಟಾದಿಕಾರಿಗಳು ಫಲಕಾಮಿಗಳಾದ್ದರಿಂದಲೂ ಸಹ ಅವರಿಗೇನೇ ಗತಾಗತಾದಿಕ್ಲೇಶವು ಉಪಪನ್ನವಾಗುತ್ತದೆ. ಈ ಇಷ್ಟಾದಿಕಾರಿಗಳು ತಮ್ಮಷ್ಟಕ್ಕೆ ತಾವೇ

ವಿಧಿನಿಷೇಧಗಳಿಂದ ತಮ್ಮನ್ನು ಬಂಧಿಸಿಕೊಳ್ಳುತ್ತಾರೆ. ಹೊರತು ಅನಿಷ್ಟಾದಿಕಾರಿಗಳು ಬಂಧಿಸಿಕೊಳ್ಳುವುದಿಲ್ಲ.

ಆದ್ದರಿಂದ ಪುಣ್ಯಪಾಪಕರ್ತೃಗಳಾದ ಇಷ್ಟಾದಿಕಾರಿಗಳಿಗೇನೇ ಗಮನಾಗಮನಾದಿ ದುಃಖ ಇರುವುದು, ಹೊರತು ಪಾಪದಲ್ಲಿ ಮಾತ್ರ ರತರಾದ ಮತ್ತರಿಗೆ ಅಲ್ಲ. ಹಾಗಾಗಿ ಅನಿಷ್ಟಾದಿಕಾರಿಗಳಿಗೆ ಗಮನಾಗಮನಾದಿ ದುಃಖರಹಿತವಾದ ಮೋಕ್ಷವೇ ಆಗುತ್ತದೆ. ಆದ್ದರಿಂದ ಪುಣ್ಯದ ವಿಷಯದಲ್ಲಿ ಹಾಗೂ ಅದರ ಫಲವಿಷಯದಲ್ಲಿ ವಿರಕ್ತನಾಗಿರ-ಬೇಕು. ಹೊರತು ಪಾಪಮಾತ್ರಾನುಷ್ಠಾನದಲ್ಲಿ ವೈರಾಗ್ಯ ಸಲ್ಲದು ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

## ॐ अनिष्टादिकारिणामपि च श्रुतम् ॐ (३-१-१३)

**ಸೂತ್ರಾರ್ಥ** :- (ಚಶಬ್ದವು ದುಃಖಾಂತರಸಮುಚ್ಚಾಯಕವಾಗಿದೆ.) ನ ಕೇವಲಮಿಷ್ಟಾದಿಕಾರಿಣಾಮೇವ ಗತಾಗತಂ = ಕೇವಲ ಇಷ್ಟಾದಿಕಾರಿಗಳಿಗಷ್ಟೇ ಗತಾಗತ ದುಃಖವಿದೆ. ಎಂದಲ್ಲ ಕಿಂತು **ಅನಿಷ್ಟಾದಿಕಾರಿಣಾಮಪಿ** = ಇಷ್ಟಶಬ್ದಿತಯಾಗಾದಿ ಕರ್ಮವಿರುದ್ಧ ಪಾಪಕರ್ಮಕಾರಿಗಳಿಗೂ ಸಹ ಗತಾಗತದುಃಖವಿದೆ. ಕುತಃ = ಯಾಕೆ? ಯತಃ = ಯಾವ ಕಾರಣ **ಶ್ರುತಂ** = 'ತದ್ಯ ಇಹ' ಎಂಬುದಾಗಿ ಭಾಲ್ಲವೇಯ ಶ್ರುತಿಯಿಂದ ಹಾಗೆ ಹೇಳಲ್ಪಟ್ಟಿದೆಯೋ ಅತಃ = ಆ ಕಾರಣ.

### ಸಿದ್ಧಾಂತ

**ಸೂ.ರ.:– एवं च न पुण्यपापे सङ्कलय्यानुष्ठितानामेव गतागतादि-क्लेशः । किं नाम पापमेवानुरक्तानां मत्तानामपि । उक्तश्रुत्या प्रत्येकं गतागतक्लेशाभिधानात् । अतो युक्तमुक्तमिति सिद्धम् ॥**

ಪುಣ್ಯಪಾಪಗಳನ್ನು ಕೂಡಿಸಿ ಅನುಷ್ಠಾನ ಮಾಡುವ ಇಷ್ಟಾದಿಕಾರಿಗಳಿಗೆ ಮಾತ್ರ ಗತಾಗತಾದಿದುಃಖ ಎಂದಲ್ಲ. ಕಿಂತು ಪಾಪದಲ್ಲಿಯೇ ಅನುರಕ್ತರಾದ ಮತ್ತರಿಗೂ ಸಹ ಗತಾಗತದುಃಖ ಉಂಟು. ಯಾಕೆ?

"ತದ್ಯ ಇಹ ಶುಭಕೃತೋ ಯೇ ವಾಽಶುಭಕೃತಸ್ತೇಽಶುಭಮನುಭೂಯಾ-ವರ್ತಂತೇ ಪುನಃ ಕರ್ಮ ಕುರ್ವಂತಿ ಪುನರ್ಗಚ್ಛಂತಿ ಪುನರಾಗಚ್ಛಂತಿ"

ಎಂಬ ಭಾಲ್ಲವೇಯಶ್ರುತಿಯಿಂದ ಪ್ರತ್ಯೇಕವಾಗಿ ಗತಾಗತಕ್ಲೇಶ ಹೇಳಿದ್ದರಿಂದ. ಆದ್ದರಿಂದ ಅನಿಷ್ಟಾದಿಕಾರಿಗಳಿಗೂ ಗತಾಗತದುಃಖ ಇದೆ ಎಂದು ಹೇಳಿದ್ದು ಯುಕ್ತವೇ ಆಗಿದೆ.

## ಸೂತ್ರ - 14

**ಸೂ.ರ.:– न केवलमनिष्टादिकारिणां गतागतमात्रम् । किं नामातिदुःखं पूर्वसूत्रे चशब्देन सूचितमन्यदस्तीत्यर्थं प्रतिपादयत्सूत्र-मुपन्यस्यति ॥**

ಅನಿಷ್ಟಾದಿಕಾರಿಗಳಿಗೆ ಗತಾಗತದುಃಖ ಮಾತ್ರ ಇದೆ ಎಂದಲ್ಲ. ಕಿಂತು ಪೂರ್ವ-ಸೂತ್ರದಲ್ಲಿ ಚಶಬ್ದದಿಂದ ಸೂಚಿತವಾದ ಅತ್ಯಂತದುಃಖವೂ ಮತ್ತೊಂದು ಇದೆ ಎಂದು ತಿಳಿಸುವ ಸೂತ್ರವನ್ನು ಹೇಳುತ್ತಾರೆ -

**ॐ संयमने त्वनुभूयेतरेषामारोहावरोहौ तद्गतिदर्शनात् ॐ**

**(३-१-१४)**

**ಸೂತ್ರಾರ್ಥ** :- (ತು ಶಬ್ದವು ಅವಧಾರಣಾರ್ಥಕವಾಗಿದೆ. ಸಂಯಮನೇ ಎಂಬ ಸಪ್ತಮಿಯು ದ್ವಿತೀಯಾರ್ಥದಲ್ಲಿದೆ.) **ಸಂಯಮನೇ** = ನರಕದಲ್ಲಿ ಸಂಯಮ (ನೇ)ನಂ = ಚೆನ್ನಾಗಿ ಯಮಶಾಸನವನ್ನು **ಅನುಭೂಯ ತು** (ಏವ) = ಅನುಭವಿ-ಸಿಯೇ ಸ್ಥಿತಾನಾಂ = ಇರುವ **ಇತರೇಷಾಂ** ಮಧ್ಯೇ = ಇಷ್ಟಾದಿಕಾರಿಗಳಿಂದ ಭಿನ್ನರಾದ ಅನಿಷ್ಟಾದಿಕಾರಿಗಳ ಮಧ್ಯದಲ್ಲಿ **ಆರೋಹಾವರೋಹೌ** = ಕೆಲವರಿಗೆ ಆರೋಹ ನರಕದಿಂದ ಉತ್ಥಾನ, ಕೆಲವರಿಗೆ ಅವರೋಹ ಆ ನರಕಕ್ಕಿಂತಲೂ ನೀಚಸ್ಥಾನವಾದ ನಿತ್ಯನರಕದಲ್ಲಿ ಪಾತವು ಆಗುತ್ತದೆ. **ಕುತಃ** = ಯಾಕೆ? **ತದ್ಗತಿ-ದರ್ಶನಾತ್** = ಅನಿಷ್ಟಾದಿಕಾರಿಗಳಿಗೆ ಈ ವಿಧವಾದ ಗತಿಯು 'ಸರ್ವೇ ವಾ' ಎಂಬ (ಕೌಂಠರವ್ಯ) ಶ್ರುತಿಯಲ್ಲಿ ಉಕ್ತವಾದ್ದರಿಂದ.

**ಸೂ.ರ.:– एवं चोक्तं युक्तमिति सिद्धम् ॥**

ಅಜ್ಞಾನಿಗಳಾದ ಎಲ್ಲ ಅನಿಷ್ಟಾದಿಕಾರಿಗಳಿಗೂ ಯಮಶಾಸನ ಉಂಟು. ಆ ಯಮಶಾಸನವನ್ನು ಅನುಭವಿಸಿದ ನಂತರ ಕೆಲವು ಅನಿಷ್ಟಾದಿಕಾರಿಗಳಿಗೆ ಆ ಯಮಲೋಕದಿಂದ ಉತ್ಥಾನವಾಗುತ್ತದೆ. ಮತ್ತೆ ಕೆಲವರಿಗೆ -

"ಸರ್ವೇ ವಾ ಏತೇಽಶುಭಕೃತಃ ಸಂಯಮನೇ ಪ್ರಪತಂತಿ, ತತ್ರ ಯೇ ಪರದ್ವಿಷೋ ಗುರುದ್ವಿಷಃ ಶ್ರುತಿದ್ವಿಷಸ್ತದವಮಂತಾರಃ ಶಠಾ ಮೂರ್ಖಾ ಇತಿ ತೇ ವೈ ತತೋಽವರುಹ್ಯ ತಮಸಿ ಪ್ರಪತಂತಿ ನೈವೈತ ಉತ್ತಿಷ್ಠಂತೇಽಪಿ ಕರ್ಹಿಚಿದ್ವಪ್ರಂ ವಾ ಏತದಿತ್ಯಾಹುರಥ ಯೇಽನ್ಯೇ ಬ್ರಹ್ಮದ್ವಿಷಃ ಸ್ತೇನಾಃ ಸುರಾಪಾಃ ಇತಿ ತೇ ವೈ ತದನುಭೂಯೇಮಂ ಲೋಕಮನುವ್ರಜಂತಿ"

ಎಂಬುದಾಗಿ ಶ್ರುತಿಯು ಹೇಳುವಂತೆ ಅದಕ್ಕಿಂತಲೂ ನೀಚಸ್ಥಲವಾದ ನಿತ್ಯನರಕದಲ್ಲಿ ಪಾತವಾಗುತ್ತದೆ.

ಆದ್ದರಿಂದ ಹಿಂದೆ ಹೇಳಿದ್ದು ಯುಕ್ತವಾಗಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 15

**ಸೂ.ರ.:– उक्तार्थं स्मृत्या समर्थयत्सूत्रं पठति ॥**

ಹಿಂದೆ ಹೇಳಿದ ಅರ್ಥವನ್ನು ಸ್ಮೃತಿಯಿಂದಲೂ ಸಮರ್ಥಿಸುವ ಸೂತ್ರವನ್ನು ಹೇಳುತ್ತಾರೆ –

### ॐ स्मरन्ति च ॐ (३-१-१५)

**ಸೂತ್ರಾರ್ಥ :–** ಸ್ಮರಂತಿ ಚ = ಸ್ಮೃತಿಕರ್ತೃಗಳು ಹಿಂದೆ ಹೇಳಿದ ಅರ್ಥವನ್ನು "ಗಚ್ಛಂತಿ ಪಾಪಿನಃ ಸರ್ವೇ" ಇತ್ಯಾದಿ ಸ್ಮೃತಿಗಳಿಂದಲೂ ಪ್ರತಿಪಾದಿಸುತ್ತಾರೆ.

**ಸೂ.ರ.:– एवं न च भयकामनाद्यभावविरोधः । अबिभ्यता फलकामनाशून्येनाप्युपभुक्तस्य विषयस्य मरणहेतुत्वदर्शनात् । अतोऽनिष्टादिकारिणामपि महानर्थत्वेन मोक्षाशाया दूरोत्सारितत्वाद्भवितव्यं तत्रापि विरक्तेनेति सिद्धम् ॥**

ಹಿಂದೆ ಹೇಳಿದ ಅರ್ಥವನ್ನು ಸ್ಮೃತಿಕಾರರು

ಗಚ್ಛಂತಿ ಪಾಪಿನಃ ಸರ್ವೇ ನರಕಂ ನಾತ್ರ ಸಂಶಯಃ ।
ತತ್ರ ಭುಕ್ತ್ವಾ ಪತಂತ್ಯೇವ ಯೇ ದ್ವಿಷಂತಿ ಜನಾರ್ದನಮ್ ॥
ಮಹಾತಮಸಿ ಮಗ್ನಾನಾಂ ನ ತೇಷಾಮುತ್ಥಿತಿಃ ಕ್ವಚಿತ್ ।
ಇತರೇಷಾಂ ತು ಪಾಪಾನಾಂ ವ್ಯುತ್ಥಾನಂ ವಿದ್ಯತೇಽಪಿ ಚ ॥

ಸುಖಸ್ಯಾನಂತರಂ ದುಃಖಂ ದುಃಖಸ್ಯಾನಂತರಂ ಸುಖಮ್ ।
ಇತಿ ಸರ್ವತ್ರ ನಿಯಮಃ ಪಂಚಕಷ್ಟೇ ತು ತತ್ಸದಾ ॥

ಇತ್ಯಾದಿಯಾಗಿ ಸ್ಮೃತಿಗಳಿಂದಲೂ ಪ್ರತಿಪಾದಿಸಿದ್ದಾರೆ. ಹಾಗಾದರೆ ಭಯ-ಕಾಮನಾದ್ಯಭಾವವಿರೋಧ ಬರುವುದಲ್ಲ? ಆದರರ್ಥ - ಅನಿಷ್ಟಾದಿಕಾರಿಗಳಿಗೆ ಪ್ರತ್ಯವಾಯಪ್ರಯುಕ್ತಭಯ ಹಾಗೂ ಫಲಕಾಮನಾ ಎರಡೂ ಇಲ್ಲವಾದ್ದರಿಂದ ಗತಾಗತಾದ್ಯನರ್ಥ ಇಲ್ಲ ? ಎಂಬ ಶಂಕೆ ಸರಿಯಲ್ಲ. ಏಕೆಂದರೆ - ಭಯವಿಲ್ಲ ಫಲಕಾಮನೆ ಇಲ್ಲ ಎಂದಮಾತ್ರಕ್ಕೆ ಅಂತಹವನು ತಿಂದ ವಿಷವು ಮರಣಹೇತು-ವಾಗುವುದಿಲ್ಲವೇ ? ಆಗಿಯೇ ಆಗುತ್ತದೆ. ಭಯರಹಿತನಾದ ಫಲಕಾಮನಾ-ಶೂನ್ಯನಾದ ವ್ಯಕ್ತಿ ತಿಂದ ವಿಷವು ಮರಣಹೇತುವಾಗುವುದು ಕಂಡಿದ್ದರಿಂದ, ಪ್ರತ್ಯವಾಯಪ್ರಯುಕ್ತಭಯ ಹಾಗೂ ಫಲಕಾಮನಾ ಇಲ್ಲದ ಅನಿಷ್ಟಾದಿಕಾರಿಗಳಿಗೆ ಗತಾಗತಾದ್ಯನರ್ಥ ಉಂಟೇ ಉಂಟು.

ಆದ್ದರಿಂದ ಅನಿಷ್ಟಾದಿಕಾರಿಗಳಿಗೂ ಸಹ ಮಹಾಽನರ್ಥ ಇರುವುದರಿಂದ ಅವರಿಗೆ ಮೋಕ್ಷದ ಆಶೆಯೇ ದೂರೋತ್ಸಾರಿತವಾದ್ದರಿಂದ, ಇಷ್ಟಾದಿರೂಪ ಕಾಮ್ಯ ಅಕರಣ ವಿಷಯದಲ್ಲಿ ಹಾಗೂ ತದ್ವಿರುದ್ಧಕರಣ ವಿಷಯದಲ್ಲಿಯೂ ಸಹ ವೈರಾಗ್ಯದಿಂದ ಇರಬೇಕು ಎಂದು ಸಿದ್ಧವಾಗುತ್ತದೆ.

ಅನಿಷ್ಟಾಧಿಕರಣವು ಮುಗಿಯಿತು.

ಅಧಿಕರಣ - 12

# ಅಪಿಸಪ್ತಾಧಿಕರಣ

## ಸಂಗತಿ

**ಸೂ.ರ.:- अत्र भगवद्द्वेषादिफलस्य नरकस्य नित्यत्वं समर्थ्यते ।**

ಭಗವದ್‌ದ್ವೇಷಾದಿಫಲವಾದ ನರಕಕ್ಕೆ ನಿತ್ಯತ್ವವನ್ನು ಸಮರ್ಥಿಸುತ್ತಾರೆ ಹನ್ನೆರಡನೇ ಈ ಅಪಿಸಪ್ತಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:- ननु नरकं न निर्गत्य दुःखसाधनम् । यावदिन्द्राश्चतुर्दशेत्यादाववधिमत्त्वश्रवणात् । न चोभयं युक्तम् । विरोधात् । न च पुरुषभेदेन व्यवस्था । चकार नरकं शून्यमिति शून्यताऽभिधानात् । ततश्च संयमने त्वनुभूय केषांचिदवरोह इति प्रागुक्तमयुक्तमिति नेतरपापेभ्यो भगवद्विद्वेषेऽतिशयेन वैराग्येण भाव्यमिति प्राप्ते सूत्रितम् ॥**

ನರಕವು ಪುನರಾವೃತ್ತಿ ಉಳ್ಳದ್ದೇ ಆಗಿದೆ, ಹೊರತು ನಿತ್ಯಫಲಪ್ರದ ಅಲ್ಲ. ಕಾರಣ 'ಯಾವದಿಂದ್ರಾಶ್ಚತುರ್ದಶ' ಇತ್ಯಾದಿಯಲ್ಲಿ ನರಕಕ್ಕೆ ಒಂದು ಅವಧಿಯು ಶ್ರುತವಾಗುತ್ತಿರುವುದರಿಂದ. ನರಕವು ನಿತ್ಯ-ಅನಿತ್ಯ ಎರಡೂ ಆಗಲು ಸಾಧ್ಯವಿಲ್ಲ. ವಿರೋಧ ಬರುವುದರಿಂದ.

ಒಂದೇ ನರಕಕ್ಕೇನೇ ಪುರುಷಭೇದೇನ ನಿತ್ಯತ್ವ-ಅನಿತ್ಯತ್ವಗಳನ್ನು ಕೂಡಿಸಬಹುದಲ್ಲವೇ? ಎಂದರೆ, ಅದು ಸರಿಯಲ್ಲ. ಕಾರಣ - 'ಚಕಾರ ನರಕಂ ಶೂನ್ಯಂ' ಎಂದು ಶೂನ್ಯತ್ವವನ್ನು ಹೇಳಿದ್ದರಿಂದ.

ಆದ್ದರಿಂದ "ಸಂಯಮನೇ ತ್ವನುಭೂಯ ಕೇಷಾಂಚಿತ್ ಆರೋಹಃ ಕೇಷಾಂಚಿತ್ ಅವರೋಹಃ" ಎಂಬುದಾಗಿ ಹಿಂದೆ ಹೇಳಿದ್ದು ಯುಕ್ತವಲ್ಲ. ಹಾಗಾಗಿ ಇತರ ಪಾಪಗಳಿಗಿಂತಲೂ ಭಗವದ್‌ದ್ವೇಷದ ವಿಷಯದಲ್ಲಿ ಅತಿಶಯೇನ ವೈರಾಗ್ಯದಿಂದ ಇರಬೇಕು ಎಂದು ಹೇಳುವುದು ಸರಿಯಾಗುವುದಿಲ್ಲ ಎಂಬುದಾಗಿ

ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

## ॐ अपि सप्त ॐ (३-१-१६)

**ಸೂತ್ರಾರ್ಥ** :- ಸಪ್ತ ಅಪಿ = ಸ್ಮೃತಿಕರ್ತೃಗಳು ರೌರವಾದಿ ಏಳುವಿಧ ನರಕಗಳನ್ನೂ ಸಹ 'ರೌರವೋಽಥ ಮಹಾಂಶ್ಚೈವ' ಎಂಬ ಸ್ಮೃತಿಗಳಿಂದ ಪ್ರತಿಪಾದಿಸುತ್ತಾರೆ.

## ಸಿದ್ಧಾಂತ

**ಸೂ.ಟ.**:- एवं च भवेदेवं यद्येकमेव नरकं स्यात् । न चैवम् । किं नाम रौरवोऽथेति वचनात्सप्तनरकाणि । चकार नरकमिति रौरवादिपञ्चनरकविषयाणि । नैवैत उत्तिष्ठन्त इत्यादीनि (कौण्ठरव्य.) तामिस्रान्धतामिस्रविषयाणि । अन्यानि च बहूनि क्षुद्रनरकाणि । तान्यप्यनित्यफलदानि । अतो भगवद्द्वेषादिकफलस्य नित्यनरकत्वादितरपापेभ्योऽतिशयेन तत्रैव वैराग्येण भवितव्यमिति सिद्धम् ॥

ಒಂದುವೇಳೆ ಒಂದೇ ನರಕ ಇರುತ್ತಿದ್ದರೆ ಹಿಂದೆ ಶಂಕಿಸಿದಂತೆ ಶಂಕಿಸಬಹುದಾಗಿತ್ತು. ಆದರೆ ನರಕ ಒಂದೇ ಇಲ್ಲ. ಕಿಂತು -

ರೌರವೋಽಥ ಮಹಾಂಶ್ಚೈವ ವಹ್ನಿರ್ವೈತರಣೀ ತಥಾ ।
ಕುಂಭೀಪಾಕ ಇತಿ ಪ್ರೋಕ್ತಾನ್ಯನಿತ್ಯನರಕಾಣಿ ತು(ಚ) ॥
ತಾಮಿಸ್ರಶ್ಚಾಂಧತಾಮಿಸ್ರೋ ದ್ವೌ ನಿತ್ಯೌ ಸಂಪ್ರಕೀರ್ತಿತೌ ।
ಇತಿ ಸಪ್ತ ಪ್ರಧಾನಾನಿ ಬಲೀಯಸ್ತೂತ್ತರೋತ್ತರಮ್ ॥
ಏತಾನಿ ಕ್ರಮಶೋ ಗತ್ವೈವಾಽರೋಹೋಽಥಾವರೋಹಣಮ್ ॥

ಎಂಬ ಭಾರತವಚನದಂತೆ ಏಳು ನರಕಗಳಿವೆ. ಚಕಾರ ನರಕಂ ಶೂನ್ಯಂ ಎನ್ನುವುದು ರೌರವಾದಿ ಪಂಚನರಕವಿಷಯಕವಾಗಿದೆ. 'ನೈವೈತೇ ಉತ್ತಿಷ್ಠಂತೇ' (ಕೌಂಠರವ್ಯ) ಇತ್ಯಾದಿಗಳು ತಾಮಿಸ್ರ-ಅಂಧತಾಮಿಸ್ರ ನರಕವಿಷಯಕವಾಗಿವೆ.

ಇದಲ್ಲದೇ ಇನ್ನೂ ಅನೇಕ ನರಕಗಳಿವೆ. ಕ್ಷುದ್ರನರಕಗಳು ಬಹಳ ಇವೆ. ಅವುಗಳೂ ಸಹ ಅನಿತ್ಯಫಲದವಾಗಿವೆ.

ಆದ್ದರಿಂದ ಭಗವದ್ದ್ವೇಷಾದಿಫಲವಾದ ನರಕವು ನಿತ್ಯನರಕವಾದ್ದರಿಂದ ಇತರಪಾಪಗಳಿಗಿಂತಲೂ ಭಗವಂತನ ದ್ವೇಷದ ವಿಚಾರದಲ್ಲಿ ಅತಿಶಯವಾಗಿ ವೈರಾಗ್ಯದಿಂದ ಇರಬೇಕು ಎಂದು ಸಿದ್ಧವಾಗುತ್ತದೆ.

**ಅಪಿ ಸಪ್ತಾಧಿಕರಣವು ಮುಗಿಯಿತು**

ಅಧಿಕರಣ – 13

# ತತ್ರಾಪ್ಯಧಿಕರಣ

## ಸಂಗತಿ

**ಸೂ.ರ.:– अत्र नरकस्य सदुःखत्वं समर्थ्यते ।**

ನರಕಕ್ಕೆ ಸದುಃಖತ್ವವನ್ನು (ದುಃಖಸಹಿತತ್ವವನ್ನು) ಸಮರ್ಥಿಸುತ್ತಾರೆ ಹದಿಮೂರನೇ ಈ ತತ್ರಾಪ್ಯಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु न नरकं सदुःखम् । ईश्वरस्यापि दुःखप्रसङ्गात् । भूलोकस्य स्वस्थितानां सर्वेषां दुःखजननस्वभावाभावेन भूलोके सहावस्थितयोर्जीवेशयोर्जीवस्यैव दुःखं नेश्वरस्येति शक्तिवैशेष्यादितिवत् तथा सम्भवेऽपि नरकस्य स्वस्थितानां सर्वेषां दुःखजननस्वभावत्त्वेन वैषम्यायोगात् । न च तत्रेश्वराभावान्न दुःखप्रसङ्गः । सर्वं विसृजतीति (कौषारव.) श्रुत्येश्वरस्य कार्यमात्रं प्रति कारणत्वेन तत्रेश्वराभावे सुतरां दुःखायोगात् । ततश्चोभयथाऽपि दुःखाभावसम्भवान्न तत्र वैराग्येण भाव्यमिति प्राप्ते सूत्रितम् ॥**

ನರಕದಲ್ಲಿ ದುಃಖವನ್ನು ಅಂಗೀಕರಿಸುವುದಾದರೆ ನರಕದಲ್ಲಿ ಈಶ್ವರನೂ ಇರುವುದರಿಂದ ಈಶ್ವರನಿಗೂ ದುಃಖಪ್ರಸಕ್ತಿ ಬರುತ್ತದೆ. ಆದ್ದರಿಂದ ನರಕವು ಸದುಃಖವಲ್ಲ.

ತನ್ನಲ್ಲಿರುವ ಎಲ್ಲರಿಗೂ ದುಃಖಜನನಸ್ವಭಾವವು ಭೂಲೋಕಕ್ಕೆ ಇಲ್ಲವಾದ್ದರಿಂದ ಭೂಲೋಕದಲ್ಲಿ ಸಹಾವಸ್ಥಿತರಾದ ಜೀವ-ಈಶರಲ್ಲಿ ಜೀವನಿಗೆ ಮಾತ್ರ ದುಃಖ, ಶಕ್ತಿವೈಶೇಷ್ಯ ಇರುವುದರಿಂದ ಈಶ್ವರನಿಗೆ ದುಃಖವಿಲ್ಲ ಎನ್ನುವುದು ಉಪಪನ್ನವಾಗುವುದಾದರೂ ಸಹ ನರಕದ ವಿಷಯದಲ್ಲಿ ಹಾಗಿಲ್ಲ. ನರಕವು ತನ್ನಲ್ಲಿರುವ ಎಲ್ಲರಿಗೂ ದುಃಖಜನನಸ್ವಭಾವ ಉಳ್ಳದ್ದಾದ್ದರಿಂದ "ನರಕದಲ್ಲಿ ಜೀವನಿಗೆ ಮಾತ್ರ

ದುಃಖವಿದೆ, ಈಶ್ವರನಿಗೆ ದುಃಖ ಇಲ್ಲ" ಎಂಬುದಾಗಿ ವೈಷಮ್ಯ ಹೇಳಲು ಬರುವುದಿಲ್ಲ.

ನರಕದಲ್ಲಿ ಈಶ್ವರನೇ ಇರುವುದಿಲ್ಲವಾದ್ದರಿಂದ ಈಶ್ವರನಿಗೆ ದುಃಖಪ್ರಸಕ್ತಿ ಬರುವುದಿಲ್ಲವಲ್ಲ? ಎಂದರೆ, ಅದು ಸರಿಯಲ್ಲ.

"ಸರ್ವಂ ವಿಸೃಜತಿ ಸರ್ವಂ ವಿಲಾಪಯತಿ ಸರ್ವಂ ರಮಯತಿ ಸರ್ವಂ ನ ರಮಯತಿ ಸರ್ವಂ ಪ್ರವರ್ತಯತ್ಯಂತರಸ್ಮಿನ್ನಿವಿಷ್ಟಃ" (ಕೌಷಾರವ ಶ್ರುತಿ) ಎಂಬುದಾಗಿ ಶ್ರುತಿಯು ಹೇಳುವಂತೆ ಈಶ್ವರನು ಸಕಲ ಕಾರ್ಯಗಳನ್ನು ಕುರಿತು ಕಾರಣನಾದ್ದರಿಂದ ನರಕದಲ್ಲಿ ಈಶ್ವರನು ಇಲ್ಲದೇ ಹೋದರೆ ಸುತರಾಂ ದುಃಖವು ಕೂಡುವುದಿಲ್ಲ.

ಆದ್ದರಿಂದ ಉಭಯಥಾಪಿ ದುಃಖಾಭಾವವು ಸಂಭಾವಿತವಾದ್ದರಿಂದ ನರಕದ ವಿಷಯದಲ್ಲಿ ವೈರಾಗ್ಯದಿಂದ ಇರಬೇಕಾದುದಿಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

## ॐ तत्रापि च तद्व्यापारादविरोधः ॐ (३-१-१७)

**ಸೂತ್ರಾರ್ಥ** :- (ಚ ಶಬ್ದವು 'ದುಃಖಾನುಭವಂ ವಿನಾ' ಎಂಬ ಅರ್ಥವನ್ನು ಸೂಚಿಸುತ್ತದೆ.) **ತತ್ರಾಪಿ** = ನರಕದಲ್ಲಿಯೂ ಸಹ **ಚ** = (ದುಃಖಾನುಭವಂ ವಿನ್ಯೆವ) ದುಃಖಾನುಭವ ಇಲ್ಲದೇನೇ ತದ್ವ್ಯಾಪಾರಾತ್ = ಈಶ್ವರನ ಪ್ರೇರಣರೂಪವಾದ ವ್ಯಾಪಾರ ಇರುವುದರಿಂದ **ಅವಿರೋಧಃ** = ಈಶ್ವರನು ನರಕದಲ್ಲಿ ಇದ್ದು ಅಲ್ಲಿರುವ ಜೀವರನ್ನು ನಿಯಂತ್ರಿಸುವುದಿಲ್ಲ ಎಂದರೆ ಸರ್ವಂ ಎಂಬ ಶ್ರುತಿವಿರೋಧ, ಅಲ್ಲಿರುವ ಜೀವರನ್ನು ನಿಯಂತ್ರಿಸುತ್ತಾನೆ ಎನ್ನುವುದಾದರೆ ದುಃಖಭೋಕ್ತೃತ್ವ ಬರಬೇಕಾಗುತ್ತದೆ ಎಂಬುದಾಗಿ ಉಭಯವಿರೋಧ ಬರುವುದಿಲ್ಲ.

### ಸಿದ್ಧಾಂತ

**ಸೂ.ರ.:–** एवं च नरकेऽपीश्वरव्यापाराङ्गीकारेणाकारणत्वदोषाभावात् । नरकस्यापि तद्वशत्वेनादुःखानुभवेनैव तत्प्रेरकत्वेन तस्य दुःखप्राप्त्यभावात् । स स्वर्ग इति (पौत्रायण.) श्रुतेः । नरकेऽपीति स्मृतेश्च (भागवततन्त्रे.) । तथाच नरकस्य सदुःखत्वात्तत्रैव वैराग्येण भाव्यमिति सिद्धम् ॥

"ಸ ಸ್ವರ್ಗೇ ಸ ಭೂಮೌ ಸ ನರಕೇ ಸೋಽಂಧೇ ತಮಸಿ .... ನಾಸೌ ದುಃಖಭುಕ್ ಯ ಏವಂ ವೇದ" (ಪೌತ್ರಾಯಣಶ್ರುತಿ) ಎಂಬುದಾಗಿ ಶ್ರುತಿ ಇರುವುದರಿಂದ, ಮತ್ತು

ನರಕೇಽಪಿ ವಸನ್ನೀಶೋ ನಾಸೌ ದುಃಖಭುಗುಚ್ಯತೇ ।
ನೀಚೋಚ್ಚತ್ವೈವ ದುಃಖಾದೇರ್ಭೋಗ ಇತ್ಯಭಿಧೀಯತೇ ।
ನಾಸೌ ನೀಚೋಚ್ಚತಾಂ ಯಾತಿ ಪಶ್ಯತ್ಯೇವ ಪ್ರಭುತ್ವತಃ ॥ (ಭಾಗವತತಂತ್ರ)

ಎಂಬುದಾಗಿ ಸ್ಮೃತಿಯೂ ಇರುವುದರಿಂದ, ನರಕದಲ್ಲಿಯೂ ಈಶ್ವರವ್ಯಾಪಾರ-ವನ್ನು ಅಂಗೀಕರಿಸಿದ್ದರಿಂದ ಅಕಾರಣತ್ವದೋಷವಿಲ್ಲ. ಇನ್ನು ನರಕವೂ ಈಶ್ವರನ ವಶವಾದ್ದರಿಂದ ದುಃಖಾನುಭವ ಇಲ್ಲದೇನೇ ಅಲ್ಲಿರುವ ಜನರನ್ನು ಪ್ರೇರಿಸುವುದರಿಂದ ಈಶ್ವರನಿಗೆ ದುಃಖಪ್ರಾಪ್ತಿ ಇಲ್ಲ.

ಆದ್ದರಿಂದ ನರಕವು ದುಃಖ ಉಳ್ಳದ್ದಾದ್ದರಿಂದ ಆ ವಿಷಯದಲ್ಲಿಯೇ ವೈರಾಗ್ಯ-ದಿಂದ ಇರಬೇಕು ಎಂದು ಸಿದ್ಧವಾಗುತ್ತದೆ.

ತತ್ರಾಪ್ಯಧಿಕರಣವು ಮುಗಿಯಿತು.

ಅಧಿಕರಣ – 14

# ವಿದ್ಯಾಧಿಕರಣ

## ಸಂಗತಿ

ಸೂ.ರ.:– अत्र जीवानां गतिस्वातन्त्र्यं निराक्रियते ।

ಜೀವರಿಗೆ ಗತಿಸ್ವಾತಂತ್ರ್ಯವನ್ನು ನಿರಾಕರಿಸುತ್ತಾರೆ ಹದಿನಾಲ್ಕನೇ ಈ ವಿದ್ಯಾಧಿಕರಣದಲ್ಲಿ.

## ಪೂರ್ವಪಕ್ಷ

ಸೂ.ರ.:– ननु भवन्त्येव जीवा गत्यादिफले स्वतन्त्राः । अथैतयोरिति (छां. ५-१०-८) वचनात् । न हि स्वातन्त्र्याभावे गच्छन्ति न गच्छन्तीति व्यपदेशो युज्यते । न च जीवानां स्वातन्त्र्यमप्रतिपादितमिति वाच्यम् । साधनफलवदीश्वरदत्तस्वातन्त्र्याङ्गीकारात् । अतो मूले लब्धफलो नैव शाखाग्रं गन्तुमिष्यतीति न्यायात् फल एव स्वातन्त्र्यात् किं वैराग्यसाधनेनेति प्राप्ते सूत्रितम् ॥

ಗತ್ಯಾದಿಫಲವಿಷಯದಲ್ಲಿ ಜೀವರು ಸ್ವತಂತ್ರರೇ ಆಗಿದ್ದಾರೆ. ಕಾರಣ – "ತೇऽರ್ಚಿಷಮಭಿಸಂಭವಂತಿ" "ತೇ ಧೂಮಮಭಿಸಂಭವಂತಿ" ಎಂದು ಹೇಳಿ "ಅಥೈತಯೋಃ ಪಥೋರ್ನ ಕತರೇಣ ಚ ತಾನೀಮಾನಿ ಕ್ಷುದ್ರಮಿಶ್ರಾಣ್ಯಸಕೃದಾವರ್ತೀನಿ ಭೂತಾನಿ ಭವಂತಿ ಜಾಯಸ್ವ ಮ್ರಿಯಸ್ವೇತ್ಯೇತತ್ತೃತೀಯಂ ಸ್ಥಾನಮ್" (ಛಾಂ.ಉ. 5–10–8) ಎಂಬುದಾಗಿ ಶ್ರುತಿಯಲ್ಲಿ ಸ್ವಾತಂತ್ರ್ಯವನ್ನು ಹೇಳಿದ್ದರಿಂದ.

ಜೀವನಿಗೆ ಹಾಗೆ ಸ್ವಾತಂತ್ರ್ಯ ಇಲ್ಲದೇ ಹೋದರೆ ಗಚ್ಛಂತಿ, ನ ಗಚ್ಛಂತಿ ಎಂದು ವ್ಯಪದೇಶವು ಉಪಪನ್ನವಾಗುವುದಿಲ್ಲ. ಹೌದು ಶ್ರುತಿಯಲ್ಲಿ ಸ್ವಾತಂತ್ರ್ಯವು ಪ್ರತಿಪಾದಿತವಾಗಿಲ್ಲವಲ್ಲ? ಎಂದು ಶಂಕಿಸುವುದು ಸರಿಯಲ್ಲ. ಸಾಧನಫಲದಂತೆ ಈಶ್ವರದತ್ತ ಸ್ವಾತಂತ್ರ್ಯವನ್ನು ಅಂಗೀಕರಿಸಿದ್ದರಿಂದ.

ಆದ್ದರಿಂದ "ಮೂಲೇ ಲಬ್ಧಫಲೋ ನೈವ ಶಾಖಾಗ್ರಂ ಗಂತುಮಿಷ್ಯತಿ"

(ಬುಡದಲ್ಲಿಯೇ ಹಣ್ಣನ್ನು ಪಡೆದ ವ್ಯಕ್ತಿ ಶಾಖೆಯ ಕೊನೆಗೆ ಹೋಗಲಾರನು) ಎಂಬ ನ್ಯಾಯದಿಂದ ಫಲದಲ್ಲಿಯೇ ಸ್ವಾತಂತ್ರ್ಯ ಇರುವುದರಿಂದ ವೈರಾಗ್ಯಸಾಧನದಿಂದ ಏನು ಪ್ರಯೋಜನ? ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

## ॐ विद्याकर्मणोरिति तु प्रकृतत्वात् ॐ (३-१-१८)

**ಸೂತ್ರಾರ್ಥ** :- (ತು ಶಬ್ದ ಅವಧಾರಣಾರ್ಥದಲ್ಲಿದೆ.) 'ಅಥೈತಯೋಃ ಪಥೋಃ' ಎಂಬ ಶ್ರುತಿಯಲ್ಲಿ ಏತಯೋಃ ಇತ್ಯಸ್ಯ = ಏತಯೋಃ ಎಂಬುದಕ್ಕೆ **ವಿದ್ಯಾಕರ್ಮಣೋಃ ಇತಿ (ತು)** ಏವ = ಜ್ಞಾನಮಾರ್ಗ ಕರ್ಮಮಾರ್ಗಗಳಲ್ಲಿ ಎಂದೇ ಅರ್ಥ. ಹೊರತು ಧೂಮಮಾರ್ಗ - ಅರ್ಚಿರಾದಿ ಮಾರ್ಗಗಳಲ್ಲಿ ಎಂದು ಅರ್ಥವಲ್ಲ. ಯೇನ ಜೀವಸ್ಯ ಫಲಸ್ವಾತಂತ್ರ್ಯಂ ಸ್ಯಾತ್ = ಒಂದುವೇಳೆ ಏತಯೋಃ ಎನ್ನುವುದಕ್ಕೆ ಧೂಮಮಾರ್ಗ-ಅರ್ಚಿರಾದಿ ಮಾರ್ಗಗಳಲ್ಲಿ ಎಂದು ಅರ್ಥ-ವಿರುತ್ತಿದ್ದರೆ ಜೀವನಿಗೆ ಫಲಸ್ವಾತಂತ್ರ್ಯ ಇರುತ್ತಿತ್ತು. ಆದರೆ ಅದಕ್ಕೆ ಹಾಗೆ ಅರ್ಥವಲ್ಲ. ಕುತಃ = ಯಾಕೆ? **ಪ್ರಕೃತತ್ವಾತ್** = ತದ್ಯ ಇತ್ಥಮ್ (ಛಾಂ. 5-10-1) ಎಂಬುದಾಗಿ ಜ್ಞಾನಮಾರ್ಗ-ಕರ್ಮಮಾರ್ಗಗಳೂ ಪ್ರಕೃತವಾದ್ದರಿಂದ.

### ಸಿದ್ಧಾಂತ

**ಸೂ.ರ.:- एवं च जीवानां गत्यादिस्वातन्त्र्ये प्रमाणाभावात् । अथैतयोरिति श्रुतिगतैतयोरिति शब्दस्य तद्य इत्थमिति विद्याकर्ममार्गयोरपि प्रकृतत्वात्तत्परामर्शकत्वेनास्य वाक्यस्य साधने स्वातन्त्र्यनिर्देशात्मकत्वात् । न च विद्याकर्ममार्गवद्देवयानपितृयानयोरपि प्रकृतत्वेन कस्यायं परामर्श इति सन्देहेनानिर्णयः । विद्यापथ इति वचनेन परामर्शकनिर्णयोपपत्तेः । अतः फले स्वातन्त्र्याभावादपेक्षितं वैराग्यादिसाधनमिति सिद्धम् ॥**

ಜೀವರಿಗೆ ಗತ್ಯಾದಿಸ್ವಾತಂತ್ರ್ಯವಿದೆ ಎಂಬ ವಿಷಯದಲ್ಲಿ ಯಾವ ಪ್ರಮಾಣವೂ ಇಲ್ಲವಾದ್ದರಿಂದ ಜೀವರಿಗೆ ಗತ್ಯಾದಿಸ್ವಾತಂತ್ರ್ಯ ಇಲ್ಲ.

'ಅಥೈತಯೋಃ ಪಥೋಃ' ಎಂಬ ಶ್ರುತಿಯಲ್ಲಿರುವ ಏತಯೋಃ ಎಂಬ ಶಬ್ದಕ್ಕೆ "ತದ್ಯ ಇತ್ಥಂ ವಿದುರ್ಯೇ ಚೇಮೇಽರಣ್ಯೇ ಶ್ರದ್ಧಾತಪ ಇತ್ಯುಪಾಸತೇ ತೇಽರ್ಚಿಷ-ಮಭಿಸಂಭವಂತಿ । ಅಥ ಯ ಇಮೇ ಗ್ರಾಮ ಇಷ್ಟಾಪೂರ್ತೇ ದತ್ತಮಿತ್ಯುಪಾಸತೇ ತೇ ಧೂಮಮಭಿಸಂಭವಂತಿ" ಎಂಬುದಾಗಿ ಜ್ಞಾನಮಾರ್ಗ - ಕರ್ಮಮಾರ್ಗಗಳೂ ಪ್ರಕೃತವಾದ್ದರಿಂದ ಅದನ್ನು ಪರಾಮರ್ಶ ಮಾಡಿಕೊಳ್ಳುವುದರಿಂದ ಈ ವಾಕ್ಯವು ಸಾಧನವಿಷಯದಲ್ಲಿ ಸ್ವಾತಂತ್ರ್ಯನಿರ್ದೇಶಾತ್ಮಕವಾಗಿದೆ.

ಜ್ಞಾನಮಾರ್ಗ-ಕರ್ಮಮಾರ್ಗಗಳಂತೆ ದೇವಯಾನ-ಪಿತೃಯಾನಗಳೂ ಪ್ರಕೃತವಾದ್ದರಿಂದ ಯಾವುದರ ಪರಾಮರ್ಶ? ಎಂದು ಸಂದೇಹ ಬರುವುದರಿಂದ ನಿರ್ಣಯಿಸಲು ಬರುವುದಿಲ್ಲ ಎಂದು ಶಂಕಿಸುವುದು ಸರಿಯಲ್ಲ. ವಿದ್ಯಾಪಥಃ ಎಂಬ ವಚನದಿಂದ ಪರಾಮರ್ಶಕನಿರ್ಣಯ ಮಾಡಲು ಉಪಪನ್ನವಾಗುತ್ತದೆ.

ಆದ್ದರಿಂದ ಜೀವರಿಗೆ ಗತ್ಯಾದಿಸ್ವಾತಂತ್ರ್ಯವಿಲ್ಲವಾದ್ದರಿಂದ ವೈರಾಗ್ಯಾದಿ ಸಾಧನವು ಅಪೇಕ್ಷಿತವಾಗಿದೆ ಎಂದು ಸಿದ್ಧವಾಗುತ್ತದೆ.

ವಿದ್ಯಾಧಿಕರಣವು ಮುಗಿಯಿತು.

ಅಧಿಕರಣ – 15

# ನ ತೃತೀಯಾಧಿಕರಣ

## ಸಂಗತಿ

**ಸೂ.ರ.:– अत्रान्धन्तमसस्य दुःखमात्रत्वं समर्थ्यते ।**

ಅಂಧಂತಮಸ್ಸಿಗೆ ದುಃಖಮಾತ್ರತ್ವವನ್ನು ಸಮರ್ಥಿಸುತ್ತಾರೆ ಹದಿನೈದನೇ ಈ ನ ತೃತೀಯಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– नन्वन्धन्तमोऽपि सुखयुक्तमेव । दुःखयुक्तत्वात् । दुःखं हि सुखाविनाभूतम् । यत्र दुःखं तत्र सुखमिति वचनात् । अतोऽन्धन्तमस्यपि सुखसद्भावान्न तत्रातिवैराग्यमपेक्षितमित्याशङ्कां परिहरत्सूत्रमाह ॥**

ಅಂಧಂತಮಸ್ಸೂ ಸಹ ಸುಖಯುಕ್ತವೇ ಆಗಿದೆ. ಕಾರಣ - ದುಃಖಯುಕ್ತ-ವಾದ್ದರಿಂದ. ದುಃಖ ಇದ್ದರೆ ಸುಖ ಏಕೆ ಇರಬೇಕು? ಎಂದರೆ,

ಯತ್ರ ದುಃಖಂ ಸುಖಂ ತತ್ರ ಸರ್ವತ್ರಾಪಿ ಪ್ರತೀಯತೇ ।
ಅಪಿ ನೀಚಗತೌ ಕಿಂಚಿತ್ ಕಿಮು ಮಾನುಷದೇಹಿನಃ ॥

ಎಂಬುದಾಗಿ ವಚನವಿರುವುದರಿಂದ ದುಃಖವು ಸುಖದಿಂದ ಅವಿನಾಭೂತ-ವಾಗಿದೆ ಅರ್ಥಾತ್ ವ್ಯಾಪ್ತವಾಗಿದೆ. ಹಾಗಾಗಿ ವ್ಯಾಪ್ಯವಾದ ದುಃಖ ಇದ್ದಮೇಲೆ ವ್ಯಾಪಕವಾದ ಸುಖವೂ ಅಲ್ಲಿ ಇರಬೇಕು.

ಆದ್ದರಿಂದ ಅಂಧಂತಮಸ್ಸಿನಲ್ಲಿಯೂ ಸುಖವಿರುವುದರಿಂದ ಅದರ ವಿಷಯ-ದಲ್ಲಿ ಅತಿವೈರಾಗ್ಯವು ಅಪೇಕ್ಷಿತವಾಗಿಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ न तृतीये तथोपलब्धेः ॐ (३-१-१९)**

ಸೂತ್ರಾರ್ಥ :- ತೃತೀಯೇ = "ತಿರ್ಯಗ್ಯಾತನಾ ತಮಃ" ಎಂದು ಹೇಳಲ್ಪಟ್ಟ

ಅಧೋಗತಿಗಳಲ್ಲಿ ತೃತೀಯವಾದ ಅಂಧಂತಮಸ್ಸಿನಲ್ಲಿ ನ ಸುಖಮಸ್ತಿ = ಸುಖವು ಇಲ್ಲ. ಕುತಃ = ಯಾಕೆ? **ತಥೋಪಲಬ್ಧೇಃ** = ಹಾಗೆ (ಅಂಧಂತಮಸ್ಸಿನಲ್ಲಿ ಸುಖವಿಲ್ಲ ಎಂದೇ) ಪ್ರತೀತವಾಗುತ್ತಿರುವುದರಿಂದ.

## ಸಿದ್ಧಾಂತ

**ಸೂ.ರ.:– एवं चाथाविद्वानकर्मेति श्रुतिसद्भावात् । नान्धे तमसि मग्नानामिति (भविष्यत्पर्वणि.) स्मृतेश्च । अतोऽन्धे तमसि सुखलेशाभावाद्भवितव्यं तत्र तत्साधने च विरक्तेनेति सिद्धम् ॥**

"ಅಥಾವಿದ್ವಾನಕರ್ಮಾಽವಾಗ್ಗಚ್ಛತಿ ತ್ರಿಧಾ ವ ವಾಽವಾಗ್ಗತಿಸ್ತಿರ್ಯಗ್ಯಾತನಾ ತಮ ಇತಿ। ದ್ವೇ ವಾ ಸುಖಾನುವೃತ್ತೇ, ನ ತಮಃ ಸುಖಾನುವೃತ್ತಂ ಕೇವಲಂ ಹ್ಯೇವಾತ್ರ ದುಃಖಂ ಭವತಿ" ಎಂಬುದಾಗಿ ಶ್ರುತಿ ಇರುವುದರಿಂದ ಹಾಗೂ "ನಾಂಧೇತಮಸಿ ಮಗ್ನಾನಾಂ" (ಭವಿಷ್ಯತ್ಪರ್ವ) ಎಂಬುದಾಗಿ ಸ್ಮೃತಿಯೂ ಇರುವುದರಿಂದ ಅಂಧಂ-ತಮಸ್ಸಿನಲ್ಲಿ ಸುಖ ಇಲ್ಲ. ದುಃಖಮಾತ್ರ ಇದೆ. ಆದ್ದರಿಂದ ಅಂಧಂತಮಸ್ಸಿನಲ್ಲಿ ಸುಖ-ಲೇಶವೂ ಇಲ್ಲವಾದ್ದರಿಂದ ಅದರ ವಿಷಯದಲ್ಲಿ ಮತ್ತು ಅದರ ಸಾಧನವಿಷಯದಲ್ಲಿ (ವೈರಾಗ್ಯವು ಅಪೇಕ್ಷಿತವಾಗಿದೆ) ವೈರಾಗ್ಯದಿಂದ ಇರಬೇಕು ಎಂದು ಸಿದ್ಧವಾಗುತ್ತದೆ.

## ಸೂತ್ರ - 20

**ಸೂ.ರ.:– एतमेवार्थं स्मृत्यनुमानाभ्यां च साधयत्सूत्रमुपन्यस्यति ॥**

ಇದೇ ಅರ್ಥವನ್ನೇ (ಅಂಧಂತಮಸ್ಸಿನಲ್ಲಿ ಸುಖವಿಲ್ಲ ಎನ್ನುವುದನ್ನೇ) ಸ್ಮೃತಿ-ಅನುಮಾನಗಳಿಂದ ಸಾಧಿಸುವ ಸೂತ್ರವನ್ನು ಹೇಳುತ್ತಾರೆ -

**ॐ स्मर्यतेऽपि च लोके ॐ (३-१-२०)**

**ಸೂತ್ರಾರ್ಥ** :- ಅಂಧೇ ತಮಸಿ ಸುಖರಾಹಿತ್ಯಂ = ಅಂಧಂತಮಸ್ಸಿನಲ್ಲಿ ಸುಖವಿಲ್ಲ ಎನ್ನುವುದು **ಸ್ಮರ್ಯತೇ ಚ** = 'ನಾಂಧೇ ತಮಸಿ' ಎಂಬುದಾಗಿ ಸ್ಮೃತಿಕಾರ-ರಿಂದ ಸ್ಮೃತಿಯಿಂದಲೂ ಪ್ರತಿಪಾದಿತವಾಗಿದೆ. ಕಿಂಚ = ಮತ್ತು ಏತತ್ = ಈ ಅಂಧಂತಮಸ್ಸಿನಲ್ಲಿ ಸುಖರಾಹಿತ್ಯವು **ಲೋಕೇಽಪಿ** = ಲೋಕದೃಷ್ಟವ್ಯಾಪ್ತಿ ಉಳ್ಳ ಅನುಮಾನದಿಂದಲೂ ಸಿದ್ಧವಾಗಿದೆ.

ಸೂ.ರ.:– एवं च तिर्यक्ष्विति स्मृतेः (भविष्यत्पर्वणि.) विमताः न सुखवन्तः ईश्वरेण तथाऽनिष्टत्वात् । यो यथा नेश्वरेणेष्टः नासौ तथा । यथा श्रुङ्गित्वेनानिष्टः शिखी न भृङ्गीत्यनुमानस्य च सद्भावात् । ईश्वरेण तथाऽनिष्टत्वं च तदप्रियत्वहेतुसिद्धम् । अतोंऽधे तमसि सुखलेशाभाव इति सिद्धम् ॥

ತಿರ್ಯಕ್ಷು ನರಕೇ ಚೈವ ಸುಖಲೇಶೋ ವಿಧೀಯತೇ ।
ನಾಂಧೇ ತಮಸಿ ಮಗ್ನಾನಾಂ ಸುಖಲೇಶೋಽಪಿ ಕಶ್ಚನ ॥

ಎಂಬುದಾಗಿ (ಭವಿಷ್ಯತ್ಪರ್ವವಚನ) ಸ್ಮೃತಿ ಇರುವುದರಿಂದ, ಮತ್ತು

ವಿಮತಾಃ ನ ಸುಖವಂತಃ ಈಶ್ವರೇಣ ತಥಾಽನಿಷ್ಟತ್ವಾತ್ ।
ಯೋ ಯಥಾ ನೇಶ್ವರೇಣೇಷ್ಟಃ ನಾಸೌ ತಥಾ ।
ಯಥಾ ಶೃಂಗಿತ್ವೇನಾನಿಷ್ಟಃ ಶಿಖೀ ನ ಶೃಂಗೀ ॥

ಎಂಬ ಅನುಮಾನವೂ ಇರುವುದರಿಂದ ಅಂಧಂತಮಸ್ಸಿನಲ್ಲಿ ಬಿದ್ದಿರುವವರಿಗೆ ಸುಖಲೇಶವೂ ಇಲ್ಲ ಎಂದು ತಿಳಿಯುತ್ತದೆ.

ಈ ಅನುಮಾನದಲ್ಲಿ ಪಕ್ಷರಾದ, ಅಂಧಂತಮಸ್ಸಿನಲ್ಲಿ ಬಿದ್ದ ಜೀವರಲ್ಲಿ 'ಈಶ್ವರೇಣ ತಥಾ ಅನಿಷ್ಟತ್ವ' ಹೇತುವು ಹೇಗೆ ಸಿದ್ಧವಾಗಿದೆ? ಎಂದರೆ,

ಅತಿಪ್ರಿಯೇ ಯಥಾ ರಾಜಾ ನ ದುಃಖಂ ಸಹತೇ ಕ್ವಚಿತ್ ।
ಅತ್ಯಪ್ರಿಯೇ ಸುಖಮಪಿ ತಥೈವ ಪರಮೇಶ್ವರಃ ॥

ಎಂಬ ಬ್ರಾಹ್ಮವಚನದಂತೆ ತದಪ್ರಿಯತ್ವಹೇತುವಿನಿಂದ ಸಿದ್ಧವಾಗಿದೆ. ಆದ್ದರಿಂದ ಅಂಧಂತಮಸ್ಸಿನಲ್ಲಿ ಸುಖಲೇಶವೂ ಇಲ್ಲ ಎಂದು ಸಿದ್ಧವಾಗುತ್ತದೆ.

## ಸೂತ್ರ - 21

ಸೂ.ರ.:– प्रत्यक्षेणाप्येतमर्थं साधयत्सूत्रमाह ॥

ಅಂಧಂತಮಸ್ಸಿನಲ್ಲಿ ಸುಖಲೇಶವಿಲ್ಲ ಎನ್ನುವುದನ್ನು ಪ್ರತ್ಯಕ್ಷದಿಂದಲೂ ಸಾಧಿಸುವ ಸೂತ್ರವನ್ನು ಹೇಳುತ್ತಾರೆ -

## ॐ दर्शनाच्च ॐ (३-१-२१)

**ಸೂತ್ರಾರ್ಥ** :- ತೃತೀಯೇ ಸುಖರಾಹಿತ್ಯಂ = ಅಂಧಂತಮಸ್ಸಿನಲ್ಲಿ ಸುಖವಿಲ್ಲ ಎನ್ನುವುದು **ದರ್ಶನಾಚ್ಚ** = ಹಿರಣ್ಯಗರ್ಭಪ್ರತ್ಯಕ್ಷದಿಂದಲೂ ಸಹ ಸಿದ್ಧವಾಗಿದೆ.

**ಸೂ.ರ.:– एवं च नारायणप्रसादेन समृद्धज्ञानचक्षुषा परमुखमन्तरेण स्वयमेव सुखाभावस्य चतुर्मुखदर्शनवचनात् (पाद्मे.) । अतोऽन्धे तमसि सुखलेशाभाव इति सिद्धम् ॥**

ನಾರಾಯಣಪ್ರಸಾದೇನ ಸಮಿದ್ಧಜ್ಞಾನಚಕ್ಷುಷಾ ।
ಅತ್ಯಂತದುಃಖಸಲ್ಲೀನಾನ್ನಿಶ್ಶೇಷಸುಖವರ್ಜಿತಾನ್ ॥

ನಿತ್ಯಮೇವ ತಥಾಭೂತಾನ್ ವಿಮಿಶ್ರಾಂಶ್ಚ ಗಣಾನ್ ಬಹೂನ್ ।
ನಿರಸ್ತಾಶೇಷದುಃಖಾಂಶ್ಚ ನಿತ್ಯಾನಂದೈಕಭಾಗಿನಃ ॥

ಅಪಶ್ಯತ್ ತ್ರಿವಿಧಾನ್ ಬ್ರಹ್ಮಾ ಸಾಕ್ಷಾದೇವ ಚತುರ್ಮುಖಃ । (ಇತಿ ಪಾದ್ಮೇ)

ಎಂಬುದಾಗಿ, ನಾರಾಯಣನ ಪ್ರಸಾದ(ಅನುಗ್ರಹ)ದಿಂದ ಸಮಿದ್ಧಜ್ಞಾನಚಕ್ಷುಸ್ಸಿನಿಂದ ಪರಮುಖದ್ವಾರವಲ್ಲದೇ ಸಾಕ್ಷಾತ್ ತಾನೇ ಅಂಧಂತಮಸ್ಸಿನಲ್ಲಿ ಸುಖವಿಲ್ಲ ಎನ್ನುವುದನ್ನು ಚತುರ್ಮುಖನು ಕಂಡ ಪಾದ್ಮವಚನವಿರುವುದರಿಂದಲೂ ಸಹ, ಅಂಧಂತಮಸ್ಸಿನಲ್ಲಿ ಸುಖಲೇಶವೂ ಇಲ್ಲ ಎಂದು ಸಿದ್ಧವಾಗುತ್ತದೆ.

### ಸೂತ್ರ - 22

**ಸೂ.ರ.:– अर्थापत्त्याप्येतमर्थं समर्थयत्सूत्रमुपन्यस्यति ॥**

ಅಂಧಂತಮಸ್ಸಿನಲ್ಲಿ ಸುಖವಿಲ್ಲ ಎನ್ನುವುದನ್ನು ಅರ್ಥಾಪತ್ತಿಯಿಂದಲೂ ಸಾಧಿಸುವ ಸೂತ್ರವನ್ನು ಹೇಳುತ್ತಾರೆ -

## ॐ तृतीये शब्दावरोधः संशोकजस्य ॐ (३-१-२२)

**ಸೂತ್ರಾರ್ಥ** :- (ತೃತೀಯೇ ಎನ್ನುವುದು ಆವರ್ತನಗೊಳ್ಳುತ್ತದೆ.) **ತೃತೀಯೇ** = ತಮಸ್ಸಿನಲ್ಲಿ ತತ್ರಾಪಿ **ತೃತೀಯೇ** = ಅದರಲ್ಲಿಯೂ ತಮಸ್ಸಿನಲ್ಲಿ ಮೂರನೆಯದಾದ ಅಂಧಂತಮಸ್ಸಿನಲ್ಲಿ, ಅಂಧಂತಮಸ್ಸಿನ ವಿಷಯದಲ್ಲಿ **ಯಃ ಶಬ್ದಃ** = ಅಂಧಂತಮಸ್ಸು

ಎಂಬುದಾಗಿ ಯಾವ ಶಬ್ದವಿದೆಯೋ ತೇನ = ಆ ಶಬ್ದದಿಂದ (ಶಬ್ದಶ್ರವಣ-ಮಾತ್ರದಿಂದ) **ಸಂಶೋಕಜಸ್ಯ** = ಚೆನ್ನಾಗಿ ಶೋಕವನ್ನುಂಟುಮಾಡುವ ಮೋಹದ (ಮೂರ್ಛೆಯ) **ಅವರೋಧಃ** ಪ್ರಾಪ್ತಿಃ ಭವತಿ = ಪ್ರಾಪ್ತಿಯಾಗುವುದು.

**ಸೂ.ರ.:– एवं चान्धरन्तमश्रवणमात्रेण तच्छ्राविणां मोहप्राप्त्यन्यथाऽनुपपत्त्या तत्रत्यदुःखस्य निरवधिकत्ववत् सुखलेशासामानाधिकरण्यातिशयसिद्धेश्च । अतोऽधे तमसि सुखलेशाभाव इति सिद्धम् ॥**

ಅಂಧಂತಮಸ್ಸು ಎಂದು ಶಬ್ದವನ್ನು ಶ್ರವಣ ಮಾಡುವ ಮಾತ್ರದಿಂದ, ಕೇಳು-ವವರಿಗೆ ಮೋಹ (ಮೂರ್ಛೆ) ಪ್ರಾಪ್ತಿಯಾಗುವುದರಿಂದ, ತದನ್ಯಥಾನುಪಪತ್ತಿಯಿಂದ ಅಲ್ಲಿನ ದುಃಖಕ್ಕೆ ನಿರವಧಿಕತ್ವದಂತೆ ಸುಖಲೇಶ ಅಸಾಮಾನಾಧಿಕರಣ್ಯ ಅತಿಶಯವೂ ಸಿದ್ಧಿಸುತ್ತದೆ. ಆದ್ದರಿಂದ ಅಂಧಂತಮಸ್ಸಿನಲ್ಲಿ ಸುಖಲೇಶವೂ ಇಲ್ಲ ಎಂದು ಸಿದ್ಧವಾಗುತ್ತದೆ.

## ಸೂತ್ರ - 23

**ಸೂ.ರ.:– ननु तृतीयतमःस्वरूपश्रवणे श्रोतृणां मोहप्राप्तिरित्येतत्कुतोऽवगम्यते । यदन्यथाऽनुपपत्त्या तत्र सुखाभावावगम इत्याशङ्कां परिहरत्सूत्रं पठति ॥**

ಯಾವುದರ ಅನ್ಯಥಾನುಪಪತ್ತಿಯಿಂದ ಅಲ್ಲಿ ಸುಖಾಭಾವದ ಅವಗಮ ಉಂಟಾಗುವುದೋ, ಅಂತಹ ತೃತೀಯತಮಸ್ಸಿನ ಸ್ವರೂಪಶ್ರವಣ ಮಾಡಿದ ಮಾತ್ರ-ದಿಂದ ಶ್ರೋತೃಗಳಿಗೆ ಮೋಹಪ್ರಾಪ್ತಿ ಉಂಟಾಗುತ್ತದೆ ಎನ್ನುವುದು ಯಾವುದರಿಂದ (ಯಾವ ಪ್ರಮಾಣದಿಂದ) ತಿಳಿಯುತ್ತದೆ? ಎಂದು ಆಶಂಕೆ ಬಂದರೆ, ಅದನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

### ॐ स्मरणाच्च ॐ (३-१-२३)

**ಸೂತ್ರಾರ್ಥ** :- ತೃತೀಯತಮಸಃ ಶ್ರವಣೇ ಶ್ರೋತೃಮೋಹಪ್ರಾಪ್ತಿಶ್ಚ = ತೃತೀಯತಮಸ್ಸಿನ ಶ್ರವಣ ಮಾಡಿದಾಗ ಶ್ರೋತೃಗಳಿಗೆ ಮೋಹಪ್ರಾಪ್ತಿಯಾಗುತ್ತದೆ ಎನ್ನುವುದು **ಸ್ಮರಣಾಚ್ಚ** = 'ಮಹಾತಮಸ್ತ್ರಿಧಾ ಪ್ರೋಕ್ತಂ' ಎಂಬ (ಕೌರ್ಮ) ಸ್ಮೃತಿ-ಯಿಂದಲೂ ಸಿದ್ಧವಾಗಿದೆ.

ಸೂ.ರ.:- एवं न च श्रवणमात्रेण तच्छ्राविणां मोहप्राप्तिरसिद्धेति । महातमस्त्रिधेति स्मरणात् । अतोऽधे तमसि सुखलेशाभावाद्भवितव्यं तत्र तत्साधने च विरक्तेनेति सिद्धम् ॥

ಶ್ರವಣಮಾತ್ರದಿಂದ ಶ್ರೋತೃಗಳಿಗೆ ಮೋಹಪ್ರಾಪ್ತಿಯಾಗುತ್ತದೆ ಎನ್ನುವುದು ಅಸಿದ್ಧ ಎಂದು ಅಲ್ಲ. ಕಿಂತು -

ಮಹಾತಮಸ್ತ್ರಿಧಾ ಪ್ರೋಕ್ತಮೂರ್ಧ್ವಂ ಮಧ್ಯಂ ತಥಾಽಧರಮ್ ।
ಶ್ರವಣಾದೇವ ಮೂರ್ಚ್ಛಾದಿರಧರಸ್ಯ ಯತೋ ಭವೇತ್ ।
ತಸ್ಮಾನ್ನ ವಿಸ್ತರೇಣೈತತ್ಕಥ್ಯತೇ ರಾಜಸತ್ತಮ ॥

ಎಂಬ (ಕೌರ್ಮ) ಸ್ಮೃತಿವಚನದಿಂದಲೂ ಸಿದ್ಧವಾಗಿದೆ. ಆದ್ದರಿಂದ ಅಂಧಂ-ತಮಸ್ಸಿನಲ್ಲಿ ಸುಖಲೇಶವೂ ಇಲ್ಲವಾದ್ದರಿಂದ ಅದರ ವಿಷಯದಲ್ಲಿ ಹಾಗೂ ಅದರ ಸಾಧನವಿಷಯದಲ್ಲಿ ವೈರಾಗ್ಯವು ಆವಶ್ಯಕವಾಗಿದೆ ಎಂದು ಸಿದ್ಧವಾಗುತ್ತದೆ.

ನ ತೃತೀಯಾಧಿಕರಣವು ಮುಗಿಯಿತು.

*ಅಧಿಕರಣ – 16*

# ತತ್ಸ್ವಾಭಾವ್ಯಾಧಿಕರಣ

## ಸಂಗತಿ

**ಸೂ.ರ.:– अत्र स्वर्गादवरूढस्य कर्मिणोऽचिरेण गर्भवासादिप्राप्तिः समर्थ्यते ॥**

ಸ್ವರ್ಗದಿಂದ ಅವರೂಢನಾಗುವ ಕರ್ಮಿಗೆ ಶೀಘ್ರದಲ್ಲಿ ಗರ್ಭವಾಸಾದಿ ಪ್ರಾಪ್ತಿಯನ್ನು ಸಮರ್ಥಿಸುತ್ತಾರೆ ಹದಿನಾರನೇ ಈ ತತ್ಸ್ವಾಭಾವ್ಯಾಧಿಕರಣದಲ್ಲಿ.

ಕರ್ಮಿಗಳು ಸ್ವರ್ಗದಿಂದ ಅವತೀರ್ಣರಾದವರಾಗಿ ಹೇಗೆ ಹೋಗಿದ್ದರೋ ಹಾಗೆಯೇ ಮತ್ತು ಬೇರೆ ದಾರಿಯಿಂದಲೂ ಬರುತ್ತಾರೆ ಎಂದು ಹೇಳಲಾಯಿತು. ಅಂತಹ ಸ್ವರ್ಗದಿಂದ ಅವತೀರ್ಣರಾದವರು ಬರುವಾಗ ಅವರಿಗೆ ಧೂಮೋ ಭೂತ್ವಾ ಎಂಬುದಾಗಿ ಧೂಮಾದಿದೇವತಾಭಾವವು ಶ್ರುತವಾಗುತ್ತಿದೆ. ಇಂತಹ ಧೂಮಾದಿದೇವತಾಭಾವವೇ ವಿಷಯ. ಈ ದೇವತಾಭಾವ ಎಂದರೆ ಧೂಮಾದಿ-ದೇವತೈಕ್ಯ ಎಂದು ಅರ್ಥವೋ? ಕರ್ಮಿಯಾದವನಿಗೆ ಧೂಮಾದಿದೇವತಾಪದಪ್ರಾಪ್ತಿ ಎಂದು ಅರ್ಥವೋ? ಪ್ರಕಾರಾಂತರ ಎಂದು ಅರ್ಥವೋ? ಎಂದು ಸಂದೇಹ.

## ಪೂರ್ವಪಕ್ಷ

**ಸೂ.ರ.:– ननु कर्मिणो धूमादिप्राप्तिर्वा तदैक्यं वा भवतीत्यभ्युपेयम् । धूमो भूत्वेति (छां.५-१०-५) वचनात् । अनेन वाक्येन सामानाधिकरण्यबलाद्धूमादिभावतद्प्राप्त्योः प्रतीतेः । स्नेहवशाद्राजपुत्रस्य राजपदप्राप्तिवत् । अर्जुनस्येन्द्रतादात्म्यवचोभयोरप्युपपन्नत्वात् । अतः प्रकारद्वयेऽपि सकृदनुष्ठितयज्ञानामाकल्पसमाप्तिपरमसुखसम्भवाद्व्यर्थं कर्मणि तत्फले च वैराग्यमिति प्राप्ते सूत्रकृदाह ॥**

"ಧೂಮೋ ಭೂತ್ವಾ" (ಛಾಂ. 5–10.5) ಎಂದು ವಚನ ಇರುವುದರಿಂದ ಧೂಮಾದಿದೇವತಾಭಾವ ಎಂದರೆ ಧೂಮಾದಿದೇವತಾಪದಪ್ರಾಪ್ತಿ ಎಂದಾಗಲೀ

ಅಥವಾ ದೇವತೈಕ್ಯ ಎಂದಾಗಲೀ ಅರ್ಥಮಾಡಬೇಕು. 'ಧೂಮೋ ಭೂತ್ವಾ ಎಂಬ ವಾಕ್ಯದಿಂದ ಸಾಮಾನಾಧಿಕರಣ್ಯ ಬಲದಿಂದ ಧೂಮಾದಿಭಾವ-ತತ್ಪದಪ್ರಾಪ್ತಿಗಳು ಪ್ರತೀತವಾಗುವುದರಿಂದ. ಸ್ನೇಹವಶದಿಂದಾಗಿ ರಾಜಪುತ್ರನಿಗೆ ರಾಜಪದಪ್ರಾಪ್ತಿ-ಯಾಗುವಂತೆ, ಅರ್ಜುನನಿಗೆ ಇಂದ್ರತಾದಾತ್ಮ್ಯದಂತೆ ಎರಡೂ ಉಪಪನ್ನವಾಗುತ್ತದೆ.

ಆದ್ದರಿಂದ ಎರಡೂ ಪ್ರಕಾರಗಳಲ್ಲಿಯೂ ಸಹ ಸಕೃದನುಷ್ಠಿತವಾದ ಯಜ್ಞಗಳಿಗೆ ಆಕಲ್ಪಸಮಾಪ್ತಿ ಪರಮಸುಖಗಳು ಸಂಭಾವಿತವಾದ್ದರಿಂದ, ಕರ್ಮದ ವಿಷಯದಲ್ಲಿ ಹಾಗೂ ಅದರ ಫಲದ ವಿಷಯದಲ್ಲಿ ವೈರಾಗ್ಯವು ವ್ಯರ್ಥವೇ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

## ॐ तत्स्वाभाव्यापत्तिरुपपत्तेः ॐ (३-१-२४)

**ಸೂತ್ರಾರ್ಥ** :- ಕರ್ಮಣಿ = ಕರ್ಮವಿಷಯದಲ್ಲಿ (ಕರ್ಮಿಯಾದವನಿಗೆ) **ತತ್ಸ್ವಾಭಾವ್ಯಾಪತ್ತಿಃ** = ತಸ್ಯ ಧೂಮಾದಿದೇವತೆಯ ಸ್ವಭಾವಸ್ಯ = ಸ್ವಭಾವ-ಸದೃಶಸ್ವಭಾವದ ಆಪತ್ತಿಃ = ಪ್ರಾಪ್ತಿಯೇ ಆಗುವುದು ಹೊರತು ನ ತದೈಕ್ಯಂ ತತ್ಪದಪ್ರಾಪ್ತಿರ್ವಾ = ಧೂಮಾದಿದೈವೈಕ್ಯವಾಗಲೀ ತತ್ಪದಪ್ರಾಪ್ತಿಯಾಗಲೀ ಅಲ್ಲ. ಕುತಃ = ಯಾಕೆ? **ಉಪಪತ್ತೇಃ** = ಒಬ್ಬರಿಗೆ ಮತ್ತೊಬ್ಬರಿಂದ ಐಕ್ಯವು ಅದೃಷ್ಟವಾದ್ದರಿಂದ, ಸ್ವಭಾವಸದೃಶಸ್ವಭಾವಪ್ರಾಪ್ತಿ ಎಂಬ ಅರ್ಥವೇ ಉಪಪನ್ನವಾಗುವುದರಿಂದ.

**ಸೂ.ರ.:– एवं चान्यस्यान्यभावासम्भवात् । तत्पदस्य नियताधिकारिभिर्ज्ञानिनैव प्राप्यत्वात् । युगपदनेककर्मिसमवायेऽनेकेषामेकपदप्राप्त्ययोगाच्च । तस्मात्तद्गतौ गतिस्तत्स्थितौ स्थितिरित्यादिरूपतत्स्वाभाव्यापत्तिरेवेति श्रुत्यर्थः । अतो धूमाद्यैक्याभावाद्युक्तं तत्कर्मतत्फलयोर्वैराग्यमिति सिद्धम् ॥**

**ಅನುವಾದ** :- ಹಿಂದೆ ಧೂಮಾದಿದೇವತೆಗಳಿಂದ ಭಿನ್ನನಾಗಿದ್ದ ಕರ್ಮಿಗೆ ಅನಂತರ ಧೂಮಾದಿದೇವತೆಗಳಿಂದ ಐಕ್ಯ ಹೇಳುವುದು ಸರಿಯಲ್ಲ. ಏಕೆಂದರೆ - ಒಬ್ಬರಿಗೆ ಮತ್ತೊಬ್ಬರಿಂದ ಐಕ್ಯವು ಅಸಂಭಾವಿತ.

ಇನ್ನು ದೇವತಾಪದಪ್ರಾಪ್ತಿ ಎಂದು ಅರ್ಥ ಹೇಳುವುದೂ ಸರಿಯಲ್ಲ. ಏಕೆಂದರೆ

- ಆ ದೇವತಾಪದವಿಯು ಯೋಗ್ಯ ಅಧಿಕಾರಿಗಳಿಗೆ ಮಾತ್ರ ಎಂದು ನಿಯಮ. ಹಾಗೂ ಆ ಯೋಗ್ಯ ಅಧಿಕಾರಿಗಳಿಗೂ ಸಹ ವಿದ್ಯೆಯಿಂದ (ಜ್ಞಾನದಿಂದ) ಆ ಪದವಿಪ್ರಾಪ್ತಿಯೇ ಹೊರತು ಕರ್ಮದಿಂದ ಅಲ್ಲ.

ಅಲ್ಲದೇ ಒಂದೇ ಕಾಲದಲ್ಲಿ ಅನೇಕ ಕರ್ಮಿಗಳು ಸೇರಿದಾಗ ಎಲ್ಲರಿಗೂ ದೇವತಾಪದವಿಯನ್ನು ಕೊಡಲು ಸಾಧ್ಯವೂ ಇಲ್ಲ.

ಆದ್ದರಿಂದ ಧೂಮಾದಿದೇವತೆಯು ಚಲಿಸಿದರೆ ಕರ್ಮಿಯು ಚಲಿಸಬೇಕು. ದೇವತೆ ನಿಂತರೆ ಇವನೂ ನಿಲ್ಲಬೇಕು, ಈ ರೀತಿಯಾದ ತತ್‌ಸ್ವಾಭಾವ್ಯಾಪತ್ತಿ ಎಂಬ ಅರ್ಥವನ್ನೇ 'ಧೂಮೋ ಭೂತ್ವಾ' ಎಂಬ ಶ್ರುತಿಗೆ ಮಾಡಬೇಕು. ಹೊರತು ಐಕ್ಯ ಎಂದಾಗಲೀ ಪದವೀಪ್ರಾಪ್ತಿ ಎಂದಾಗಲೀ ಅರ್ಥ ಹೇಳಬಾರದು.

ಆದ್ದರಿಂದ ಧೂಮಾದಿಗಳಿಂದ ಐಕ್ಯ ಇಲ್ಲದ ಕಾರಣ ಕರ್ಮದ ವಿಚಾರದಲ್ಲಿ ಹಾಗೂ ಕರ್ಮಫಲವಿಚಾರದಲ್ಲಿ ವೈರಾಗ್ಯವು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

**ತತ್ಸ್ವಾಭಾವ್ಯಾಧಿಕರಣವು ಮುಗಿಯಿತು.**

ಅಧಿಕರಣ – 17

## ನಾತಿಚಿರೇಣಾಧಿಕರಣ

### ಸಂಗತಿ

ಸೂ.ರ.:– अत्र स्वर्गादवरूढस्य कर्मिणोऽचिरेण गर्भवासादिप्राप्तिः समर्थ्यते ।

ಸ್ವರ್ಗದಿಂದ ಅವರೂಢನಾದ ಕರ್ಮಿಗೆ ಶೀಘ್ರದಲ್ಲಿಯೇ ಗರ್ಭವಾಸಾದಿ ಪ್ರಾಪ್ತಿಯನ್ನು ಸಮರ್ಥಿಸುತ್ತಾರೆ ಹದಿನೇಳನೇ ಈ ನಾತಿಚಿರೇಣಾಧಿಕರಣದಲ್ಲಿ.

ಕರ್ಮಿಯಾದವನು ಸ್ವರ್ಗದಿಂದ ಹೊರಬಂದು ಚಿರೇಣ (ಬಹುಕಾಲನಂತರ) ಗರ್ಭವಾಸವನ್ನು ಹೊಂದುತ್ತಾನೆಯೊ? ಅಥವಾ ಶೀಘ್ರದಲ್ಲಿಯೇ ಹೊಂದು-ತ್ತಾನೆಯೋ? ಎಂದು ಸಂದೇಹ.

### ಪೂರ್ವಪಕ್ಷ

ಸೂ.ರ.:– ननु कर्मी स्वर्गान्निर्गतः कल्पान्तरे देहं प्राप्नोति । यथेतमाकाशमि (छां.५-१०-५) त्यादावागमनवेलायां बहुस्थान-प्राप्तिश्रवणात् । तद्गमनं च नाचिरेण सम्भवति । तत्र तत्र तत्त-त्स्वाभाव्येनातिमहासुखे सम्भवति तद्विहायागमने प्रयोजनाभावात् । न च पुण्याल्पत्वाद्बहुकालावस्थानानुपपत्तिः । देवतासान्निध्यसद्भावेन तत्रावस्थानकारणदेवताप्रसादार्जनोपपत्तेः । न हि प्रेक्षावान् वदान्य-महाप्रभुसान्निध्ये सत्यनाराध्य स्वाभीष्टं न प्राप्नोतीति सम्भवति । न च तथा सति कल्पान्तेऽपि न शरीरप्राप्तिरिति वाच्यम् । कल्पान्ते स्वपरिचितदेवताया मुक्तत्वेन देवतान्तरस्य परिचयाभावेनाराधना-योगात् । ततश्च कामानुष्ठानेनैवाकल्पसुखसद्भावात्किं कर्मणि तत्फले च वैराग्येणेति प्राप्ते सूत्रं पठति ॥

ಕರ್ಮಿಯಾದವನು ಸ್ವರ್ಗದಿಂದ ಹೊರಬಂದವನಾಗಿ ಬಹುಕಾಲ ನಂತರ ಅರ್ಥಾತ್ ಮತ್ತೊಂದು ಕಲ್ಪದಲ್ಲಿ ದೇಹವನ್ನು ಪಡೆಯುತ್ತಾನೆ. ಕಾರಣ -

"ಯಥೇತಮಾಕಾಶಮಾಕಾಶಾದ್ವಾಯುಂ ವಾಯುರ್ಭೂತ್ವಾ ಧೂಮೋ ಭವತಿ ಧೂಮೋ ಭೂತ್ವಾಽಭ್ರಂ ಭವತಿ ಅಭ್ರಂ ಭೂತ್ವಾ ಮೇಘೋ ಭವತಿ."

(ಛಾಂ. 5-10-5)

ಇತ್ಯಾದಿಗಳಲ್ಲಿ ಸ್ವರ್ಗದಿಂದ ಬರುವ ಸಮಯದಲ್ಲಿ ಬಹುಸ್ಥಾನಪ್ರಾಪ್ತಿಯು ಶ್ರುತವಾಗುತ್ತಿರುವುದರಿಂದ. ಆ ಬಹುಸ್ಥಾನಪ್ರಾಪ್ತಿಯಾದರೂ ಶೀಘ್ರದಲ್ಲಿ ಸಂಭವಿಸುವುದಿಲ್ಲ. ಕಾರಣ - ಆ ಆ ಸ್ಥಾನಗಳಲ್ಲಿ ಆ ಆ ಸ್ಥಾನಗಳ ಸ್ವಭಾವದಿಂದ ಅತಿಮಹಾಸುಖವು ಸಂಭವಿಸುವಾಗ ಅಂತಹ ಮಹಾಸುಖವನ್ನು ಬಿಟ್ಟು ಭೂಮಿಗೆ ಮರಳಲು ಯಾವ ಪ್ರಯೋಜನವೂ ಇಲ್ಲ.

ಬರುವಾಗ ಸ್ಥಾನಗಳು ಬಹಳವಾಗಿದ್ದರೂ ಸಹ ಇವನ ಪುಣ್ಯವು ಅಲ್ಪವಾದ್ದರಿಂದ ಆ ಆ ಸ್ಥಾನಗಳಲ್ಲಿ ಬಹುಕಾಲ ಅವಸ್ಥಾನವು ಉಪಪನ್ನವಾಗುವುದಿಲ್ಲವಲ್ಲ? ಎಂದು ಶಂಕಿಸುವುದು ಸರಿಯಲ್ಲ. ಏಕೆಂದರೆ - ಆ ಆ ಸ್ಥಾನಗಳಲ್ಲಿ ದೇವತಾಸನ್ನಿಧಾನ ಇರುವುದರಿಂದ ಅಲ್ಲಿ ಅವಸ್ಥಾನಕ್ಕೆ ಕಾರಣವಾಗುವ ದೇವತಾಪ್ರಸಾದವನ್ನು ಸಂಪಾದಿಸಲು ಉಪಪತ್ತಿ ಇರುವುದರಿಂದ ಬಹುಕಾಲ ಅವಸ್ಥಾನವು ಉಪಪನ್ನ-ವಾಗುತ್ತದೆ. ಪ್ರೇಕ್ಷಾವಂತನಾದ ಪುರುಷನು ಮಹಾಪ್ರಭುಸನ್ನಿಧಾನ ಇರುವಾಗ ಅವನನ್ನು ಆರಾಧಿಸದೇ ಸ್ವಾಭೀಷ್ಟವನ್ನು ಹೊಂದುವುದಿಲ್ಲ ಎನ್ನುವುದು ಸರಿಯಾಗುವುದಿಲ್ಲ.

ಹಾಗಾದರೆ ಕಲ್ಪವು ಮುಗಿದಮೇಲೂ ಸಹ ಶರೀರಪ್ರಾಪ್ತಿಯು ಕೂಡದೇ ಹೋಗಬೇಕಾಗುತ್ತದೆ ಎಂದು ಶಂಕಿಸುವುದು ಸರಿಯಲ್ಲ. ಕಲ್ಪ ಮುಗಿದ ಮೇಲೆ ತನಗೆ ಪರಿಚಿತನಾಗಿದ್ದ ದೇವತೆಯು ಮುಕ್ತನಾಗುವುದರಿಂದ, ಮುಂದೆ ಬರುವ ದೇವತೆಯ ಪರಿಚಯ ಇರುವುದಿಲ್ಲವಾದ್ದರಿಂದ ಆರಾಧನೆ ಕೂಡುವುದಿಲ್ಲ.

ಆದ್ದರಿಂದ ಕರ್ಮಾನುಷ್ಠಾನದಿಂದಲೇನೇ ಕಲ್ಪದವರೆಗೆ ಸುಖವು ಇರುವುದರಿಂದ ಕರ್ಮದ ವಿಷಯದಲ್ಲಿ ಹಾಗೂ ಅದರ ಫಲದ ವಿಷಯದಲ್ಲಿ ವೈರಾಗ್ಯದಿಂದ ಏನು ಪ್ರಯೋಜನ? ವೈರಾಗ್ಯವು ಆವಶ್ಯಕವಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರ ಹೇಳುತ್ತಾರೆ -

## ॐ नातिचिरेण विशेषात् ॐ (३-१-२९)

**ಸೂತ್ರಾರ್ಥ** :- ಸ್ವರ್ಗಾನ್ನಿರ್ಗತಃ ಕರ್ಮೀ = ಸ್ವರ್ಗದಿಂದ ನಿರ್ಗತನಾದ

(ಹೊರಬಂದ) ಕರ್ಮಿಯು **ನಾತಿಚಿರೇಣ** = ಶೀಘ್ರದಲ್ಲಿಯೇ ಭೂಮಾವಾಗತ್ಯ = ಭೂಮಿಗೆ ಬಂದು ಬ್ರಾಹ್ಮಣಾದಿಯೋನಿಂ ಪ್ರಾಪ್ನೋತಿ = ಬ್ರಾಹ್ಮಣ ಮೊದಲಾದ ಯೋನಿಯನ್ನು ಹೊಂದುತ್ತಾನೆ ಕುತಃ = ಯಾಕೆ? **ವಿಶೇಷಾತ್** = 'ತದ್ಯ ಇಹ' ಎಂಬುದಾಗಿ (ಛಾಂ. 5-10-7) ವಿಶೇಷವಚನ ಇರುವುದರಿಂದ.

## ಸಿದ್ಧಾಂತ

**ಸೂ.ರ.:- एवं च निर्दिष्टश्रुतेः स्वर्गादिति (नारदीये.) स्मृतेश्च सद्भावात् । कर्मफलस्य क्लृप्तकालत्वेनाधिककालस्थायित्वानुपपत्तेः । इह लोक एव च पुण्यार्जनमिति भगवता क्लृप्तत्वेन तत्रैव पुनर्देवताराधनानुपपत्तेश्च । अतः कर्मणोऽचिरेणैव गर्भवासादिदुःखसद्भावाद्भवितव्यं कर्मादौ विरक्तेनेति सिद्धम् ॥**

"ತದ್ಯ ಇಹ ರಮಣೀಯಚರಣಾ ಅಭ್ಯಾಶೋ ಹ ಯತ್ತೇ ರಮಣೀಯಾಂ ಯೋನಿಮಾಪದ್ಯಂತೇ" (ಛಾಂ.ಉ. 5-10-7)

(ಕರ್ಮಿಗಳಲ್ಲಿ ಯಾರು ರಮಣೀಯಚರಣರಾಗಿದ್ದಾರೋ ಅವರು ಅಭ್ಯಾಶಃ ಕಾಲಸಾಮೀಪ್ಯದಿಂದ ಈ ಭೂಮಿಯಲ್ಲಿ ರಮಣೀಯವಾದ ಬ್ರಾಹ್ಮಣಾದಿ-ಯೋನಿಗಳನ್ನು ಹೊಂದುತ್ತಾರೆ ಎಂದು ಶ್ರುತ್ಯರ್ಥ.)

ಎಂಬುದಾಗಿ ವಿಶೇಷಶ್ರುತಿ ಇರುವುದರಿಂದ, ಮತ್ತು

ಸ್ವರ್ಗಾಲ್ಲೋಕಾದವಾಕ್ ಪ್ರಾಪ್ತೋ ವತ್ಸರಾತ್ಪೂರ್ವಮೇವ ತು ।
ಮಾತುಃ ಶರೀರಮಾಪ್ನೋತಿ ಪರ್ಯಟನ್ಯತ್ರ ತತ್ರ ಚ ॥

ಎಂಬುದಾಗಿ ನಾರದೀಯ ಸ್ಮೃತಿವಚನವೂ ಇರುವುದರಿಂದ, ಕರ್ಮಫಲವು ಕ್ಲೃಪ್ತಕಾಲ ಉಳ್ಳದ್ದಾದ್ದರಿಂದ ಅಧಿಕಕಾಲಾವಸ್ಥಾಯಿತ್ವವು ಉಪಪನ್ನವಾಗುವುದಿಲ್ಲ.

ಆದ್ದರಿಂದ ಕರ್ಮಿಯಾದವನಿಗೆ ಶೀಘ್ರದಲ್ಲಿಯೇ ಗರ್ಭವಾಸಾದಿದುಃಖ ಇರುವುದರಿಂದ ಕರ್ಮಾದಿಗಳ ವಿಷಯದಲ್ಲಿ ವೈರಾಗ್ಯವು ಆವಶ್ಯಕವಾಗಿದೆ ಎಂದು ಸಿದ್ಧವಾಗುತ್ತದೆ.

**ನಾತಿಚಿರೇಣಾಧಿಕರಣವು ಮುಗಿಯಿತು**

*ಅಧಿಕರಣ – 18*

## ಅನ್ನಾಧಿಕರಣ

### ಸಂಗತಿ

ಸೂ.ರ.:– अत्र कर्मिणां व्रीह्यादिभावनिमित्तकदुःखाभावः समर्थ्यते ।

ಕರ್ಮಿಗಳಿಗೆ ವ್ರೀಹ್ಯಾದಿಭಾವನಿಮಿತ್ತಕವಾಗಿ ದುಃಖ ಇಲ್ಲ ಎನ್ನುವುದನ್ನು ಸಮರ್ಥಿಸುತ್ತಾರೆ ಹದಿನೆಂಟನೇ ಈ ಅನ್ನಾಧಿಕರಣದಲ್ಲಿ.

ಆಗಮನವಾಗುವಾಗ ಕರ್ಮಿಗಳು ದುಃಖಉಳ್ಳವರೋ? ದುಃಖ ಇಲ್ಲದವರೋ? ಎಂದು ಸಂದೇಹ.

### ಪೂರ್ವಪಕ್ಷ

ಸೂ.ರ.:– नन्वस्त्येव कर्मिणां दृष्टोत्पत्तिरान्तरीयकदुःखातिरिक्त-बलवद्दुःखं तेषाम् । त इहेति (छां. ५-१०-६) व्रीह्यादिभावश्रवणात् । तद्भावे तच्छेदनादिना दुःखावश्यम्भावात् । न चेयं श्रुतिर्व्रीहि-प्रवेशमात्रपरा न तद्भावपरेति वाच्यम् । बाधकाभावे मुख्यार्थत्यागा-योगात् । व्रीह्यादिप्रवेशमात्राङ्गीकारे दुःखानिवारणात् । दुःखिसहा-वस्थानेऽपि दुःखाभोगे ईश्वरवत् स्वातन्त्र्यमस्ति । तच्च दुःखं यज्ञादि-कर्मफलमेव । आगमनादेर्यज्ञादिफलत्वस्य प्रतिपादितत्वात् । अतो सुखसाधनतया वेदोपदिष्टकर्मणो दुःखजनकत्वे मोक्षहेतुत्वेनोपदिष्ट-वैराग्यादावप्यनाश्वासादननुष्ठेयत्वं तस्येति प्राप्ते सूत्रमाचष्टे ॥

"ತೇ ಇಹ ವ್ರೀಹಿಯವಾ ಓಷಧಿವನಸ್ಪತಯಸ್ತಿಲಾ ಮಾಷಾ ಇತಿ ಜಾಯಂತೇ ॥" (ಛಾಂ. 5-10-6) ಎಂಬುದಾಗಿ ಆಗಮನಕಾಲದಲ್ಲಿ ಕರ್ಮಿಗಳಿಗೆ ವ್ರೀಹ್ಯಾದಿಭಾವವು ಶ್ರುತವಾಗುತ್ತಿರುವುದರಿಂದ, ಕರ್ಮಿಗಳಿಗೆ ವ್ರೀಹ್ಯಾದಿಭಾವ

ಬಂದರೆ ಅವುಗಳ ಭೇದನಾದಿಗಳಿಂದ ದುಃಖವು ಅವಶ್ಯ ಬರುವುದರಿಂದ ಆಗಮನಕಾಲದಲ್ಲಿ ಕರ್ಮಿಗಳಿಗೆ ದುಃಖವಿದೆ.

ಈ ಶ್ರುತಿಯು ವ್ರೀಹ್ಯಾದಿಪ್ರವೇಶವನ್ನು ಮಾತ್ರ ಹೇಳುತ್ತಿದೆಯೇ ಹೊರತು ವ್ರೀಹ್ಯಾದಿಭಾವವನ್ನು ಹೇಳುತ್ತಿಲ್ಲ ಎಂದು ಶಂಕಿಸುವುದು ಸರಿಯಲ್ಲ. ಯಾವುದಾದರೂ ಬಾಧಕವಿದ್ದಾಗ ಮುಖ್ಯಾರ್ಥವನ್ನು ತ್ಯಾಗ ಮಾಡಬೇಕು. ಯಾವ ಬಾಧಕವೂ ಇಲ್ಲದಿದ್ದಾಗ ಮುಖ್ಯಾರ್ಥವನ್ನು ತ್ಯಾಗ ಮಾಡುವುದು ಯುಕ್ತವಾಗುವುದಿಲ್ಲ.

ಮತ್ತು ವ್ರೀಹ್ಯಾದಿಪ್ರವೇಶವನ್ನು ಮಾತ್ರ ಅಂಗೀಕರಿಸಿದರೂ ಸಹ ದುಃಖವು ಅನಿವಾರ್ಯವಾಗುತ್ತದೆ. ಏಕೆಂದರೆ - ಈಶ್ವರನಂತೆ ಸ್ವಾತಂತ್ರ್ಯ ಇರುತ್ತಿದ್ದರೆ ಆಗ ದುಃಖವುಳ್ಳ ವ್ರೀಹ್ಯಾದಿಜೀವರ ಜೊತೆ ಇದ್ದರೂ ಈಶ್ವರನಂತೆ ಇವನಿಗೆ ದುಃಖವಿಲ್ಲ ಎಂದು ಅಂಗೀಕರಿಸಬಹುದಿತ್ತು. ಆದರೆ ಈಶ್ವರನಂತೆ ಸ್ವಾತಂತ್ರ್ಯ ಇಲ್ಲವಾದ್ದರಿಂದ ದುಃಖವುಳ್ಳ ವ್ರೀಹ್ಯಾದಿಜೀವರ ಜೊತೆಗೆ ಇದ್ದಮಾತ್ರದಿಂದ ಇವನಿಗೆ ದುಃಖ ನಿಯಮೇನ ಆಗುತ್ತದೆ. ಹಾಗೂ ಆ ದುಃಖವು ಯಜ್ಞಾದಿಕರ್ಮಫಲವೇ ಆಗಿದೆ. ಆಗಮನಾದಿಗಳು ಯಜ್ಞಾದಿಫಲವಾಗಿವೆ ಎನ್ನುವುದನ್ನು ಪ್ರತಿಪಾದನೆ ಮಾಡಲಾಗಿದೆ.

ಆದ್ದರಿಂದ ಸುಖಸಾಧನತ್ವೇನ ವೇದೋಪದಿಷ್ಟಕರ್ಮವೂ ದುಃಖಜನಕವಾಗುವುದಾದರೆ ಮೋಕ್ಷಹೇತುತ್ವೇನ ಉಪದಿಷ್ಟವಾದ ವೈರಾಗ್ಯಾದಿಗಳಲ್ಲಿಯೂ ಅವಿಶ್ವಾಸ ಬರುವುದರಿಂದ ವೈರಾಗ್ಯಾದಿಗಳು ಅನನುಷ್ಠೇಯವಾಗಿವೆ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

## ॐ अन्याधिष्ठिते पूर्ववदभिलापात् ॐ (३-१-२६)

**ಸೂತ್ರಾರ್ಥ** :- ಕರ್ಮಿಣಃ = ಕರ್ಮಿಯಾದವನಿಗೆ **ಅನ್ಯಾಧಿಷ್ಠಿತೇ** = ಅನ್ಯಜೀವನಿಂದ ಅಭಿಮನ್ಯಮಾನವಾದ ವ್ರೀಹ್ಯಾದಿಶರೀರೇ = ವ್ರೀಹ್ಯಾದಿಶರೀರದಲ್ಲಿ ಪ್ರವೇಶಃ ಏವ = ಪ್ರವೇಶ ಅಷ್ಟೇ. ನ ತು ತದಭಿಮಾನಿತ್ವಂ = ಹೊರತು ವ್ರೀಹ್ಯಾದ್ಯಭಿಮಾನಿತ್ವ ಇಲ್ಲ. ಯೇನ ದುಃಖಂ ಸ್ಯಾತ್ = ಒಂದುವೇಳೆ ವ್ರೀಹ್ಯಾದ್ಯಭಿಮಾನಿತ್ವವೇ ಬರುತ್ತಿದ್ದರೆ ಆಗ ದುಃಖ ಪ್ರಸಕ್ತವಾಗುತ್ತಿತ್ತು, ಹಾಗಾದರೆ ವ್ರೀಹಿಯವಾಃ ಎಂಬುದಾಗಿ ಅಭೇದೋಕ್ತಿಯು ಹೇಗೆ ಉಪಪನ್ನವಾಗುತ್ತದೆ? ಎಂದರೆ **ಪೂರ್ವವತ್** = ಯಾವ ರೀತಿಯಾಗಿ, 'ಧೂಮೋ ಭೂತ್ವಾ' (ಛಾಂ. 5-10-5) ಇತ್ಯಾದಿಗಳಲ್ಲಿ ಧೂಮಾದಿಭಾವವನ್ನು ಹೇಳಲಾಗಿದೆಯೋ ಅದರಂತೆ. ಕುತ ಏತತ್? = ಈ ರೀತಿ

ಏಕೆ ಅಂಗೀಕರಿಸಬೇಕು? **ಅಭಿಲಾಪಾತ್** = "ಸೋऽವಾಗ್ಗತಃ" ಎಂಬ ಕೌಷಾರವ ಶ್ರುತಿಯಲ್ಲಿ ಆ ರೀತಿ ಹೇಳಿದ್ದರಿಂದ.

## ಸಿದ್ಧಾಂತ

**ಸೂ.ರ.:– एवं च मानाभावेन न कर्मिणां व्रीह्यादिभावेन दुःखं मन्तव्यम् । अस्यां श्रुतौ कर्मिणो व्रीह्यादिशरीरप्रवेशमात्राभिधानात् । न च दुःखिसहावस्थानेन दुःखप्राप्तिः । सहावस्थानस्य अप्रयोजकत्वात् । तत्प्रयोजकस्याभावात् । कर्मिणो व्रीह्यादिदेहप्रवेश एव न तु तद्भावः, प्रवेशोऽपि न भोग इति कुतो निश्चय इति चेन्न । "सोऽवाग्गतः स्थावरान् प्रविश्याभोगेनैव व्रजन्" इत्यभिलापात् । अतो यज्ञादेः सुखसाधनत्वेनोपदिष्टत्वाद्युक्तं वैराग्यानुष्ठानमिति सिद्धम् ॥**

ಆಗಮನಕಾಲದಲ್ಲಿ ಕರ್ಮಿಗಳಿಗೆ ವ್ರೀಹ್ಯಾದಿಭಾವದಿಂದ ದುಃಖವನ್ನು ತಿಳಿಯಬಾರದು. ಆ ವಿಷಯದಲ್ಲಿ ಪ್ರಮಾಣವಿಲ್ಲವಾದ್ದರಿಂದ.

ತೇ ಇಹ ವ್ರೀಹಿಯವಾಃ ಎಂಬ ಶ್ರುತಿಯೇ ಪ್ರಮಾಣವಾಗಿ ಇದೆಯಲ್ಲ? ಎಂದರೆ, ಅದು ಸರಿಯಲ್ಲ. ಕಾರಣ – ಈ ಶ್ರುತಿಯಲ್ಲಿ ಕರ್ಮಿಯಾದವನಿಗೆ ವ್ರೀಹ್ಯಾದಿಶರೀರ ಪ್ರವೇಶವನ್ನು ಮಾತ್ರ ಹೇಳಿದ್ದಾರೆ. ಹೊರತು ವ್ರೀಹ್ಯಾದಿಭಾವವನ್ನೇ ಹೇಳಿಲ್ಲ.

ಕರ್ಮಿಗೆ ವ್ರೀಹ್ಯಾದಿಭಾವವನ್ನೇ ಹೇಳದಿದ್ದರೂ ಸಹ ದುಃಖಿಸಹಾವಸ್ಥಾನ ಹೇಳಿದ್ದರಿಂದ ದುಃಖಿಸಹಾವಸ್ಥಾನ ನಿಮಿತ್ತವಾಗಿ ದುಃಖಪ್ರಸಕ್ತಿ ಇದೆಯಲ್ಲ? ಎಂದರೆ, ಅದು ಸರಿಯಲ್ಲ. ದುಃಖವನ್ನು ಕುರಿತು ದುಃಖಿಸಹಾವಸ್ಥಾನವು ಪ್ರಯೋಜಕವಲ್ಲ. ಕಿಂತು ದುಃಖವನ್ನು ಕುರಿತು ಪಾಪಫಲಾನುಭವವು ಕಾರಣವಾಗಿದೆ. ಅಂತಹ ಪಾಪಫಲಾನುಭವವು ಈಗ ಇಲ್ಲವಾದ್ದರಿಂದ (ಅವಸರಪ್ರಾಪ್ತವಾಗಿಲ್ಲವಾದ್ದರಿಂದ) ದುಃಖಿಸಹಾವಸ್ಥಾನ ಇದ್ದರೂ ದುಃಖ ಇವನಿಗೆ ಇಲ್ಲ.

ಹಾಗಾದರೆ, ಕರ್ಮಿಗೆ ವ್ರೀಹ್ಯಾದಿದೇಹಪ್ರವೇಶವೇ ಹೊರತು ವ್ರೀಹ್ಯಾದಿಭಾವವೇ ಬರುವುದಿಲ್ಲ ಎನ್ನುವುದಾದರೆ ಸಾಮಾನಾಧಿಕರಣ್ಯ (ತೇ ಇಹ ವ್ರೀಹಿಯವಾಃ ಎಂದು ಏಕವಿಭಕ್ತ್ಯಂತಪದವಾಚ್ಯತ್ವ) ಹೇಗೆ ಕೂಡುತ್ತದೆ ? ಎಂದರೆ, ಹಿಂದೆ ಹೇಳಿದ

'ಧೂಮೋ ಭೂತ್ವಾऽಭ್ರಂ ಭವತಿ' (ಛಾ.ಉ. 5-10-5)

ಎಂಬ ಸಾಮಾನಾಧಿಕರಣ್ಯವಚನದಂತೆ ಇಲ್ಲಿಯೂ ಸಾಮಾನಾಧಿಕರಣ್ಯ ಉಪಪನ್ನವಾಗುತ್ತದೆ.

''ಕರ್ಮಿಗೆ ವ್ರೀಹ್ಯಾದಿದೇಹಪ್ರವೇಶ ಮಾತ್ರ, ಹೊರತು ವ್ರೀಹ್ಯಾದಿಭಾವ ಅಲ್ಲ. ವ್ರೀಹ್ಯಾದಿದೇಹಪ್ರವೇಶ ಇದ್ದರೂ ದುಃಖಾನುಭವ ಇಲ್ಲ'' ಎಂಬ ವಿಷಯಕ್ಕೆ ಆಧಾರಪ್ರಮಾಣವೇನು ? ಎಂಬ ಶಂಕೆ ಬೇಡ.

''ಸೋऽವಾಗ್ಗತಃ ಸ್ಥಾವಿರಾನ್ ಪ್ರವಿಶ್ಯ ಅಭೋಗೇನ್ನೈವ ವ್ರಜನ್ ಸ್ಥೂಲಂ ಶರೀರಮೇತಿ ಸ್ಥೂಲಾತ್ ಶರೀರಾತ್ ಭೋಗಾನ್ ಅನುಭುಂಕ್ತೇ'' (ಕೌಷಾರವಶ್ರುತಿ)

ಎಂಬ ಶ್ರುತಿಯೇ ಅದಕ್ಕೆ ಆಧಾರವಾಗಿದೆ. ಇಲ್ಲಿ ''ಅಭೋಗೇನ ವ್ರಜನ್'' ಎಂಬುದಕ್ಕೆ ''ದುಃಖಿಸಹಾವಸ್ಥಾನ ಇದ್ದರೂ ಸಹ ದುಃಖವನ್ನು ಅನುಭವಿಸದೇ ಇರುತ್ತಾನೆ'' ಎಂದು ಅರ್ಥ.

ಆದ್ದರಿಂದ ಯಜ್ಞಾದಿಗಳು ಸುಖಸಾಧನತ್ವೇನ ಉಪದಿಷ್ಟವಾದ್ದರಿಂದ ವೈರಾಗ್ಯಾದಿ ಅನುಷ್ಠಾನವು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 27

**ಸೂ.ರ.:- ननु ज्योतिष्टोमादेर्हिंसाविशिष्टत्वेन पापाश्रयत्वाद्-व्रीह्यादिभावेन दुःखमवर्जनीयमित्याक्षिप्य समादधत्सूत्रमाह ॥**

ಜ್ಯೋತಿಷ್ಟೋಮಾದಿ ಯಾಗಗಳು ಹಿಂಸಾವಿಶಿಷ್ಟವಾದ ಕಾರಣ ಪಾಪಾಶ್ರಯ-ವಾದ್ದರಿಂದ ವ್ರೀಹ್ಯಾದಿಭಾವೇನ ದುಃಖವು ಅವರ್ಜನೀಯವಾಗಿದೆ ಎಂದು ಆಕ್ಷೇಪ ಬಂದರೆ ಸಮಾಧಾನ ಹೇಳಲು ಸೂತ್ರ ಹೇಳುತ್ತಾರೆ -

### ॐ अशुद्धमिति चेन्न शब्दात् ॐ (३-१-२७)

**ಸೂತ್ರಾರ್ಥ** :- ಯಜ್ಞಸ್ಯ ಹಿಂಸಾರೂಪತ್ವಾತ್ = ಯಜ್ಞವು ಹಿಂಸಾರೂಪ-ವಾದ್ದರಿಂದ ಕರ್ಮ = ಜ್ಯೋತಿಷ್ಟೋಮಾದಿ ಯಜ್ಞರೂಪಕರ್ಮವು **ಅಶುದ್ಧಂ** = ದುಃಖಸಾಧನವಾಗಿದೆ **ಇತಿ ಚೇತ್** ನ = ಎಂದು ಆಕ್ಷೇಪ ಬಂದರೆ, ಅದು ಸರಿಯಲ್ಲ, ಕುತಃ = ಏಕೆ? **ಶಬ್ದಾತ್** = ಶ್ರುತಿವಾಕ್ಯವಿಹಿತವಾದ್ದರಿಂದ.

ಸೂ.ರ.:- एवं च बाह्यायाः पापहेतुत्वेऽपि वायव्यं श्वेतमाल-भेतेत्यादिना (तै.सं. २-१-१) विहितहिंसायाः पुण्यहेतुत्वेन यज्ञादेः पापमिश्रत्वाभावात् । हिंसा त्ववैदिकेति (वाराहे.) स्मृतेः । अतो यज्ञादेः सुखसाधनतयोपदिष्टस्य दुःखकारणत्वाभावाद्युक्तं वैराग्या-नुष्ठानमिति सिद्धम् ॥

ಹಿಂಸಾ ತ್ವವೈದಿಕಾ ಯಾ ತು ತಯಾಽನರ್ಥೋ ಧ್ರುವಂ ಭವೇತ್ ।
ವೇದೋಕ್ತಯಾ ಹಿಂಸಯಾ ತು ನೈವಾನರ್ಥಃ ಕಥಂಚನ ॥

ಎಂಬುದಾಗಿ ವರಾಹಸ್ಮೃತಿ ಇರುವುದರಿಂದ, ವೇದಬಾಹ್ಯವಾದ ಯಜ್ಞವು ಪಾಪಹೇತುವಾದರೂ ಸಹ 'ವಾಯವ್ಯಂ ಶ್ವೇತಮಾಲಭೇತ' (ತೈ.ಸಂ. 2-1-1) ಇತ್ಯಾದಿ ಶ್ರುತಿವಾಕ್ಯಗಳಿಂದ ವಿಹಿತವಾದ ಹಿಂಸೆಯು ಪುಣ್ಯಹೇತುವಾದ್ದರಿಂದ ಯಜ್ಞಾದಿಗಳು ಪಾಪಮಿಶ್ರವಾಗಿಲ್ಲ.

ಆದ್ದರಿಂದ ಸುಖಸಾಧನತ್ವೇನ ಉಪದಿಷ್ಟವಾದ ಯಜ್ಞಾದಿಗಳು ದುಃಖಕಾರಣ-ವಾಗಿಲ್ಲವಾದ್ದರಿಂದ ವೈರಾಗ್ಯಾದಿ ಅನುಷ್ಠಾನವು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಅನ್ಯಾಧಿಕರಣವು ಮುಗಿಯಿತು.

ಅಧಿಕರಣ – 19

## ರೇತೋಽಧಿಕರಣ

### ಸಂಗತಿ

**ಸೂ.ರ.:– अत्र स्वर्गादवतीर्णस्य पितृप्रवेशः समर्थ्यते ।**

ಸ್ವರ್ಗದಿಂದ ಅವತೀರ್ಣನಾದ ಕರ್ಮಿಗೆ ಪಿತೃವಿನಲ್ಲಿ ಪ್ರವೇಶವನ್ನು ಸಮರ್ಥಿಸುತ್ತಾರೆ ಹತ್ತೊಂಭತ್ತನೇ ಈ ರೇತೋಽಧಿಕರಣದಲ್ಲಿ.

ವ್ರೀಹ್ಯಾದಿಶರೀರವನ್ನು ಪ್ರವೇಶ ಮಾಡುವ ಕರ್ಮಿಯು ವಿಷಯ. ಅವನು ಪಿತೃಶರೀರವನ್ನು ಪ್ರವೇಶಿಸುತ್ತಾನೆಯೋ? ಇಲ್ಲವೋ? ಎಂದು ಸಂದೇಹ.

### ಪೂರ್ವಪಕ್ಷ

**ಸೂ.ರ.:– ननु न जीवस्य पितृप्रवेशोऽस्ति । मातुरेवेति वचनात् । न च य एव गृही भवतीति श्रुतेर्बाधः । प्रयोजनाभावयुक्तियुक्ततया बलवदेतच्छ्रुतिविरुद्धत्वेन तच्छ्रुतेः काकुस्वरेणापि पितृप्रवेशनिषेध-परत्वात् । ततश्चात्यायासाभावेन नातिवैराग्यं कर्मादावपेक्षितमिति प्राप्ते सूत्रितम् ॥**

ಸ್ವರ್ಗದಿಂದ ಅವತೀರ್ಣನಾಗಿ ವ್ರೀಹ್ಯಾದಿಶರೀರವನ್ನು ಪ್ರವೇಶಿಸಿದ ಕರ್ಮಿಗೆ ಪಿತೃಶರೀರಪ್ರವೇಶ ಇಲ್ಲ. ಕಾರಣ – "ಸ್ವರ್ಗಾದವಾಗ್ಗತಶ್ಚಾಪಿ ಮಾತುರೇವೋದರಂ ವ್ರಜೇತ್" ಎಂದು ವಚನವಿರುವುದರಿಂದ ಮಾತೃಶರೀರವನ್ನೇ ಪ್ರವೇಶಿಸುತ್ತಾನೆಯೇ ಹೊರತು ಪಿತೃಶರೀರವನ್ನು ಪ್ರವೇಶಿಸಲಾರನು.

"ಯ ಏವ ಗೃಹೀ ಭವತಿ ಯೋ ವಾ ರೇತಃ ಸಿಂಚತಿ ತಮೇವಾನುವಿಶತಿ" ಎಂಬುದಾಗಿ ಶ್ರುತಿಯು ಪಿತೃಶರೀರಪ್ರವೇಶವನ್ನು ಹೇಳುತ್ತಿರುವುದರಿಂದ ಪ್ರಕೃತ ಮಾತೃಶರೀರಪ್ರವೇಶವನ್ನು ಹೇಳುವುದಾದರೆ ಈ ಶ್ರುತಿಯಿಂದ ಬಾಧ ಬರಬೇಕಾಗುತ್ತದೆಯಲ್ಲವೇ? ಎಂದರೆ, ಅದು ಸರಿಯಲ್ಲ. ಮಾತೃಪ್ರವೇಶ ತಿಳಿಸುವ ಶ್ರುತಿಯು ಪ್ರಯೋಜನಾಭಾವರೂಪ ಯುಕ್ತಿಯುಕ್ತವಾದ್ದರಿಂದ ಪ್ರಬಲವಾಗಿದೆ.

ಪ್ರಬಲವಾದ ಈ ಶ್ರುತಿಯ ವಿರೋಧ ಬರುವುದರಿಂದ ಪಿತೃಪ್ರವೇಶಶ್ರುತಿಯು ಕಾಕುಸ್ವರದಿಂದಲೂ ಪಿತೃಪ್ರವೇಶನಿಷೇಧಪರವಾಗಿದೆ.

ಆದ್ದರಿಂದ ಅತ್ಯಾಯಾಸವಿಲ್ಲದ ಕಾರಣ ಕರ್ಮಾದಿವಿಷಯದಲ್ಲಿ ಅತಿವೈರಾಗ್ಯವು ಅಪೇಕ್ಷಿತವಾಗಿಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

## ॐ रेतःसिग्योगोऽथ ॐ (३-१-२८)

**ಸೂತ್ರಾರ್ಥ** :- ಕರ್ಮಿಣಃ = ಕರ್ಮಿಯಾದವನಿಗೆ ಪ್ರಥಮಂ = ಮೊದಲು **ರೇತಃಸಿಗ್ಯೋಗಃ ರೇತಃಸಿಚಾ** = ರೇತಸೇಚನದಿಂದ **ಪಿತ್ರಾ ಯೋಗಃ (ಸಂಬಂಧಃ)** = ಪಿತೃವಿನಿಂದ ಸಂಬಂಧವು ಅರ್ಥಾತ್ ಪಿತೃಪ್ರವೇಶವು ಆಗುತ್ತದೆ. **ಅಥ** = ಪಿತೃಪ್ರವೇಶಾನಂತರದಲ್ಲಿ ಮಾತೃಪ್ರವೇಶೋ ಭವತಿ = ಮಾತೃಪ್ರವೇಶವಾಗುತ್ತದೆ, ನ ತು ಪ್ರಥಮಮೇವ = ಹೊರತು ಮೊದಲೇನೇ ಮಾತೃಪ್ರವೇಶ ಅಲ್ಲ.

## ಸಿದ್ಧಾಂತ

**ಸೂ.ರ.:**- एवं चास्त्येव पितृप्रवेशो जीवस्य ततो रेत इति (कौण्ठरव्य.) श्रुतेः । न च पितृप्रवेशस्य व्यर्थत्वात् श्रुतेर्दौर्बल्यम् । किमुत्पत्तौ पितुरेवानुपयोगात् तत्प्रवेशस्य वैय्यर्थ्यमुच्यते उत प्रवेश-मात्रस्य । नाद्यः । शरीरपरिणामाय रेतसोऽपेक्षितत्वेन रेतः सेचकस्योपयोगित्वात् । न द्वितीयः । तत्प्रवेशस्येश्वरकल्पितत्वात् । 'ईशक्लृप्त्यैव पितरं प्रविश्यायाति मातरमि'त्यादेः । न च मातुरेवोदर-मिति श्रुत्यप्रामाण्यम् । पितृप्रवेशानन्तरं मातृप्रवेशस्याप्यङ्गीकारात् । न च मातुरेवेत्यवधारणानुपपत्तिः । स्मृतेः साधारणजीवपरतादशायामव-धारणस्यायोगव्यवच्छेदार्थत्वाङ्गीकारात् । गर्भस्थसिद्धशरीरप्रवेशजीव-परतादशायां तु अन्ययोगव्यवच्छेदस्यापि भावात् । अतः पितृप्राप्ते-र्विद्यमानत्वाद्भवितव्यं कर्मादावतिवैराग्येणेति सिद्धम् ॥

''ತತೋ ರೇತಸ್ಸಿಚಮೇವಾನುಪ್ರವಿಶತ್ಯಥ ಮಾತರಮಥ ಪ್ರಸೂಯತೇ ಸ ಕರ್ಮಕುರುತೇ'' ಎಂಬುದಾಗಿ ಶ್ರುತಿ ಇರುವುದರಿಂದ ಜೀವನಿಗೆ ಮೊದಲು ಪಿತೃಪ್ರವೇಶ ಇದ್ದೇ ಇದೆ.

ಪಿತೃಪ್ರವೇಶವು ವ್ಯರ್ಥವಾದ್ದರಿಂದ ಶ್ರುತಿಯು ದುರ್ಬಲವಾಗುವುದಲ್ಲ ? ಎಂದು ಶಂಕಿಸುವುದು ಸರಿಯಲ್ಲ. ಉತ್ಪತ್ತಿವಿಷಯದಲ್ಲಿ ತಂದೆಯ ಉಪಯೋಗವೇ ಇಲ್ಲವಾದ್ದರಿಂದ ಪಿತೃಪ್ರವೇಶಕ್ಕೆ ವೈಯರ್ಥ್ಯ ಹೇಳುತ್ತೀರೋ ? ಅಥವಾ ಪಿತೃಪ್ರವೇಶವೇ ಒಟ್ಟಿನಲ್ಲಿ ವ್ಯರ್ಥ ಎನ್ನುತ್ತೀರೋ ?

ಉತ್ಪತ್ತಿವಿಷಯದಲ್ಲಿ ತಂದೆಯ ಉಪಯೋಗವೇ ಇಲ್ಲ ಎಂಬ ಮೊದಲನೇ ಪಕ್ಷ ಸರಿಯಲ್ಲ. ಕಾರಣ - ಶರೀರಪರಿಣಾಮಕ್ಕಾಗಿ ರೇತಸ್ಸು ಅಪೇಕ್ಷಿತವಾಗಿದೆ. ಹಾಗಾಗಿ ರೇತಸ್ಸೇಚನ ಮಾಡುವ ತಂದೆಯು ಉಪಯುಕ್ತನೇ ಆಗಿದ್ದಾನೆ.

ಒಟ್ಟಿನಲ್ಲಿ ಪಿತೃಪ್ರವೇಶವೇ ವ್ಯರ್ಥ ಎಂಬ ಎರಡನೇ ಪಕ್ಷವೂ ಸರಿಯಲ್ಲ. ಕಾರಣ-

''ಈಶಕ್ಲೃಪ್ತ್ಯೈವ ಪಿತರಂ ಪ್ರವಿಶ್ಯಾಯಾತಿ ಮಾತರಮ್''

ಇತ್ಯಾದಿ ಪ್ರಮಾಣಗಳಿರುವುದರಿಂದ ಪಿತೃಪ್ರವೇಶವು ಈಶ್ವರಕಲ್ಪಿತವಾಗಿದೆ.

ಹಾಗಾದರೆ ''ಮಾತುರೇವೋದರಂ ವ್ರಜೇತ್'' ಎಂಬ ಶ್ರುತಿಯು ಅಪ್ರಮಾಣ-ವಾಗುವುದಲ್ಲ? ಎಂದರೆ, ಅದು ಸರಿಯಲ್ಲ. ಮೊದಲು ಪಿತೃಪ್ರವೇಶ, ಅನಂತರ ಮಾತೃಪ್ರವೇಶವನ್ನೂ ಅಂಗೀಕರಿಸಿದ್ದರಿಂದ ಶ್ರುತಿಯು ಅಪ್ರಮಾಣವಾಗುವುದಿಲ್ಲ.

ಹಾಗಾದರೆ (ಮಾತೃಪ್ರವೇಶ-ಪಿತೃಪ್ರವೇಶ ಎರಡನ್ನೂ ಅಂಗೀಕರಿಸುವುದಾದರೆ) 'ಮಾತುರೇವ' ಎಂಬುದಾಗಿ ಅವಧಾರಣವು ಅನುಪಪನ್ನವಾಗುವುದಲ್ಲ? ಎಂದರೆ, ಅದು ಸರಿಯಲ್ಲ. ಸ್ಮೃತಿಯು ಸಾಧಾರಣಜೀವಪರವಾದಾಗ ಅವಧಾರಣವು ಅಯೋಗವ್ಯವಚ್ಛೇದಾರ್ಥಕವಾಗುತ್ತದೆ. ಇನ್ನು ಗರ್ಭಸ್ಥಸಿದ್ಧಶರೀರ ಪ್ರವೇಶಜೀವ-ಪರವಾದರೆ ಅನ್ಯಯೋಗವ್ಯವಚ್ಛೇದಾರ್ಥಕವಾಗುತ್ತದೆ. ಆದ್ದರಿಂದ ಅನುಪಪತ್ತಿ ಇಲ್ಲ.

ಆದ್ದರಿಂದ ಪಿತೃಪ್ರಾಪ್ತಿಯು ಇರುವುದರಿಂದ ಕರ್ಮಾದಿಗಳ ವಿಷಯದಲ್ಲಿ ಅತಿವೈರಾಗ್ಯದಿಂದ ಇರಬೇಕು ಎಂದು ಸಿದ್ಧವಾಗುತ್ತದೆ.

ರೇತೋಽಧಿಕರಣವು ಮುಗಿಯಿತು.

ಅಧಿಕರಣ – 20

## ಯೋನ್ಯಧಿಕರಣ

### ಸಂಗತಿ

**ಸೂ.ರ.:– अत्र जीवस्य पितृद्वारा योनिं प्रविश्य शरीरप्राप्तिः समर्थ्यते ।**

ಜೀವನಿಗೆ ಪಿತೃವಿನ ಮೂಲಕ ಯೋನಿಯನ್ನು ಪ್ರವೇಶಿಸಿ ಶರೀರಪ್ರಾಪ್ತಿಯನ್ನು ಸಮರ್ಥಿಸುತ್ತಾರೆ ಇಪ್ಪತ್ತನೇ ಈ ಯೋನ್ಯಧಿಕರಣದಲ್ಲಿ.

### ಪೂರ್ವಪಕ್ಷ

**ಸೂ.ರ.:– ननु स्वर्गादागतस्य वा पितृवन्मातरं योनिद्वारा प्रविश्य कललबुद्बुदादिक्रमेण देहप्राप्तिर्नास्ति । किन्तु कस्यचित्स्वर्गादागतस्य पितरं प्रविष्टस्य पुण्यवशेन योनिप्रवेशमन्तरा संस्पर्शद्वारेण मातृप्रवेशेन देहलाभः । अपरस्य तु पितृप्रवेशं विनैवान्नादिद्वारा मातृप्रवेशेन तल्लाभः । ततोऽप्यतिशयितपुण्यवत्त्वात् । पक्षद्वयेऽपि कललप्राप्तिः । ततो बुद्बुदस्य देहस्येति क्रमः । अन्यस्य मातृप्रवेशमन्तरा पितृदेह-मध्ये तत्प्राप्तिः । अन्यस्य कललादिक्रमं विना मातृदेहस्थजरायुगत-सिद्धदेहप्राप्तिः । अन्यस्य तु बहिर्निर्गतसिद्धदेहप्राप्तिः । परन्तु कस्यापि स्वर्गादागतस्य पापिवच्छरीराद्योनिद्वारा मातृशरीरं प्राप्य कलल-बुद्बुदादिक्रमेण देहप्राप्तिरिति नियमो नास्ति । ततश्चात्यायासा-भावान्नातिवैराग्येण कृत्यमिति प्राप्ते सूत्रमाह ॥**

ಸ್ವರ್ಗದಿಂದ ಬಂದ ಜೀವನಿಗೆ ಪಿತೃಶರೀರದಿಂದ ಯೋನಿದ್ವಾರಾ ಮಾತೃವನ್ನು ಪ್ರವೇಶಿಸಿ ಕಲಲಬುದ್‌ಬುದಾದಿಕ್ರಮದಿಂದ ದೇಹಪ್ರಾಪ್ತಿ ಇಲ್ಲ. ಕಿಂತು ಸ್ವರ್ಗದಿಂದ ಬಂದು ತಂದೆಯನ್ನು ಪ್ರವೇಶಿಸಿದ ಕೆಲವು ಜೀವರಿಗೆ ಪುಣ್ಯವಶದಿಂದ ಯೋನಿ-ಪ್ರವೇಶವೇ ಇಲ್ಲದೇ ಸಂಸ್ಪರ್ಶದ್ವಾರಾ ಮಾತೃಪ್ರವೇಶ ಮಾಡಿ ದೇಹಲಾಭವಾಗುತ್ತದೆ.

ಮತ್ತೆ ಕೆಲವರಿಗೆ ಅವರಿಗಿಂತಲೂ ಅತಿಹೆಚ್ಚು ಪುಣ್ಯವಂತರಾದ್ದರಿಂದ ಪಿತೃಪ್ರವೇಶ ಇಲ್ಲದೆಯೇ ಅನ್ನಾದಿದ್ವಾರಾ ಮಾತೃಪ್ರವೇಶ ಮಾಡುವುದರಿಂದ ದೇಹಲಾಭ-ವಾಗುತ್ತದೆ. ಎರಡುಪಕ್ಷಗಳಲ್ಲಿಯೂ (**ಕಲಲ** = ಗರ್ಭದ ಮೊದಲನೆಯ ಅವಸ್ಥೆ. ಸ್ತ್ರೀಯರ ಗರ್ಭಕೋಶವನ್ನು ಪ್ರವೇಶಿಸಿದ ಮೊದಲನೆಯ ರಾತ್ರಿಯಲ್ಲಿ ಉಂಟಾಗುವ ರೇತಸ್ಸಿನ ವಿಕಾರ.) ಕಲಲಪ್ರಾಪ್ತಿಯುಂಟು. ಅನಂತರ (**ಬುದ್ಬುದ** = ಗರ್ಭದ ಒಂದು ಅವಸ್ಥೆ. ಐದು ದಿನಗಳ ಕಾಲ ಬೆಳೆದ ಗರ್ಭ. ಐದು ದಿನಗಳು ತುಂಬಿದ ಗರ್ಭ. ಕಲಲಂ ತ್ವೇಕರಾತ್ರೇಣ ಪಂಚರಾತ್ರೇಣ ಬುದ್ಬುದಮ್ । (ಭಾ. 3-31-1/2)) ಬುದ್‌ಬುದದೇಹಪ್ರಾಪ್ತಿ ಎಂದು ಕ್ರಮ.

ಮತ್ತೆ ಕೆಲವರಿಗೆ ಮಾತೃಪ್ರವೇಶವಿಲ್ಲದೆಯೇ ಪಿತೃದೇಹಮಧ್ಯದಲ್ಲಿ ದೇಹ-ಪ್ರಾಪ್ತಿಯಾಗುತ್ತದೆ. ಇನ್ನು ಕೆಲವರಿಗೆ ಕಲಲಾದಿಕ್ರಮವಿಲ್ಲದೆಯೇ ಮಾತೃದೇಹಸ್ಥ ಜರಾಯುಗತ ಸಿದ್ಧದೇಹಪ್ರಾಪ್ತಿಯಾಗುತ್ತದೆ. ಇನ್ನು ಕೆಲವರಿಗೆ ಬಹಿರ್ನಿರ್ಗತ-ಸಿದ್ಧದೇಹಪ್ರಾಪ್ತಿಯಾಗುತ್ತದೆ.

ಆದರೆ ಸ್ವರ್ಗದಿಂದ ಬಂದ ಯಾವ ಜೀವನಿಗೂ ಪಾಪಿಜೀವನಂತೆ ಶರೀರದಿಂದ ಯೋನಿದ್ವಾರಾ ಮಾತೃಶರೀರವನ್ನು ಹೊಂದಿ ಕಲಲಬುದ್‌ಬುದಾದಿಕ್ರಮದಿಂದ ದೇಹಪ್ರಾಪ್ತಿಯಾಗುತ್ತದೆ ಎಂದು ನಿಯಮ ಇಲ್ಲ. ಆದ್ದರಿಂದ ಅತಿ ಆಯಾಸವಿಲ್ಲದ ಕಾರಣ ಅತಿವೈರಾಗ್ಯದಿಂದ ಕೃತ್ಯವೇನಿಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

## ॐ योनेः शरीरं ॐ (३-१-२९)

**ಸೂತ್ರಾರ್ಥ** :- (ಯೋನೇಃ ಎಂಬುವುದು ಲ್ಯಬ್‌ಲೋಪಪಂಚಮಿ ಆಗಿದೆ) ಕರ್ಮೀ = ಕರ್ಮಿಯಾದವನು ಪಿತೃದ್ವಾರಾ = ಪಿತೃವಿನ ಮೂಲಕ **ಯೋನೇಃ** = ಮಾತೃಯೋನಿಂ ಪ್ರವಿಶ್ಯೈವ = ಮಾತೃಯೋನಿಯನ್ನು ಪ್ರವೇಶಿಸಿಯೇ ಅಥ = ಅನಂತರ ತತ್ರ **ಶರೀರಂ** ಲಭತೇ = ಅಲ್ಲಿ ಶರೀರವನ್ನು ಹೊಂದುತ್ತಾನೆ. ಹೊರತು ನ ತದ್ವಿನಾ = ಮಾತೃಯೋನಿಯನ್ನು ಪ್ರವೇಶಿಸದೇ ಶರೀರಪ್ರಾಪ್ತಿ ಇಲ್ಲ.

## ಸಿದ್ಧಾಂತ

ಸೂ.ರ.:- एवं च स्वर्गादागतस्यापि पितृप्रवेशस्ततो यानिद्वारा मातृप्रवेशस्ततः कललादिक्रमेण देहप्राप्तिश्चेत्यादिनियमस्य सद्भावात् ।

**दिवः स्यासूनिति (पौष्यायणश्रुति.) वचनात् । न च देहं गर्भस्थित-मिति वाक्यविरोधः । केषाञ्चित्तथाभावस्यापि सत्त्वेन तद्वचनानां तन्मात्रविषयत्वेन यावत्स्वर्गिविषयत्वाभावात् । अतः सामान्यजन्मनि पित्रादिप्रवेशस्य नियमेनापस्वर्गादितरत्र सर्वत्रापि महादुःखाविनाऽ-भावात् तत्र विरक्तेन भगवान् भजनीय इति सिद्धम् ॥**

"ದಿವಃ ಸ್ಯಾಸ್ಯೂನ್ ಗಚ್ಛತಿ ಸ್ಯಾಸ್ನುಭ್ಯಃ ಪಿತರಂ ಪಿತುರ್ಮಾತರಂ ಮಾತುಃ ಶರೀರಂ ಶರೀರೇಣ ಜಾಯತೇ ಇತಿ ಸಮ್ಮಿತಮ್ ।

ಅಥಾಸಮ್ಮಿತಂ ಸ್ಯಾಸ್ನುಭ್ಯೋ ಜಾಯತೇ ಪಿತುರ್ಮಾತುರಂತರೇ ವಾ ಗರ್ಭೇ ವಾ ಬಹಿರ್ವಾ"

ಎಂಬುದಾಗಿ ಪೌಷ್ಯಾಯಣಶ್ರುತಿವಚನವಿರುವುದರಿಂದ ಸ್ವರ್ಗದಿಂದ ಬಂದವನಾದರೂ ಜೀವನಿಗೆ ಮೊದಲು ಪಿತೃಪ್ರವೇಶ, ಅನಂತರ ಯೋನಿದ್ವಾರಾ ಮಾತೃಪ್ರವೇಶ, ಅನಂತರ ಕಲಲಾದಿಕ್ರಮದಿಂದ ದೇಹಪ್ರಾಪ್ತಿಯಾಗುತ್ತದೆ ಇತ್ಯಾದಿ ನಿಯಮವು ಇದ್ದೇ ಇದೆ.

ಹಾಗಾದರೆ 'ದೇಹಂ ಗರ್ಭಸ್ಥಿತಂ' ಎಂಬ ವಾಕ್ಯವಿರೋಧ ಬರುವುದಲ್ಲ? ಎಂದರೆ, ಬರುವುದಿಲ್ಲ. ಈ ಹಿಂದೆ ಹೇಳಿದ ಪ್ರಕಾರ ಪಿತೃಪ್ರವೇಶವಿಲ್ಲದೆಯೇ ದೇಹಪ್ರಾಪ್ತಿ ಕೆಲವರಿಗೆ ಇರುವುದರಿಂದ ಆ ವಿಧವಾದ ಮಾತುಗಳು ತನ್ಮಾತ್ರ-ವಿಷಯಕವಾಗಿವೆ. ಹೊರತು ಎಲ್ಲ ಸ್ವರ್ಗಿವಿಷಯಕವಾಗಿಲ್ಲ.

ಆದ್ದರಿಂದ ಸಾಮಾನ್ಯಜನ್ಮದಲ್ಲಿ ಪಿತ್ರಾದಿಪ್ರವೇಶವು ನಿಯಮೇನ ಇರುವುದರಿಂದ ಮೋಕ್ಷ ಬಿಟ್ಟು ಇತರತ್ರ ಎಲ್ಲೆಡೆಯೂ ಮಹಾದುಃಖವು ಇದ್ದೇ ಇರುವುದರಿಂದ ಆ ವಿಷಯದಲ್ಲಿ ವೈರಾಗ್ಯದಿಂದ ಇದ್ದು ಭಗವಂತನನ್ನು ಭಜಿಸಬೇಕು ಎಂದು ಸಿದ್ಧವಾಗುತ್ತದೆ.

**ಯೋನ್ಯಧಿಕರಣವು ಮುಗಿಯಿತು**

**ಇಲ್ಲಿಗೆ ಸೂತ್ರಾರ್ಥರತ್ನಾವಲೀ ವ್ಯಾಖ್ಯಾನಸಹಿತವಾದ ಬ್ರಹ್ಮಸೂತ್ರಗಳಲ್ಲಿ ಮೂರನೇ ಅಧ್ಯಾಯದ ಮೊದಲನೇ ಪಾದವು ಮುಗಿಯಿತು.**

# तृतीयाध्यायस्य द्वितीयः पादः

*ಅಧಿಕರಣ – 1*

## ಸಂಧ್ಯಾಧಿಕರಣ

### ಪಾದಸಂಗತಿ

ಸೂ.ರ.:– भक्तिरस्मिन् पाद उच्यते ।

ಯಾವ ಭಕ್ತಿಯ ದಾರ್ಢ್ಯಕ್ಕಾಗಿ ಪೂರ್ವಪಾದದಲ್ಲಿ ವೈರಾಗ್ಯವು ನಿರೂಪಿತ-ವಾಗಿದೆಯೋ ಮತ್ತು ಯಾವ ಭಕ್ತಿಯು ಉಪಾಸನೆಗೆ ಅಂಗವಾಗಿದೆಯೋ ಅಂತಹ ಅವಸರಪ್ರಾಪ್ತವಾದ ಭಕ್ತಿಯನ್ನು ಈ ಪಾದದಲ್ಲಿ ನಿರೂಪಿಸುತ್ತಾರೆ.

### ಅಧಿಕರಣ ಸಂಗತಿ

ಸೂ.ರ.:– **अत्र भगवत्प्राप्तिसाधनभक्त्यर्थमर्थज्ञानात्मकस्य स्वाप्नऽ प्रपञ्चस्य भगवदधीनत्वमहिमा वर्ण्यते ।**

ಭಗವತ್ಪ್ರಾಪ್ತಿಗೆ ಸಾಧನವಾದ ಭಕ್ತಿಯನ್ನು ಹುಟ್ಟಿಸುವುದಕ್ಕಾಗಿ ಅರ್ಥಜ್ಞಾನಾತ್ಮಕ-ವಾದ ಸ್ವಾಪ್ನಪ್ರಪಂಚಕ್ಕೆ ಭಗವದಧೀನತ್ವಮಹಿಮೆಯನ್ನು ನಿರೂಪಿಸುತ್ತಾರೆ ಮೊದಲನೇ ಈ ಸಂಧ್ಯಾಧಿಕರಣದಲ್ಲಿ.

ಎಲ್ಲವೂ ಭಗವದಧೀನ ಎಂದು ಹಿಂದೆ ಹೇಳಿದೆ. ಸ್ವಾಪ್ನಪದಾರ್ಥಗಳು (ಸ್ವಪ್ನವು) ಭಗವದಧೀನ ಅಲ್ಲ ಎನ್ನುವುದಾದರೆ ಸರ್ವಕ್ಕೆ ಭಗವದಧೀನತ್ವವು ಉಪಪನ್ನವಾಗುವುದಿಲ್ಲವಾದ್ದರಿಂದ ಸ್ವಾಪ್ನಪದಾರ್ಥಗಳಿಗೆ ಭಗವದಧೀನತ್ವವನ್ನು ಸಮರ್ಥಿಸುವುದು ಆವಶ್ಯಕವಾಗಿದೆ. ಆ ಕಾರ್ಯವನ್ನು ಇಲ್ಲಿ ಮಾಡುತ್ತಾರೆ.

ಸ್ವಾಪ್ನಪದಾರ್ಥಗಳು ಭಗವದಧೀನವೋ? ಇಲ್ಲವೋ? ಎಂದು ಸಂದೇಹ.

### ಪೂರ್ವಪಕ್ಷ

ಸೂ.ರ.:– ननु स्वप्नविषयो नेश्वराधीनः । असत्त्वात् । न चासिद्धो हेतुः । प्रागूर्ध्वमनुपलम्भात् । न च तत्कालसृष्टिविरोधाङ्गी-

**कारात्प्रागूर्ध्वमुपलम्भाभावो न दोषायेति वाच्यम् । प्रमाणाभावादिति प्राप्ते सूत्रमाह ॥**

"ಸ್ವಪ್ನವಿಷಯಃ ನ ಈಶ್ವರಾಧೀನಃ ಅಸತ್ವಾತ್" ಸ್ವಾಪ್ನಪದಾರ್ಥಗಳು ಅಸತ್ ಆದ್ದರಿಂದ ಅದು ಈಶ್ವರಾಧೀನವಲ್ಲ.

ಸ್ವಾಪ್ನಪದಾರ್ಥಗಳು ಅಸತ್ ಆಗಿವೆ ಎಂದು ಹೇಗೆ ಹೇಳುತ್ತೀರಿ ? ಅಂದರೆ ಪಕ್ಷವಾದ ಸ್ವಾಪ್ನಪದಾರ್ಥಗಳಲ್ಲಿ ಅಸತ್ವ ಹೇತು ಇಲ್ಲದ ಕಾರಣ ನಿಮ್ಮ ಅನುಮಾನಕ್ಕೆ ಅಸಿದ್ಧಿ ಬರುವುದಲ್ಲ? ಎಂದು ಶಂಕಿಸುವುದು ಸರಿಯಲ್ಲ. ಕಾರಣ ಸ್ವಾಪ್ನ-ಪದಾರ್ಥಗಳು ಒಂದುವೇಳೆ ಸತ್ ಆಗಿದ್ದರೆ ಅವು ಸ್ವಪ್ನಕ್ಕಿಂತ ಪೂರ್ವದಲ್ಲಿ ಹಾಗೂ ಅನಂತರದಲ್ಲಿ ಉಪಲಬ್ಧವಾಗಬೇಕಿತ್ತು. ಆದರೆ ಸ್ವಾಪ್ನಪದಾರ್ಥಗಳು ಸ್ವಪ್ನಕ್ಕಿಂತ ಪೂರ್ವದಲ್ಲಿ ಹಾಗೂ ಅನಂತರದಲ್ಲಿ ಉಪಲಬ್ಧವಾಗುವುದಿಲ್ಲವಾದ್ದರಿಂದ ಅವು ಸತ್ ಅಲ್ಲ. ಅಸತ್ ಆಗಿವೆ.

ತತ್ಕಾಲದಲ್ಲಿ ಸೃಷ್ಟಿ ಮಾಡುವುದರಿಂದ, ತತ್ಕಾಲೀನಸೃಷ್ಟಿವಿರೋಧ ಅಂಗೀ-ಕರಿಸಿದ್ದರಿಂದ ಮೊದಲು ಹಾಗೂ ಅನಂತರ ಉಪಲಬ್ಧವಾಗದಿರುವುದು ದೋಷ-ವಾಗುವುದಿಲ್ಲ ಎಂದು ಶಂಕಿಸುವುದು ಸರಿಯಲ್ಲ. ಸ್ವಾಪ್ನಪದಾರ್ಥಗಳನ್ನು ತತ್ಕಾಲದಲ್ಲಿ ಸೃಷ್ಟಿ ಮಾಡುತ್ತಾನೆ ಎಂಬ ವಿಷಯದಲ್ಲಿ ಪ್ರಮಾಣವಿಲ್ಲವಾದ್ದರಿಂದ. ಆದ್ದರಿಂದ ಸ್ವಾಪ್ನ ಪದಾರ್ಥಗಳು ಅಸತ್ ಆಗಿವೆ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

## ॐ सन्ध्ये सृष्टिराह हि ॐ (३-२-१)

**ಸೂತ್ರಾರ್ಥ** :- **ಹಿ** = ಯಾವ ಕಾರಣ ಅಥ ರಥಾನ್ = ಎಂಬ ಶ್ರುತಿಯು **ಸಂಧ್ಯೇ** = ಜಾಗ್ರತ್ ಸುಷುಪ್ತಿಕಾಲಗಳ ಸಂಧಿಕಾಲದಲ್ಲಿ ಸ್ವಪ್ನವು ಉಂಟಾಗುತ್ತದೆ ಎಂಬುದಾಗಿ **ಆಹ** = ಸ್ವಪ್ನದಲ್ಲಿ ಭಗವಂತನ ಸೃಷ್ಟಿಯನ್ನು ಹೇಳುತ್ತಿದೆಯೋ ಅತಃ = ಆ ಕಾರಣ **ಸೃಷ್ಟಿಃ** = ಸ್ವಾಪ್ನಪದಾರ್ಥಗಳ ಸೃಷ್ಟಿಯು ಭಗವತ ಏವ ಜಾಯತೇ = ಭಗವಂತನಿಂದಲೇ ಉಂಟಾಗುತ್ತದೆ.

### ಸಿದ್ಧಾಂತ

**ಸೂ.ರ.:**– एवं चेश्वराधीन एव स्वप्नविषयः । सत्त्वात् । न च

प्रागुत्तरकालमुपलम्भप्रसङ्गः । तत्काल एव सृष्टिविरोधाङ्गीकारात् । न च तत्र प्रमाणाभावः । अथ रथानिति (बृ. ६-३-१०) श्रुतेः । अतः स्वप्नविषयस्य भगवदधीनत्वसिद्धेर्महामाहात्म्यं तस्येति युक्ता तत्र भक्तिरिति सिद्धम् ॥

"ಸ್ವಪ್ನವಿಷಯಃ ಈಶ್ವರಾಧೀನ ಏವ ಸತ್ವಾತ್" ಸ್ವಾಪ್ನಪದಾರ್ಥಗಳು ಸತ್ ಆದ್ದರಿಂದ ಈಶ್ವರಾಧೀನವೇ ಆಗಿವೆ.

ಹಾಗಾದರೆ ಸ್ವಾಪ್ನಪದಾರ್ಥಗಳು ಸತ್ ಆಗಿದ್ದರೆ, ಸ್ವಪ್ನಕ್ಕಿಂತಲೂ ಪೂರ್ವದಲ್ಲಿ ಹಾಗೂ ಅನಂತರದಲ್ಲಿ ಉಪಲಬ್ಧವಾಗಬೇಕಿತ್ತಲ್ಲವೇ? ಎಂದರೆ, ಹಾಗಲ್ಲ, ಭಗವಂತನು ತತ್ಕಾಲದಲ್ಲಿಯೇ ಸೃಷ್ಟಿ ಮಾಡುತ್ತಾನೆ ಎಂದು ಅಂಗೀಕರಿಸಿದ್ದರಿಂದ ಸ್ವಾಪ್ನಪದಾರ್ಥಗಳು ಮೊದಲು ಹಾಗೂ ಅನಂತರ ಉಪಲಬ್ಧವಾಗುವುದಿಲ್ಲ.

ಭಗವಂತನು ತತ್ಕಾಲದಲ್ಲಿಯೇ ಸೃಷ್ಟಿಸುತ್ತಾನೆ ಎಂದು ಅಂಗೀಕರಿಸಲು ಯಾವ ಪ್ರಮಾಣ ಇದೆ? ಎಂದು ಶಂಕಿಸುವುದು ಬೇಡ.

"ನ ತತ್ರ ರಥಾ ನ ರಥಯೋಗಾ ನ ಪಂಥಾನೋ ಭವಂತಿ ಅಥ ರಥಾನ್ ರಥಯೋಗಾನ್ ಪಥಃ ಸೃಜತೇ" (ಬೃ.ಉ. 6-3-20) ಎಂಬುದಾಗಿ ಶ್ರುತಿಯು "ತತ್ಕಾಲದಲ್ಲಿಯೇ ಸ್ವಾಪ್ನಪದಾರ್ಥಗಳನ್ನು ಸೃಷ್ಟಿಸುತ್ತಾನೆ ಭಗವಂತ" ಎಂದು ತಿಳಿಸುತ್ತಿದೆ.

ಆದ್ದರಿಂದ ಸ್ವಾಪ್ನಪದಾರ್ಥಗಳು ಭಗವದಧೀನವೆಂದು ಸಿದ್ಧಿಸುವುದರಿಂದ, ಭಗವಂತನದು ಮಹಾಮಾಹಾತ್ಮ್ಯ ಎಂದಾಗಿ, ಅವನಲ್ಲಿ ಭಕ್ತಿ ಮಾಡುವುದು ಯುಕ್ತವಾಗಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 2

ಸೂ.ರ.:- ननु कर्तुरभावान्न स्वप्नकालीनसृष्टिर्युक्ता । न हि जीवस्तत्कर्ता । सुप्तत्वात्तस्य । नापीश्वरः तत्प्रमाणाभावात् । न च पक्षद्वयेऽपि सृष्टिरुपपन्ना । तत्काल एवोत्पत्तिविनाशकर्तुरदर्शनादित्या-शङ्कां परिहरत्सूत्रं पठति ॥

ಸ್ವಾಪ್ನಪದಾರ್ಥಗಳನ್ನು ತತ್ಕಾಲದಲ್ಲಿ ಸೃಷ್ಟಿ ಮಾಡುತ್ತಾನೆ ಎನ್ನುವುದು ಯುಕ್ತವಲ್ಲ. ಕಾರಣ - ಹಾಗೆ ಸೃಷ್ಟಿಸುವುದಾದರೆ ಒಬ್ಬ ಕರ್ತಾ ಬೇಕು. ಆದರೆ ಸ್ವಾಪ್ನಪದಾರ್ಥಗಳನ್ನು ತತ್ಕಾಲದಲ್ಲಿಯೇ ಸೃಷ್ಟಿ ಮಾಡುವ ಯಾವ ಕರ್ತೃವೂ ಇಲ್ಲ.

ಜೀವನೇ ಕರ್ತಾ ಆಗಬಹುದಲ್ಲ? ಎಂದರೆ, ಅದು ಸರಿಯಲ್ಲ. ಸ್ವಪ್ನಾವಸ್ಥೆಯಲ್ಲಿ ಜೀವನು ಸುಪ್ತನಾಗಿರುತ್ತಾನಾದ್ದರಿಂದ ಅವನು ಕರ್ತೃವಾಗಲು ಸಾಧ್ಯವಿಲ್ಲ. ಇನ್ನು ಈಶ್ವರನು ಕರ್ತಾ ಆಗಬಹುದಲ್ಲ? ಎಂದರೆ, ಅದೂ ಸರಿಯಲ್ಲ. ಕಾರಣ ಆ ವಿಷಯದಲ್ಲಿ ಯಾವ ಪ್ರಮಾಣವೂ ಇಲ್ಲ. ಮತ್ತು ಈ ಎರಡೂ ಪಕ್ಷಗಳಲ್ಲಿಯೂ ಸೃಷ್ಟಿಯು ಉಪಪನ್ನವಾಗುವುದಿಲ್ಲ. ಕಾರಣ - ತತ್ಕಾಲದಲ್ಲಿಯೇ ಉತ್ಪತ್ತಿ-ವಿನಾಶ-ಗಳನ್ನು ಮಾಡುವ ಯಾವ ಕರ್ತೃವೂ ಕಂಡಿಲ್ಲವಾದ್ದರಿಂದ. ಆದ್ದರಿಂದ ಕರ್ತೃ ಇಲ್ಲದ ಕಾರಣ ಸ್ವಪ್ನಕಾಲೀನಸೃಷ್ಟಿಯು ಉಪಪನ್ನವಲ್ಲ ಎಂಬುದಾಗಿ ಆಶಂಕೆ ಬಂದರೆ, ಅದನ್ನು ಪರಿಹರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

### ॐ निर्मातारं चैके पुत्रादयश्च ॐ (३-२-२)

**ಸೂತ್ರಾರ್ಥ :- ಏಕೇ** = ಕೆಲವು ಶಾಖಿಗಳು, ಏನಂ = ಭಗವಂತನನ್ನು **ನಿರ್ಮಾತಾರಂ** = "ಯ ಏಷು ಸುಪ್ತೇಷು" (ಕಠ. 5-8) ಎಂಬುದಾಗಿ ಶ್ರುತಿಯು ಹೇಳುವಂತೆ ಸ್ವಾಪ್ನಪದಾರ್ಥನಿರ್ಮಾತೃ (ಕರ್ತೃ)ವನ್ನಾಗಿ ಆಮನಂತಿ = ತಿಳಿಯು-ತ್ತಾರೆ. ಅಪರೇ **ಚ** = ಮತ್ತೆ ಕೆಲವು ಶಾಖಿಗಳು, **ಪುತ್ರಾದಯಃ** = ಸ್ವಾಪ್ನಪುತ್ರಾದಿಗಳು ತಸ್ಮಾತ್ ವಿಷ್ಣೋರೇವ ಜಾಯಂತೇ ಇತಿ ವದಂತಿ = ಆ ಭಗವಂತನಿಂದಲೇ ಹುಟ್ಟು-ತ್ತಾರೆ ಎಂದು ಹೇಳುತ್ತಾರೆ. ತಸ್ಮಾತ್ ವಿಷ್ಣೋರೇವ ಸ್ವಾಪ್ನಸೃಷ್ಟಿಃ = ಆದ್ದರಿಂದ ವಿಷ್ಣುವಿನಿಂದಲೇ ಸ್ವಾಪ್ನಸೃಷ್ಟಿಯಾಗುತ್ತದೆ.

**ಸೂ.ರ.:- एवं च न च कर्तुरभावात्सृष्ट्ययोगः । य एष्विति एतस्माद्धेवेति (गौपवन.) श्रुतिभ्यामीश्वरस्यैव कर्तृत्वाङ्गीकारात् । तथा च विष्णोरेव स्वाप्नसृष्टिरिति तत्र युक्ता भक्तिरिति सिद्धम् ॥**

ಕರ್ತೃವಿಲ್ಲದ ಕಾರಣ ಸ್ವಪ್ನಸೃಷ್ಟಿಯು ಉಪಪನ್ನವಲ್ಲ ಎಂದು ಹೇಳುವುದು ಸರಿಯಲ್ಲ. ಕಾರಣ -

"ಯ ಏಷು ಸುಪ್ತೇಷು ಜಾಗರ್ತಿ ಕಾಮಂ ಕಾಮಂ ಪುರುಷೋ ನಿರ್ಮಿಮಾಣಃ" (ಕಠ.ಉ. 5-8)

"ಏತಸ್ಮಾದ್ಧ್ಯೇವ ಪುತ್ರೋ ಜಾಯತ ಏತಸ್ಮಾದ್ಭ್ರಾತೈತಸ್ಮಾದ್ಭಾರ್ಯಾ ಯದೇನಂ ಪುರುಷಮೇಷ ಸ್ವಪ್ನೇನಾಭಿಹಂತಿ" (ಗೌಪವನಶ್ರುತಿ)

ಎಂಬುದಾಗಿ ಎರಡು ಶ್ರುತಿಗಳು ಹೇಳುವಂತೆ ಸ್ವಾಪ್ನಪದಾರ್ಥಗಳಿಗೆ ಈಶ್ವರನೇ ಕರ್ತಾ ಎಂದು ಅಂಗೀಕರಿಸಲಾಗಿದೆ. ಆದ್ದರಿಂದ ವಿಷ್ಣುವಿನಿಂದಲೇ ಸ್ವಾಪ್ನಸೃಷ್ಟಿ-ಯಾಗುವುದರಿಂದ ಅವನಲ್ಲಿ ಭಕ್ತಿ ಮಾಡುವುದು ಯುಕ್ತ ಎಂದು ಸಿದ್ಧವಾಗುತ್ತದೆ.

## ಸೂತ್ರ - 3

**ಸೂ.ರ.:– ननु बाह्या एव स्वप्न उपलभ्यन्ते । ते च सर्वैः प्रागूर्ध्वं उपलभ्यन्त एवेति चेत् । बाह्यार्थान् शरीरे स्थित्वा पश्यतीत्यङ्गीकारे व्यवहितमेरुमन्दारादिदर्शनाभावप्रसङ्गात् । बहिर्निर्गत्येत्यभ्युपगमे कुरुषु सुप्तस्य पाञ्चालान् पश्यतः प्रबोधे शरीरप्रवेशोऽस्य पश्चादेवेति प्राप्तेः । किञ्च हेमन्ते सुप्तस्य वसन्तप्रतीतिस्तावदस्ति । न च वसन्तसत्ता तदाऽस्ति । येन शरीरे स्थित्वा बहिर्निर्गत्य वा पश्येत् । नापि बाह्यार्थप्रतीतिकारणमस्ति । इन्द्रियाणामुपरतत्वात् । मनसो बाह्यार्थेष्वस्वातन्त्र्यादिति प्राप्ते सूत्रमाह ॥**

ಬಾಹ್ಯಪದಾರ್ಥಗಳೇ ಸ್ವಪ್ನದಲ್ಲಿ ಉಪಲಬ್ಧವಾಗುತ್ತವೆ. ಹೀಗಾಗಿ ಆ ಬಾಹ್ಯ-ಪದಾರ್ಥಗಳು ಸ್ವಪ್ನಕ್ಕಿಂತ ಮೊದಲು ಹಾಗೂ ಅನಂತರ ಉಪಲಬ್ಧ ಆಗೇ ಆಗುತ್ತವೆ ಎಂದು ಶಂಕೆ ಬಂದರೆ ಅದು ಸರಿಯಲ್ಲ, ಶರೀರದಲ್ಲಿ ಇದ್ದು ಬಾಹ್ಯಪದಾರ್ಥಗಳನ್ನು ನೋಡುತ್ತಾನೆ ಎಂದು ಅಂಗೀಕರಿಸಿದರೆ, ವ್ಯವಹಿತವಾದ ಮೇರುಮಂದರಾದಿಗಳನ್ನು ನೋಡದೇ ಹೋಗಬೇಕಾದ ಪ್ರಸಂಗ ಬರಬೇಕಾದೀತು. ಶರೀರದಿಂದ ಹೊರಗೆ ಬಂದು ನೋಡುತ್ತಾನೆ ಎಂದು ಅಂಗೀಕರಿಸಿದರೆ, ಕುರುದೇಶದಲ್ಲಿ ಸುಪ್ತನಾದ ವ್ಯಕ್ತಿ ಪಾಂಚಾಲ ದೇಶಗಳನ್ನು ನೋಡುವುದಾದರೆ ಪ್ರಬೋಧದಲ್ಲಿ ಶರೀರಪ್ರವೇಶ ಅವನಿಗೆ ಅನಂತರದಲ್ಲಿಯೇ ಎಂದಾಗಬೇಕಾದೀತು.

ಮತ್ತು ಹೇಮಂತಕಾಲದಲ್ಲಿ ಮಲಗಿದ ವ್ಯಕ್ತಿಗೆ ವಸಂತಕಾಲದ ಪ್ರತೀತಿಯು ಬರುತ್ತದೆ. ಆದರೆ ವಸಂತಕಾಲದಲ್ಲಿ ಹೇಮಂತಕಾಲ ಇರುವುದಿಲ್ಲ, ಒಂದುವೇಳೆ ಇರುತ್ತಿದ್ದರೆ ಶರೀರದಲ್ಲಿಯೇ ಇದ್ದಾಗಲೀ ಹೊರಗೆ ಬಂದಾಗಲೀ ನೋಡಬಹುದಿತ್ತು.

ಅಲ್ಲದೇ ಬಾಹ್ಯಾರ್ಥ ತೋರಲು ಕಾರಣವೂ ಯಾವುದೂ ಇಲ್ಲ. ಎಲ್ಲ ಇಂದ್ರಿಯಗಳೂ ಉಪರತವಾಗಿರುವುದರಿಂದ. ಇನ್ನು ಮನಸ್ಸು ಜಾಗ್ರತವಾಗಿದ್ದರೂ ಅದಕ್ಕೆ ಬಾಹ್ಯಾರ್ಥಗಳನ್ನು ಗ್ರಹಿಸುವುದರಲ್ಲಿ ಸ್ವಾತಂತ್ರ್ಯ ಇಲ್ಲ.

ಈ ರೀತಿಯಾಗಿ ಆಶಂಕೆ ಬಂದರೆ, ಅದನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ मायामात्रं तु कार्त्स्न्येनानभिव्यक्तस्वरूपत्वात् ॐ (३-२-३)**

**ಸೂತ್ರಾರ್ಥ** :- (ತು ಶಬ್ದಕ್ಕೆ ಏವ ಎಂದು ಅವಧಾರಣ ಅರ್ಥ.) ಸಂಧ್ಯಂ = ಸ್ವಪ್ನವು **ಮಾಯಾಮಾತ್ರಂ ತು (ಏವ)** = ಮಾಯಾಶಬ್ದವಾಚ್ಯವಾದ, ನಿಮಿತ್ತ-ಉಪಾದಾನಕಾರಣಗಳಾದ ಇಚ್ಛಾ-ವಾಸನಾಗಳಿಂದಲೇ ನಿರ್ಮಿತವಾಗಿದೆ. ಹೊರತು ಬಾಹ್ಯಕಾರಣಕವಾಗಿಲ್ಲ. ಕುತಃ = ಯಾಕೆ? **ಕಾರ್ತ್ಸ್ನ್ಯೇನ ಅನಭಿವ್ಯಕ್ತಸ್ವರೂಪತ್ವಾತ್** = ಬಾಹ್ಯಪದಾರ್ಥಗಳಂತೆ ಸಮ್ಯಕ್ ಅನಭಿವ್ಯಕ್ತ (ಅಭಿವ್ಯಕ್ತವಾಗದ) ಸ್ವರೂಪ ಉಳ್ಳದ್ದಾದ್ದರಿಂದ.

**ಸೂ.ರ.:– एवं चोपादाननिमित्तसद्भावात् । मनोगतांश्च संस्कारानिति (ब्रह्मांडे.) स्मृतिवलेन वासनाया उपादानत्वेनेश्वरेच्छायाश्च निमित्तत्वेनाङ्गीकारात् । वासनामयानां मेर्वादीनां मनसैव दर्शनसम्भवात् । बाह्यकारणाभावात् प्राक् पिण्डादीनामूर्ध्वं कपालादीनां प्रतीतेरप्रसङ्गात् । अतः स्वप्नविषयस्य भगवदधीनत्वसिद्धेस्तत्र भक्तिर्युक्तेति सिद्धम् ॥**

ಸ್ವಾಪ್ನಪದಾರ್ಥಗಳಿಗೆ ಕಾರಣ ಇಲ್ಲ ಎನ್ನುವುದು ಸರಿಯಲ್ಲ. ಸ್ವಾಪ್ನಪದಾರ್ಥ-ಗಳಿಗೆ ಉಪಾದಾನಕಾರಣ-ನಿಮಿತ್ತಕಾರಣಗಳು ಇವೆ.

ಮನೋಗತಾಂಸ್ತು ಸಂಸ್ಕಾರಾನ್ ಸ್ವೇಚ್ಛಯಾ ಪರಮೇಶ್ವರಃ ।
ಪ್ರದರ್ಶಯತಿ ಜೀವಾಯ ಸ ಸ್ವಪ್ನ ಇತಿ ಗೀಯತೇ ॥

ಎಂಬ ಬ್ರಹ್ಮಾಂಡಪುರಾಣವಾಕ್ಯಬಲದಿಂದ ವಾಸನಾವೇ (ಮನಸ್ಸಿನಲ್ಲಿರುವ ಸಂಸ್ಕಾರಗಳೇ) ಉಪಾದಾನಕಾರಣ, ಈಶ್ವರೇಚ್ಛಾವೇ ನಿಮಿತ್ತಕಾರಣ ಎಂದು ಅಂಗೀಕರಿಸಲಾಗಿದೆ.

ಮೇರು ಮೊದಲಾದ ಸ್ವಾಪ್ನಪದಾರ್ಥಗಳು ಬಾಹ್ಯಕಾರಣಕವಾಗದೇ ವಾಸನಾ-ಮಯವಾದ್ದರಿಂದ ಮನಸ್ಸಿನಿಂದಲೇ ನೋಡಲು ಸಾಧ್ಯವಿದೆ. ಆದ್ದರಿಂದ ಸ್ವಾಪ್ನ-ಪದಾರ್ಥಗಳು ಭಗವದಧೀನ ಎಂದು ಸಿದ್ಧಿಸುವುದರಿಂದ ಅಂತಹ ಭಗವಂತನಲ್ಲಿ ಭಕ್ತಿ ಮಾಡುವುದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 4

**ಸೂ.ರ.:– ननु यदि स्वप्नविषया बाह्यार्थजन्यास्तर्हि सत्त्वं न प्राप्नोति । शुक्तिरजतवदित्याशङ्कां पराकुर्वत्सूत्रं पठति ।।**

ಸ್ವಾಪ್ನಪದಾರ್ಥಗಳು ಒಂದುವೇಳೆ ಬಾಹ್ಯಾರ್ಥಜನ್ಯವಲ್ಲ ಎಂದಾದರೆ ಶುಕ್ತಿರಜತಾದಿಗಳಂತೆ ಅವು ಸತ್ತ್ವವನ್ನು ಹೊಂದುವುದಿಲ್ಲ (ಸತ್ ಆಗುವುದಿಲ್ಲ) ಎಂದು ಶಂಕೆ ಬಂದರೆ, ಅದನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ सूचकश्च हि श्रुतेराचक्षते च तद्विदः ॐ (३-२-४)**

**ಸೂತ್ರಾರ್ಥ :-** **ಚ** = ಯಾವ ಕಾರಣ ಸ್ವಾಪ್ನಪದಾರ್ಥಃ = ಸ್ವಾಪ್ನಪದಾರ್ಥವು **ಸೂಚಕಃ** = ಶುಭಾಶುಭ ಜ್ಞಾಪಕವಾಗಿದೆಯೋ ಅತೋಽಪಿ = ಆ ಕಾರಣದಿಂದಲೂ ಸಹ ನಾಸತ್ಯಃ = ಅದು ಸುಳ್ಳಲ್ಲ. ತತ್ ಕುತಃ? = ಸ್ವಾಪ್ನಪದಾರ್ಥವು ಶುಭಾಶುಭ ಜ್ಞಾಪಕವಾಗಿದೆ ಎಂದು ಹೇಗೆ ಹೇಳುತ್ತೀರಿ? ಎಂದರೆ **ಶ್ರುತೇಃ** = "ಯದಾ ಕರ್ಮಸು ಕಾಮ್ಯೇಷು" (ಛಾಂ.ಉ. 5-2-9) ಎಂದು ಶ್ರುತಿ ಇರುವುದರಿಂದ **ಹಿ** = ಪ್ರತ್ಯಕ್ಷ-ದಿಂದಲೂ ಫಲ ಕಂಡಿದ್ದರಿಂದ **ಚ** = ಮತ್ತು **ತದ್ವಿದಃ** = ಸ್ವಪ್ನವನ್ನು ತಿಳಿದ ವ್ಯಾಸಾದಿ-ಗಳು **ಆಚಕ್ಷತೇ ಚ** = 'ಯದ್ವಾ' ಎಂಬ ಶ್ರುತಿಯಲ್ಲಿ ಸ್ವಾಪ್ನಾರ್ಥಗಳಿಗೆ ಅರ್ಥಕ್ರಿಯಾಕಾರಿತ್ವವನ್ನು ಹೇಳುತ್ತಾರೆ ಕೂಡ.

**ಸೂ.ರ.:– एवं च शुभाशुभकारणत्वेन सत्यस्यैव निश्चितत्वात् । यदा कर्मस्विति पुरुषमिति (ऐ.आ.३-२-४) च श्रुतिभ्यामन्वय-व्यतिरेकसध्रीचीनप्रत्यक्षेण च कारणत्वसिद्धेः । अपि चैवं व्यासादयो मन्यन्ते । यद्वाव ब्राह्मणो ब्रूयाद्देवतेति वचनबलादिति । अतः स्वप्र-विषयस्य भगवदधीनत्वसिद्धेर्माहात्म्यं तस्येति युक्ता तत्र भक्तिरिति सिद्धम् ।।**

ಸ್ವಾಪ್ನಪದಾರ್ಥಗಳು ಶುಭಾಶುಭಕಾರಣವಾದ್ದರಿಂದಲೂ (ಸೂಚಕವಾದ್ದ-ರಿಂದಲೂ) ಅವುಗಳಿಗೆ ಸತ್ಯತ್ವವೇ ನಿಶ್ಚಿತವಾಗುತ್ತದೆ.

ಸ್ವಾಪ್ನಪದಾರ್ಥಗಳು ಶುಭಾಶುಭಕಾರಣವಾಗಿವೆ ಎಂದು ಹೇಗೆ ಹೇಳುತ್ತೀರಿ? ಅದಕ್ಕೆ ಯಾವ ಪ್ರಮಾಣದ ಆಧಾರ ಇದೆ? ಎಂದರೆ,

ಯದಾ ಕರ್ಮಸು ಕಾಮ್ಯೇಷು ಸ್ತ್ರಿಯಂ ಸ್ವಪ್ನೇಽಭಿಪಶ್ಯತಿ ।
ಸಮೃದ್ಧಿಂ ತತ್ರ ಜಾನೀಯಾತ್ ತಸ್ಮಿನ್ ಸ್ವಪ್ನನಿದರ್ಶನೇ ॥ (ಛಾಂ. 5-2-9)

"ಪುರುಷಂ ಕೃಷ್ಣಂ ಕೃಷ್ಣದಂತಂ ಪಶ್ಯತಿ ಸ ಏನಂ ಹಂತಿ" (ಐ.ಆ. 3-2-4)

ಎಂಬ ಎರಡು ಶ್ರುತಿಗಳಿಂದ, ಮತ್ತು ಅನ್ವಯವ್ಯತಿರೇಕಸಧ್ರೀಚೀನ ಪ್ರತ್ಯಕ್ಷ-ದಿಂದಲೂ ಸಹ ಸ್ವಾಪ್ನಪದಾರ್ಥಗಳಿಗೆ ಶುಭಾಶುಭಕಾರಣತ್ವವು ಸಿದ್ಧವಾಗುತ್ತದೆ.

ಯದ್ವಾಽಪಿ ಬ್ರಾಹ್ಮಣೋ ಬ್ರೂಯಾದ್ದೇವತಾ ವೃಷಭೋಽಪಿ ವಾ ।
ಸ್ವಪ್ನಸ್ಥಮಥವಾ ರಾಜಾ ತತ್ತಥೈವ ಭವಿಷ್ಯತಿ ॥

ಎಂಬ ವಚನಬಲದಿಂದ ಸ್ವಾಪ್ನಪದಾರ್ಥಗಳು ಶುಭಾಶುಭಸೂಚಕವಾಗಿವೆ ಎಂದು ವ್ಯಾಸಾದಿಗಳೂ ಅಂಗೀಕರಿಸಿರುವುದಾಗಿ ತಿಳಿಯುತ್ತದೆ.

ಆದ್ದರಿಂದ ಸ್ವಪ್ನವಿಷಯಗಳು ಭಗವದಧೀನವಾಗಿವೆ ಎಂದು ಸಿದ್ಧಿಸುವುದರಿಂದ ಅದು ಭಗವಂತನ ಮಾಹಾತ್ಮ್ಯವಾಗುವುದರಿಂದ ಅಂತಹ ಭಗವಂತನಲ್ಲಿ ಭಕ್ತಿ ಮಾಡುವುದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಸಂಧ್ಯಾಧಿಕರಣವು ಮುಗಿಯಿತು.

ಅಧಿಕರಣ – 2

# ಪರಾಭಿಧ್ಯಾನಾಧಿಕರಣ

## ಸಂಗತಿ

**ಸೂ.ರ.:– अत्र भगवतः स्वप्नतिरोधायकत्वमहिमा वर्ण्यते ।**

ಭಗವಂತನ ಸ್ವಪ್ನತಿರೋಧಾಯಕತ್ವ (ಸ್ವಪ್ನತಿರೋಧಾನ ಮಾಡುವವನು ಎಂಬ) ಮಹಿಮೆಯನ್ನು ವರ್ಣಿಸುತ್ತಾರೆ ಎರಡನೇ ಈ ಪರಾಭಿಧ್ಯಾನಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु न स्वप्नतिरोभाव ईश्वराधीनः । तस्य बाह्यज्ञान-जन्यत्वेनाज्ञाननाशे सन्तत्यनुसम्भवात् । तथा च ज्ञानाज्ञानविनाश-द्वारा स्वप्नतिरोभावसम्भवान्न तस्येश्वराधीनत्वमिति न तस्य महा-महिमत्वमिति प्राप्ते सूत्रमाह ॥**

ಸ್ವಪ್ನತಿರೋಭಾವವು ಈಶ್ವರಾಧೀನವಲ್ಲ. ಕಾರಣ – ಬಾಹ್ಯವಸ್ತುಗಳ ಅಜ್ಞಾನ-ದಿಂದಾಗಿ ಸ್ವಪ್ನವು ತೋರುತ್ತದೆ. ಹಾಗಾಗಿ ಆ ಬಾಹ್ಯವಸ್ತುಗಳ ವಿಜ್ಞಾನದಿಂದಲೇ ತಿರೋಭಾವವೂ ಉಪಪನ್ನವಾಗುತ್ತದೆ. ಸ್ವಸಮಾನವಿಷಯಕ ಅಜ್ಞಾನವನ್ನು ನಾಶ ಮಾಡುತ್ತದೆ ಎನ್ನುವುದು ಜ್ಞಾನದ ಶಕ್ತಿಯಾಗಿದೆ. ಆದ್ದರಿಂದ ಆಲೋಕದಿಂದ ತಮಸ್ಸು ನಾಶವಾಗುವಂತೆ ಜ್ಞಾನದಿಂದ ಅಜ್ಞಾನವು ನಾಶವಾಗುವುದರಿಂದ (ಬಾಹ್ಯಜ್ಞಾನದಿಂದ ಬಾಹ್ಯಅಜ್ಞಾನ ನಿವೃತ್ತಿಯಾಗುವುದರಿಂದ) ಆ ಅಜ್ಞಾನನಿಮಿತ್ತಕವಾದ ಸ್ವಪ್ನ-ಪ್ರತೀತಿಯು ಉಪರಮವಾಗುವಾಗ ಈಶ್ವರನಿಂದ ಯಾವ ಕೃತ್ಯವೂ ಇಲ್ಲ. ಸ್ವಪ್ನತಿರೋಧಾನವು ಈಶ್ವರಾಧೀನವಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ पराभिध्यानात्तु तिरोहितं ततो ह्यस्य बन्धविपर्ययौ ॐ**

**(३-२-५)**

ಸೂತ್ರಾರ್ಥ :- ಹಿ = ಯಾವ ಕಾರಣ ತತಃ = ಪರಮಾತ್ಮನ ದೆಸೆಯಿಂದಲೇ

**ಅಸ್ಯ** = ಜೀವನಿಗೆ **ಬಂಧವಿಪರ್ಯಯೌ** = ಬಂಧ-ಮೋಕ್ಷಗಳು ಆಗುತ್ತವೆಯೋ **ತಸ್ಮಾತ್** = ಆ ಕಾರಣದಿಂದ **ಪರಾಭಿಧ್ಯಾನಾತ್ತು** = ಪರಮಾತ್ಮನ ಇಚ್ಛೆಯಿಂದಲೇ ಸಂಧ್ಯಂ = ಸ್ವಪ್ನವು **ತಿರೋಹಿತಂ** = ತಿರೋಹಿತವಾಗುತ್ತದೆ (ಲೀನವಾಗುತ್ತದೆ) ನ **ಕಾರಣಾಂತರಾತ್** = ಹೊರತು ಜ್ಞಾನಾದಿ ಕಾರಣಾಂತರದಿಂದ ಲೀನವಾಗುವುದಿಲ್ಲ.

**ಸೂ.ರ.:- एवं च ज्ञानाज्ञानयोरचेतनत्वेन स्वातन्त्र्याभावात् । तयोरपि बन्धमोक्षयोरीश्वराधीनत्ववत् । स्वप्ननिरोधस्यापि तदधीनत्वेन तस्य महामहिमत्वाद्युक्ता तत्र भक्तिरिति सिद्धम् ॥**

ಜ್ಞಾನಾಜ್ಞಾನಗಳು ಅಚೇತನವಾದ್ದರಿಂದ ಅವುಗಳಿಗೆ ಸ್ವಾತಂತ್ರ್ಯವಿಲ್ಲದ ಕಾರಣ ಸ್ವಪ್ನತಿರೋಧಾನವು ಜ್ಞಾನಾಧೀನವಲ್ಲ. ಕಿಂತು ಬಂಧ-ಮೋಕ್ಷಗಳು ಈಶ್ವರಾಧೀನವಾದಂತೆ ಸ್ವಪ್ನನಿರೋಧವೂ ಈಶ್ವರಾಧೀನವಾಗಿದೆ.

ಹಾಗಾಗಿ ಭಗವಂತನು ಸ್ವಪ್ನತಿರೋಧಾಯಕತ್ವರೂಪ ಮಹಾಮಹಿಮೆ ಉಳ್ಳವನಾದ್ದರಿಂದ ಅವನಲ್ಲಿ ಭಕ್ತಿ ಮಾಡುವುದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

**ಪರಾಭಿಧ್ಯಾನಾಧಿಕರಣವು ಮುಗಿಯಿತು.**

ಅಧಿಕರಣ – 3

# ದೇಹಯೋಗಾಧಿಕರಣ

## ಸಂಗತಿ

**ಸೂ.ರ.:– अत्र विष्णोर्जगत्प्रवर्तकत्वमहिमा वर्ण्यते ।**

ವಿಷ್ಣುವಿನ ಜಾಗ್ರತ್‌ಪ್ರವರ್ತಕತ್ವಮಹಿಮೆಯನ್ನು ವರ್ಣಿಸುತ್ತಾರೆ ಮೂರನೇ ಈ ದೇಹಯೋಗಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु न जागरणं भगवदधीनम् । तस्य कालाधीनत्वात् । न चाचेतनत्वात्तदधीनत्वानुपपत्तिः । कालाधीनत्वस्यानुभवसिद्धत्वेनाचेतनत्वानुमानस्य बाधितविषयत्वात् । न चानुभवो भ्रमः । बाधकाभावात् । अतो जाग्रदवस्थाया भगवदधीनत्वाभावान्नास्य महामहिमत्वमिति प्राप्ते सूत्रितम् ॥**

ಜಾಗರಣವು ಕಾಲಾಧೀನವಾದ್ದರಿಂದ ಭಗವದಧೀನವಾಗಿಲ್ಲ.

ಜಾಗರಣಂ, ನ ಕಾಲಾಧೀನಂ ಭವತಿ, ಕಾಲಸ್ಯ ಅಚೇತನತ್ವಾತ್ ।

ಕಾಲವು ಅಚೇತನವಾದ್ದರಿಂದ ಜಾಗರಣವು ಕಾಲಾಧೀನ ಹೇಗೆ ಆಗುತ್ತದೆ? ಎಂದರೆ, ಕಾಲಾಧೀನತ್ವವು ಅನುಭವಸಿದ್ಧವಾದ್ದರಿಂದ ಅಚೇತನತ್ವಾನುಮಾನಕ್ಕೆ ಬಾಧ (ಅನುಭವಪ್ರಮಾಣವಿರೋಧ) ಬರುತ್ತದೆ. ಜಾಗರಣದಲ್ಲಿ ಕಾಲಾಧೀನತ್ವಾನುಭವವು ಭ್ರಮವಾಗಿದೆಯಲ್ಲ? ಎಂದರೆ, ಅದು ಸರಿಯಲ್ಲ. ಅನುಭವವು ಭ್ರಮ ಎನ್ನಬೇಕಾದರೆ ಬಾಧಕ ಇರಬೇಕಿತ್ತು. ಆದರೆ ಪ್ರಕೃತ ಯಾವ ಬಾಧಕವೂ ಇಲ್ಲವಾದ್ದರಿಂದ ಭ್ರಮ ಎನ್ನಲು ಬರುವುದಿಲ್ಲ. ಆದ್ದರಿಂದ ಜಾಗ್ರದವಸ್ಥೆಯು ಭಗವದಧೀನವಾಗಿಲ್ಲವಾದ್ದರಿಂದ ಜಾಗ್ರತ್‌ಪ್ರವರ್ತಕತ್ವ ಎನ್ನುವುದು ಭಗವಂತನ ಮಹಿಮೆ ಅಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

## ॐ देहयोगाद्वासोऽपि ॐ (३-२-६)

**ಸೂತ್ರಾರ್ಥ :- ದೇಹಯೋಗಾದ್ವಾಸೋऽಪಿ** = ದೇಹಾಭಿಮಾನೇನ ಅವಸ್ಥಿತಿರೂಪ ಜಾಗ್ರದವಸ್ಥಾವೂ ಸಹ, ಪರಾಭಿಧ್ಯಾನಾದೇವ ಭವತಿ ನಾನ್ಯತಃ = ಪರಮಾತ್ಮನ ಇಚ್ಛೆಯಿಂದಲೇ ಆಗುತ್ತದೆ, ಹೊರತು ಕಾಲಾದಿಗಳಿಂದ ಆಗುವುದಿಲ್ಲ.

### ಸಿದ್ಧಾಂತ

**ಸೂ.ರ.:– एवं च स एव जागरित इति (कौण्ठरव्य.) श्रुतेः । अत एवाचेतनत्वानुमानमपि कालाधीनत्वनिवर्तकम् । श्रुतिविरोधेन प्रत्यक्षस्याप्रामाण्यात् । कालस्य निमित्तमात्रविषयकं प्रत्यक्षं बाधाभावात्प्रमाणमेव । अतो हरेर्जाग्रत्प्रवर्तकत्वेन महामहिमत्वाद्युक्ता भक्तिरिति सिद्धम् ॥**

"ಸ ಏವ ಜಾಗರಿತೇ ಸ್ಥಾಪಯತಿ ಸ ಸ್ವಪ್ನೇ ಸ ಪ್ರಭುಸ್ತುರಾಷಾಟ್ ಸ ಏಕೋ ಬಹುಧಾ ಭವತಿ" ಎಂಬುದಾಗಿ ಕೌಂಠರವ್ಯ ಶ್ರುತಿ ಇರುವುದರಿಂದ ಜಾಗ್ರದವಸ್ಥೆಯು ಭಗವದಧೀನವೇ ಆಗಿದೆ. ಆದ್ದರಿಂದಲೇ ಅಚೇತನತ್ವಾನುಮಾನವೂ ಕಾಲಾಧೀನತ್ವ ನಿವರ್ತಕವಾಗುತ್ತದೆ.

ಹಾಗಾದರೆ ಜಾಗ್ರದವಸ್ಥೆಗೆ ಕಾಲಾಧೀನತ್ವ ಹೇಳುವ ಅನುಭವಪ್ರಮಾಣ ಇದೆಯಲ್ಲ? ಎಂದರೆ, ಈಶಾಧೀನತ್ವ ಪ್ರತಿಪಾದಕ ಶ್ರುತಿವಿರೋಧ ಬರುತ್ತಿರುವುದರಿಂದ ಪ್ರತ್ಯಕ್ಷವು (ಅನುಭವವು) ಅಪ್ರಮಾಣವಾಗುತ್ತದೆ.

ಇನ್ನು ಕಾಲಕ್ಕೆ ನಿಮಿತ್ತಮಾತ್ರತ್ವವನ್ನು ಹೇಳುವ ಪ್ರತ್ಯಕ್ಷವು ಬಾಧ ಇಲ್ಲದ ಕಾರಣ ಪ್ರಮಾಣವೇ ಆಗುತ್ತದೆ.

ಆದ್ದರಿಂದ ವಿಷ್ಣುವು ಜಾಗ್ರತ್‌ಪ್ರವರ್ತಕನಾದ್ದರಿಂದ, ಜಾಗ್ರತ್‌ಪ್ರವರ್ತಕತ್ವ ರೂಪ ಮಹಿಮಾ ಉಳ್ಳವನಾದ್ದರಿಂದ, ಅವನಲ್ಲಿ ಭಕ್ತಿ ಮಾಡುವುದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ದೇಹಯೋಗಾಧಿಕರಣವು ಮುಗಿಯಿತು.

ಅಧಿಕರಣ - 4

# ತದಭಾವಾಧಿಕರಣ

## ಸಂಗತಿ

**ಸೂ.ರ.:– अत्र सुप्तप्राप्यत्वमहिमा वर्ण्यते ।**

ಭಗವಂತನ ಸುಪ್ತಪ್ರಾಪ್ಯತ್ವಮಹಿಮೆಯನ್ನು ವರ್ಣಿಸುತ್ತಾರೆ ನಾಲ್ಕನೇ ಈ ತದಭಾವಾಧಿಕರಣದಲ್ಲಿ, ಭಗವಂತನಲ್ಲಿ ಸುಪ್ತಿಯೋ? ನಾಡೀಗಳಲ್ಲಿ ಸುಪ್ತಿಯೋ? ಎಂದು ಸಂದೇಹ.

## ಪೂರ್ವಪಕ್ಷ

**ಸೂ.ರ.:– ननु न केवले परमात्मन्येव स्वापो न नाड्यवस्थान-विशिष्टे नाडीसम्बन्धे । दुःखप्रसङ्गात् । जाग्रदाद्यवस्थासु चक्षुरादिस्थित भगवद्गतस्यापि जीवस्य देहसम्बन्धेन दुःखदर्शनात् । न चेष्टापत्तिः । सुप्तिकाले सुखैकानुभवस्य उत्तरकालीनानुस्मृतिसिद्धत्वादिति प्राप्ते सूत्रमाह ॥**

ಕೇವಲ ಪರಮಾತ್ಮನಲ್ಲಿಯೇ ಸ್ವಾಪ, ಹೊರತು ನಾಡಿಗಳಲ್ಲಿ (ನಾಡ್ಯವಸ್ಥಾನ-ವಿಶಿಷ್ಟನಾದ ಪರಮಾತ್ಮನಲ್ಲಿ) ಅಲ್ಲ, ಕಾರಣ ಒಂದುವೇಳೆ ನಾಡಿಗಳಲ್ಲಿ ಸ್ವಾಪ ಎಂದು ಹೇಳುವುದಾದರೆ ಸ್ವಾಪದಲ್ಲಿ ಜೀವನಿಗೆ ನಾಡೀಸಂಬಂಧವನ್ನು ಹೇಳಿದಂತಾಗುತ್ತದೆ. ಆದರೆ ಸ್ವಾಪದಲ್ಲಿ ನಾಡೀಸಂಬಂಧವಾಗುವುದಾದರೆ ಜೀವನಿಗೆ ದುಃಖ ಬರಬೇಕಾದ ಅತಿಪ್ರಸಂಗ ಬರುತ್ತದೆ.

ನಾಡೀಸಂಬಂಧವಾದರೆ ದುಃಖ ಏಕೆ? ಎಂದರೆ, ಜಾಗ್ರದಾದ್ಯವಸ್ಥೆಗಳಲ್ಲಿ ಚಕ್ಷುರಾದಿಸ್ಥಿತ ಭಗವಂತನಲ್ಲಿ ಇರುವ ಜೀವನಿಗೂ ಸಹ ದೇಹಸಂಬಂಧದಿಂದ ದುಃಖವಾಗುವುದು ಕಂಡಿದೆಯಾದ್ದರಿಂದ, ಪ್ರಕೃತ ಸ್ವಾಪದಲ್ಲಿ ನಾಡೀಸಂಬಂಧ-ವಾಗುವುದಾದರೆ ದುಃಖ ಬರಬೇಕಾಗುತ್ತದೆ.

ದುಃಖ ಬರಲಿ ಎಂದು ಹೇಳುವುದು (ಇಷ್ಟಾಪತ್ತಿ ಹೇಳುವುದು) ಸರಿಯಲ್ಲ,

ಸುಪ್ತಿಕಾಲದಲ್ಲಿ ಸುಖವು ಮಾತ್ರ ಅನುಭೂತವಾಗುತ್ತದೆ ಎನ್ನುವುದು ಉತ್ತರಕಾಲೀನ ಅನುಸ್ಮೃತಿ ಸಿದ್ಧವಾಗಿದೆ. ಆದ್ದರಿಂದ ನಾಡೀಸಂಬಂಧವಾಗುವುದಾದರೆ ದುಃಖ ಬರುವ ಪ್ರಸಂಗವಿರುವುದರಿಂದ ನಾಡಿಗಳಲ್ಲಿ ಸ್ವಾಪ ಅಲ್ಲ, ಕಿಂತು ಕೇವಲ ಪರಮಾತ್ಮನಲ್ಲಿ ಸ್ವಾಪ ಜೀವನಿಗೆ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ तदभावो नाडीषु तच्छ्रुतेरात्मनि ह ॐ (३-२-७)**

**ಸೂತ್ರಾರ್ಥ** :- ಅಸ್ಯ = ಜೀವನಿಗೆ **ನಾಡೀಷು ಆತ್ಮನಿ** = ನಾಡೀಸ್ಥಿತನಾದ ಪರಮಾತ್ಮನಲ್ಲಿಯೇ **ತದಭಾವಃ** = ಜಾಗ್ರತ್-ಸ್ವಪ್ನಗಳ ಅಭಾವವು, ಸುಷುಪ್ತಿಯು ಉಂಟಾಗುತ್ತದೆ. ತಸ್ಯ ತದಾ ತತ್ಪ್ರವೇಶೋ ಭವತಿ = ಜೀವನಿಗೆ ಸುಷುಪ್ತಿಯಲ್ಲಿ ನಾಡೀಸ್ಥಭಗವಂತನಲ್ಲಿ ಪ್ರವೇಶವಾಗುತ್ತದೆ. ಕುತಃ = ಏಕೆ? **ತಚ್ಛ್ರುತೇಃ** = "ಆಸು ತದಾ ನಾಡೀಷು" (ಛಾಂ. 8-6-3) ಎಂದು ಶ್ರುತಿಯಿರುವುದರಿಂದ, ಹಾಗೆ ಶ್ರುತವಾಗುತ್ತಿರುವುದರಿಂದ ಹ = ಹೇಳಿದ ಅರ್ಥವು ಯುಕ್ತವಾಗಿದೆ.

## ಸಿದ್ಧಾಂತ

**ಸೂ.ರ.:– एवं च नाडीस्थित एव परमात्मनि सुप्तिः । अन्यथा आस्विति (छां.८-६-३) सता सौम्येति (छां. ६-८-१) च श्रुत्योरन्यतराप्रामाण्यप्रसङ्गात् । न च दुःखप्राप्तिः । परमात्मन एव नाडीसम्बन्धाङ्गीकारेण जीवस्य तदनङ्गीकारात् । अतो भगवतो नाडीस्थिस्य सुप्तप्राप्यत्वमहामाहात्म्यवत्त्वायुक्ता तत्र भक्तिरिति सिद्धम् ।**

ನಾಡೀಸ್ಥಿತನಾದ ಪರಮಾತ್ಮನಲ್ಲಿಯೇ ಜೀವನಿಗೆ ಸುಷುಪ್ತಿ. ಒಂದುವೇಳೆ ಹಾಗೆ ಹೇಳದಿದ್ದರೆ -

"ಆಸು ತದಾ ನಾಡೀಷು ಸುಪ್ತೋ ಭವತಿ" (ಛಾಂ.ಉ. 8-6-3)

"ಸತಾ ಸೌಮ್ಯ ತದಾ ಸಂಪನ್ನೋ ಭವತಿ" (ಛಾಂ.ಉ. 6-8-1)

ಎಂಬ ಶ್ರುತಿಗಳಲ್ಲಿ ಒಂದು ಶ್ರುತಿಯು ಅಪ್ರಮಾಣವಾಗಬೇಕಾಗುತ್ತದೆ.

ಹಾಗಾದರೆ (ನಾಡೀಸ್ಥಿತ ಭಗವಂತನಲ್ಲಿ ಸುಪ್ತಿಯನ್ನು ಹೇಳುವುದಾದರೆ) ನಾಡೀಸಂಬಂಧ ಹೇಳುವುದಾದರೆ ಸುಪ್ತಿಯಲ್ಲಿ ದುಃಖ ಬರಬೇಕಾದ ಅತಿಪ್ರಸಂಗ ಬರುವುದಲ್ಲ? ಎಂದರೆ, ಅದು ಸರಿಯಲ್ಲ. ಪರಮಾತ್ಮನಿಗೇ ನಾಡೀಸಂಬಂಧವನ್ನು ಅಂಗೀಕರಿಸಿದ್ದರಿಂದ, ಜೀವನಿಗೆ ನಾಡೀಸಂಬಂಧವನ್ನು ಅಂಗೀಕರಿಸಿಲ್ಲ. ಆದ್ದರಿಂದ ಸುಪ್ತಿಯಲ್ಲಿ ದುಃಖದ ಪ್ರಸಕ್ತಿ ಇಲ್ಲ.

ಆದ್ದರಿಂದ ನಾಡೀಸ್ಥನಾದ ಭಗವಂತನು ಸುಪ್ತಪ್ರಾಪ್ಯತ್ವರೂಪ ಮಹಾಮಹಿಮೆ ಉಳ್ಳವನಾದ್ದರಿಂದ ಅವನಲ್ಲಿ ಭಕ್ತಿ ಮಾಡುವುದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

**ತದಭಾವಾಧಿಕರಣವು ಮುಗಿಯಿತು.**

ಅಧಿಕರಣ – 5

# ಪ್ರಬೋಧಾಧಿಕರಣ

## ಸಂಗತಿ

**ಸೂ.ರ.:– अत्र हरेः सुप्तप्रबोधकत्वमाहात्म्यं वर्ण्यते ।**

ಭಗವಂತನಿಗೆ ಸುಪ್ತಪ್ರಬೋಧಕತ್ವಮಾಹಾತ್ಮ್ಯವನ್ನು ವರ್ಣಿಸುತ್ತಾರೆ ಐದನೇ ಈ ಪ್ರಬೋಧಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु न सर्वोऽपि सुप्तप्रबोध ईश्वराधीनः । कचिद्भेरीताडनादीनां कारणत्वदर्शनात् । अतः सर्वप्रबोधकत्वाभावान्न महैश्वर्यमिति प्राप्ते सूत्रमाह ॥**

ಎಲ್ಲರ ಸುಪ್ತಿಪ್ರಬೋಧವೂ ಈಶ್ವರಾಧೀನವಲ್ಲ. ಕಾರಣ – ಕೆಲವೊಮ್ಮೆ ಭೇರೀತಾಡನಾದಿಗಳಿಗೂ ಕಾರಣತ್ವ ಕಂಡಿದ್ದರಿಂದ. ಆದ್ದರಿಂದ ಭಗವಂತನಿಗೆ ಸುಪ್ತಪ್ರಬೋಧಕತ್ವ ಇಲ್ಲವಾದ್ದರಿಂದ ಮಹೈಶ್ವರ್ಯ ಇಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ अतः प्रबोधोऽस्मात् ॐ (३-२-८)**

**ಸೂತ್ರಾರ್ಥ** :- ಅಸ್ಯ = ಜೀವನಿಗೆ **ಪ್ರಬೋಧಃ** = ಸುಪ್ತಿಯಿಂದ ಉತ್ಥಾನವು **ಅಸ್ಮಾತ್** = ಪರಮಾತ್ಮನಿಂದಲೇ ಆಗುತ್ತದೆ. ನ ಅನ್ಯತಃ = ಹೊರತು ಭೇರೀತಾಡನಾದಿಗಳಿಂದ ಆಗುವುದಿಲ್ಲ. ಕುತಃ = ಏಕೆ? **ಅತಃ** = 'ಏಷ ಏವ ' ಎಂಬುದಾಗಿ ಕೌಂಡಿನ್ಯಶ್ರುತಿಯಲ್ಲಿ ಶ್ರುತವಾಗುತ್ತಿರುವುದರಿಂದ.

## ಸಿದ್ಧಾಂತ

**ಸೂ.ರ.:– एवं च भगवत्येव जीवानां सुप्तत्वेन तदाज्ञया विनाऽवबोधायोगात् । भेरीताडनादीनां स्वतन्त्रकारणताग्राहिप्रतीतेरेप एवेति**

श्रुतिविरुद्धत्वेनाप्रामाण्यात् । अतस्तस्यैव सर्वप्रबोधहेतुत्वान्महामहिम्नि युक्ता निरतिशया भक्तिरिति सिद्धम् ।।

ಜೀವರು ಭಗವಂತನಲ್ಲಿಯೇ ಸುಪ್ತರಾದ್ದರಿಂದ ಆವನ ಆಜ್ಞೆ ಇಲ್ಲದೇ ಜೀವರಿಗೆ ಸುಪ್ತಿಯಿಂದ ಉತ್ಥಾನವು ಕೂಡುವುದಿಲ್ಲ.

ಇನ್ನು ಭೇರೀತಾಡನಾದಿಗಳಿಗೆ ಸ್ವತಂತ್ರಕಾರಣತ್ವಗ್ರಾಹಿಯಾದ ಪ್ರತೀತಿಯು "ಏಷ ಏವ ಸುಪ್ತಂ ಪ್ರಬೋಧಯತ್ಯೇತಸ್ಮಾಜ್ಜೀವ ಉತ್ತಿಷ್ಠತ್ಯೇಷ ಪ್ರಮಾತ್ಯೈಷ ಪರಮಃ" (ಕೌಂಡಿನ್ಯಶ್ರುತಿ) ಎಂಬ ಶ್ರುತಿಗೆ ವಿರುದ್ಧವಾದ್ದರಿಂದ ಅಪ್ರಮಾಣವಾಗಿದೆ. ಆದ್ದರಿಂದ ಭಗವಂತನೇ ಎಲ್ಲರ ಸುಪ್ತಿಪ್ರಬೋಧಕನಾದ್ದರಿಂದ ಮಹಾಮಹಿಮನಾದ ಅವನಲ್ಲಿ ನಿರತಿಶಯವಾದ ಭಕ್ತಿ ಮಾಡುವುದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಪ್ರಬೋಧಾಧಿಕರಣವು ಮುಗಿಯಿತು.

ಅಧಿಕರಣ - 6

# · ಕರ್ಮಾನುಸ್ಮೃತ್ಯಧಿಕರಣ

## ಸಂಗತಿ

**ಸೂ.ರ.:– अत्र सर्वपुरुषीयसार्वकालिकसर्वावस्थानां भगवदधीनत्व-महिमा वर्ण्यते ।**

ಎಲ್ಲ ಪುರುಷರ ಸಾರ್ವಕಾಲಿಕವಾದ ಎಲ್ಲ ಅವಸ್ಥೆಗಳೂ ಭಗವದಧೀನವಾಗಿವೆ ಎಂಬ ಭಗವಂತನ ಮಹಿಮೆಯನ್ನು ವರ್ಣಿಸುತ್ತಾರೆ ಆರನೇ ಈ ಕರ್ಮಾನುಸ್ಮೃತ್ಯಧಿ-ಕರಣದಲ್ಲಿ.

ಎಲ್ಲ ಪುರುಷರ ಸಾರ್ವಕಾಲೀನವಾದ ಎಲ್ಲ ಅವಸ್ಥೆಗಳೂ ಭಗವಂತನ ಅಧೀನ-ವಾಗಿವೆಯೋ? ಅಥವಾ ಕೆಲವು ಪುರುಷರ ಕಿಂಚಿತ್‌ಕಾಲೀನವಾದ ಕೆಲವು ಅವಸ್ಥೆಗಳು ಮಾತ್ರ ಭಗವಂತನ ಅಧೀನವಾಗಿವೆಯೋ? ಎಂದು ಸಂದೇಹ.

## ಪೂರ್ವಪಕ್ಷ

**ಸೂ.ರ.:– ननु नेश्वरः सर्वेषां सर्वकालीनसर्वावस्थाप्रेरकः । अधिपतित्वात् । राजवत् । यत्किञ्चिन्नियामकपरत्वेनापि योजयितुं शक्यत्वेनैष ह्येवेति (कौ. ३-८) श्रुतेरविरोधात् । न च विस्पष्ट-समाख्याश्रुत्यभावे युक्तिविरुद्धं सर्वनियामकत्वं श्रुत्यर्थतया प्रतिपत्तुं शक्यते । अतः सर्वावस्थाप्रेरकत्वाभावेन न सर्वैश्वर्यं हरेरिति प्राप्ते सूत्रं पठति ॥**

ಈಶ್ವರನು ಎಲ್ಲ ಪುರುಷರ ಸಾರ್ವಕಾಲೀನವಾದ ಎಲ್ಲ ಅವಸ್ಥೆಗಳಿಗೂ ಪ್ರೇರಕನಾಗಿಲ್ಲ, ಕಾರಣ - ಅಧಿಪತಿಯಾದ್ದರಿಂದ. ಅಧಿಪತಿಯಾದ ರಾಜನು ಕೆಲವು ಖಂಡಗಳಿಗೆ ಮಾತ್ರ ಪ್ರೇರಕನಾಗಿದ್ದು ಕಂಡಿರುವಂತೆ, ಭಗವಂತನೂ ಸಹ ಕೆಲವು ಪುರುಷರ ಕೆಲವು ಅವಸ್ಥೆಗಳಿಗೆ ಮಾತ್ರ ನಿಯಾಮಕನಾಗಿದ್ದಾನೆ.

ಹೀಗೆ ಯತ್ಕಿಂಚಿನ್ನಿಯಾಮಕತ್ವಪರತ್ವವನ್ನು ಅಂಗೀಕರಿಸಿದರೂ ಯೋಜಿಸಲು ಶಕ್ಯವಿರುವುದರಿಂದ "ಏಷ ಹ್ಯೇವ ಸಾಧು ಕರ್ಮ ಕಾರಯತಿ" (ಕೌ.ಉ. 3-8) ಎಂಬ ಶ್ರುತಿಯ ವಿರೋಧ ಬರುವುದಿಲ್ಲ. ಆದ್ದರಿಂದ ವಿಸ್ಪಷ್ಟ ಸಮಾಖ್ಯಾ ಶ್ರುತಿಯಿಲ್ಲದಿದ್ದರೆ ಯುಕ್ತಿವಿರುದ್ಧವಾದ ಸರ್ವನಿಯಾಮಕತ್ವವನ್ನು ಶ್ರುತ್ಯರ್ಥವನ್ನಾಗಿ ತಿಳಿಯಲು ಶಕ್ಯವಿಲ್ಲ.

ಆದ್ದರಿಂದ ಭಗವಂತನಿಗೆ ಸರ್ವಾವಸ್ಥಾಪ್ರೇರಕತ್ವ ಇಲ್ಲವಾದ್ದರಿಂದ ಹರಿಗೆ ಸರ್ವೈಶ್ವರ್ಯವಿಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

## ॐ स एव च कर्मानुस्मृतिशब्दविधिभ्यः ॐ (३-२-९)

**ಸೂತ್ರಾರ್ಥ :-** ಸ ಏವ = ಈಶ್ವರನೇ, **ಚ (ಅಪಿ)** = ಸರ್ವೇಷಾಮಪಿ ಸರ್ವದಾ ಸರ್ವಾವಸ್ಥಾಪ್ರೇರಕಃ = ಎಲ್ಲರಿಗೂ ಎಲ್ಲ ಕಾಲದಲ್ಲಿಯೂ ಎಲ್ಲ ಅವಸ್ಥೆ-ಗಳಿಗೂ ಪ್ರೇರಕನಾಗಿದ್ದಾನೆ. ನ ದೇಶಕಾಲಾಂತರೇಽನ್ಯಃ = ದೇಶಾಂತರದಲ್ಲಿ ಕಾಲಾಂತರದಲ್ಲಿ ಮತ್ತೊಬ್ಬರು ಪ್ರೇರಕರಾಗಿಲ್ಲ. ಕುತಃ = ಏಕೆ? **ಕರ್ಮಾನುಸ್ಮೃತಿ-ಶಬ್ದವಿಧಿಭ್ಯಃ** = "ಏಷ ಹ್ಯೇವ" ಎಂಬುದಾಗಿ ಕರ್ಮಗಳಿಗೆ ಈಶಾಧೀನತ್ವಶ್ರುತಿ ಇರುವುದರಿಂದ, "ಪ್ರದರ್ಶಕಸ್ತು" ಎಂಬುದಾಗಿ ಅನುಕೂಲಸ್ಮೃತಿಯೂ ಇರುವುದ-ರಿಂದ, "ಏಷ ಸ್ವಪ್ನಾನ್" ಎಂದು ಶ್ರುತಿಯಿರುವುದರಿಂದ, "ಆತ್ಮಾನಮೇವ" ಎಂಬುದಾಗಿ ವಿಧಿ ಇರುವುದರಿಂದಲೂ ಸಹ.

### ಸಿದ್ಧಾಂತ

**ಸೂ.ರ.:- एवं च सर्वकर्मनियामकत्वात् । सुप्त्यादीनां च तदन्तर्भावात् । निर्दिष्टश्रुतिस्मृयोः प्रमाणत्वेन सद्भावात् । एष स्वप्नानिति विधेश्च । अन्यस्य स्वप्नादिप्रवर्तकत्वे परमात्मन एवोपास्यत्वासम्भवात् । अतः सर्वावस्थाप्रेरके महामहिम्नीश्वरे भक्तिर्युक्तेति सिद्धम् ॥**

"ಏಷ ಹ್ಯೇವ ಸಾಧು ಕರ್ಮ ಕಾರಯತಿ" (ಕೌ.ಉ. 3-8) ಎಂಬುದಾಗಿ ಶ್ರುತಿಯು ತಿಳಿಸುವಂತೆ ಪರಮಾತ್ಮನು ಸರ್ವಕರ್ಮನಿಯಾಮಕನಾಗಿದ್ದರಿಂದ,

ಸುಪ್ತ್ಯಾದಿಗಳೂ ಅದರಲ್ಲಿ ಅಂತರ್ಭಾವವಾಗುವುದರಿಂದ ಸರ್ವಾವಸ್ಥಾಪ್ರೇರಕ-ನಾಗಿದ್ದಾನೆ. ಆ ವಿಷಯದಲ್ಲಿ 'ಏಷ ಹ್ಯೇವ' ಎಂಬ ಶ್ರುತಿ, ಹಾಗೂ

ಪ್ರದರ್ಶಕಸ್ತು ಸರ್ವೇಷಾಂ ಸ್ವಪ್ನಾದೇರೇಕ ಏವ ತು ।
ಪರಮಃ ಪುರುಷೋ ವಿಷ್ಣುಸ್ತತೋಽನ್ಯೋ ನಾಸ್ತಿ ಕಶ್ಚನ ॥

ಎಂಬ ಸ್ಮೃತಿಗಳು ಪ್ರಮಾಣವಾಗಿ ಇವೆ. ಮತ್ತು ''ಏವಂ ಸ್ವಪ್ನಾನ್ ದರ್ಶಯತ್ಯೇಷ ಪ್ರಬೋಧಯತ್ಯೇಷ ಏವ ಪರಮ ಆನಂದಃ'' ಎಂಬುದಾಗಿ ವಿಧಿಯೂ ಇದೆ.

ಹೀಗಾಗಿ ಸ್ವಪ್ನಾದಿಪ್ರೇರಕತ್ವ ಇರುವುದರಿಂದ ಭಗವಂತನೇ ಉಪಾಸ್ಯನಾಗಿದ್ದಾನೆ. ಆದ್ದರಿಂದ ಸರ್ವಾವಸ್ಥಾಪ್ರೇರಕನಾದ ಮಹಾಮಹಿಮನಾದ ಈಶ್ವರನಲ್ಲಿ ಭಕ್ತಿಯು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

**ಕರ್ಮಾನುಸ್ಮೃತ್ಯಧಿಕರಣವು ಮುಗಿಯಿತು.**

ಅಧಿಕರಣ – 7

# ಸಂಪತ್ತ್ಯಧಿಕರಣ

## ಸಂಗತಿ

**ಸೂ.ರ.:– अत्रेश्वरस्यावान्तरावस्थासंस्थितजीवप्राप्यत्वमहिमा निरूप्यते ॥**

ಈಶ್ವರನ ಅವಾಂತರಾವಸ್ಥಾ(ಮೂರ್ಛಾವಸ್ಥಾ)ಸಂಸ್ಥಿತಜೀವಪ್ರಾಪ್ಯತ್ವ ಮಹಿಮೆಯನ್ನು ನಿರೂಪಿಸುತ್ತಾರೆ ಏಳನೇ ಈ ಸಂಪತ್ತ್ಯಧಿಕರಣದಲ್ಲಿ.

ಮೋಹಾವಸ್ಥೆಯಲ್ಲಿ (ಮೂರ್ಛಾವಸ್ಥೆಯಲ್ಲಿ) ಜೀವನು ಪರಮಾತ್ಮನಲ್ಲಿ ಪ್ರವೇಶ ಮಾಡುತ್ತಾನೆಯೋ? ಅಥವಾ ಭಗವದಿತರತ್ರ ಪ್ರವೇಶ ಮಾಡುತ್ತಾನೆಯೋ? ಎಂದು ಸಂದೇಹ.

## ಪೂರ್ವಪಕ್ಷ

**ಸೂ.ರ.:– ननु न मोहो जीवस्य भगवदितरत्र किन्तु परमात्मन्येव जाग्रत्स्वप्नावस्थाविलक्षणत्वादन्यथा तत्सङ्कीर्णतापातात् । न चैवं सुप्तिसङ्करप्रसङ्गो दोषः । समानधर्मतया तत्सङ्करस्य गुणत्वात् । अतः परमात्मन्येव मोहो जीवस्येति प्राप्ते सूत्रमाह ॥**

ಮೋಹಾವಸ್ಥೆಯಲ್ಲಿ ಜೀವನು ಭಗವದಿತರತ್ರ ಪ್ರವೇಶ ಮಾಡುವುದಿಲ್ಲ. ಕಿಂತು ಪರಮಾತ್ಮನಲ್ಲಿಯೇ ಪ್ರವೇಶ ಮಾಡುತ್ತಾನೆ. ಕಾರಣ – ಈ ಮೋಹಾವಸ್ಥೆಯು ಜಾಗ್ರತ್-ಸ್ವಪ್ನಅವಸ್ಥೆಗಳಿಂದ ವಿಲಕ್ಷಣವಾದ್ದರಿಂದ. ಹಾಗೊಂದುವೇಳೆ ಜಾಗ್ರತ್-ಸ್ವಪ್ನಗಳಂತೆ ಮೋಹಾವಸ್ಥೆಯಲ್ಲಿಯೂ ಜೀವನಿಗೆ ಭಗವದಿತರತ್ರ ಪ್ರವೇಶವನ್ನು ಅಂಗೀಕರಿಸುವುದಾದರೆ ಮೋಹಾವಸ್ಥೆಯು ಜಾಗ್ರತ್-ಸ್ವಪ್ನಾವಸ್ಥೆಗಳಿಂದ ಸಂಕೀರ್ಣವಾಗಬೇಕಾದ ಪ್ರಸಂಗ ಬರುತ್ತದೆ.

ಹಾಗಾದರೆ ಮೋಹಾವಸ್ಥೆಯಲ್ಲಿ ಜೀವನು ಪರಮಾತ್ಮನಲ್ಲಿ ಪ್ರವೇಶ ಮಾಡುತ್ತಾನೆ ಎಂದರೆ ಸುಪ್ತಿಸಂಕರಪ್ರಸಂಗ ಬರುವುದಲ್ಲ ? ಎಂದರೆ, ಸುಪ್ತಿಸಂಕರವು

ದೋಷವಲ್ಲ. ಸರ್ವೇಂದ್ರಿಯೋಪರತಿ ಮೊದಲಾದ ಸಮಾನಧರ್ಮ ಉಳ್ಳದ್ದಾದ್ದ-ರಿಂದ ಸುಷುಪ್ತಿಸಂಕರವು ಗುಣವೇ ಆಗಿದೆ.

ಆದ್ದರಿಂದ ಮೋಹಾವಸ್ಥೆಯಲ್ಲಿ ಜೀವನು ಪರಮಾತ್ಮನಲ್ಲಿಯೇ ಪ್ರವೇಶ ಮಾಡುತ್ತಾನೆ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ मुग्धेऽर्धसम्पत्तिः परिशेषात् ॐ (३-२-१०)**

**ಸೂತ್ರಾರ್ಥ :-** **ಮುಗ್ಧೇ** = ಮೂರ್ಛಾವಸ್ಥೆಯಲ್ಲಿ ಜೀವಸ್ಯ = ಜೀವನಿಗೆ **ಅರ್ಧಸಂಪತ್ತಿಃ** = ಪರಮಾತ್ಮನಲ್ಲಿ ಅರ್ಧಪ್ರವೇಶ ಆಗುತ್ತದೆ. ಕುತಃ = ಯಾಕೆ? **ಪರಿಶೇಷಾತ್** = ಪ್ರಸಕ್ತಪ್ರತಿಷೇಧಪೂರ್ವಕ ಅನುಮಾನದಿಂದ ಎಂದರ್ಥ.

## ಸಿದ್ಧಾಂತ

**ಸೂ.ರ.:- एवं च भगवति अर्धप्रवेश एव जीवस्य मोहे न समग्रप्रवेशः । परिशेषात् । तथाहि । मोहे तावत्परमात्मविदूरत्व-सामीप्यप्रवेशार्धप्रवेशाः प्रसक्ताः । न तावत्त्रयः कल्पाः सम्भवन्ति । तेषां जाग्रदाद्यवस्थाधर्मत्वात् । एवं च प्रसक्तप्रतिषेधेऽन्यस्याप्रसङ्गात् परिशिष्टोऽर्धप्रवेशो मोहे जीवस्य ज्ञायते ।**

ಮೋಹಾವಸ್ಥೆಯಲ್ಲಿ ಜೀವನಿಗೆ ಪರಮಾತ್ಮನಲ್ಲಿ ಅರ್ಧಪ್ರವೇಶವೇ ಹೊರತು ಸಮಗ್ರಪ್ರವೇಶ ಇಲ್ಲ. ಅದು ಏಕೆ? ಎಂದರೆ, ಪರಿಶೇಷದಿಂದ ಅದು ಸಿದ್ಧವಾಗುತ್ತದೆ. ಹೇಗೆಂದರೆ - ಮೋಹಾವಸ್ಥೆಯಲ್ಲಿ ಜೀವನಿಗೆ ಪರಮಾತ್ಮವಿದೂರತ್ವ - ಸಾಮೀಪ್ಯ - ಪ್ರವೇಶ - ಅರ್ಧಪ್ರವೇಶಗಳು ಸಂಭಾವಿತವಾಗಿವೆ. ಆದರೆ ಅವುಗಳಲ್ಲಿ ಮೊದಲನೆಯ ಮೂರು ಕಲ್ಪಗಳು ಸಂಭವಿಸುವುದಿಲ್ಲ. ಕಾರಣ ಅವುಗಳು ಜಾಗ್ರದಾದ್ಯವಸ್ಥಾ-ಧರ್ಮವಾಗಿವೆ. ಹಾಗಾಗಿ ಪ್ರಸಕ್ತ ಪ್ರತಿಷೇಧ ಮಾಡಿದಾಗ, ಬೇರೆಯದು ಪ್ರಸಕ್ತ-ವಾಗದ ಕಾರಣ ಪರಿಶಿಷ್ಟವಾದ ಅರ್ಧಪ್ರವೇಶವು ಮೋಹಾವಸ್ಥೆಯಲ್ಲಿ ಜೀವನಿಗೆ ಸಿದ್ಧವಾಗುತ್ತದೆ.

**ಸೂ.ರ.:- मोहस्यावस्थात्रयातिरिक्तत्वे भवेदेतत् । तदेव कुत इति**

चेत् । अत्र वक्तव्यम् । किं मोहस्य सुप्तावन्तर्भाव उच्यते । उत जाग्रत्स्वप्नयोः । नाद्यः । वैलक्षण्यात् । तथाहि । मुग्धः कदाचिदुच्छ्वसिति । सवेपथुश्चास्य देहो भवति । भयानकं चास्य वदनं भवति । विस्फुरिते चास्य नेत्रे भवतः । सुप्तस्तु प्रसन्नवदनः तुल्यकालं पुनः पुनः उच्छ्वसिति । निमीलितेऽस्य नेत्रे भवतः । न चास्य देहो वेपते । पाणिपेषणमात्रेण च सुप्तमुत्थापयन्ति । न तु मुग्धम् । (मुद्गरघातेनापि निमित्तभेदस्य भवति मोहस्वापयोः । मुसलघातादिनिमित्तत्वान्मोहस्य सुच्छायानिमित्तत्वात्स्वापस्य च न वदन्ति मुग्धं सुप्तमिति ।) नापि जाग्रत्स्वप्नयोरन्तर्भावः । दुःखात्मकालातिरिक्तविषयादर्शनात् । अतो मोहोऽवस्थान्तरमेव । ततश्च मुग्धप्राप्यत्वेन महामाहात्म्याद्भगवति भक्तिर्युक्तेति सिद्धम् ॥

ಮೋಹಾವಸ್ಥೆಯು ಅವಸ್ಥಾತ್ರಯಗಳಿಂದ ಅತಿರಿಕ್ತವಾದದ್ದಾಗಿದ್ದರೆ ಹೀಗೆ ಹೇಳಬಹುದಿತ್ತು. ಆದರೆ ಮೋಹಾವಸ್ಥೆಯು ಅವಸ್ಥಾತ್ರಯಗಳಿಂದ ಅತಿರಿಕ್ತವೇಕೆ? ಎಂದರೆ, ಇಲ್ಲಿ ಕೇಳುತ್ತೇವೆ – ಮೋಹಾವಸ್ಥೆಯನ್ನು ಸುಪ್ತಿಯಲ್ಲಿ ಅಂತರ್ಭಾವ ಮಾಡುತ್ತೀರೋ? ಅಥವಾ ಜಾಗ್ರತ್-ಸ್ವಪ್ನಗಳಲ್ಲಿ ಅಂತರ್ಭಾವ ಮಾಡುತ್ತೀರೋ?

ಮೋಹವನ್ನು ಸುಪ್ತಿಯಲ್ಲಿ ಅಂತರ್ಭಾವ ಮಾಡಲು ಬರುವುದಿಲ್ಲ. ಕಾರಣ ಮೋಹಕ್ಕೂ ಸುಪ್ತಿಗೂ ಬಹಳ ವೈಲಕ್ಷಣ್ಯವಿದೆ. ಹೇಗೆಂದರೆ – ಮೋಹಾವಸ್ಥೆಯಲ್ಲಿರುವವನು (ಮುಗ್ಧನು) ಕೆಲವೊಮ್ಮೆ ಉಚ್ಛ್ವಾಸ ಮಾಡುತ್ತಾನೆ, ಅವನ ದೇಹ ನಡುಗುತ್ತಿರುತ್ತದೆ. ಅವನ ಮುಖವು ಭಯಾನಕವಾಗುತ್ತದೆ. ಅವನ ಕಣ್ಣುಗಳು ವಿಸ್ಫುರಿತವಾಗುತ್ತವೆ. ಸುಪ್ತನಾದವನಾದರೂ ಹಾಗಿರುವುದಿಲ್ಲ. ಸುಪ್ತನು ಪ್ರಸನ್ನವದನನಾಗಿ ಸಮಾನಕಾಲಗಳಲ್ಲಿ ಪುನಃಪುನಃ ಉಚ್ಛ್ವಾಸ ಮಾಡುತ್ತಾನೆ, ಇವನ ಕಣ್ಣುಗಳು ಮುಚ್ಚಲ್ಪಟ್ಟಿರುತ್ತವೆ. ಇವನ ದೇಹವು ನಡುಗುತ್ತಿರುವುದಿಲ್ಲ. ಕೈಯಿಂದ ಮುಟ್ಟುವ ಮಾತ್ರದಿಂದ ಸುಪ್ತನಾದವನನ್ನು ಎಬ್ಬಿಸುತ್ತಾರೆ. ಆದರೆ ಹಾಗೆ ಮುಗ್ಧನನ್ನು ಎಬ್ಬಿಸಲಾಗದು. ಮುದ್ಗರಘಾತದಿಂದಲೂ ಸಹ ಮುಗ್ಧನನ್ನು ಎಬ್ಬಿಸಲಾಗದು.

ಮೋಹ-ಸ್ವಾಪಗಳಲ್ಲಿ ನಿಮಿತ್ತಭೇದವನ್ನೂ ಕಾಣುತ್ತೇವೆ. ಮೋಹವು ಮುಸಲ-ಘಾತಾದಿ ನಿಮಿತ್ತವಾಗಿದ್ದರೆ, ಸ್ವಾಪವು ಸುಚ್ಛಾಯಾನಿಮಿತ್ತದ್ದಾಗಿದೆ. ಹಾಗಾಗಿ ಮುಗ್ಧನನ್ನು ಸುಪ್ತನೆಂದು ಕರೆಯುವುದಿಲ್ಲ. ಆದ್ದರಿಂದ ಮೋಹವನ್ನು ಸುಪ್ತಿಯಲ್ಲಿ ಅಂತರ್ಭಾವ ಮಾಡಲು ಬರುವುದಿಲ್ಲ.

ಇನ್ನು ಮೋಹವನ್ನು ಜಾಗ್ರತ್-ಸ್ವಪ್ನಗಳಲ್ಲಿಯೂ ಅಂತರ್ಭಾವ ಮಾಡಲು ಬರುವುದಿಲ್ಲ. ಕಾರಣ - ದುಃಖ, ಆತ್ಮ ಕಾಲಗಳಿಂದ ಅತಿರಿಕ್ತವಾದ ವಿಷಯ ಕಂಡಿಲ್ಲವಾದ್ದರಿಂದ.

ಆದ್ದರಿಂದ ಮೋಹವು ಜಾಗ್ರತ್-ಸ್ವಪ್ನ-ಸುಪ್ತಿಗಳಲ್ಲಿ ಅಂತರ್ಭಾವವಾಗುವು-ದಿಲ್ಲವಾದ್ದರಿಂದ ಮೋಹಾವಸ್ಥೆ ಎನ್ನುವುದು ಅದೊಂದು ಪ್ರತ್ಯೇಕವಾದ ಅವಸ್ಥೆಯೇ ಆಗಿದೆ. ಹಾಗಾಗಿ ಅಂತಹ ಮುಗ್ಧನು ಪರಮಾತ್ಮನಲ್ಲಿ ಅರ್ಧಪ್ರವೇಶ ಮಾಡುವುದ-ರಿಂದ, ಮುಗ್ಧಪ್ರಾಪ್ಯತ್ವೇನ ಮಹಾಮಾಹಾತ್ಮ್ಯ ಭಗವಂತನದ್ದಾದ್ದರಿಂದ ಅಂತಹ ಭಗವಂತನಲ್ಲಿ ಭಕ್ತಿ ಮಾಡುವುದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಸಂಪತ್ತ್ಯಧಿಕರಣವು ಮುಗಿಯಿತು.

ಅಧಿಕರಣ – 8

# ನ ಸ್ಥಾನತೋಽಪ್ಯಧಿಕರಣ

## ಸಂಗತಿ

**ಸೂ.ರ.:– अत्रेश्वरस्य सर्वरूपेषु निर्दोषाशेषगुणत्वं समर्थ्यते ।**

ಈಶ್ವರನಿಗೆ ಎಲ್ಲ ರೂಪಗಳಲ್ಲಿಯೂ ನಿರ್ದೋಷಾಶೇಷಸದ್ಗುಣತ್ವವನ್ನು ಸಮರ್ಥಿಸುತ್ತಾರೆ ಎಂಟನೇ ಈ ನ ಸ್ಥಾನತೋಽಪ್ಯಧಿಕರಣದಲ್ಲಿ.

ಪ್ರತಿಯೊಂದು ಶರೀರದಲ್ಲಿಯೂ ಜಾಗ್ರದಾದಿಸ್ಥಾನಗಳಲ್ಲಿ (ಭಿನ್ನಭಿನ್ನ ಸ್ಥಾನ-ಗಳಲ್ಲಿ) ಇರುವ ಭಗವಂತನು ಪರಸ್ಪರವಾಗಿ ಭಿನ್ನನೋ? ಅಭಿನ್ನನೋ ? ಎಂದು ಸಂದೇಹ.

## ಪೂರ್ವಪಕ್ಷ

**ಸೂ.ರ.:– ननु सर्वशरीरस्थितो विश्वादिरूपो हरिः परस्परं भिन्न एव । भिन्नस्थानत्वात् । घटादिवत् । न चाभेदेऽप्याकाशवद्भिन्न-स्थानत्वोपपत्तिरिति वाच्यम् । कार्त्स्न्येन भिन्नस्थानत्वस्य हेतुत्वेन विवक्षितत्वात् । अतोऽत्स्येव विश्वादीनां भेदः । ततश्चानुग्राह्यानु-ग्राहकभावस्यावर्जनीयत्वान्निरतिशयैश्वर्याभावेन न तत्र भक्तिर्युक्तेति प्राप्ते सूत्रितम् ॥**

ವಿಶ್ವಾದಿರೂಪೋ ಹರಿಃ, ಪರಸ್ಪರಂ ಭಿನ್ನ ಏವ, ಭಿನ್ನಸ್ಥಾನತ್ವಾತ್, ಘಟಾದಿವತ್ ।

ಭಿನ್ನಭಿನ್ನ ಸ್ಥಾನಗಳಲ್ಲಿರುವ ಘಟಾದಿಗಳು ಭಿನ್ನಭಿನ್ನವೇ ಆಗಿರುತ್ತವೆ. ಅದರಂತೆ ಎಲ್ಲ ಶರೀರಗಳಲ್ಲಿ ಭಿನ್ನಭಿನ್ನ ಸ್ಥಾನಗಳಲ್ಲಿ ಇರುವ ವಿಶ್ವಾದಿರೂಪನಾದ ಹರಿಯು ಪರಸ್ಪರವಾಗಿ ಭಿನ್ನನೇ ಆಗಿದ್ದಾನೆ.

ವಿಶ್ವಾದಿರೂಪಗಳಲ್ಲಿ ಅಭೇದ ಇದ್ದರೂ ಸಹ ಆಕಾಶದಂತೆ ಭಿನ್ನಸ್ಥಾನತ್ವವು ಉಪಪನ್ನವಾಗುತ್ತದೆ ಎಂದು ಶಂಕಿಸುವುದು ಸರಿಯಲ್ಲ. ಕಾರ್ತ್ಸ್ನ್ಯೇನ ಭಿನ್ನಸ್ಥಾನತ್ವವನ್ನು ಹೇತುವನ್ನಾಗಿ ವಿವಕ್ಷಿಸಿದ್ದೇವೆ.

ಆದ್ದರಿಂದ ವಿಶ್ವಾದಿರೂಪಗಳಲ್ಲಿ ಪರಸ್ಪರಭೇದವು ಇದ್ದೇ ಇದೆ. ಹಾಗಾಗಿ ಭಿನ್ನವಾದ ಆ ರೂಪಗಳಿಗೆ ಗುಣಾದಿತಾರತಮ್ಯ ಬರುವುದರಿಂದ, ಅನುಗ್ರಾಹ್ಯ-ಅನುಗ್ರಾಹಕಭಾವವೂ ಅವರ್ಜನೀಯವಾದ್ದರಿಂದ ನಿರತಿಶಯ ಐಶ್ವರ್ಯವಿಲ್ಲದ ಕಾರಣ ಅವನಲ್ಲಿ (ಭಗವಂತನಲ್ಲಿ) ಭಕ್ತಿ ಮಾಡುವುದು ಯುಕ್ತವಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ न स्थानतोऽपि परस्योभयलिङ्गं सर्वत्र हि ॐ (३-२-११)**

**ಸೂತ್ರಾರ್ಥ :-** **ಪರಸ್ಯ** = ಪರಮಾತ್ಮನಿಗೆ **ಸ್ಥಾನತೋಽಪಿ** = ಅಕ್ಷಿ ಮೊದಲಾದ ಸ್ಥಾನಭೇದದಿಂದಲೂ ಸಹ **ಉಭಯಲಿಂಗಂ** = ಭಿನ್ನರೂಪವು **ನ** = ಇಲ್ಲ, **ಕಿಂತು** = **ಕಿಂತು ಸರ್ವತ್ರ** = ಎಲ್ಲ ಸ್ಥಾನಗಳಲ್ಲಿಯೂ ಇರುವ ರೂಪವು ಏಕಮೇವ = ಒಂದೇ ಆಗಿದೆ. **ಕುತಃ** = ಯಾಕೆ? **ಹಿ** = ಯಾವ ಕಾರಣ, 'ಸರ್ವೇಷು' (ಐ.ಆ. 3-2-3) ಎಂಬುದಾಗಿ ಶ್ರುತಿಯು ಈ ವಿಷಯದಲ್ಲಿ ಪ್ರಮಾಣವಾಗಿ ಇದೆಯೋ ಆ ಕಾರಣ.

## ಸಿದ್ಧಾಂತ

**ಸೂ.ರ.:– एवं च विश्वादिरूपो हरिर्भिन्नस्थानोऽपि अभिन्न एवेति प्रतिपत्तव्यः । भेदसाधकभिन्नस्थानत्वानुमानस्य सर्वेष्विति श्रुतिबाधितत्वात् । अतो हरेः स्वगतभेदशून्यत्वेन सर्वत्र गुणपूर्णत्वाद्युक्ता तत्र भक्तिरिति सिद्धम् ॥**

ವಿಶ್ವಾದಿರೂಪನಾದ ಶ್ರೀಹರಿಯು ಭಿನ್ನಸ್ಥಾನನಾಗಿದ್ದರೂ ಸಹ ಅಭಿನ್ನನಾಗಿಯೇ ಇದ್ದಾನೆ ಎಂದು ತಿಳಿಯಬೇಕು.

ಹಾಗಾದರೆ ಭೇದಸಾಧಕವಾದ ಭಿನ್ನಸ್ಥಾನತ್ವ ಅನುಮಾನ ಇದೆಯಲ್ಲ? ಎಂದರೆ, ಆ ಭಿನ್ನಸ್ಥಾನತ್ವ ಅನುಮಾನವು -

''ಸರ್ವೇಷು ಭೂತೇಷ್ವೇತಮೇವ ಬ್ರಹ್ಮೇತ್ಯಾಚಕ್ಷತೇ'' (ಐ.ಆ. 3-2-3)

ಏಕರೂಪಃ ಪರೋ ವಿಷ್ಣುಃ ಸರ್ವತ್ರಾಪಿ ನ ಸಂಶಯಃ ।
ಐಶ್ವರ್ಯಾದ್ರೂಪಮೇಕಂ ಚ ಸೂರ್ಯವದ್ಬಹುಧೇಯತೇ ॥ (ಮಾತ್ಸ್ಯ)

ಇತ್ಯಾದಿ ಶ್ರುತಿಸ್ಮೃತಿಗಳಿಂದ ಬಾಧಿತವಾಗುವುದರಿಂದ ಅಪ್ರಮಾಣವಾಗುತ್ತದೆ. ಆದ್ದರಿಂದ ಭಗವಂತನು ಸ್ವಗತಭೇದಶೂನ್ಯನಾಗುವುದರಿಂದ ಎಲ್ಲ ರೂಪಗಳಲ್ಲಿಯೂ ಗುಣಪೂರ್ಣನಾಗುವುದರಿಂದ ಅವನಲ್ಲಿ ಭಕ್ತಿ ಮಾಡುವುದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 12

**ಸೂ.ರ.:– ननु न विश्वादीनामभेदो युक्तः । कार्यकारणमिति श्रुतौ भेदकधर्मव्यपदेशादित्यादिनोक्तमाक्षिप्य समादधत्सूत्रमुपन्यस्यति ॥**

ಕಾರ್ಯಕಾರಣಬದ್ಧೌ ತಾವಿಷ್ಯೇತೇ ವಿಶ್ವತೈಜಸೌ ।
ಪ್ರಾಜ್ಞಃ ಕಾರಣಬದ್ಧಸ್ತು ದ್ವೌ ತು ತುರ್ಯೇ ನ ಸಿದ್ಧ್ಯತಃ ॥
(ಮಾಂ.ಉ. 2-16)

ಎಂಬುದಾಗಿ ಶ್ರುತಿಯಲ್ಲಿ ಭೇದಕಧರ್ಮವ್ಯಪದೇಶ ಕಾಣುವುದರಿಂದ ವಿಶ್ವಾದಿ ರೂಪಗಳಿಗೆ ಅಭೇದವು ಯುಕ್ತವಲ್ಲ ಎಂಬುದಾಗಿ ಆಕ್ಷೇಪ ಬಂದರೆ, ಅದಕ್ಕೆ ಸಮಾಧಾನ ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

### ॐ न भेदादिति चेन्न प्रत्येकमतद्वचनात् ॐ (३-२-१२)

**ಸೂತ್ರಾರ್ಥ :- ಭೇದಾತ್** = 'ಕಾರ್ಯಕಾರಣಬದ್ಧೌ' (ಮಾಂ. 2-16) ಎಂಬುದಾಗಿ ಸ್ವಪ್ನ-ಜಾಗ್ರದನುಭವಜನಕತ್ವರೂಪ ಭೇದಕಧರ್ಮಗಳು ಶ್ರುತವಾಗು-ತ್ತಿರುವುದರಿಂದ ವಿಶ್ವಾದಿರೂಪಾಣಾಂ ನಾಭೇದಃ = ವಿಶ್ವಾದಿರೂಪಗಳಿಗೆ ಅಭೇದ ಇಲ್ಲ **ಇತಿ ಚೇನ್ನ** = ಎಂಬುದಾಗಿ ಆಕ್ಷೇಪ ಬಂದರೆ, ಅದು ಸರಿಯಲ್ಲ. ಕುತಃ = ಏಕೆ? **ಪ್ರತ್ಯೇಕಂ** = ಪರಸ್ಪರವಾಗಿ ಆ ರೂಪಗಳಿಗೆ **ಅತದ್ವಚನಾತ್** = ''ಯ ಏತ ಆತ್ಮಾ'' ಎಂಬುದಾಗಿ ಅಭೇದ ಹೇಳುವ ಶ್ರುತಿ ಇರುವುದರಿಂದ.

**ಸೂ.ರ.:– एवं चैषत आत्मे(बृ.५-७-३)त्ययमेव स इत्य(बृ.४-५-१)यं वै हरय (बृ.४-५-१९) इत्यादिश्रुतीनामभेदबोधकत्वात् । अपि चामात्रोऽनन्तमात्रेति (मां.४-७) श्रुतौ विश्वाद्यनन्तरूपेण मूलरूपस्य चाभेदस्योक्तत्वात् । अतो हरेः स्वगतभेदरहितत्वेन तस्मिन्भक्तिः कार्येति सिद्धम् ॥**

"ಏಷ ತ ಆತ್ಮಾಽಂತರ್ಯಾಮ್ಯಮೃತಃ" (ಬೃ.ಉ.5-7-3) "ಅಯಮೇವ ಸ ಯೋಽಯಮಾತ್ಮೇದಮಮೃತಮಿದಂ ಬ್ರಹ್ಮೇದಂ ಸರ್ವಂ" (ಬೃ.ಉ.4-5-1) "ಅಯಂ ವೈ ಹರಯೋಽಯಂ ವೈ ದಶ ಚ ಸಹಸ್ರಾಣಿ ಚ ಬಹೂನಿ ಚಾನಂತಾನಿ ಚ। ತದೇತದ್ಬ್ರಹ್ಮಾಪೂರ್ವಮನಪರಮನಂತರಮಬಾಹ್ಯಮಯಮಾತ್ಮಾ ಬ್ರಹ್ಮ ಸರ್ವಾನುಭೂಃ ಇತ್ಯನುಶಾಸನಂ" (ಬೃ.ಉ.4-5-19) ಇತ್ಯಾದಿ ಶ್ರುತಿಗಳು ಅಭೇದಬೋಧಕವಾಗಿದ್ದರಿಂದ (ಪರಮಾತ್ಮನ ವಿಶ್ವಾದಿರೂಪಗಳಲ್ಲಿ ಅಭೇದ ತಿಳಿಸು-ತ್ತಿರುವುದರಿಂದ) ಅಭೇದವನ್ನೇ ಅಂಗೀಕರಿಸಬೇಕು.

ಅಷ್ಟೇ ಅಲ್ಲದೇ "ಅಮಾತ್ರೋಽನಂತಮಾತ್ರಃ" (ಮಾಂ. 4-7) ಎಂಬುದಾಗಿ ಶ್ರುತಿಯಲ್ಲಿ ವಿಶ್ವಾದಿ ಅನಂತರೂಪಗಳಿಂದ ಮೂಲರೂಪಕ್ಕೆ ಅಭೇದವನ್ನೂ ಹೇಳಲಾಗಿದೆ.

ಆದ್ದರಿಂದ ಭಗವಂತನು ಸ್ವಗತಭೇದವರ್ಜಿತನಾದ್ದರಿಂದ ಅವನಲ್ಲಿ ಭಕ್ತಿ ಮಾಡುವುದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 13

**ಸೂ.ರ.:– ननु नाभेदश्रुतिभिर्भेदश्रुतेर्बाधो युक्तः । तासां कतिपय-रूपविषयत्वेन सावकाशत्वात् । नाप्ययं वै हरय इति श्रुतिविरोधः । तत्र परस्परमभेदानुक्तेर्मूलरूपेणापि । एष त आत्मेति श्रुतिवत्स्पष्टम-भेदाप्रतीतेः । अतो भेदश्रुतिवलाद्विश्वादीनां भेद एवेत्याशङ्कां परिहरत्सूत्रं पठति ॥**

ಅಭೇದಶ್ರುತಿಗಳಿಂದ ಭೇದಶ್ರುತಿಗೆ ಬಾಧವು ಯುಕ್ತವಲ್ಲ, ಕಾರಣ - ಆ ಅಭೇದಶ್ರುತಿಗಳು ಕತಿಪಯರೂಪವಿಷಯಕವಾದ್ದರಿಂದ ಸಾವಕಾಶವಾಗಿವೆ. ಹಾಗಾಗಿ ಸಾವಕಾಶಶ್ರುತಿಯ ವಿರೋಧ ಬರುವುದಿಲ್ಲ.

ಮತ್ತು 'ಅಯಂ ವೈ ಹರಯಃ' ಎಂಬ ಶ್ರುತಿಯ ವಿರೋಧವೂ ಬರುವುದಿಲ್ಲ, ಕಾರಣ - ಅಲ್ಲಿ ಮೂಲರೂಪದಿಂದ ಪರಸ್ಪರವಾಗಿ ಅಭೇದವನ್ನು ಹೇಳಿಲ್ಲವಾದ್ದ-ರಿಂದ, 'ಏಷ ತ ಆತ್ಮಾ' ಎಂಬ ಶ್ರುತಿಯಂತೆ ಸ್ಪಷ್ಟವಾಗಿ ಅಭೇದವು ತೋರುವುದಿಲ್ಲ-ವಾದ್ದರಿಂದ.

ಆದ್ದರಿಂದ ಭೇದಶ್ರುತಿಬಲದಿಂದಾಗಿ ವಿಶ್ವಾದಿರೂಪಗಳಿಗೆ ಭೇದವೇ ಇದೆ ಎಂಬುದಾಗಿ ಆಶಂಕೆ ಬಂದರೆ, ಅದನ್ನು ಪರಿಹರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

## ॐ अपि चैवमेके ॐ (३-२-१३)

**ಸೂತ್ರಾರ್ಥ** :- ಯತಃ = ಯಾವ ಕಾರಣ **ಏವಂ** = ಅಭೇದವನ್ನು **ಚ** = ಹಾಗೂ ಅನಂತರೂಪತ್ವವನ್ನು **ಏಕೇ** = ಕೆಲವು ಶಾಖಿಗಳು, ಅಮಾತ್ರಃ ಎಂಬ ಶ್ರುತಿಯಲ್ಲಿ **ಪಠಂತಿ** = ಹೇಳುತ್ತಾರೆಯೋ **ಅಪಿ** = ಅಭೇದವಿದ್ದರೂ ಭೇದ-ವ್ಯಪದೇಶವು **ಸ್ಥಾನಭೇದಾದ್ಯುಜ್ಯತೇ** = ಸ್ಥಾನಭೇದದಿಂದ ಉಪಪನ್ನವಾಗುತ್ತದೆ ಎಂದರ್ಥ.

**ಸೂ.ರ.:– एवं चैके शाखिनो विश्वाद्यनन्तरूपेण चाभेदं पठन्ति । अतो हरेः स्वगतभेदशून्यत्वेन सर्वगुणपूर्णत्वाद्युक्ता तत्र भक्तिरिति सिद्धम् ॥**

**ಕೆಲವು ಶಾಖಿಗಳು**

ಅಮಾತ್ರೋऽನಂತಮಾತ್ರಶ್ಚ ದ್ವೈತಸ್ಯೋಪಶಮಃ ಶಿವಃ ।
ಓಂಕಾರೋ ವಿದಿತೋ ಯೇನ ಸ ಮುನಿರ್ನೇತರೋ ಜನಃ ॥

(ಮಾಂ.ಉ. 4–7)

ಎಂಬುದಾಗಿ ಮೂಲರೂಪಕ್ಕೆ ವಿಶ್ವಾದಿ ಅನಂತರೂಪಗಳಿಂದ ಯಾವ ಕಾರಣ ಅಭೇದವನ್ನು ಹೇಳುತ್ತಾರೆಯೋ ಆ ಕಾರಣ ಶ್ರೀಹರಿಯು ಸ್ವಗತಭೇದಶೂನ್ಯ-ನಾಗಿದ್ದಾನೆ.

ಅಂತಹ ಸ್ವಗತಭೇದಶೂನ್ಯನಾದ ಭಗವಂತನು ಸರ್ವಗುಣಪೂರ್ಣನಾದ್ದರಿಂದ ಅವನಲ್ಲಿ ಭಕ್ತಿ ಮಾಡುವುದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ನ ಸ್ಥಾನತೋऽಪ್ಯಧಿಕರಣವು ಮುಗಿಯಿತು.

ಅಧಿಕರಣ – 9

# ಅರೂಪಾಧಿಕರಣ

### ಸಂಗತಿ

**ಸೂ.ರ.:– अत्र विष्णोरप्राकृतरूपं समर्थ्यते ।**

ವಿಷ್ಣುವಿಗೆ ಅಪ್ರಾಕೃತರೂಪವನ್ನು ಸಮರ್ಥಿಸುತ್ತಾರೆ ಒಂಭತ್ತನೇ ಈ ಅರೂಪಾಧಿ ಕರಣದಲ್ಲಿ.

### ಪೂರ್ವಪಕ್ಷ

**ಸೂ.ರ.:– ननु नाङ्गीकर्तव्याऽतिशया भक्तिर्भगवति । भगवतो रूपित्वाङ्गीकारेऽनित्यत्वप्रसङ्गात् । तदरूपमिति (कठ.१-३-१५) श्रुत्यप्रामाण्यप्रसङ्गाच्च । ततश्च भक्तिविलोपः । न ह्यनित्यशरीरे निरतिशया भक्तिरुपपद्यते । नाप्यरूपित्वश्रुत्यप्रामाण्ये सा युज्यते । अरूपित्वश्रुत्यप्रामाण्येऽविशेषात् । श्रुतिमात्राप्रामाण्यापत्त्या भक्ति-प्रयोजकगुणासिद्धेः । ततश्च भक्तेरनुपपन्नत्वाद्व्यर्थोऽयं पाद इति प्राप्ते सूत्रितम् ॥**

ಭಗವಂತನಲ್ಲಿ ಅತಿಶಯವಾದ ಭಕ್ತಿಯನ್ನು ಅಂಗೀಕರಿಸಲು ಬರುವುದಿಲ್ಲ. ಕಾರಣ – ಭಗವಂತನಿಗೆ ರೂಪಿತ್ವವನ್ನು ಅಂಗೀಕರಿಸುವುದಾದರೆ ಅನಿತ್ಯತ್ವಪ್ರಸಂಗ ಬರುತ್ತದೆ. ಹಾಗಾಗಿ ಅನಿತ್ಯವಾದ ಶರೀರ ಉಳ್ಳವನಲ್ಲಿ ನಿರತಿಶಯವಾದ ಭಕ್ತಿಯು ಉಪಪನ್ನವಾಗದ ಕಾರಣ ಭಕ್ತಿಯು ವಿಲೋಪವಾಗಬೇಕಾದ ಅತಿಪ್ರಸಕ್ತಿ ಬರುತ್ತದೆ.

ಮತ್ತು ಭಗವಂತನಿಗೆ ರೂಪವನ್ನು ಅಂಗೀಕರಿಸಿದರೆ 'ತದರೂಪಮ್' (ಕಠ. 1–3–15) ಎಂಬ ಅರೂಪಿತ್ವ ಶ್ರುತಿಯು ಅಪ್ರಮಾಣವಾಗಬೇಕಾದ ಅತಿಪ್ರಸಕ್ತಿಯೂ ಬರುತ್ತದೆ. ಹಾಗೆ ಅರೂಪಿತ್ವಶ್ರುತಿಯು ಅಪ್ರಮಾಣವಾದರೆ ಭಗವಂತನಲ್ಲಿ ನಿರತಿಶಯವಾದ ಭಕ್ತಿಯು ಉಪಪನ್ನವಾಗುವುದಿಲ್ಲ. ಅಲ್ಲದೇ ಅರೂಪಿತ್ವಶ್ರುತಿಯು ಅಪ್ರಮಾಣವಾದರೆ, ಅವಿಶೇಷಾತ್ ಎಲ್ಲ ಶ್ರುತಿಗಳೂ ಅಪ್ರಮಾಣವಾಗಬೇಕಾದ

ಪ್ರಸಂಗ ಬರುವುದರಿಂದ ಭಕ್ತಿಪ್ರಯೋಜಕ ಗುಣಗಳು ಸಿದ್ಧವಾಗದೇ ಹೋಗ-ಬೇಕಾಗುತ್ತದೆ.

ಆದ್ದರಿಂದ ಭಕ್ತಿಯು ಅನುಪಪನ್ನವಾದ್ದರಿಂದ ಈ ಪಾದವು ವ್ಯರ್ಥವಾಗಿದೆ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ अरूपवदेव हि तत्प्रधानत्वात् ॐ (३-२-१४)**

**ಸೂತ್ರಾರ್ಥ** :- ಬ್ರಹ್ಮ = ಬ್ರಹ್ಮನು **ಅರೂಪವದೇವ** = ಪ್ರಾಕೃತರೂಪರಹಿತನೇ ಆಗಿದ್ದಾನೆ. ಕುತಃ = ಏಕೆ? **ತತ್ಪ್ರಧಾನತ್ವಾತ್** = ಪ್ರಕೃತ್ಯಾದಿಗಳಿಗಿಂತಲೂ ಉತ್ತಮ-ನಾದ್ದರಿಂದ. **ಹಿ** ಶಬ್ದಸೂಚಿತವಾದ "ಅಸ್ಥೂಲಂ" (ಬೃ. 5-8-8) ಎಂಬ ಶ್ರುತಿಯು ಇರುವುದರಿಂದಲೂ ಸಹ.

## ಸಿದ್ಧಾಂತ

**ಸೂ.ರ.:- एवं चापेक्षितैव भगवद्भक्तिः । तस्यारूपित्वेनानित्यत्वारूपित्वश्रुत्यप्रामाण्यलक्षणदोषरहितत्वात् । न चारूपित्वमसिद्धम् । प्रकृत्युत्तमत्वेन प्राकृतरूपवैधुर्यसिद्धेः । तदेवं भक्तेरुपपन्नत्वात्सार्थकोऽयं पाद इति सिद्धम् ॥**

ಭಗವಂತನಲ್ಲಿ ಭಕ್ತಿಯು ಅಪೇಕ್ಷಿತವೇ ಆಗಿದೆ. ಕಾರಣ - ಭಗವಂತನು ರೂಪರಹಿತನಾದ್ದರಿಂದ (ಅರೂಪಿಯಾದ್ದರಿಂದ) ಅನಿತ್ಯತ್ವ ಪ್ರಸಕ್ತಿಯೂ ಇಲ್ಲ. ಮತ್ತು ಅರೂಪಿತ್ವಶ್ರುತಿಗೆ ಅಪ್ರಾಮಾಣ್ಯ ಬರಬೇಕಾದ ಪ್ರಸಕ್ತಿಯೂ ಇಲ್ಲ.

ಭಗವಂತನು ರೂಪರಹಿತ ಹೇಗೆ? ಎಂದರೆ, ಭಗವಂತನು ಪ್ರಕೃತಿಗಿಂತಲೂ ಉತ್ತಮನಾದ್ದರಿಂದ ಪ್ರಾಕೃತರೂಪರಹಿತತ್ವವು ಸಿದ್ಧಿಸುತ್ತದೆ.

ಆದ್ದರಿಂದ ಭಕ್ತಿಯು ಉಪಪನ್ನವಾಗುವುದರಿಂದ ಈ ಪಾದವು ಸಾರ್ಥಕವೇ ಆಗಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 15

**ಸೂ.ರ.:– ननु ब्रह्मणो रूपाभावे रुक्मवर्णमि(मुं.३-१-३)-त्यादिरूपित्वश्रुतिवैयर्थ्यं स्यात् । अपि च सौन्दर्यसौलक्षण्याद्य-भावापत्तेश्चेत्याशङ्कां पराकुर्वत्सूत्रं पठति ॥**

ಬ್ರಹ್ಮನಿಗೆ ರೂಪ ಇಲ್ಲ ಎನ್ನುವುದಾದರೆ "ರುಕ್ಮವರ್ಣಂ" (ಮುಂ. 3-1-3) ಇತ್ಯಾದಿ ರೂಪಿತ್ವಪ್ರತಿಪಾದಕಶ್ರುತಿಗಳಿಗೆ ವೈಯರ್ಥ್ಯ (ಅಪ್ರಾಮಾಣ್ಯ) ಬರ-ಬೇಕಾಗುತ್ತದೆ. ಅಲ್ಲದೇ ಸೌಂದರ್ಯ ಸೌಲಕ್ಷಣ್ಯಾದಿಗಳು ಇಲ್ಲದೇ ಹೋಗಬೇಕಾದ ಅತಿಪ್ರಸಂಗವೂ ಬರುತ್ತದೆ. ಆದ್ದರಿಂದ ರೂಪಾಭಾವವನ್ನು ಹೇಗೆ ಅಂಗೀಕರಿಸಲು ಸಾಧ್ಯ? ಎಂಬುದಾಗಿ ಆಶಂಕೆ ಬಂದರೆ, ಅದನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

### ॐ प्रकाशवच्चावैयर्थ्यम् ॐ (३-२-१५)

**ಸೂತ್ರಾರ್ಥ :- ಪ್ರಕಾಶವತ್** = ಲೋಕವಿಲಕ್ಷಣ ಚಕ್ಷುರಾದಿ ಪ್ರಕಾಶ-ವಿಷಯದಲ್ಲಿ "ನಾಸ್ತಿ ಪ್ರಕಾಶಃ" ಎಂಬ ವ್ಯವಹಾರಕ್ಕೆ ಹೇಗೆ ಅಪ್ರಾಮಾಣ್ಯ ಇಲ್ಲವೋ ಅದರಂತೆ **ಅವೈಯರ್ಥ್ಯಂ** = ಬ್ರಹ್ಮನಿಗೆ ರೂಪಿತ್ವಪ್ರತಿಪಾದಕ ಶ್ರುತಿಗಳಿಗೆ ಅಪ್ರಾಮಾಣ್ಯ ಇಲ್ಲ. ಕುತಃ = ಏಕೆ? ತಸ್ಯಾರೂಪಿತ್ವೇಽಪಿ = ಭಗವಂತನು ರೂಪರಹಿತನಾಗಿದ್ದರೂ ವಿಲಕ್ಷಣರೂಪ ಉಳ್ಳವನಾಗಿದ್ದಾನೆ ಎಂದು ಅಂಗೀಕರಿಸಿದ್ದರಿಂದ.

**ಸೂ.ರ.:– एवं च रुक्मवर्णमित्यादिश्रुतेर्वैयर्थ्याभावः सौन्दर्याद्य-भावश्च । अप्राकृतशरीरस्याङ्गीकारात् । अतोऽपेक्षितैव भगवद्भक्तिरिति सिद्धम् ॥**

ಭಗವಂತನು ಅಪ್ರಾಕೃತಶರೀರ ಉಳ್ಳವನು ಎಂದು ಅಂಗೀಕರಿಸಿದ್ದರಿಂದ 'ರುಕ್ಮವರ್ಣಂ' ಇತ್ಯಾದಿಶ್ರುತಿಗಳಿಗೆ ವೈಯರ್ಥ್ಯವೂ ಬರುವುದಿಲ್ಲ. ಮತ್ತು ಸೌಂದರ್ಯಾಭಾವ ಪ್ರಸಕ್ತಿಯೂ ಇಲ್ಲ.

ಆದ್ದರಿಂದ ಭಗವಂತನಲ್ಲಿ ಭಕ್ತಿಯು ಅಪೇಕ್ಷಿತವೇ ಆಗಿದೆ ಎಂದು ಸಿದ್ಧ-ವಾಗುತ್ತದೆ.

## ಸೂತ್ರ - 16

ಸೂ.ರ.:– ननु कथं ब्रह्मणो लोकविलक्षणरूपत्वम् । येनानित्यत्वादिदोषाभावः । सर्वरूपाणां प्रकृत्याद्यात्मकत्वनियमात् । इतररूपापेक्षया तद्रूपस्य वैलक्षण्यानुक्तेरिति प्राप्ते सूत्रं पठति ॥

ಬ್ರಹ್ಮನಿಗೆ ಲೋಕವಿಲಕ್ಷಣರೂಪ ಇರುತ್ತಿದ್ದರೆ ಆಗ ಅನಿತ್ಯತ್ವಾದಿ ದೋಷಗಳು ಬರುವುದಿಲ್ಲ ಎನ್ನಬಹುದಿತ್ತು. ಆದರೆ ಲೋಕವಿಲಕ್ಷಣರೂಪವಿದೆ ಎನ್ನುವುದೇ ಹೇಗೆ ಸಾಧ್ಯ? ಎಲ್ಲ ರೂಪಗಳಿಗೂ ಪ್ರಕೃತ್ಯಾದ್ಯಾತ್ಮಕತ್ವ ನಿಯಮ ಇರುವುದರಿಂದ ಲೋಕವಿಲಕ್ಷಣರೂಪವು ಹೇಗೆ ಸಾಧ್ಯ? ಮತ್ತು ಇತರ ರೂಪಗಳಿಗಿಂತಲೂ ಬ್ರಹ್ಮನ ರೂಪಕ್ಕೆ ವೈಲಕ್ಷಣ್ಯವನ್ನು ಹೇಳಿಲ್ಲವಲ್ಲ ಎಂಬುದಾಗಿ ಆಶಂಕೆ ಬಂದರೆ, ಅದನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ आह च तन्मात्रम् ॐ (३-२-१६)**

**ಸೂತ್ರಾರ್ಥ** :- ಯತಃ = ಯಾವ ಕಾರಣ, 'ಐಕಾತ್ಮ್ಯಂ' (ಮಾಂ. 2-7) ಎಂಬ ಶ್ರುತಿಯು ಬ್ರಹ್ಮಣಃ = ಬ್ರಹ್ಮನಿಗೆ **ತನ್ಮಾತ್ರಂ** = ವಿಜ್ಞಾನಂದೈಕಸ್ವರೂಪವನ್ನು **ಆಹ** = ಹೇಳುತ್ತದೆಯೋ ಅತಃ = ಆ ಕಾರಣ ನ ವೈಲಕ್ಷಣ್ಯಾನಿರುಕ್ತಿಃ = ವೈಲಕ್ಷಣ್ಯ (ವಿಲಕ್ಷಣರೂಪ) ಹೇಳಿಲ್ಲ ಅಂತ ಅಲ್ಲ.

ಸೂ.ರ.:– एवं च निर्दिष्टश्रुतिप्रमाणसद्भावाद्ब्रह्मणो विलक्षणरूपत्वमनित्यत्वादिदोषाभावश्चेति सिद्धम् ॥

ಬ್ರಹ್ಮನು ವಿಲಕ್ಷಣರೂಪ ಉಳ್ಳವನಾಗಿದ್ದಾನೆ ಎಂಬ ವಿಷಯದಲ್ಲಿ "ಐಕಾತ್ಮ್ಯಪ್ರತ್ಯಯಸಾರಮ್" (ಮಾಂ.ಉ. 2-7) ಎಂಬ ನಿರ್ದಿಷ್ಟ ಶ್ರುತಿಪ್ರಮಾಣ ಇರುವುದರಿಂದ ಬ್ರಹ್ಮನಿಗೆ ವಿಲಕ್ಷಣರೂಪವತ್ವ ಹಾಗೂ ಅನಿತ್ಯತ್ವಾದಿದೋಷಾಭಾವವೂ ಸಿದ್ಧವಾಗುತ್ತದೆ.

## ಸೂತ್ರ - 17

ಸೂ.ರ.:– ननूक्तश्रुतिद्वये ब्रह्मणो ज्ञानानन्दाद्यात्मकत्वमेवोच्यते न त्वानन्दादेर्ब्रह्मशरीरत्वम् । अतो रूपिपदोक्तदेहित्वश्रुतेर्लोक-

**विलक्षणरूपविषयत्वाभावाद्वैयर्थ्यं सौन्दर्याभावश्चापरिहृतः । न च रूपरूपिणोरभेदादिति तत्त्वप्रदीपे तदपि श्रुत्यभिप्रेतमित्युक्तमिति वाच्यम् । स्पष्टोक्त्यभावेनानिर्णयादित्याशङ्कां परिहरत्सूत्रं पठति ॥**

ಹಿಂದೆ ಹೇಳಿದ ಎರಡು ಶ್ರುತಿಗಳಲ್ಲಿ ಬ್ರಹ್ಮನಿಗೆ ಜ್ಞಾನಾನಂದಾದ್ಯಾತ್ಮಕತ್ವವು ಮಾತ್ರ ಹೇಳಲ್ಪಡುತ್ತದೆ. ಹೊರತು ಆನಂದಾದಿಗಳಿಗೆ ಬ್ರಹ್ಮಶರೀರತ್ವವು ಹೇಳ-ಲ್ಪಡುತ್ತಿಲ್ಲ. ಆದ್ದರಿಂದ ರೂಪಿಪದೋಕ್ತ ದೇಹಿತ್ವಶ್ರುತಿಗೆ ಲೋಕವಿಲಕ್ಷಣರೂಪ ವಿಷಯತ್ವ ಇಲ್ಲದ ಕಾರಣ ವೈಯರ್ಥ್ಯ ಬಂದೇ ಬರುತ್ತದೆ. ಮತ್ತು ಸೌಂದರ್ಯಾ-ಭಾವವೂ ಅಪರಿಹೃತವಾಗುತ್ತದೆ.

'ರೂಪರೂಪಿಣೋರಭೇದಾತ್' ಎಂಬುದಾಗಿ ತತ್ವಪ್ರದೀಪದಲ್ಲಿ ಅದೂ ಶ್ರುತ್ಯಭಿಪ್ರೇತವೇ ಆಗಿದೆ ಎಂದು ಹೇಳಲಾಗಿದೆಯಲ್ಲ? ಎಂದು ಶಂಕಿಸುವುದು ಸರಿಯಲ್ಲ. ಹಾಗೆ ಸ್ಪಷ್ಟೋಕ್ತಿ ಇಲ್ಲದ ಕಾರಣ ನಿರ್ಣಯವಾಗುವುದಿಲ್ಲ ಎಂಬುದಾಗಿ ಆಶಂಕೆ ಬಂದರೆ, ಅದನ್ನು ಪರಿಹರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

### ॐ दर्शयति चाथो अपि स्मर्यते ॐ (३-२-१७)

**ಸೂತ್ರಾರ್ಥ** :- ನ ಕೇವಲಂ ಬ್ರಹ್ಮಣಃ ಆನಂದಾದ್ಯಾತ್ಮಕತ್ವಂ ದರ್ಶಯತಿ = ಕೇವಲ ಬ್ರಹ್ಮನಿಗೆ ಆನಂದಾದ್ಯಾತ್ಮಕತ್ವವನ್ನು ಮಾತ್ರ ಹೇಳುತ್ತಿಲ್ಲ, ಕಿಂತು = ಕಿಂತು, 'ತದ್ವಿಜ್ಞಾನೇನ' (ಮುಂ. 2-2-8) ಎಂಬ ಶ್ರುತಿಯು ಜ್ಞಾನಕ್ಕೆ ಬ್ರಹ್ಮಾತ್ಮಕತ್ವವನ್ನೂ **ದರ್ಶಯತಿ ಚ** = ಪ್ರತಿಪಾದಿಸುತ್ತದೆ. **ಅಥೋ ಅಪಿ** = ವಿಜ್ಞಾನಕ್ಕೂ ಸಹ ಬ್ರಹ್ಮರೂಪತ್ವಂ **ಸ್ಮರ್ಯತೇ ಚ** = ಬ್ರಹ್ಮರೂಪತ್ವವು ವ್ಯಾಸಾದಿಗಳಿಂದ, 'ಶುದ್ಧಸ್ಫಟಿಕ ಸಂಕಾಶಂ' ಇತ್ಯಾದಿಯಾಗಿ ಸ್ಮೃತವಾಗುತ್ತಿದೆ ಕೂಡ. ಅತೋ ನ ಜ್ಞಾನಾನಂದಯೋಃ ಬ್ರಹ್ಮರೂಪತ್ವಮಪ್ರಾಮಾಣಿಕಂ = ಆದ್ದರಿಂದ ಜ್ಞಾನಾನಂದಗಳಿಗೆ ಬ್ರಹ್ಮರೂಪತ್ವವು ಅಪ್ರಾಮಾಣಿಕವಲ್ಲ ಎಂದು ಅರ್ಥ.

**ಸೂ.ರ.:- एवं च ब्रह्मणो विलक्षणरूपत्वस्य तद्रूपाणां परस्परमभेदस्य च सिद्धत्वात् । शुद्धस्फटिकसङ्काशमिति (मात्स्ये.) स्मृतेः । तदेवं भक्तेरुपपन्नत्वात्सार्थकोऽयं पाद इति सिद्धम् ॥**

ಶುದ್ಧಸ್ಫಟಿಕಸಂಕಾಶಂ ವಾಸುದೇವಂ ನಿರಂಜನಮ್ ।
ಚಿಂತಯೀತ ಯತಿರ್ನಾನ್ಯಂ ಜ್ಞಾನರೂಪಾದೃತೇ ಹರೇಃ ॥

ಎಂಬುದಾಗಿ ಮಾತ್ಸ್ಯಸ್ಮೃತಿ ಇರುವುದರಿಂದ ಬ್ರಹ್ಮನಿಗೆ ವಿಲಕ್ಷಣರೂಪತ್ವವು ಹಾಗೂ ಅವನ ರೂಪಗಳಿಗೆ ಪರಸ್ಪರ ಅಭೇದವೂ ಸಿದ್ಧವಾಗುತ್ತದೆ.

ಹಾಗಾಗಿ ಭಗವಂತನಲ್ಲಿ ಭಕ್ತಿಯು ಉಪಪನ್ನವಾದ್ದರಿಂದ ಈ ಪಾದವು ಸಾರ್ಥಕವಾಗಿದೆ ಎಂದು ಸಿದ್ಧವಾಗುತ್ತದೆ.

**ಅರೂಪಾಧಿಕರಣವು ಮುಗಿಯಿತು.**

*ಅಧಿಕರಣ – 10*

# ಉಪಮಾಧಿಕರಣ

## ಸಂಗತಿ

**ಸೂ.ರ.:– अत्रेश्वरस्य जीवाद्भेदाभेदो निराक्रियते ।**

ಈಶ್ವರನಿಗೆ ಜೀವನಿಂದ ಭೇದಾಭೇದವನ್ನು ನಿರಾಕರಿಸುತ್ತಾರೆ ಹತ್ತನೇ ಈ ಉಪಮಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु जीवस्तावत्परमात्मनो भिद्यत इति श्रुत्यादि-सिद्धम् । अनुमतं भवताम् । एवं सति प्रयुज्यते । जीवः परमात्मा-भिन्नः । चेतनत्वात् । तदंशत्वात् । मत्स्यादिवत् । एवं चेश्वरस्य जीवेन भिन्नत्वेऽप्यभेदस्यापि भावात् । दोषेणैक्ये च दुष्टत्वा-वश्यम्भावान्न परमात्मनि भक्तिर्युक्तेति प्राप्ते सूत्रमाह ॥**

ಜೀವನು ಪರಮಾತ್ಮನಿಂದ ಭಿನ್ನನಾಗಿದ್ದಾನೆ ಎನ್ನುವುದು ಶ್ರುತ್ಯಾದಿಸಿದ್ಧವಾಗಿದೆ. ಅದು ನಿಮಗೂ ಸಮ್ಮತವೂ ಆಗಿದೆ. ಹೀಗಿರುವಾಗ ಈ ರೀತಿ ಅನುಮಾನ ಮಾಡುತ್ತೇವೆ –

ಜೀವಃ ಪರಮಾತ್ಮಾಭಿನ್ನಃ ಚೇತನತ್ವಾತ್ ತದಂಶತ್ವಾತ್ ಮತ್ಸ್ಯಾದಿವತ್ ।

(ಜೀವನು, ಪರಮಾತ್ಮನಿಂದ ಅಭಿನ್ನನಾಗಿದ್ದಾನೆ, ಚೇತನನಾದ್ದರಿಂದ, ಅವನ ಅಂಶನಾದ್ದರಿಂದ, ಮತ್ಸ್ಯಾದಿಗಳು ಅವನ ಅಂಶವಾದ್ದರಿಂದ ಅಭಿನ್ನವಾದಂತೆ)

ಆದ್ದರಿಂದ ಈಶ್ವರನಿಗೆ ಜೀವನಿಂದ ಭೇದ ಇದ್ದರೂ ಅಭೇದವೂ ಇರುವುದರಿಂದ, ದುಷ್ಟನಾದ ಜೀವನಿಂದ ಐಕ್ಯ ಬಂದಾಗ ಪರಮಾತ್ಮನೂ ಅವಶ್ಯ ದುಷ್ಟನಾಗುವುದರಿಂದ ಅಂತಹ ಪರಮಾತ್ಮನಲ್ಲಿ ಭಕ್ತಿ ಮಾಡುವುದು ಯುಕ್ತವಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

## ॐ अत एव चोपमा सूर्यकादिवत् ॐ (३-२-१८)

**ಸೂತ್ರಾರ್ಥ** :- **ಅತ** ಏವ = ಈಶ್ವರ ಹಾಗೂ ಅವನ ರೂಪಗಳಿಗೆ ಅಭೇದವನ್ನು ಹೇಳಿದ್ದರಿಂದಲೇ **ಅತ** ಏವ = ಚೇತನತ್ವಾದಿ ಹೇತುಗಳಿಂದಲೇನೇ **ಉಪಮಾ** = ಜೀವನಿಗೆ ಮತ್ಸ್ಯಾದಿಸಾಮ್ಯ ಇದೆ, ಮತ್ಸ್ಯಾದಿಗಳಂತೆ ಈಶ್ವರಾ-ಭೇದವನ್ನೇ ಹೇಳಬಹುದಲ್ಲ ಇತಿ ಚೇನ್ನ = ಎಂದು ಶಂಕಿಸುವುದು ಸರಿಯಲ್ಲ, ಕುತಃ = ಯಾಕೆ? ಯತಃ = ಯಾವ ಕಾರಣ **ಸೂರ್ಯಕಾದಿವತ್** = ಯಾವ ರೀತಿಯಾಗಿ ಜಲದಲ್ಲಿ ಪ್ರತಿಬಿಂಬಿತವಾದ ಸೂರ್ಯಕಾದಿಗಳಿಗೆ (ಸೂರ್ಯಪ್ರತಿಬಿಂಬಕ್ಕೆ) ಸೂರ್ಯಾದಿ ಬಿಂಬದಿಂದ ಭಿನ್ನತ್ವ ಇದೆಯೋ ಅದೇ ರೀತಿಯಾಗಿ ಜೀವನು ಪ್ರತಿಬಿಂಬನಾದ್ದರಿಂದ ಪ್ರತಿಬಿಂಬನಾದ ಜೀವನಿಗೆ ಬಿಂಬನಾದ ಈಶ್ವರನಿಂದ ಭಿನ್ನತ್ವವೇ ಇದೆ.

### ಸಿದ್ಧಾಂತ

**ಸೂ.ರ.:– एवं च जीवः परमात्मना भिन्नः । तत्प्रतिबिम्बत्वात् । यो यत्प्रतिबिम्बः न चासौ तदभिन्नः । यथा सूर्यकादिः ।**

ಜೀವಃ ಪರಮಾತ್ಮನಾ ಭಿನ್ನಃ ತತ್ಪ್ರತಿಬಿಂಬತ್ವಾತ್ । ಯೋ ಯತ್ಪ್ರತಿಬಿಂಬಃ ನ ಚಾಸೌ ತದಭಿನ್ನಃ । ಯಥಾ ಸೂರ್ಯಕಾದಿಃ ।

ಜೀವನು, ಪರಮಾತ್ಮನಿಂದ ಭಿನ್ನನಾಗಿದ್ದಾನೆ, ಅವನ ಪ್ರತಿಬಿಂಬನಾದ್ದರಿಂದ, ಯಾವನು ಯಾವನ ಪ್ರತಿಬಿಂಬನಾಗಿರುತ್ತಾನೆಯೋ ಅವನು ಅವನಿಂದ ಅಭಿನ್ನ-ನಾಗಿರುವುದಿಲ್ಲ, ಯಾವ ರೀತಿಯಾಗಿ ಜಲಗತವಾದ ಸೂರ್ಯಪ್ರತಿಬಿಂಬವು ಸೂರ್ಯನ ಪ್ರತಿಬಿಂಬವಾದ್ದರಿಂದ ಅವನಿಂದ ಅಭಿನ್ನವಾಗಿಲ್ಲವೋ, ಭಿನ್ನವೇ ಆಗಿರುವುದೋ ಅದರಂತೆ.

**ಸೂ.ರ.:– ननूपाध्यायत्तः प्रतिबिम्ब उच्यते । न च स उपाध्यायत्तः । तथात्वेऽनित्यत्वप्रसङ्गात् । ततश्चासिद्धं प्रतिबिम्बत्वम् । अथ परमात्माधीनत्वे सति चेतनत्वेन तत्सादृश्यं हेतुतया विवक्षितम् । तर्ह्यनुपपन्नो दृष्टान्तः प्राप्नोतीति चेन्न । चेतनत्वादिविशेषरूप-मविवक्षित्वा तदधीनत्वतत्सादृश्ययोरेव हेतुतया विवक्षितत्वात् । अत**

**एवोपमाप्युपपन्ना । बिम्बाधीनत्वमिव बिम्बसादृश्यस्यापि तत्र सत्त्वात् ।**

ಪ್ರತಿಬಿಂಬವು (ಉಪಾಧ್ಯಧೀನವಾಗಿದ್ದು ಕಂಡಿದೆ.) ಉಪಾಧ್ಯಧೀನವಾಗಿರುತ್ತದೆ. ಆದರೆ ಜೀವನು ಉಪಾಧ್ಯಧೀನನಾಗಿಲ್ಲ. ಹಾಗೆ ಉಪಾಧ್ಯಧೀನನಾದರೆ ಅನಿತ್ಯನಾಗ-ಬೇಕಾಗುತ್ತದೆ. ಆದ್ದರಿಂದ ಜೀವನು ಉಪಾಧ್ಯಧೀನನಾಗಿಲ್ಲ. ಹಾಗಾಗಿ ಪ್ರತಿಬಿಂಬ-ನಾಗಬೇಕಾದರೆ ಉಪಾಧ್ಯಧೀನನಾಗಬೇಕು. ಆದರೆ ಉಪಾಧ್ಯಧೀನನಾಗಿಲ್ಲ-ವಾದ್ದರಿಂದ ಜೀವನು ಪ್ರತಿಬಿಂಬನಾಗಲು ಸಾಧ್ಯವಿಲ್ಲ. ಆದ್ದರಿಂದ ಪ್ರತಿಬಿಂಬತ್ವ ಹೇತುವು ಅಸಿದ್ಧ.

ಮತ್ತು ಅಲ್ಲಿ ಪ್ರತಿಬಿಂಬತ್ವ ಎನ್ನುವುದಕ್ಕೆ ತದಧೀನತ್ವೇ ಸತಿ ತತ್ಸದೃಶತ್ವ ಎಂದು ಅರ್ಥ ವಿವಕ್ಷಿಸಿರುವುದರಿಂದ ಪ್ರಕೃತ ಪರಮಾತ್ಮಾಧೀನತ್ವೇ ಸತಿ ಚೇತನತ್ವೇನ ತತ್ಸಾದೃಶ್ಯವನ್ನು ಹೇತುವನ್ನಾಗಿ ವಿವಕ್ಷಿಸುವುದಾದರೆ, ಆಗ ದೃಷ್ಟಾಂತವಾದ ಸೂರ್ಯ-ಕಾದಿಗಳಲ್ಲಿ ಪರಮಾತ್ಮಾಧೀನತ್ವೇ ಸತಿ ಚೇತನತ್ವೇನ ತತ್ಸಾದೃಶ್ಯವು ಇಲ್ಲವಾದ್ದರಿಂದ ದೃಷ್ಟಾಂತವು ಅನುಪಪನ್ನವಾಗಬೇಕಾಗುತ್ತದೆ ಎಂಬುದಾಗಿ ಆಕ್ಷೇಪ ಬಂದರೆ, ಅದು ಸರಿಯಲ್ಲ.

ಏಕೆಂದರೆ - ಪ್ರತಿಬಿಂಬತ್ವ ಎಂದರೆ ಚೇತನತ್ವಾದಿ ವಿಶೇಷರೂಪವನ್ನು ವಿವಕ್ಷಿಸದೇ ತದಧೀನತ್ವೇ ಸತಿ ತತ್ಸದೃಶತ್ವಂ ಎಂದು ವಿವಕ್ಷಿಸಲಾಗಿದೆ. ದೃಷ್ಟಾಂತವಾದ ಸೂರ್ಯಕಾದಿಗಳು ಬಿಂಬಭೂತಸೂರ್ಯಾದಿ ಅಧೀನ ಹಾಗೂ ಸೂರ್ಯಾದಿ ಸದೃಶವಾಗಿರುವುದರಿಂದ (ದೃಷ್ಟಾಂತದಲ್ಲಿ ಹೇತುವು ಬರುವುದರಿಂದ) ದೃಷ್ಟಾಂತವೂ (ಅನುಪಪನ್ನವಾಗುವುದಿಲ್ಲ) ಉಪಪನ್ನವೇ ಆಗುತ್ತದೆ.

ಇನ್ನು ಜೀವನು ಬಿಂಬನ ಅಧೀನನಾಗಿರುವಂತೆ ಬಿಂಬನಿಗೆ ಸದೃಶನೂ ಆಗಿರುವುದರಿಂದ ಪಕ್ಷನಾದ ಜೀವನಲ್ಲಿ ತದಧೀನತ್ವೇ ಸತಿ ತತ್ಸದೃಶತ್ವವು ಬರುವುದ-ರಿಂದ ಹೇತುವೂ ಅಸಿದ್ಧವಾಗುವುದಿಲ್ಲ.

**ಸೂ.ರ.:- नन्वेवमपि पक्षे सर्वदृष्टान्तधर्माभावात् । तथा चायमित्युपनयो न सम्भवतीति चेन्न । यथा दृष्टान्तः साध्यव्याप्य-साधनवान् तथा पक्षोऽपीत्येतावन्मात्रस्योपनये विवक्षितत्वेन याव-त्साधर्म्यस्याविवक्षितत्वात् । अन्यथाऽनुमानमात्रोच्छेदप्रसङ्ग इति ।**

**अतो जीवपरमात्मनोरभेदाभावाद्युक्ता भगवति भक्तिरिति तन्महिमा-वर्णनमुपपन्नमिति सिद्धम् ॥**

ಆದರೂ ಸಹ ಪಕ್ಷದಲ್ಲಿ ಎಲ್ಲ ದೃಷ್ಟಾಂತಧರ್ಮಗಳೂ ಇಲ್ಲವಾದ್ದರಿಂದ (ಸರ್ವಧರ್ಮಗಳಿಂದಲೂ ಸಾದೃಶ್ಯವಿಲ್ಲವಾದ್ದರಿಂದ) 'ತಥಾ ಚಾಯಂ' ಎಂಬ ಉಪನಯವು ಕೂಡುವುದಿಲ್ಲವಲ್ಲ? ಎಂದರೆ, ಅದು ಸರಿಯಲ್ಲ. ಯಾವ ರೀತಿಯಾಗಿ ದೃಷ್ಟಾಂತವು ಸಾಧ್ಯವ್ಯಾಪ್ಯಸಾಧನ ಉಳ್ಳದ್ದೋ ಅದೇ ರೀತಿಯಾಗಿ ಪಕ್ಷವೂ ಸಾಧ್ಯವ್ಯಾಪ್ಯಸಾಧನ ಉಳ್ಳದ್ದು ಎಂಬುದನ್ನಷ್ಟೇ ಉಪನಯದಲ್ಲಿ ವಿವಕ್ಷಿಸಿದ್ದರಿಂದ, ಸಮಗ್ರಧರ್ಮಗಳಿಂದ ಸಾದೃಶ್ಯವನ್ನು ವಿವಕ್ಷಿಸಿಲ್ಲವಾದ್ದರಿಂದ 'ತಥಾ ಚಾಯಂ' ಎಂಬ ಉಪನಯವು ಉಪಪನ್ನವಾಗುತ್ತದೆ. ಒಂದುವೇಳೆ ಸಮಗ್ರಧರ್ಮಗಳಿಂದ ಸಾದೃಶ್ಯ-ವನ್ನು ವಿವಕ್ಷಿಸುವುದೇ ಆದರೆ ಯಾವ ಅನುಮಾನದಲ್ಲಿಯೂ ಪಕ್ಷ-ದೃಷ್ಟಾಂತಗಳಲ್ಲಿ ಸಮಗ್ರಸಾದೃಶ್ಯವಿರುವುದಿಲ್ಲವಾದ್ದರಿಂದ ಎಲ್ಲ ಅನುಮಾನಗಳೂ ಅನುಪಪನ್ನವಾಗ-ಬೇಕಾಗುತ್ತದೆ.

ಆದ್ದರಿಂದ ಜೀವ-ಪರಮಾತ್ಮರಲ್ಲಿ ಅಭೇದ ಇಲ್ಲವಾದ್ದರಿಂದ ಭಗವಂತನಿಗೆ ದುಷ್ಟತ್ವ ಬಾರದ ಕಾರಣ ಭಗವಂತನಲ್ಲಿ ಭಕ್ತಿ ಮಾಡುವುದು ಯುಕ್ತವೇ ಆಗುವುದ-ರಿಂದ ಅವನ ಮಹಿಮಾವರ್ಣನ ಮಾಡುವುದು ಉಪಪನ್ನವೇ ಆಗುತ್ತದೆ ಎಂದು ಸಿದ್ಧವಾಗುತ್ತದೆ.

**ಉಪಮಾಧಿಕರಣವು ಮುಗಿಯಿತು.**

*ಅಧಿಕರಣ - 11*

# ಅಂಬುವದಧಿಕರಣ

## ಸಂಗತಿ

**ಸೂ.ರ.:- अत्रेश्वरे भक्त्यर्थं तस्या जीवस्वरूपाभिव्यक्तिरूपफलं निरूप्यते ।**

ಈಶ್ವರನಲ್ಲಿ ಭಕ್ತಿ ಉಂಟಾಗುವುದಕ್ಕಾಗಿ ಆ ಭಕ್ತಿಗೆ ಜೀವಸ್ವರೂಪಾಭಿವ್ಯಕ್ತಿ-ರೂಪವಾದ ಫಲವನ್ನು ನಿರೂಪಿಸುತ್ತಾರೆ ಹನ್ನೊಂದನೇ ಈ ಅಂಬುವದಧಿಕರಣದಲ್ಲಿ.

ಭಗವಂತನಲ್ಲಿ ಭಕ್ತಿ ಮಾಡಬೇಕೋ? ಬೇಡವೋ? ಎಂದು ಸಂದೇಹ.

## ಪೂರ್ವಪಕ್ಷ

**ಸೂ.ರ.:- ननु न मोक्षो भक्तिफलम् । अनादिसिद्धत्वात् । नित्यानन्दज्ञानादिमत्त्वं हि मोक्षः । तच्च स्वरूपमेव । न च स्वरूप-मागन्तुकं चेति सम्भवति । ततश्च मोक्षस्य भक्तिफलत्वाभावान्न तदर्थं भक्तिः कर्तव्या । नापि प्रयोजनान्तरमस्तीत्यकर्तव्यैव भक्तिरिति प्राप्ते सूत्रमाह ॥**

ಭಗವಂತನಲ್ಲಿ ಭಕ್ತಿಯನ್ನು ಮಾಡುವುದು ಸರಿಯಲ್ಲ. ಕಾರಣ ಆ ಭಕ್ತಿಗೆ ಯಾವ ವಿಧವಾದ ಪ್ರಯೋಜನವೂ ಇಲ್ಲವಾದ್ದರಿಂದ. ಮೋಕ್ಷವೇ ಫಲವಾಗಿ ಇದೆಯಲ್ಲ? ಎಂದರೆ, ಮೋಕ್ಷವು ಫಲವಾಗಲು ಸಾಧ್ಯವಿಲ್ಲ. ಏಕೆಂದರೆ - ನಿತ್ಯಾನಂದಜ್ಞಾನಾದಿ-ಮತ್ವವೇ ಮೋಕ್ಷ. ಅದು ಜೀವನ ಸ್ವರೂಪವೇ ಆಗಿದೆ. ಅದು ಸ್ವರೂಪವೂ ಆಗಿದೆ, ಆಗಂತುಕವೂ ಆಗಿದೆ ಎಂದು ಸಂಭವಿಸುವುದಿಲ್ಲ. ಹಾಗಾಗಿ ಆ ನಿತ್ಯಾನಂದಜ್ಞಾನಾದಿ-ಮತ್ವವು ಅನಾದಿಸಿದ್ಧವಾಗಿದೆ.

ನಿತ್ಯಾನಂದಜ್ಞಾನಾದಿಮತ್ವವು ಅನಾದಿಸಿದ್ಧವಾದ್ದರಿಂದ ಅದು ಭಕ್ತಿಯ ಫಲ-ವಾಗಲು ಸಾಧ್ಯವಿಲ್ಲ. ಹಾಗಾಗಿ ಮೋಕ್ಷರೂಪಪ್ರಯೋಜನಕ್ಕಾಗಿ ಭಕ್ತಿ ಮಾಡುವುದು ಯುಕ್ತವಲ್ಲ. ಇನ್ನು ಭಕ್ತಿಗೆ ಬೇರೆ ಯಾವ ಪ್ರಯೋಜನವೂ ಇಲ್ಲ. ಆದ್ದರಿಂದ

ನಿಷ್ಪ್ರಯೋಜನವಾದ್ದರಿಂದ ಭಗವಂತನಲ್ಲಿ ಭಕ್ತಿ ಮಾಡುವುದು ಸರಿಯಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

## ॐ अम्बुवदग्रहणात्तु न तथात्वम् ॐ (३-२-१९)

(ಅಂಬುವತ್ ಎನ್ನುವಲ್ಲಿ ಸಾದೃಶ್ಯಾರ್ಥದಲ್ಲಿ ವತುಪ್ ಪ್ರತ್ಯಯವಿದೆ. ಸಾದೃಶ್ಯ-ವಾದರೂ ಸ್ನೇಹರೂಪ ವಿಶೇಷಣದಿಂದ ವಿವಕ್ಷಿತವಾಗಿದೆ.)

**ಸೂತ್ರಾರ್ಥ** :- ಯತಃ = ಯಾವ ಕಾರಣ **ಅಂಬುವದಗ್ರಹಣಾತ್** = ಸ್ನೇಹಸಹಿತ ಮಾಹಾತ್ಮ್ಯಜ್ಞಾನವಿಲ್ಲದಿರುವುದರಿಂದ (ಭಕ್ತಿ ಇಲ್ಲದಿರುವುದರಿಂದ) **ತಥಾತ್ವಂ** = ಸುಖಾದ್ಯಾತ್ಮಕತ್ವರೂಪ ಈಶ್ವರಸಾದೃಶ್ಯವು **ನ ತು** ಸಮ್ಯಗ್ವ್ಯಜ್ಯತೇ = ಚೆನ್ನಾಗಿ ಅಭಿವ್ಯಕ್ತವಾಗುವುದಿಲ್ಲವೋ ಅತಃ = ಆ ಕಾರಣ ಭಕ್ತಿರೇವ ಸಮ್ಯಕ್ ಸ್ವರೂಪಾಭಿವ್ಯಕ್ತಿಜನಿಕಾ ಇತಿ ತದರ್ಥಂ ಸಾ ಕರ್ತವ್ಯಾ = ಭಕ್ತಿಯೇ ಸಮ್ಯಕ್ ಸ್ವರೂಪಾಭಿವ್ಯಕ್ತಿಜನಕವಾಗಿದೆಯಾದ್ದರಿಂದ, ಸಮ್ಯಕ್ ಸ್ವರೂಪಾಭಿವ್ಯಕ್ತಿಗಾಗಿ ಭಕ್ತಿಯನ್ನು ಮಾಡಬೇಕಿದೆ.

## ಸಿದ್ಧಾಂತ

**ಸೂ.ರ.:- एवं च भक्तिफलमेव मोक्षः । ज्ञानानन्दादेर्जीव-स्वरूपत्वेन नित्यसिद्धत्वेऽपि तदाविर्भावस्य भक्तिसाध्यत्वात् । भक्त्य-भावे तदभाव इति नियमात् । सुप्तौ भक्त्यभावेन ज्ञानानन्दाद्या-विर्भावमात्रसद्भावेऽपि सम्यगाविर्भावाभावात् । तथा च सम्यगाविर्भाव एव मोक्षशब्दार्थो भक्त्या साध्यो नाविर्भावमात्रम् । यमेवैष इति (कठ.२-२३) श्रुतेर्महित्वबुद्धिरिति (पाद्मे.) स्मृतेश्च । अतो मोक्षस्य भक्तिसाध्यत्वात्कर्तव्यैव तदर्थं भक्तिस्तन्महिमावर्णनं च सार्थकमिति सिद्धम् ॥**

"ಯಮೇವೈಷ ವೃಣುತೇ ತೇನ ಲಭ್ಯಸ್ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಮ್"

(ಕಠ.ಉ. 2-23) ಎಂಬುದಾಗಿ ಶ್ರುತಿ ಇರುವುದರಿಂದ ಮತ್ತು

ಮಹಿತ್ವಬುದ್ಧಿರ್ಭಕ್ತಿಸ್ತು ಸ್ನೇಹಪೂರ್ವಾಽಭಿಧೀಯತೇ ।
ತಥೈವ ವ್ಯಜ್ಯತೇ ಸಮ್ಯಗ್ಜೀವರೂಪಂ ಸುಖಾದಿಕಮ್ ॥

ಎಂಬುದಾಗಿ ಸ್ಮೃತಿ (ಪಾದ್ಮವಚನ) ಇರುವುದರಿಂದ ಮೋಕ್ಷವು ಭಕ್ತಿಯ ಫಲವೇ ಆಗಿದೆ. ಜ್ಞಾನಾನಂದಾದಿಗಳು ಜೀವಸ್ವರೂಪತ್ವೇನ ನಿತ್ಯಸಿದ್ಧವಾಗಿದ್ದರೂ ಸಹ, ಭಕ್ತಿ ಇಲ್ಲದಿದ್ದರೆ ಜ್ಞಾನಾನಂದಾದಿಗಳ ಆವಿರ್ಭಾವವಾಗುವುದಿಲ್ಲ ಎಂಬ ನಿಯಮದಿಂದಾಗಿ ಆ ಜ್ಞಾನಾನಂದಾದಿಗಳ ಆವಿರ್ಭಾವವು ಭಕ್ತಿಯಿಂದ ಸಾಧ್ಯವಾಗಿದೆ.

ಸುಷುಪ್ತಿಯಲ್ಲಿ ಜ್ಞಾನಾನಂದಾದ್ಯಾವಿರ್ಭಾವ ಮಾತ್ರ ಇದ್ದರೂ ಸಹ ಭಕ್ತಿ ಇಲ್ಲದ ಕಾರಣ ಸಮ್ಯಕ್ ಆವಿರ್ಭಾವ ಇರುವುದಿಲ್ಲ. ಹಾಗಾಗಿ ಅಂತಹ ಕೇವಲ ಆವಿರ್ಭಾವವು ಮೋಕ್ಷಶಬ್ದಾರ್ಥವಾಗಿ ವಿವಕ್ಷಿತವಾಗಿಲ್ಲ. ಕಿಂತು ಜ್ಞಾನಾನಂದಾದಿಗಳ ಸಮ್ಯಕ್ ಆವಿರ್ಭಾವವೇ ಮೋಕ್ಷಶಬ್ದಾರ್ಥವಾಗಿದ್ದು ಅದು ಭಕ್ತಿಯಿಂದ ಮಾತ್ರ ಸಾಧ್ಯವಾಗಿದೆ.

ಆದ್ದರಿಂದ ಮೋಕ್ಷವು ಭಕ್ತಿಯಿಂದಲೇ ಸಾಧ್ಯವಾದ್ದರಿಂದ ಭಗವಂತನಲ್ಲಿ ಭಕ್ತಿಯು ಕರ್ತವ್ಯವೇ ಆಗಿದೆ. ಹಾಗಾಗಿ ಭಕ್ತಿಯು ಹಾಗೂ ಭಕ್ತಿಗಾಗಿ ಭಗವಂತನ ಮಹಿಮಾವರ್ಣನೆ ಮಾಡುವುದು ಸಾರ್ಥಕವೇ ಆಗಿದೆ ಎಂದು ಸಿದ್ಧವಾಗುತ್ತದೆ.

**ಅಂಬುವದಧಿಕರಣವು ಮುಗಿಯಿತು.**

ಅಧಿಕರಣ - 12

# ವೃದ್ಧಿಹ್ರಾಸಾಧಿಕರಣ

## ಸಂಗತಿ

**ಸೂ.ರ.:- अत्र पुरुषेषु भक्तेस्तारतम्येन वृत्तित्वं तदनुसृत्य भगवता फलदातृत्वं च निरूप्यते ।**

ಪುರುಷರಲ್ಲಿ ಭಕ್ತಿಯು ತಾರತಮ್ಯದಿಂದ ಇರುತ್ತದೆ, ಆ ಭಕ್ತಿತಾರತಮ್ಯ-ಕ್ಕನುಸಾರವಾಗಿ ಭಗವಂತನು ಫಲದಾತೃವಾಗುತ್ತಾನೆ ಎಂದು ನಿರೂಪಿಸುತ್ತಾರೆ ಹನ್ನೆರಡನೇ ಈ ವೃದ್ಧಿಹ್ರಾಸಾಧಿಕರಣದಲ್ಲಿ.

ಭಕ್ತರಲ್ಲಿ ಭಕ್ತಿಯು ಏಕಪ್ರಕಾರವಾಗಿ ಇರುವುದೋ? ಅಥವಾ ವೃದ್ಧಿಹ್ರಾಸ ಉಳ್ಳದ್ದೋ ? ಎಂಬುದಾಗಿ ಸಂದೇಹ.

## ಪೂರ್ವಪಕ್ಷ

**ಸೂ.ರ.:- ननु ब्रह्मादीनां मनुष्योत्तमानां च भक्तिरेकप्रकारैव । मोक्षैकरूपफलभागित्वात् । न हि यावत्या भक्त्या मनुष्योत्तमानां मोक्षस्तावत्या ब्रह्मादीनां मोक्षसम्भवेऽधिकानुष्ठानाय प्रेक्षावत्प्रवृत्तिः सम्भवति । अथ न तावती भक्तिस्तेषां मोक्षसाधनतयाऽलम् । हन्त तर्हि मनुष्योत्तमानामपि भक्तिर्न स्यात् । पर्याप्तसाधनाभावात् । न हि दुःखाभावरूपमोक्षे तारतम्यमस्ति येन भक्तितारतम्यमुपपन्नं स्यात् । अतो भक्तिरेकप्रकारैवेति प्राप्ते सूत्रितम् ॥**

ಬ್ರಹ್ಮಾದಿಗಳಿಗೆ ಮತ್ತು ಮನುಷ್ಯೋತ್ತಮರಿಗೆ ಭಕ್ತಿಯು ಏಕಪ್ರಕಾರದ್ದೇ ಆಗಿರುತ್ತದೆ. ಕಾರಣ - ಮೋಕ್ಷರೂಪವಾದ ಒಂದೇ (ಫಲಕ್ಕೆ ಭಾಗಿಯಾದ್ದರಿಂದ) ಫಲ ಉಳ್ಳದ್ದಾದ್ದರಿಂದ. ಎಷ್ಟು ಭಕ್ತಿಯಿಂದ ಮನುಷ್ಯೋತ್ತಮರಿಗೆ ಮೋಕ್ಷ-ವಾಗುವುದೋ ಅಷ್ಟೇ ಭಕ್ತಿಯಿಂದಲೇ ಬ್ರಹ್ಮಾದಿಗಳಿಗೂ ಮೋಕ್ಷವು ಸಂಭಾವಿತ-ವಾಗುವಾಗ, ಅಧಿಕಭಕ್ತಿಯ ಅನುಷ್ಠಾನಕ್ಕಾಗಿ ಪ್ರೇಕ್ಷಾವಂತರ ಪ್ರವೃತ್ತಿಯು ಉಪಪನ್ನವಾಗುವುದಿಲ್ಲ.

ಮನೋಷ್ಯೋತ್ತಮರಿಗೆ ಇರುವಷ್ಟು ಭಕ್ತಿಯು ಬ್ರಹ್ಮಾದಿಗಳಿಗೆ ಮೋಕ್ಷಸಾಧನ-ವಾಗುವುದಿಲ್ಲ ಎಂದಾದರೆ ಮನುಷ್ಯೋತ್ತಮರಿಗೂ ಸಹ ಆ ಭಕ್ತಿಯು ಮೋಕ್ಷಸಾಧನ-ವಾಗದೇ ಹೋಗಬೇಕಾಗುತ್ತದೆ. ಸಾಧನಪರ್ಯಾಪ್ತಿ ಆಗುವುದಿಲ್ಲವಾದ್ದರಿಂದ.

ದುಃಖಾಭಾವರೂಪವಾದ ಮೋಕ್ಷದಲ್ಲಿ ತಾರತಮ್ಯವಿಲ್ಲ. ಒಂದುವೇಳೆ ಮೋಕ್ಷ-ದಲ್ಲಿ ತಾರತಮ್ಯವಿದ್ದಿದ್ದರೆ ಭಕ್ತಿಯಲ್ಲಿ ತಾರತಮ್ಯವು ಉಪಪನ್ನವಾಗುತ್ತಿತ್ತು. ಮೋಕ್ಷದಲ್ಲಿ ತಾರತಮ್ಯವಿಲ್ಲದ ಕಾರಣ ಮೋಕ್ಷಸಾಧನವಾದ ಭಕ್ತಿಯಲ್ಲಿಯೂ ತಾರತಮ್ಯ ಯುಕ್ತವಲ್ಲ. ಆದ್ದರಿಂದ ಭಕ್ತಿಯು ಏಕಪ್ರಕಾರವೇ ಆಗಿದೆ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ वृद्धिह्रासभाक्त्वमन्तर्भावादुभयसामञ्जस्यादेवम् ॐ (३-२-२०)**

**ಸೂತ್ರಾರ್ಥ** :- ವೃದ್ಧಿಹ್ರಾಸಭಾಕ್ತ್ವಂ ನ ಅಂಗೀಕಾರ್ಯಂ = ಸಾಧಕರಲ್ಲಿ ಭಕ್ತ್ಯಾದಿಗಳಿಗೆ ಆಧಿಕ್ಯ-ನ್ಯೂನತಾವನ್ನು ಅಂಗೀಕರಿಸಲು ಬರುವುದಿಲ್ಲ, ಕುತಃ = ಯಾಕೆ? **ಅಂತರ್ಭಾವಾತ್** = ಮಹತ್-ಅಲ್ಪಫಲಉಳ್ಳ ಬ್ರಹ್ಮಾದಿಗಳು ಇತರರೂ ಸಹ ಭಾಕ್ತತ್ವದಲ್ಲಿ ಅಂತರ್ಭಾವವಾಗುವುದರಿಂದ,

ತಥಾಪಿ ಕುತೋ ವೃದ್ಧಿಹ್ರಾಸಭಾಕ್ತ್ವಂ? ಆದರೂ ವೃದ್ಧಿ-ಹ್ರಾಸಭಾಕ್ತ್ವವನ್ನು ಏಕೆ ಹೇಳಬೇಕು? ಎಂದರೆ, ಏವಂ = ಭಕ್ತಿತಾರತಮ್ಯ ಇದ್ದಾಗಲೇ **ಉಭಯ-ಸಾಮಂಜಸ್ಯಾತ್** ಉಭಯಾನ್ ಪ್ರತಿ = ಮಹತ್-ಅಲ್ಪಫಲವುಳ್ಳ ಬ್ರಹ್ಮಾದಿಜೀವರನ್ನು ಕುರಿತು ಫಲದಾತುರೀಶ್ವರಸ್ಯ = ಫಲದಾತೃವಾದ ಈಶ್ವರನಿಗೆ ಸಾಮಂಜಸ್ಯಾತ್ = ಭಕ್ತಿತಾರತಮ್ಯದಿಂದಾಗಿ ವೈಷಮ್ಯೇನ ಫಲದಾನವು ಯುಕ್ತವಾಗುವುದರಿಂದ. ಅನ್ಯಥಾ ಅಯುಕ್ತತ್ವಾತ್ = ಭಕ್ತಿತಾರತಮ್ಯ ಇಲ್ಲದಿದ್ದರೆ ವೈಷಮ್ಯೇನ ಫಲದಾನವು ಯುಕ್ತ-ವಾಗುವುದಿಲ್ಲವಾದ್ದರಿಂದ. ಅತಃ ತತ್ ಅಂಗೀಕಾರ್ಯಂ = ಆದ್ದರಿಂದ ವೃದ್ಧಿಹ್ರಾಸಭಾಕ್ತ್ವವನ್ನು ಅಂಗೀಕರಿಸಲೇಬೇಕು.

## ಸಿದ್ಧಾಂತ

**ಸೂ.ರ.:– एवं च नैकप्रकारा सर्वेषां भक्तिः । किन्तु वृद्धि-ह्रासवती । अन्यथा प्रमाणसिद्धं सर्वभक्तान्प्रति परमेश्वरे सामञ्जस्यं न स्यात् । साधनस्योत्तमत्वेनेति (ब्राह्मे.) स्मृतेश्च । ततश्च भक्तेः फलानुसारेण तारतम्यसद्भावेन युक्ता तत्र भक्तिरिति सिद्धम् ॥**

ಎಲ್ಲ ಭಕ್ತರ ಭಕ್ತಿಯೂ ಒಂದೇ ಪ್ರಕಾರದ್ದಾಗಿಲ್ಲ, ಕಿಂತು ವೃದ್ಧಿಹ್ರಾಸ ಉಳ್ಳದ್ದಾಗಿದೆ. ಒಂದುವೇಳೆ ಭಕ್ತಿಯು ಏಕಪ್ರಕಾರದ್ದಾಗಿದ್ದರೆ, ಎಲ್ಲ ಭಕ್ತರನ್ನು ಕುರಿತು ಪರಮೇಶ್ವರನ ವೈಷಮ್ಯೇನ ಫಲದಾನವು ಪ್ರಮಾಣಸಿದ್ಧವಾದದ್ದು ಉಪಪನ್ನ-ವಾಗುವುದಿಲ್ಲ.

ಸಾಧನಸ್ಯೋತ್ತಮತ್ವೇನ ಸಾಧ್ಯಂ ಚೋತ್ತಮಮಾಪ್ನುಯುಃ ।
ಬ್ರಹ್ಮಾದಯಃ ಕ್ರಮೇಣೈವ ಯಥಾಽನಂದಶ್ರುತೌ ಶ್ರುತಾ ॥

ಎಂಬುದಾಗಿ ಈ ವಿಷಯದಲ್ಲಿ ಬ್ರಾಹ್ಮವಚನವೂ ಪ್ರಮಾಣವಾಗಿ ಇದೆ.

ಆದ್ದರಿಂದ ಫಲಕ್ಕೆ ಅನುಸಾರವಾಗಿ ಭಕ್ತಿಯಲ್ಲಿ ತಾರತಮ್ಯ ಇರುವುದರಿಂದ ಭಗವಂತನಲ್ಲಿ ಭಕ್ತಿ ಮಾಡುವುದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 21

**ಸೂ.ರ.:- ननु भवेत्साधनतारतम्यं यदाऽनन्दतारतम्यं स्यात् । तदेव कुत इति हेत्वसिद्धिमाक्षिप्य परिहरत्सूत्रमाचष्टे ॥**

ಸಾಧನವಾದ ಭಕ್ತಿಯಲ್ಲಿ ತಾರತಮ್ಯವು ಉಪಪನ್ನವಾಗುತ್ತಿತ್ತು. ಯಾವಾಗ? ಒಂದುವೇಳೆ ಫಲವಾದ ಆನಂದದಲ್ಲಿ ತಾರತಮ್ಯವು ಇರುತ್ತಿದ್ದರೆ. ಆದರೆ ಫಲವಾದ ಆನಂದದಲ್ಲಿ ತಾರತಮ್ಯವೇ ಹೇಗೆ ಸಿದ್ಧವಾಗುತ್ತದೆ? ಎಂಬುದಾಗಿ ಹೇತ್ವಸಿದ್ಧಿ ಶಂಕೆ ಬಂದರೆ, ಅದನ್ನು ಪರಿಹರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

## ॐ दर्शनाच्च ॐ (३-२-२१)

**ಸೂತ್ರಾರ್ಥ :- ದರ್ಶನಾಚ್ಚ** = 'ಅಥಾತಃ' (ತೈ. 2-8) ಎಂಬ ಶ್ರುತಿಯಲ್ಲಿ ಹಾಗೂ 'ಯಥಾ' ಎಂಬ ಸ್ಮೃತಿಯಲ್ಲಿಯೂ ಸಹ ಫಲತಾರತಮ್ಯವನ್ನು ಹೇಳಿದ್ದರಿಂದ, ಸಾಧನವಾದ ಭಕ್ತಿಯಲ್ಲಿ ತಾರತಮ್ಯವನ್ನು ಹೇಳಿದ್ದು ಯುಕ್ತವೇ ಆಗಿದೆ.

**ಸೂ.ರ.:- एवं च निर्दिष्टश्रुतिस्मृतिभ्यां भक्तेः फलानुसारेण तारतम्यसद्भावेनेश्वरस्य विषमत्वाभावाद्युक्ता तत्र भक्तिरिति सिद्धम् ॥**

"ಅಥಾತ ಆನಂದಸ್ಯ ಮೀಮಾಂಸಾ ಭವತಿ" (ತೈ.ಉ. 2-8) ಎಂಬ ಶ್ರುತಿ ಹಾಗೂ

ಯಥಾ ಭಕ್ತಿವಿಶೇಷೋಽತ್ರ ದೃಶ್ಯತೇ ಪುರುಷೋತ್ತಮೇ ।
ತಥಾ ಮುಕ್ತಿವಿಶೇಷೋಽಪಿ ಜ್ಞಾನಿನಾಂ ಲಿಂಗಭೇದನೇ ॥

ಎಂಬುದಾಗಿ ಸ್ಮೃತಿವಚನವೂ ಇರುವುದರಿಂದ, ಫಲವಾದ ಆನಂದದಲ್ಲಿ ತಾರತಮ್ಯವು ಇರುವ ಕಾರಣ ಅದಕ್ಕೆ ಅನುಸಾರವಾಗಿ ಭಕ್ತಿಯಲ್ಲಿಯೂ ತಾರತಮ್ಯವು ಇರುವುದರಿಂದ ಈಶ್ವರನಿಗೆ ವಿಷಮತ್ವವು ಬರುವುದಿಲ್ಲ.

ಈಶ್ವರನಿಗೆ ವಿಷಮತ್ವವಿಲ್ಲದ ಕಾರಣ ಅವನಲ್ಲಿ ಭಕ್ತಿ ಮಾಡುವುದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ವೃದ್ಧಿಹ್ರಾಸಾಧಿಕರಣವು ಮುಗಿಯಿತು.

ಅಧಿಕರಣ – 13

# ಪ್ರಕೃತ್ಯಧಿಕರಣ

## ಸಂಗತಿ

**ಸೂ.ರ.:– अत्र विश्वपालकत्वं समर्थ्यते ।**

ಭಗವಂತನಿಗೆ ವಿಶ್ವಪಾಲಕತ್ವವನ್ನು ಸಮರ್ಥಿಸುತ್ತಾರೆ ಹದಿಮೂರನೇ ಈ ಪ್ರಕೃತ್ಯಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु नेश्वरः पालकः । जगत्सृष्ट्वा स्थितस्येश्वरस्य विनाशप्रवृत्यभावमात्रेण कालविशेषसम्बन्धरूपस्थितिसम्भवेन पालन-रूपतद्व्यापारानपेक्षत्वात् । न चावान्तरोपद्रवनिरासायेश्वरव्यापारोऽपेक्षित इति वाच्यम् । ईश्वरस्यैवावान्तरोपद्रवकर्तृत्वेन तदकरणमात्रेण समीहितसिद्धेः । यद्यन्यस्योपद्रवकर्तृत्वे तन्निरासकव्यापाररूपत्वं पालकत्वमन्यस्य स्यात् । न चेश्वरादन्यसंहर्ता येन तन्निरासेनेश्वरस्य पालकत्वं स्यात् । विरोधाभावेन स्वस्य स्वनिवारकत्वायोगात् । ततश्च पालकत्वाभावेन महामहिमत्वाभावान्न तत्र भक्तिरिति प्राप्ते सूत्रितम् ॥**

ಈಶ್ವರನು ಜಗತ್ತಿನ ಪಾಲಕನಲ್ಲ. ಕಾರಣ ಜಗತ್ತನ್ನು ಸೃಷ್ಟಿ ಮಾಡಿ ಕುಳಿತ ಈಶ್ವರನಿಗೆ ವಿನಾಶಪ್ರವೃತ್ತಿ ಇಲ್ಲದ ಮಾತ್ರದಿಂದ ಜಗತ್ತಿಗೆ ಕಾಲವಿಶೇಷ-ಸಂಬಂಧರೂಪವಾದ ಸ್ಥಿತಿಯು ಸಂಭವಿಸುವುದರಿಂದ ಪಾಲನರೂಪವಾದ ಈಶ್ವರನ ವ್ಯಾಪಾರವು ಅಪೇಕ್ಷಿತವಾಗಿಲ್ಲ.

ಅವಾಂತರ ಉಪದ್ರವಗಳನ್ನು ನಿರಾಕರಿಸುವುದಕ್ಕಾಗಿ ಈಶ್ವರವ್ಯಾಪಾರವು ಅಪೇಕ್ಷಿತವಾಗಿದೆ ಎಂದು ಶಂಕಿಸುವುದು ಸರಿಯಲ್ಲ. ಏಕೆಂದರೆ - ಈಶ್ವರನೇ ಅವಾಂತರ ಉಪದ್ರವಗಳನ್ನು ಉಂಟುಮಾಡುವವನಾದ್ದರಿಂದ, ಈಶ್ವರನು ಆ ಅವಾಂತರ ಉಪದ್ರವಗಳನ್ನು ಉಂಟುಮಾಡದೇ ಇರುವ ಮಾತ್ರದಿಂದ ಸಮೀಹಿತ-

ವಾದದ್ದು ಸಿದ್ಧವಾಗುತ್ತದೆ. ಈಶ್ವರನನ್ನು ಬಿಟ್ಟು ಬೇರೆ ಪುರುಷನು ಅವಾಂತರ ಉಪದ್ರವಗಳನ್ನು ಉಂಟುಮಾಡುತ್ತಾನೆಂದು ಅಂಗೀಕರಿಸಿದರೆ ಆ ಅವಾಂತರ ಉಪದ್ರವನಿರಾಸಕ ವ್ಯಾಪಾರರೂಪವಾದ ಪಾಲಕತ್ವವೂ ಬೇರೆಯವರಿಗೇ ಕೊಡಬೇಕಾಗುತ್ತದೆ. ಇನ್ನು ಈಶ್ವರನನ್ನು ಬಿಟ್ಟು ಬೇರೆ ಪುರುಷನು ಸಂಹಾರಕನಾಗಿಲ್ಲ. ಹಾಗೆ ಸಂಹಾರಕ ಇರುತ್ತಿದ್ದರೆ ಆ ಸಂಹಾರವನ್ನು ನಿವಾರಿಸುವುದರಿಂದ ಈಶ್ವರನಿಗೆ ಪಾಲಕತ್ವ ಕೊಡುತ್ತಿತ್ತು.

ಆದ್ದರಿಂದ ಸೃಷ್ಟಿಕರ್ತೃವಾದ ಈಶ್ವರನ ವಿನಾಶಪ್ರವೃತ್ತ್ಯಭಾವಮಾತ್ರದಿಂದ ಜಗತ್ತಿಗೆ ಸ್ಥಿತಿಯು ಸ್ವತಃ ಸಂಪನ್ನವಾಗುವುದರಿಂದ ಈಶ್ವರನಿಗೆ ಪಾಲಕತ್ವ ಇಲ್ಲ. ಪಾಲಕತ್ವ ಇಲ್ಲವಾದ್ದರಿಂದ ಈಶ್ವರನು ಮಹಾಮಹಿಮನಲ್ಲ. ಈಶ್ವರನು ಮಹಾಮಹಿಮ-ನಾಗದ ಕಾರಣ ಅವನಲ್ಲಿ ಭಕ್ತಿ ಮಾಡುವುದು ಸರಿಯಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ प्रकृतैतावत्वं हि प्रतिषेधति ततो ब्रवीति च भूयः ॐ (३-२-२२)**

**ಸೂತ್ರಾರ್ಥ** :- **ಹಿ** = ಯಾವ ಕಾರಣ ನೈತಾವದೇನಾ (ಋ. 10-31-8) ಎಂಬ ಶ್ರುತಿಯು **ಪ್ರಕೃತೈತಾವತ್ವಂ** = ಪ್ರಕೃತವಾದ ಸೃಷ್ಟ್ಯಾದಿಕರ್ತೃತ್ವಕ್ಕೆ ಸೃಷ್ಟಿಸಂಹಾರ ಕರ್ತೃತ್ವಮಾತ್ರಪರ್ಯವಸಿತತ್ವವನ್ನು **ಪ್ರತಿಷೇಧತಿ** = ನಿರಾಕರಿಸುತ್ತದೆಯೋ, **ತತಃ** = ಸೃಷ್ಟ್ಯಾದಿಕರ್ತೃತ್ವಕ್ಕಿಂತಲೂ **ಭೂಯಃ ಚ** = ಅಧಿಕವಾದ ಪಾಲಕತ್ವವನ್ನೂ **ಬ್ರವೀತಿ** = ಹೇಳುತ್ತದೆಯೋ **ಅತಃ** = ಆ ಕಾರಣ **ಅತಃ** = ಹರಿಯು ಪಾಲಕನಾದ್ದರಿಂದ "ಸೃಷ್ಟಿಂ ಚ ಪಾಲನಂ ಚೈವ ...." ಎಂಬ ಬ್ರಹ್ಮಾಂಡಪುರಾಣ ವಚನ ಸೂಚಿತವಾದ ಪಾಲಕತ್ವರೂಪವಾದ ಮತ್ತೊಂದು ಮಹಿಮೆಯೂ ಭಗವಂತನಿಗೆ ಇದೆ ಎಂಬುದಾಗಿ ತಿಳಿಸುತ್ತಿದೆ. ಸೂತ್ರಕಾರರು ಚ ಶಬ್ದದಿಂದ 'ಸೃಷ್ಟಿಂ ಚ' ಎಂಬ ಸ್ಮೃತಿಯನ್ನು ಸೂಚಿಸುತ್ತಿದ್ದಾರೆ.

## ಸಿದ್ಧಾಂತ

**ಸೂ.ರ.:– एवं च भवत्येवेश्वरः पालकः । नैतावदेना पर इति (ऋ.१०-३१-६,७,८) श्रुत्या सृष्टिसंहारमात्रकर्तृत्वं प्रतिषिध्य पालकत्वस्याप्यभिधानात् । न चोपद्रवसंहारविलम्बमात्रेणैव स्थिति-**

**सिद्धेर्न तदर्थमीश्वरापेक्षेति वाच्यम् । सर्वस्य धारणार्थं चेतनानामन्नपानाद्यर्थं तद्व्यापारस्यावश्यकत्वात् । अतः पालनादिमहामहिम्नि हरौ भक्तिर्युक्तेति सिद्धम् ॥**

ಈಶ್ವರನು ಪಾಲಕ ಆಗೇ ಆಗುತ್ತಾನೆ. ಕಾರಣ - ''ನೈತಾವದೇನಾ ಪರೋ ಅನ್ಯದಸ್ತುಕ್ಷಾ ಸ ದ್ಯಾವಾಪೃಥಿವೀ ಬಿಭರ್ತಿ'' (ಋ. 10-31-8) ಎಂಬ ಶ್ರುತಿಯು ಭಗವಂತನಿಗೆ ಕೇವಲ ಸೃಷ್ಟಿಕರ್ತೃತ್ವ - ಸಂಹಾರಕರ್ತೃತ್ವಗಳನ್ನು ನಿಷೇಧಿಸಿ ಪಾಲಕತ್ವವೂ ಇದೆಯೆಂದು ಹೇಳುತ್ತಿದೆ. ಆದ್ದರಿಂದ ಈಶ್ವರನಿಗೆ ಪಾಲಕತ್ವವೂ ಇದೆ.

ಹಿಂದೆ ಆಕ್ಷೇಪ ಮಾಡಿಕೊಂಡಂತೆ ಉಪದ್ರವ-ಸಂಹಾರಗಳ ವಿಲಂಬ ಮಾತ್ರದಿಂದಲೇ ಸ್ಥಿತಿಯು ಸಿದ್ಧವಾಗುವಾಗ ಸ್ಥಿತಿಗಾಗಿ ಈಶ್ವರನ ಅಪೇಕ್ಷೆ ಇಲ್ಲ ಎಂಬ ಶಂಕೆ ಸರಿಯಲ್ಲ. 'ಸ ದ್ಯಾವಾಪೃಥಿವೀ ಬಿಭರ್ತಿ' ಎಂಬುದಾಗಿ ಶ್ರುತಿ ಹೇಳಿದಂತೆ ಎಲ್ಲ ಧಾರಣ ಮಾಡುವುದಕ್ಕಾಗಿ, ಚೇತನರಿಗೆ ಅನ್ನಪಾನಾದಿಗಳನ್ನು ಕೊಡುವುದಕ್ಕಾಗಿ ಈಶ್ವರನ ವ್ಯಾಪಾರವು ಆವಶ್ಯಕವೇ ಆಗಿದೆ. ಆದ್ದರಿಂದ ಈಶ್ವರನಲ್ಲಿ ಪಾಲಕತ್ವವನ್ನು ಒಪ್ಪಲೇಬೇಕು.

ಹೀಗಾಗಿ ಪಾಲನಾದಿ ಮಹಾಮಹಿಮೆಯುಳ್ಳ ಹರಿಯಲ್ಲಿ ಭಕ್ತಿ ಮಾಡುವುದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

**ಪ್ರಕೃತ್ಯಧಿಕರಣವು ಮುಗಿಯಿತು.**

*ಅಧಿಕರಣ -14*

# ಅವ್ಯಕ್ತತ್ವಾಧಿಕರಣ

## ಸಂಗತಿ

**ಸೂ.ರ.:- अत्र भगवद्भक्तेः कर्तव्यतासमर्थनाय तस्योपलब्धि-योग्यत्वं समर्थ्यते ।**

ಭಗವದ್ಭಕ್ತಿಗೆ ಕರ್ತವ್ಯತ್ವವನ್ನು ಸಮರ್ಥಿಸುವುದಕ್ಕಾಗಿ ಈಶ್ವರನಿಗೆ ಉಪಲಬ್ಧಿ-ಯೋಗ್ಯತ್ವವನ್ನು ಸಮರ್ಥಿಸುತ್ತಾರೆ ಹದಿನಾಲ್ಕನೇ ಈ ಅವ್ಯಕ್ತತ್ವಾಧಿಕರಣದಲ್ಲಿ

## ಪೂರ್ವಪಕ್ಷ

**ಸೂ.ರ.:- ननु व्यक्तमेवायमीश्वरः । महत्त्वसमानाधिकरणोद्भूत-रूपत्वात् । यदा पश्य इति (मु.३-१-३) श्रुतेश्च । न ह्यव्यक्त-स्वभावत्वे साधनशतेनापि दर्शनमुपपद्यते । स्वभावस्यानपायात् । ततश्च स्तम्भादिवत्पुरुषप्रयत्नेनैव प्रत्यक्षसम्भवाद्व्यर्थैव तद्भक्तिरिति प्राप्ते सूत्रितम् ॥**

ಈಶ್ವರನು ಮಹತ್ವಸಮಾನಾಧಿಕರಣ ಉದ್ಭೂತರೂಪ ಉಳ್ಳವನಾದ್ದರಿಂದ ವ್ಯಕ್ತನೇ ಆಗಿದ್ದಾನೆ.

"ಯದಾ ಪಶ್ಯಃ ಪಶ್ಯತೇ ರುಕ್ಮವರ್ಣಮ್" (ಮುಂ. 3-1-3)

ಎಂಬುದಾಗಿ ಶ್ರುತಿಯೂ ಸಹ ಭಗವಂತನಿಗೆ ವ್ಯಕ್ತತ್ವವನ್ನೇ ತಿಳಿಸುತ್ತಿದೆ. ಒಂದುವೇಳೆ ಭಗವಂತನು ಅವ್ಯಕ್ತಸ್ವಭಾವದವನಾಗಿದ್ದರೆ ಸ್ವಭಾವಕ್ಕೆ ನಾಶವಿಲ್ಲ-ವಾದ್ದರಿಂದ ಸಾಧನಶತದಿಂದಲೂ ಸಹ (ನೂರಾರು ಸಾಧನಗಳಿಂದಲೂ ಸಹ) ಅವನ ದರ್ಶನ ಉಪಪನ್ನವಾಗುವುದಿಲ್ಲ.

ಆದ್ದರಿಂದ ಸ್ತಂಭಾದಿಗಳಂತೆ ಪುರುಷಪ್ರಯತ್ನದಿಂದಲೇನೇ ಪ್ರತ್ಯಕ್ಷನಾಗಲು ಸಂಭಾವಿತವಾದಾಗ ಅವನಲ್ಲಿ ಭಕ್ತಿ ಮಾಡುವುದು ವ್ಯರ್ಥವೇ ಆಗಿದೆ ಎಂಬುದಾಗಿ ಪೂರ್ವಪಕ್ಷ ಬಂದರೆ, ಆದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

## ॐ तदव्यक्तमाह हि ॐ (३-२-२३)

**ಸೂತ್ರಾರ್ಥ** :- **ತತ್** = ಬ್ರಹ್ಮನು **ಅವ್ಯಕ್ತಂ** = ಪುರುಷಪ್ರಯತ್ನದಿಂದ ನೋಡಲು ಅಶಕ್ಯಸ್ವಭಾವವುಳ್ಳವನು. ಕುತಃ = ಏಕೆ? ಹಿ = ಯಾವ ಕಾರಣ "ಅವ್ಯಕ್ತಂ ಚ ನಿಷ್ಫಲಂ" (ಕೌಂಠನ್ಯಶ್ರುತಿ) ಎಂಬುದಾಗಿ ಶ್ರುತಿಯು ತಥಾ **ಆಹ** = ಬ್ರಹ್ಮನನ್ನು ಅವ್ಯಕ್ತನನ್ನಾಗಿ ಕರೆದಿದೆಯೋ ಆ ಕಾರಣ.

### ಸಿದ್ಧಾಂತ

**ಸೂ.ರ.:- एवं चाव्यक्तमेवायमीश्वरः । अरूपमिति श्रुतेः । अत एव प्रत्यक्षताप्रयोजकप्राकृतरूपत्त्वमसिद्धम् । ततश्च स्वतोऽव्यक्तस्यापि ईश्वरस्य भक्तिसाध्यप्रसादादापरोक्ष्यसम्भवात्सफलत्वाद्भक्तिः कर्तव्येति सिद्धम् ॥**

ಅರೂಪಮಕ್ಷರಂ ಬ್ರಹ್ಮ ಸದಾವ್ಯಕ್ತಂ ಚ ನಿಷ್ಫಲಮ್ ।
ಯದ್‌ಜ್ಞಾತ್ವಾ ಮುಚ್ಯತೇ ಜಂತುರಾನಂದಶ್ಚಾವ್ಯಯೋ ಭವೇತ್ ॥
(ಕೌಂಠರವ್ಯಶ್ರುತಿಃ)

ಎಂಬುದಾಗಿ ಶ್ರುತಿ ಇರುವುದರಿಂದ ಈಶ್ವರನು ಅವ್ಯಕ್ತನೇ ಆಗಿದ್ದಾನೆ. ಅಂತೆಯೇ (ಬ್ರಹ್ಮನು ಅವ್ಯಕ್ತಸ್ವಭಾವದವನಾದ್ದರಿಂದಲೇ) ಪ್ರತ್ಯಕ್ಷತ್ವಪ್ರಯೋಜಕವಾದ ಪ್ರಾಕೃತರೂಪವತ್ವವು ಅಸಿದ್ಧವಾಗಿದೆ.

ಆದ್ದರಿಂದ ಸ್ವಾಭಾವಿಕವಾಗಿ ಈಶ್ವರನು ಅವ್ಯಕ್ತನಾಗಿದ್ದರೂ ಸಹ ಭಕ್ತಿಸಾಧ್ಯವಾದ ಪ್ರಸಾದದಿಂದ ಅಪರೋಕ್ಷನಾಗಲು ಸಂಭಾವಿತವಾದಾಗ, ಭಕ್ತಿಯು ಸಾರ್ಥಕವೇ ಆಗಿದೆ. ಆದ್ದರಿಂದ ಭಗವಂತನಲ್ಲಿ ಭಕ್ತಿಯನ್ನು ಮಾಡಲೇಬೇಕು ಎಂದು ಸಿದ್ಧವಾಗುತ್ತದೆ.

### ಸೂತ್ರ - 24

**ಸೂ.ರ.:- नन्वस्तु स्वतोऽव्यक्तं ब्रह्म । तथाऽपि संराधनेन पुरुषप्रयत्नेन यक्षादिवद्व्यक्तं भविप्यति । एवं चेत् किं भक्त्येत्याशङ्कां परिहरत्सूत्रमुपन्यस्यति ॥**

ಅಧಿಕರಣ -14

# ಅವ್ಯಕ್ತತ್ವಾಧಿಕರಣ

## ಸಂಗತಿ

**ಸೂ.ರ.:- अत्र भगवद्भक्तेः कर्तव्यतासमर्थनाय तस्योपलब्धि-योग्यत्वं समर्थ्यते ।**

ಭಗವದ್ಭಕ್ತಿಗೆ ಕರ್ತವ್ಯತ್ವವನ್ನು ಸಮರ್ಥಿಸುವುದಕ್ಕಾಗಿ ಈಶ್ವರನಿಗೆ ಉಪಲಬ್ಧಿ-ಯೋಗ್ಯತ್ವವನ್ನು ಸಮರ್ಥಿಸುತ್ತಾರೆ ಹದಿನಾಲ್ಕನೇ ಈ ಅವ್ಯಕ್ತತ್ವಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:- ननु व्यक्तमेवायमीश्वरः । महत्त्वसमानाधिकरणोद्भूत-रूपत्वात् । यदा पश्य इति (मु.३-१-३) श्रुतेश्च । न ह्यव्यक्त-स्वभावत्वे साधनशतेनापि दर्शनमुपपद्यते । स्वभावस्यानपायात् । ततश्च स्तम्भादिवत्पुरुषप्रयत्नेनैव प्रत्यक्षसम्भवाद्व्यर्थैव तद्भक्तिरिति प्राप्ते सूत्रितम् ॥**

ಈಶ್ವರನು ಮಹತ್ವಸಮಾನಾಧಿಕರಣ ಉದ್ಭೂತರೂಪ ಉಳ್ಳವನಾದ್ದರಿಂದ ವ್ಯಕ್ತನೇ ಆಗಿದ್ದಾನೆ.

"ಯದಾ ಪಶ್ಯಃ ಪಶ್ಯತೇ ರುಕ್ಮವರ್ಣಮ್" (ಮುಂ. 3-1-3)

ಎಂಬುದಾಗಿ ಶ್ರುತಿಯೂ ಸಹ ಭಗವಂತನಿಗೆ ವ್ಯಕ್ತತ್ವವನ್ನೇ ತಿಳಿಸುತ್ತಿದೆ. ಒಂದುವೇಳೆ ಭಗವಂತನು ಅವ್ಯಕ್ತಸ್ವಭಾವದವನಾಗಿದ್ದರೆ ಸ್ವಭಾವಕ್ಕೆ ನಾಶವಿಲ್ಲ-ವಾದ್ದರಿಂದ ಸಾಧನಶತದಿಂದಲೂ ಸಹ (ನೂರಾರು ಸಾಧನಗಳಿಂದಲೂ ಸಹ) ಅವನ ದರ್ಶನ ಉಪಪನ್ನವಾಗುವುದಿಲ್ಲ.

ಆದ್ದರಿಂದ ಸ್ತಂಭಾದಿಗಳಂತೆ ಪುರುಷಪ್ರಯತ್ನದಿಂದಲೇನೇ ಪ್ರತ್ಯಕ್ಷನಾಗಲು ಸಂಭಾವಿತವಾದಾಗ ಅವನಲ್ಲಿ ಭಕ್ತಿ ಮಾಡುವುದು ವ್ಯರ್ಥವೇ ಆಗಿದೆ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

## ॐ तदव्यक्तमाह हि ॐ (३-२-२३)

**ಸೂತ್ರಾರ್ಥ** :- **ತತ್** = ಬ್ರಹ್ಮನು **ಅವ್ಯಕ್ತಂ** = ಪುರುಷಪ್ರಯತ್ನದಿಂದ ನೋಡಲು ಅಶಕ್ಯಸ್ವಭಾವವುಳ್ಳವನು. ಕುತಃ = ಏಕೆ? **ಹಿ** = ಯಾವ ಕಾರಣ "ಅವ್ಯಕ್ತಂ ಚ ನಿಷ್ಕಲಂ" (ಕೌಂಠನ್ಯಶ್ರುತಿ) ಎಂಬುದಾಗಿ ಶ್ರುತಿಯು ತಥಾ **ಆಹ** = ಬ್ರಹ್ಮನನ್ನು ಅವ್ಯಕ್ತನನ್ನಾಗಿ ಕರೆದಿದೆಯೋ ಆ ಕಾರಣ.

### ಸಿದ್ಧಾಂತ

**ಸೂ.ರ.:- एवं चाव्यक्तमेवायमीश्वरः । अरूपमिति श्रुतेः । अत एव प्रत्यक्षताप्रयोजकप्राकृतरूपत्त्वमसिद्धम् । ततश्च स्वतोऽव्यक्तस्यापि ईश्वरस्य भक्तिसाध्यप्रसादादापरोक्ष्यसम्भवात्सफलत्वाद्भक्तिः कर्तव्येति सिद्धम् ॥**

ಅರೂಪಮಕ್ಷರಂ ಬ್ರಹ್ಮ ಸದಾವ್ಯಕ್ತಂ ಚ ನಿಷ್ಕಲಮ್ ।
ಯದ್‌ಜ್ಞಾತ್ವಾ ಮುಚ್ಯತೇ ಜಂತುರಾನಂದಶ್ಚಾವ್ಯಯೋ ಭವೇತ್ ॥
(ಕೌಂಠರವ್ಯಶ್ರುತಿಃ)

ಎಂಬುದಾಗಿ ಶ್ರುತಿ ಇರುವುದರಿಂದ ಈಶ್ವರನು ಅವ್ಯಕ್ತನೇ ಆಗಿದ್ದಾನೆ. ಅಂತೆಯೇ (ಬ್ರಹ್ಮನು ಅವ್ಯಕ್ತಸ್ವಭಾವದವನಾದ್ದರಿಂದಲೇ) ಪ್ರತ್ಯಕ್ಷತ್ವಪ್ರಯೋಜಕವಾದ ಪ್ರಾಕೃತರೂಪವತ್ವವು ಅಸಿದ್ಧವಾಗಿದೆ.

ಆದ್ದರಿಂದ ಸ್ವಾಭಾವಿಕವಾಗಿ ಈಶ್ವರನು ಅವ್ಯಕ್ತನಾಗಿದ್ದರೂ ಸಹ ಭಕ್ತಿಸಾಧ್ಯವಾದ ಪ್ರಸಾದದಿಂದ ಅಪರೋಕ್ಷನಾಗಲು ಸಂಭಾವಿತವಾದಾಗ, ಭಕ್ತಿಯು ಸಾರ್ಥಕವೇ ಆಗಿದೆ. ಆದ್ದರಿಂದ ಭಗವಂತನಲ್ಲಿ ಭಕ್ತಿಯನ್ನು ಮಾಡಲೇಬೇಕು ಎಂದು ಸಿದ್ಧವಾಗುತ್ತದೆ.

### ಸೂತ್ರ - 24

ಸೂ.ರ.:- नन्वस्तु स्वतोऽव्यक्तं ब्रह्म । तथाऽपि संराधनेन पुरुषप्रयत्नेन यक्षादिवद्व्यक्तं भविष्यति । एवं चेत् किं भक्त्येत्याशङ्कां परिहरत्सूत्रमुपन्यस्यति ॥

ಬ್ರಹ್ಮನು ಸ್ವಾಭಾವಿಕವಾಗಿಯೇ ಅವ್ಯಕ್ತನಾಗಲಿ. ಆದರೂ ಸಂರಾಧನದಿಂದ (ಚೆನ್ನಾಗಿ ಪೂಜಿಸುವುದರಿಂದ) ಪುರುಷಪ್ರಯತ್ನದಿಂದ ಯಕ್ಷಾದಿಗಳಂತೆ ವ್ಯಕ್ತ-ನಾಗುವನು. ಹೀಗಿರುವಾಗ ಭಕ್ತಿಯಿಂದ ಏನು ಪ್ರಯೋಜನ? ಎಂಬುದಾಗಿ ಆಶಂಕೆ ಬಂದರೆ, ಅದನ್ನು ಪರಿಹರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ अपि संराधने प्रत्यक्षानुमानाभ्यां ॐ (३-२-२४)**

**ಸೂತ್ರಾರ್ಥ :- ಅಪಿ** = ಭಕ್ತಿರಹಿತವಾದ ಆರಾಧನದಿಂದಲೂ ಸಹ ನ ಬ್ರಹ್ಮ ವ್ಯಕ್ತೀಕರ್ತುಂ ಶಕ್ಯಃ = ಬ್ರಹ್ಮನು ವ್ಯಕ್ತನಾಗಲು ಸಾಧ್ಯವಿಲ್ಲ, ಕುತಃ = ಏಕೆ? **ಸಂರಾಧನೇऽಪಿ** = ಸಂಪೂಜನ ಮಾಡಿದರೂ ಸಹ, ಅವ್ಯಕ್ತತ್ವಸ್ಯ = ಅವ್ಯಕ್ತತ್ವವು **ಪ್ರತ್ಯಕ್ಷಾನುಮಾನಾಭ್ಯಾಂ** ಸಿದ್ಧತ್ವಾತ್ = ಜ್ಞಾನಿಗಳ ಪ್ರತ್ಯಕ್ಷ ಹಾಗೂ ಸೂಕ್ಷ್ಮತ್ವಹೇತುಕ ಅನುಮಾನ ಇವುಗಳಿಂದ ಸಿದ್ಧವಾದ್ದರಿಂದ.

**ಸೂ.ರ.:– एवं च भक्त्यभावे सत्यपि समाराधने ब्रह्माप्रत्यक्षत्वस्य ज्ञानिप्रत्यक्षसिद्धत्वेन समाराधनस्य ब्रह्मप्रत्यक्षहेतुत्वाभावात् । यक्षस्याति-सूक्ष्मत्वाभावेन समाराधनसहकृतेन्द्रियग्राह्यत्वेऽप्यतिसूक्ष्मत्वेन ब्रह्मणो यक्षादिवत्तदयोगात् । ततश्च भक्तेः सफलत्वमिति सिद्धम् ॥**

ಭಕ್ತಿ ಇಲ್ಲದಿದ್ದರೆ ಸಮಾರಾಧನ ಮಾಡಿದಾಗಲೂ ಸಹ ಬ್ರಹ್ಮನು ಅಪ್ರತ್ಯಕ್ಷ-ನಾದದ್ದು ಜ್ಞಾನಿಪ್ರತ್ಯಕ್ಷಸಿದ್ಧವಾದ್ದರಿಂದ ಸಮಾರಾಧನೆಗೆ ಬ್ರಹ್ಮಪ್ರತ್ಯಕ್ಷಹೇತುತ್ವ ಇಲ್ಲ ಮತ್ತು ಯಕ್ಷಾದಿಗಳಂತೆ ಎಂದು ದೃಷ್ಟಾಂತ ಹೇಳಿದ್ದೂ ಸರಿಯಿಲ್ಲ, ಕಾರಣ ಯಕ್ಷನಿಗೆ ಅತಿಸೂಕ್ಷ್ಮತ್ವ ಇಲ್ಲವಾದ್ದರಿಂದ ಅವನಿಗೆ ಸಮಾರಾಧನ ಸಹಕೃತ ಇಂದ್ರಿಯ-ಗ್ರಾಹ್ಯತ್ವವಿದ್ದರೂ ಸಹ ಬ್ರಹ್ಮನು ಅತಿಸೂಕ್ಷ್ಮನಾದ್ದರಿಂದ ಯಕ್ಷಾದಿಗಳಂತೆ ಬ್ರಹ್ಮನಿಗೆ ಸಮಾರಾಧನ ಸಹಕೃತ ಇಂದ್ರಿಯಗ್ರಾಹ್ಯತ್ವವು ಕೂಡುವುದಿಲ್ಲ.

ಆದ್ದರಿಂದ ಭಕ್ತಿಯು ಸಫಲವಾದ್ದರಿಂದ ಭಗವಂತನಲ್ಲಿ ಭಕ್ತಿ ಮಾಡುವುದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 25

**ಸೂ.ರ.:– नन्वस्तु मूलरूपेणाव्यक्तं ब्रह्म । अनुत्पन्नत्वात् । अवताररूपेण व्यक्तीभविष्यति । उत्पन्नत्वात् । मूलरूपेणाव्यक्ता-**

**नामप्यनलजलभुवामुत्पन्नरूपेण व्यक्तत्वदर्शनात् । न च मूलरूपमेव दृष्टं मोक्षसाधनं तावता रूपमिति शक्यते वक्तुम् । लीलाविग्रहस्य गृहीतत्वेनोत्पत्त्यादेरदोषत्वात् । मूलरूपेण समशक्तिमत्त्वात् । पूर्णमद (बृ. ७-१-१) इति वचनाच्च । ततो व्यर्था भक्तिरिति प्राप्ते सूत्रितम् ॥**

ಬ್ರಹ್ಮನು ಮೂಲರೂಪದಿಂದ ಉತ್ಪನ್ನನಾಗದ ಕಾರಣ ಮೂಲರೂಪದಿಂದ ಅವ್ಯಕ್ತನಾಗಲಿ. ಆದರೆ ಅವತಾರರೂಪದಿಂದ ಉತ್ಪನ್ನನಾದುದರಿಂದ ಅವತಾರ-ರೂಪದಿಂದ ವ್ಯಕ್ತನಾಗಲಿ. ಹಾಗೆ ಮೂಲರೂಪದಿಂದ ಅವ್ಯಕ್ತವಾಗಿದ್ದು ಅವತಾರ-ರೂಪದಿಂದ ವ್ಯಕ್ತವಾದದ್ದು ಎಲ್ಲಿಯಾದರೂ ಕಂಡಿದೆಯಾ? ಎಂದರೆ, ಕಂಡಿದೆ, ಅನಲ-ಜಲ-ಭೂಗಳು ಮೂಲರೂಪದಿಂದ ಅವ್ಯಕ್ತವಾಗಿದ್ದರೂ ಸಹ ಉತ್ಪನ್ನರೂಪ-ದಿಂದ ವ್ಯಕ್ತವಾದದ್ದು ಕಂಡಿದೆ.

ಅವತಾರರೂಪದರ್ಶನವಾದರೂ ಸಹ ಮೂಲರೂಪದರ್ಶನವೇ ಮೋಕ್ಷಸಾಧನವಾಗುತ್ತದೆ ಹೊರತು ಅವತಾರರೂಪದರ್ಶನವು ಮೋಕ್ಷಸಾಧನವಾಗಿಲ್ಲ ಎಂದು ಶಂಕಿಸುವುದು ಸರಿಯಲ್ಲ. ಮೂಲರೂಪಿಯಾದ ಭಗವಂತ ಲೀಲಾ-ವಿಗ್ರಹವನ್ನು ತೆಗೆದುಕೊಂಡದ್ದರಿಂದ ಉತ್ಪತ್ತ್ಯಾದಿಗಳು ದೋಷವಾಗುವುದಿಲ್ಲ. "ಪೂರ್ಣಮದಃ ಪೂರ್ಣಮಿದಂ" (ಬೃ. 7-1-1) ಎಂಬುದಾಗಿ ವಚನವಿರು-ವುದರಿಂದ ಅವತಾರರೂಪವು ಮೂಲರೂಪದಿಂದ ಸಮಶಕ್ತಿ ಉಳ್ಳದ್ದಾಗಿದೆ. ಆದ್ದರಿಂದ ಭಕ್ತಿಯು ವ್ಯರ್ಥವೇ ಎಂಬುದಾಗಿ ಆಕ್ಷೇಪ ಬಂದರೆ, ಆದಕ್ಕೆ ಸಮಾಧಾನ ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

## ॐ प्रकाशवच्चावैशेष्यम् ॐ (३-२-२५)

**ಸೂತ್ರಾರ್ಥ :-** (ಚ ಎನ್ನುವುದಕ್ಕೆ ನ ಎಂದು ಅರ್ಥ.) **ಪ್ರಕಾಶವತ್** = ಯಾವ ರೀತಿಯಾಗಿ ಅಗ್ನಿಗೆ ಸ್ಥೂಲರೂಪ-ಸೂಕ್ಷ್ಮರೂಪಗಳಿಂದ ವ್ಯಕ್ತತ್ವ-ಅವ್ಯಕ್ತತ್ವಗಳು ಇವೆಯೋ ಆ ರೀತಿಯಾಗಿ ಬ್ರಹ್ಮ **(ಚ)** ನ = ಬ್ರಹ್ಮನು ಸ್ಥೂಲರೂಪ-ಸೂಕ್ಷ್ಮರೂಪ-ಗಳಿಂದ ವ್ಯಕ್ತ-ಅವ್ಯಕ್ತನಲ್ಲ. ಕಿಂತು ಸ್ವತೋಽವ್ಯಕ್ತಮೇವ = ಕಿಂತು ಸ್ವತಃ ಅವ್ಯಕ್ತನೇ ಆಗಿದ್ದಾನೆ. ಕುತಃ = ಏಕೆ? ಯತಃ **ಅವೈಶೇಷ್ಯಂ** = ಯಾವ ಕಾರಣ ಬ್ರಹ್ಮನಲ್ಲಿ ಸ್ಥೂಲತ್ವ-ಸೂಕ್ಷ್ಮತ್ವ ವಿಶೇಷವು ಇಲ್ಲವೋ ಆ ಕಾರಣ.

ಸೂ.ರ.:- एवं च मूलरूपावताररूपयोरुभयोरप्यव्यक्तत्वेन व्यक्तत्वाव्यक्तत्वविशेषाभावात् । स्थूलसूक्ष्मविशेष इति (गारुडे.) वचनात् । अतो भक्तेः सफलत्वमिति सिद्धम् ॥

ಸ್ಥೂಲಸೂಕ್ಷ್ಮವಿಶೇಷೋಽತ್ರ ನ ಕ್ವಚಿತ್ ಪರಮೇಶ್ವರೇ ।
ಸರ್ವತ್ರೈಕಪ್ರಕಾರೋಽಸೌ ಸರ್ವರೂಪೇಷ್ವಜೋ ಯತಃ ॥

ಎಂಬುದಾಗಿ ಗಾರುಡವಚನವಿರುವುದರಿಂದ ಮೂಲರೂಪ-ಅವತಾರ-ರೂಪಗಳೆರಡೂ ಅವ್ಯಕ್ತವೇ ಆಗಿರುವುದರಿಂದ ಬ್ರಹ್ಮನಲ್ಲಿ ವ್ಯಕ್ತತ್ವ-ಅವ್ಯಕ್ತತ್ವವಿಶೇಷ ಇಲ್ಲ. ಆದ್ದರಿಂದ ಭಗವಂತನು ಸ್ವತಃ ಅವ್ಯಕ್ತಸ್ವಭಾವದವನಾದ್ದರಿಂದ ಅವನಲ್ಲಿ ಭಕ್ತಿ ಮಾಡುವುದು ಸಾರ್ಥಕವೇ ಆಗಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 26

ಸೂ.ರ.:- ननु ब्रह्माव्यक्तमेव । तथा च व्यर्थैव तद्भक्तिः । अव्यक्तस्वभावस्य साधनशतेनापि व्यक्तीकर्तुमशक्यत्वादिति प्राप्ते सूत्रमुपन्यस्यति ॥

ಬ್ರಹ್ಮನು ಸ್ವತಃ ಅವ್ಯಕ್ತನಾಗಿದ್ದಾನೆ ಎಂದು ಹೇಳುವುದಾದರೆ, ಅವನಲ್ಲಿ ಭಕ್ತಿ ಮಾಡುವುದು ವ್ಯರ್ಥವೇ ಆಗುತ್ತದೆ. ಕಾರಣ - ಯಾವನು ಅವ್ಯಕ್ತಸ್ವಭಾವ-ದವನಾಗಿದ್ದಾನೆ ಅವನನ್ನು ನೂರಾರುಸಾಧನಗಳಿಂದಲೂ ವ್ಯಕ್ತನನ್ನಾಗಿ ಮಾಡಿಕೊಳ್ಳಲು ಸಾಧ್ಯವಿಲ್ಲವಾದ್ದರಿಂದ ಎಂಬುದಾಗಿ ಆಕ್ಷೇಪ ಬಂದರೆ, ಅದಕ್ಕೆ ಸಮಾಧಾನ ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

### ॐ प्रकाशश्च कर्मण्यभ्यासात् ॐ (३-२-२६)

**ಸೂತ್ರಾರ್ಥ** :- **ಪ್ರಕಾಶಶ್ಚ** = ಅಪರೋಕ್ಷಜ್ಞಾನವಾದರೋ **ಕರ್ಮಣಿ** = ವಿಷಯಭೂತನಾದ ಬ್ರಹ್ಮನ ವಿಷಯದಲ್ಲಿ **ಅಭ್ಯಾಸಾತ್** = ಶ್ರವಣಾದಿಗಳನ್ನು ಆವರ್ತನ ಮಾಡುವುದರಿಂದ ಉಂಟಾಗುತ್ತದೆ.

ಸೂ.ರ.:- एवं च भक्तिपूर्वकश्रवणाद्यभ्यासेन तत्प्रसादे जाते तदापरोक्ष्याङ्गीकारात् । तथा च भक्तेः सफलत्वमिति सिद्धम् ॥

ಬ್ರಹ್ಮನು ಅವ್ಯಕ್ತಸ್ವಭಾವದವನಾಗಿದ್ದರೂ ಸಹ ಭಕ್ತಿಪೂರ್ವಕಶ್ರವಣಾದ್ಯಭ್ಯಾಸ ಮಾಡುವುದರಿಂದ ಅವನ ಪ್ರಸಾದ ಉಂಟಾಗಿ ಅವನು ಅಪರೋಕ್ಷನಾಗುತ್ತಾನೆ ಎಂದು ಅಂಗೀಕರಿಸಲಾಗಿದೆ. ಆದ್ದರಿಂದ ಬ್ರಹ್ಮನು ಅಪರೋಕ್ಷವಾಗಬೇಕಾದರೆ ಭಕ್ತಿಯು ಆವಶ್ಯಕವಾದ್ದರಿಂದ ಭಕ್ತಿಯು ಸಾರ್ಥಕವೆಂದು ಸಿದ್ಧವಾಗುತ್ತದೆ.

## ಸೂತ್ರ - 27

**ಸೂ.ರ.:– नन्वव्यक्तस्वभावस्य श्रवणाद्यभ्यासेनाप्यापरोक्ष्याङ्गीकारो न युक्तः । अव्यक्तस्वभावत्वरूपयुक्तिविरोधापरिहारादिति चेत् समादधत्सूत्रं पठति ॥**

ಅವ್ಯಕ್ತಸ್ವಭಾವದವನಾದ ಬ್ರಹ್ಮನಿಗೆ ಶ್ರವಣಾದಿ ಅಭ್ಯಾಸದಿಂದಲೂ ಸಹ ಅಪರೋಕ್ಷತ್ವವನ್ನು ಅಂಗೀಕರಿಸುವುದು ಯುಕ್ತವಲ್ಲ. ಅವ್ಯಕ್ತಸ್ವಭಾವತ್ವರೂಪಯುಕ್ತಿ-ವಿರೋಧ ಅಪರಿಹಾರ್ಯವಾಗುವುದರಿಂದ ಎಂಬುದಾಗಿ ಆಕ್ಷೇಪ ಬಂದರೆ, ಸಮಾಧಾನ ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

### ॐ अतोऽनन्तेन तथा हि लिङ्गम् ॐ (३-२-२७)

**ಸೂತ್ರಾರ್ಥ :- ಅತಃ** = ಬ್ರಹ್ಮನು ಅವ್ಯಕ್ತನಾಗಿದ್ದಾನೆ ಹಾಗೂ ಪ್ರತ್ಯಕ್ಷನೂ ಆಗುತ್ತಾನೆ ಎಂಬ ವಿಷಯದಲ್ಲಿ ಪ್ರಮಾಣ ಇರುವುದರಿಂದ ತದನ್ಯಥಾऽನುಪಪತ್ಯಾ = ತದನ್ಯಥಾನುಪಪತ್ತಿಯಿಂದಾಗಿ **ಅನಂತೇನ** = ಅಪರಿಚ್ಛಿನ್ನನಾದ ಬ್ರಹ್ಮನಿಂದ, ಬ್ರಹ್ಮನ ಪ್ರಸಾದದಿಂದ ಅವ್ಯಕ್ತಸ್ಯಾಪರೋಕ್ಷ್ಯಂ ಭವತೀತಿ ಜ್ಞಾಯತೇ = ಅವ್ಯಕ್ತನಾದವನಿಗೂ ಅಪರೋಕ್ಷತ್ವ ಬರುತ್ತದೆ ಎಂದು ತಿಳಿಯುತ್ತದೆ. ನ ಕೇವಲಮನುಪಪತ್ತಿಮಾತ್ರಾತ್ = ಕೇವಲ ಅನುಪಪತ್ತಿ ಮಾತ್ರದಿಂದಾಗಿ ಅಲ್ಲ, ಕಿಂ ತರ್ಹಿ = ಕಿಂತು **ಹಿ** = ಯಾವ ಕಾರಣ **ತಥಾ ಲಿಂಗಂ** = 'ತಸ್ಯಾಭಿಧ್ಯಾನಾತ್' ಎಂದು ಹೇಳಿದ, ಈಶಪ್ರಸಾದಕ್ಕೆ ಬಂಧನಿವೃತ್ತಿಹೇತುತ್ವರೂಪವಾದ, ಪ್ರಸಾದಕ್ಕೆ ದರ್ಶನಹೇತುತ್ವಜ್ಞಾಪಕವಾದ ಲಿಂಗವೂ ಇದೆಯೋ ತಸ್ಮಾತ್ = ಆ ಕಾರಣ.

**ಸೂ.ರ.:– एवं चाव्यक्तस्वभावस्य साधनसामर्थ्येन ग्रहणासम्भवेऽपि तत्प्रसादेनापरोक्ष्याङ्गीकारे बाधकाभावात् । ईश्वरस्याघटितघटकत्वेन सिद्धत्वात् । यद्धि युक्त्येति वचनात् । भगवत्प्रसादस्तद-**

**परोक्षसाधनं मोक्षसाधनत्वादित्यनुमानसिद्धत्वात् । अतो भक्तेः सफलत्वात्तदर्थं तन्महिमावर्णनं सार्थकमिति सिद्धम् ॥**

ಅವ್ಯಕ್ತಸ್ವಭಾವನಾದ ಬ್ರಹ್ಮನ ಗ್ರಹಣವು ಸಾಧನಸಾಮರ್ಥ್ಯದಿಂದ ಅಸಂಭಾವಿತ-ವಾದರೂ ಸಹ ಆ ಬ್ರಹ್ಮನ ಪ್ರಸಾದದಿಂದ ಅಪರೋಕ್ಷತ್ವವನ್ನು ಅಂಗೀಕರಿಸಿದರೆ ಯಾವ ಬಾಧಕವೂ ಇಲ್ಲ. ಈಶ್ವರನು ಅವ್ಯಕ್ತಸ್ವಭಾವನಾದರೂ ಪ್ರಸಾದದಿಂದ ಅಪರೋಕ್ಷತ್ವ ಕೊಡುತ್ತದೆ ಎನ್ನುವುದು ಹೇಗೆ ಉಪಪನ್ನ? ಎಂದರೆ, ಈಶ್ವರನು ಅಘಟಿತಘಟಕ ಐಶ್ವರ್ಯ ಉಳ್ಳವನಾದ್ದರಿಂದ ಅದು ಸಿದ್ಧವಾಗಿದೆ. ಮತ್ತು

ನಿತ್ಯಾವ್ಯಕ್ತೋಽಪಿ ಭಗವಾನೀಕ್ಷ್ಯತೇ ನಿಜಶಕ್ತಿತಃ ।
ತಮೃತೇ ಪರಮಾತ್ಮಾನಂ ಕಃ ಪಶ್ಯೇತಾಮಿತಂ ಪ್ರಭುಮ್ ॥

(ನಾರಾಯಣ ಅಧ್ಯಾತ್ಮ)

ಎಂಬ ವಚನಸಿದ್ಧವೂ ಆಗಿದೆ. ಹಾಗೂ

ಭಗವತ್ಪ್ರಸಾದಃ ತದಪರೋಕ್ಷಸಾಧನಂ ಮೋಕ್ಷಸಾಧನತ್ವಾತ್

ಎಂಬ ಅನುಮಾನಸಿದ್ಧವೂ ಆಗಿದೆ. ಆದ್ದರಿಂದ ಭಕ್ತಿಯು ಸಫಲವಾದ್ದರಿಂದ ಅದಕ್ಕಾಗಿ ಭಗವಂತನ ಮಹಿಮಾವರ್ಣನ ಮಾಡುವುದು ಸಾರ್ಥಕವೇ ಆಗುತ್ತದೆ ಎಂದು ಸಿದ್ಧವಾಗುತ್ತದೆ.

**ಅವ್ಯಕ್ತತ್ವಾಧಿಕರಣವು ಮುಗಿಯಿತು.**

ಅಧಿಕರಣ - 15

# ಅಹಿಕುಂಡಲಾಧಿಕರಣ

## ಸಂಗತಿ

**ಸೂ.ರ.:- अत्र भगवतो गुणित्वं समर्थ्यते ।**

ಭಗವಂತನಿಗೆ ಗುಣಿತ್ವವನ್ನು ಸಮರ್ಥಿಸುತ್ತಾರೆ ಹದಿನೈದನೇ ಈ ಅಹಿಕುಂಡಲಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:- ननु न भगवद्भक्तिर्युक्ता । तस्यानन्दाद्यात्मकत्वेनानन्दत्वादिशून्यत्वात् । न चानन्दादिभोक्तृत्वं विना तत्स्वरूपत्वं महिमा । अतो गुणित्वाभावेन तत्र भक्त्ययोगाद्व्यर्थं तन्माहात्म्यवर्णनमिति प्राप्ते सूत्रं पठति ॥**

ಭಗವಂತನಲ್ಲಿ ಭಕ್ತಿ ಮಾಡುವುದು ಯುಕ್ತವಲ್ಲ. ಕಾರಣ - ಅವನು ಆನಂದಾದ್ಯಾತ್ಮಕನಾದ್ದರಿಂದ ಆನಂದಾದಿಗುಣಶೂನ್ಯನಾಗಿದ್ದಾನೆ. ಆನಂದಾದಿಭೋಕ್ತೃತ್ವವನ್ನು ಬಿಟ್ಟು ಆನಂದಾದ್ಯಾತ್ಮಕತ್ವವು ಮಹಿಮೆ ಆಗುವುದಿಲ್ಲ. ಆದ್ದರಿಂದ ಭಗವಂತನು ಗುಣಿ ಆಗದ ಕಾರಣ ಅವನಲ್ಲಿ ಭಕ್ತಿ ಮಾಡುವುದು ಯುಕ್ತವಾಗುವುದಿಲ್ಲವಾದ್ದರಿಂದ ಅವನ ಮಾಹಾತ್ಮ್ಯವರ್ಣನ ಮಾಡುವುದು ವ್ಯರ್ಥವೇ ಆಗಿದೆ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ उभयव्यपदेशात्त्वहिकुण्डलवत् ॐ (३-२-२८)**

**ಸೂತ್ರಾರ್ಥ** :- ಬ್ರಹ್ಮ ಆನಂದಗುಣಕಂ ತದ್ರೂಪಂ ಚ ಭವತಿ = ಬ್ರಹ್ಮನು ಆನಂದಗುಣ ಉಳ್ಳವನೂ ಆನಂದರೂಪನೂ ಎರಡೂ ಆಗುತ್ತಾನೆ. ಕುತಃ = ಏಕೆ? **ಉಭಯವ್ಯಪದೇಶಾತ್** = "ಆನಂದೋ ಬ್ರಹ್ಮ" (ತೈ. 3-6) "ಆನಂದಂ ಬ್ರಹ್ಮಣಃ" (ತೈ. 2-4) ಎಂಬುದಾಗಿ ಇತ್ಯಾದಿಶ್ರುತಿಗಳಲ್ಲಿ ಗುಣಾತ್ಮಕತ್ವೇನ ಹಾಗೂ ಗುಣಿತ್ವೇನ

ಬ್ರಹ್ಮನು ಪ್ರತಿಪಾದ್ಯನಾದ್ದರಿಂದ. ತದಪಿ ಕಥಂ ? = ಗುಣಾತ್ಮಕತ್ವ ಹಾಗೂ ಗುಣಿತ್ವ ಎರಡೂ ಒಬ್ಬನಿಗೇ ಹೇಗೆ ಉಪಪನ್ನವಾಗುತ್ತದೆ ? ಎಂದರೆ– **ಅಹಿಕುಂಡಲವತ್** = ಯಾವ ರೀತಿಯಾಗಿ ಸರ್ಪಕ್ಕೆ ಕುಂಡಲತ್ವ-ಕುಂಡಲಿತ್ವ ಎರಡೂ ವಿಶೇಷದಿಂದ ಉಪಪನ್ನವಾಗುವುದೋ ಅದರಂತೆ.

## ಸಿದ್ಧಾಂತ

**ಸೂ.ರ.:– एवं चोक्तश्रुतिषूभयव्यपदेशबलेन गुणात्मकस्यापि अहिकुण्डलवत् प्रकाशवत् पूर्वकालवत् । भगवतस्तद्धर्माणां च भेदप्रतिनिधिविशेषाङ्गीकारात् । नेश्वरो गुणवान् गुणात्मकत्वात् यथाऽश्वोऽनश्ववान् । आनन्दाद्या न ब्रह्मगुणाः तत्स्वरूपत्वाद्ब्रह्म-वदित्याद्युक्तीनां बाधाभावात् । तस्य श्रुत्यैकसमधिगम्यत्वोक्तेः । अतो गुणगुणिनि हरौ भक्तिसम्भवाद्युक्तं तन्माहात्म्यवर्णनमिति सिद्धम् ॥**

"ಆನಂದಂ ಬ್ರಹ್ಮಣೋ ವಿದ್ವಾನ್" (ತೈ.ಉ. 2-4) "ಆನಂದೋ ಬ್ರಹ್ಮೇತಿ ವ್ಯಜಾನಾತ್" (ತೈ. 3-6) ಎಂಬುದಾಗಿ ಶ್ರುತಿಗಳಲ್ಲಿ ಬ್ರಹ್ಮನು ಗುಣಾತ್ಮಕತ್ವೇನ ಮತ್ತು ಗುಣಿತ್ವೇನ ಪ್ರತಿಪಾದ್ಯನಾಗುತ್ತಿರುವ ಕಾರಣ ಬ್ರಹ್ಮನು ಗುಣಾತ್ಮಕನಾದರೂ ಗುಣಿಯೂ ಆಗುತ್ತಾನೆ. ಅಹಿಕುಂಡಲದಂತೆ. (ಸರ್ಪವು ಕುಂಡಲವೂ ಆಗುತ್ತದೆ, ಕುಂಡಲಿಯೂ ಆಗುತ್ತದೆ ಅದರಂತೆ.)

ಗುಣಾತ್ಮಕನಾದವನು ಗುಣಗಳಿಗೆ ಆಧಾರ ಹೇಗೆ ಆಗುತ್ತಾನೆ ? ಎಂದರೆ, ಭಗವಂತನಿಗೂ ಅವನ ಧರ್ಮಗಳಿಗೂ ಅಭೇದ ಇದ್ದರೂ ಅಲ್ಲಿ ಭೇದಪ್ರತಿನಿಧಿ ಯಾದ ವಿಶೇಷವನ್ನು ಅಂಗೀಕರಿಸಿದ್ದರಿಂದ ಆಧಾರ-ಆಧೇಯಭಾವವು ಉಪಪನ್ನ-ವಾಗುತ್ತದೆ.

"ಈಶ್ವರೋ, ನ ಗುಣವಾನ್, ಗುಣಾತ್ಮಕತ್ವಾತ್, ಯಥಾ
ದಂಡೋ ನ ದಂಡವಾನ್ ।
ಆನಂದಾದ್ಯಾಃ, ನ ಬ್ರಹ್ಮಣೋ ಗುಣಾಃ, ತತ್ಸ್ವರೂಪತ್ವಾತ್, ಬ್ರಹ್ಮವತ್"

ಎಂಬುದಾಗಿ ಯುಕ್ತಿವಿರೋಧ ಬರುವುದಲ್ಲ? ಎಂದರೆ, ಅದು ಸರಿಯಲ್ಲ, ಕಾರಣ - ಒಂದುವೇಳೆ ಬ್ರಹ್ಮಸ್ವರೂಪಾದಿಗಳು ಯುಕ್ತಿಗಮ್ಯವಾಗುತ್ತಿದ್ದರೆ ಆಗ

ಯುಕ್ತಿವಿರೋಧ ಬರುತ್ತಿತ್ತು. ಆದರೆ ಪ್ರಕೃತ ಬ್ರಹ್ಮಸ್ವರೂಪಾದಿಗಳು ಯುಕ್ತಿಗಮ್ಯ-ವಾಗಿಲ್ಲ ಕಿಂತು ಕೇವಲ ಶ್ರುತಿಗಮ್ಯವಾಗಿದೆ. ಆದ್ದರಿಂದ ಯುಕ್ತಿವಿರೋಧಕ್ಕೆ ಅವಕಾಶವಿಲ್ಲ.

ಆದ್ದರಿಂದ ಭಗವಂತನು ಗುಣಾತ್ಮಕನಾದರೂ ಗುಣಿಯೂ ಆಗುವುದರಿಂದ ಅವನಲ್ಲಿ ಭಕ್ತಿಯು ಸಂಭಾವಿತವಾದ್ದರಿಂದ ಅವನ ಮಾಹಾತ್ಮ್ಯವರ್ಣನೆ ಮಾಡುವುದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 29

**ಸೂ.ರ.:– दृष्टान्तान्तरेणैतदेव साधयत्सूत्रमुपन्यस्यति ॥**

ಮತ್ತೊಂದು ದೃಷ್ಟಾಂತದಿಂದಲೂ ಸಹ ಇದನ್ನೇ (ಗುಣಾತ್ಮಕನಾದರೂ ಗುಣಿಯೂ ಆಗಬಹುದು ಎನ್ನುವುದನ್ನೇ) ಸಾಧಿಸುವ ಸೂತ್ರವನ್ನು ಹೇಳುತ್ತಾರೆ -

**ॐ प्रकाशाश्रयवद्वा तेजस्त्वात् ॐ (३-२-२९)**

**ಸೂತ್ರಾರ್ಥ :-** **ವಾ** = ಅಥವಾ **ಪ್ರಕಾಶಾಶ್ರಯವತ್** = ಯಾವ ರೀತಿಯಾಗಿ ಪ್ರಕಾಶಾಶ್ರಯನಾದ ಆದಿತ್ಯನಿಗೆ ಪ್ರಕಾಶರೂಪತ್ವ ಪ್ರಕಾಶಾಶ್ರಯತ್ವ ಎರಡೂ ಉಪಪನ್ನವಾಗುತ್ತದೆಯೋ, ಅದರಂತೆ ಬ್ರಹ್ಮಣೋऽಪಿ = ಬ್ರಹ್ಮನಿಗೂ ಸಹ ಗುಣಾತ್ಮಕತ್ವ ಗುಣಾಶ್ರಯತ್ವ ಎರಡೂ ಉಪಪನ್ನವಾಗುತ್ತವೆ.

ಅನ್ಯಪರಿತ್ಯಾಗೇನ ಆದಿತ್ಯದೃಷ್ಟಾಂತೇ ಕೋ ಹೇತುಃ ? ಘಟಾದಿಗಳನ್ನು ಪರಿತ್ಯಾಗ ಮಾಡಿ ಆದಿತ್ಯನನ್ನೇ ದೃಷ್ಟಾಂತ ಮಾಡಲು ಏನು ಕಾರಣ ? ಎಂದರೆ, ಆದಕ್ಕೆ ಹೇಳಿದರು **ತೇಜಸ್ತ್ವಾತ್** = ಬ್ರಹ್ಮ ಹಾಗೂ ಆದಿತ್ಯ ಇಬ್ಬರೂ ತೇಜೋರೂಪರಾದ್ದ-ರಿಂದ ಆ ಅಭಿಪ್ರಾಯದಿಂದ ಆದಿತ್ಯನನ್ನು ದೃಷ್ಟಾಂತ ಮಾಡಲಾಗಿದೆ ಎಂದು ಭಾವ.

**ಸೂ.ರ.:– एवं च भेदप्रतिनिधिविशेषबलादेव गुणगुणिभावस्य युक्तत्वात् । यावद्द्रव्यभाविगुणाभिन्नानां घटादीनामतेजोरूपत्वेन तेषां परित्यागेन तेजोरूपत्वसाधर्म्यविवक्षयाऽऽदित्यदृष्टान्तस्योक्तत्वात् । अतो ब्रह्मणि गुणगुणिभावो युज्यत इति सिद्धम् ॥**

ಭೇದಪ್ರತಿನಿಧಿಯಾದ ವಿಶೇಷವನ್ನು ಅಂಗೀಕರಿಸಿದ್ದರಿಂದಲೇನೇ ಅದರ ಬಲದಿಂದಾಗಿ ಭಗವಂತ-ಗುಣಗಳಲ್ಲಿ ಗುಣಗುಣಿಭಾವವು ಉಪಪನ್ನವಾಗುತ್ತದೆ.

ಘಟಾದಿಗಳನ್ನು ಪರಿತ್ಯಾಗ ಮಾಡಿ ಆದಿತ್ಯನನ್ನೇ ಏಕೆ ದೃಷ್ಟಾಂತ ಮಾಡಿದ್ದಾರೆ? ಎಂದರೆ, ಯಾವದ್‌ದ್ರವ್ಯಭಾವಿಯಾದ ಗುಣಗಳಿಂದ ಅಭಿನ್ನವಾದ ಘಟಾದಿಗಳು ತೇಜೋರೂಪವಲ್ಲದ ಕಾರಣ ಅವುಗಳನ್ನು ಪರಿತ್ಯಾಗ ಮಾಡಿ, ತೇಜೋರೂಪತ್ವ ಸಾಧರ್ಮ್ಯ ವಿವಕ್ಷೆಯಿಂದ ಆದಿತ್ಯನನ್ನು ದೃಷ್ಟಾಂತ ಮಾಡಲಾಗಿದೆ.

ಆದ್ದರಿಂದ ಬ್ರಹ್ಮನಲ್ಲಿ ಗುಣಗುಣಿಭಾವವು ಯುಕ್ತವಾಗುತ್ತದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 30

**ಸೂ.ರ.:– दृष्टान्तान्तरेण ब्रह्मणो गुणगुणिरूपत्वं साधयत्सूत्रमुपन्यस्यति ॥**

ಮತ್ತೊಂದು ದೃಷ್ಟಾಂತದಿಂದಲೂ ಬ್ರಹ್ಮನಿಗೆ ಗುಣ-ಗುಣಿರೂಪತ್ವವನ್ನು ಸಾಧಿಸುವ ಸೂತ್ರವನ್ನು ಹೇಳುತ್ತಾರೆ -

### ॐ पूर्ववद्वा ॐ (३-२-३०)

**ಸೂತ್ರಾರ್ಥ :- ಪೂರ್ವವತ್ ವಾ** = ಅಥವಾ ಯಾವ ರೀತಿಯಾಗಿ ಕಾಲವು ಪೂರ್ವದಿಂದ ಅಭಿನ್ನವಾಗಿದ್ದರೂ ಸಹ, ಪೂರ್ವಕಾಲಃ ಎಂಬುದಾಗಿ ಪೂರ್ವಪದದಿಂದ ವಿಶೇಷಿಸಲ್ಪಡುತ್ತದೆಯೋ, ಅದೇ ರೀತಿಯಾಗಿ ಬ್ರಹ್ಮನು ಆನಂದದಿಂದ ವಿಶೇಷಿಸಲ್ಪಡುತ್ತಾನೆ. ಆದರಕ್ಕಾಗಿ ಅಥವಾ ಸ್ಥೂಲಸೂಕ್ಷ್ಮ ಬುದ್ಧಿವಿವಕ್ಷೆಯಿಂದಾಗಲೀ ಮೂರು ದೃಷ್ಟಾಂತಗಳನ್ನು ಹೇಳಿದ್ದು.

**ಸೂ.ರ.:– एवं च यथा पूर्वः काल इति प्रयोगे पूर्वेणाभिन्नोऽपि कालः पूर्व इति विशेष्यश्च विशेषबलाद्भवत्येव । यथा चाङ्गे शयनमिति प्रयोगेऽङ्गाभिन्नमपि शयनं यथाऽङ्गं शयनविशेषणकं भवत्येव इत्यादिदृष्टान्तानां सद्भावात् । तेषां चैकस्मिन्नेव विशेषणविशेष्यभावस्य सूक्ष्मस्थूलमतीनां प्रदर्शनार्थमुक्तत्वात् । अतो हरौ गुणगुणिभावो युज्यत इति सिद्धम् ॥**

ಯಾವ ರೀತಿಯಾಗಿ 'ಪೂರ್ವಃ ಕಾಲಃ' ಎಂಬುದಾಗಿ ಪ್ರಯೋಗ ಮಾಡಿದಾಗ ಕಾಲವು ಪೂರ್ವದಿಂದ ಅಭಿನ್ನವಾಗಿದ್ದರೂ ಸಹ 'ಪೂರ್ವಃ' ಎಂಬುದಾಗಿ ವಿಶೇಷಬಲದಿಂದ ವಿಶೇಷಿಸಲ್ಪಡುತ್ತದೆಯೋ, ಮತ್ತು 'ಅಂಗೇ ಶಯನಂ' ಎಂಬುದಾಗಿ ಪ್ರಯೋಗ ಮಾಡಿದಾಗ ಶಯನವು (ಶಯ್ಯಾವು) ಅಂಗದಿಂದ ಅಭಿನ್ನವಾಗಿದ್ದರೂ ಸಹ ಯಾವ ರೀತಿಯಾಗಿ ಅಂಗವು ಶಯನವಿಶೇಷಣಕ-ವಾಗುವುದೋ ಅದರಂತೆ ಎಂಬುದಾಗಿ ಇತ್ಯಾದಿ ದೃಷ್ಟಾಂತಗಳು ಇರುವುದರಿಂದ, ಈ ಎಲ್ಲ ದೃಷ್ಟಾಂತಗಳನ್ನು ಸೂಕ್ಷ್ಮಸ್ಥೂಲಮತಿಗಳಿಗೆ ಒಂದರಲ್ಲಿಯೇ ವಿಶೇಷಣ-ವಿಶೇಷ್ಯಭಾವವನ್ನು ತೋರಿಸುವುದಕ್ಕಾಗಿ ಹೇಳಿದ್ದರಿಂದ ವಿಷ್ಣುವಿನಲ್ಲಿ ಗುಣ-ಗುಣಿ-ಭಾವವು ಯುಕ್ತವಾಗುತ್ತದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 31

**ಸೂ.ರ.:– ननु विशेषणविशेष्यभावाङ्गीकारेण गुणित्वसम्भवात् । किमनेन गुणगुणिनोरभेदमङ्गीकृत्य गुणगुणिभावाङ्गीकारेण भेद एव किं न स्यादित्याशङ्कां पराकुर्वत्सूत्रमुपन्यस्यति ॥**

ವಿಶೇಷಣ-ವಿಶೇಷ್ಯಭಾವವನ್ನು ಅಂಗೀಕರಿಸುವುದರಿಂದ ಗುಣಿತ್ವವು ಸಂಭವಿಸುವಾಗ, ಗುಣ-ಗುಣಿಗಳಲ್ಲಿ ಅಭೇದವನ್ನು ಅಂಗೀಕರಿಸಿ ಗುಣ-ಗುಣಿ-ಭಾವವನ್ನು ಅಂಗೀಕರಿಸುವುದರಿಂದ ಏನು ಪ್ರಯೋಜನ ? ಭೇದವನ್ನೇ ಏಕೆ ಅಂಗೀಕರಿಸಬಾರದು ? ಎಂಬುದಾಗಿ ಆಶಂಕೆ ಬಂದರೆ ಅದನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

### ॐ प्रतिषेधाच्च ॐ (३-२-३१)

**ಸೂತ್ರಾರ್ಥ :- ಪ್ರತಿಷೇಧಾಚ್ಚ** = ಬ್ರಹ್ಮಗುಣಗಳಿಗೂ ಬ್ರಹ್ಮನಿಗೂ, 'ನೇಹ ನಾನಾಽಸ್ತಿ ಕಿಂಚನ' (ಕಠ 2-4-11) ಎಂಬುದಾಗಿ ಭೇದವನ್ನು ನಿಷೇಧಿಸಿದ್ದರಿಂದಲೂ ಸಹ, ಬ್ರಹ್ಮನು ಗುಣಾತ್ಮಕನಾಗಿದ್ದಾನೆ.

**ಸೂ.ರ.:– एवं च नेह नानेत्येकमेवाद्वितीयमि(छां.६-२-१)ऽ त्यादिश्रुतिषु भगवतो ज्ञानानन्दादिगुणैरवयवैश्चाभिन्नमिति समाभ्यधिक शून्यमिति चोक्त्वा हीनाधिकभावस्यान्योन्याभावस्य पृथक्त्वरूपस्य**

**च भेदस्य निषिद्धत्वात् । अतो गुणगुणिनि हरौ भक्तिसम्भवाद्युक्तं तन्माहात्म्यवर्णनमिति सिद्धम् ॥**

"ನೇಹ ನಾನಾಽಸ್ತಿ ಕಿಂಚನ" (ಕಠ. 2-4-11) "ಏಕಮೇವಾದ್ವಿತೀಯಮ್" (ಛಾಂ. 6-2-1) ಇತ್ಯಾದಿಶ್ರುತಿಗಳಲ್ಲಿ ಭಗವಂತನು ಜ್ಞಾನಾನಂದಾದಿಗುಣಗಳಿಂದ ಹಾಗೂ ಅವಯವಗಳಿಂದ ಅಭಿನ್ನನಾಗಿದ್ದಾನೆ, ಸಮಾಧಿಕಶೂನ್ಯನಾಗಿದ್ದಾನೆ ಎಂಬು-ದಾಗಿ ಹೇಳಿ, ಹೀನಾಧಿಕಭಾವವನ್ನು ಅನ್ಯೋನ್ಯಾಭಾವವನ್ನು ಪೃಥಕ್ತ್ವರೂಪವಾದ ಭೇದವನ್ನೂ ನಿಷೇಧಿಸಿದ್ದರಿಂದ ಭೇದವನ್ನು ಅಂಗೀಕರಿಸಲು ಬರುವುದಿಲ್ಲ. ಆದ್ದರಿಂದ ಗುಣರೂಪ ಹಾಗೂ ಗುಣವಂತನಾದ ಹರಿಯಲ್ಲಿ ಭಕ್ತಿಯು ಸಂಭಾವಿತವಾದ್ದರಿಂದ ಅವನ ಮಾಹಾತ್ಮ್ಯವರ್ಣನ ಮಾಡುವುದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

**ಅಹಿಕುಂಡಲಾಧಿಕರಣವು ಮುಗಿಯಿತು.**

ಅಧಿಕರಣ – 16

## ಪರಮತಾಧಿಕರಣ

### ಸಂಗತಿ

**ಸೂ.ರ.:– अत्र भगवद्गुणानां लोकविलक्षणत्वं समर्थ्यते ।**

ಭಗವಂತನ ಗುಣಗಳಿಗೆ ಲೋಕವಿಲಕ್ಷಣತ್ವವನ್ನು ಸಮರ್ಥಿಸುತ್ತಾರೆ ಹದಿನಾರನೇ ಈ ಪರಮತಾಧಿಕರಣದಲ್ಲಿ.

ಭಗವಂತನ ಗುಣಗಳು (ಲೋಕಸದೃಶವೋ) ಲೌಕಿಕವೋ? ಅಲೌಕಿಕವೋ? ಎಂದು ಸಂದೇಹ.

### ಪೂರ್ವಪಕ್ಷ

**ಸೂ.ರ.:– नन्वीश्वरानन्दादिर्लौकिकानन्दादिवदानन्दादिरेव । न पुनर्ज्ञानादिरपि । आनन्दशब्दवाच्यत्वात् । न हि ज्ञानात्मक आनन्द-शब्दो युज्यते । पटेऽपि घटशब्दप्रयोगप्रसङ्गात् । ततश्चेश्वरानन्दस्य लोकविलक्षणत्वाभावान्न तत्र निरतिशया भक्तिरिति प्राप्ते सूत्रितम् ॥**

ಈಶ್ವರನ ಆನಂದಾದಿಗಳು ಲೌಕಿಕ ಆನಂದಾದಿಗಳಂತೆ ಸಾಮಾನ್ಯ ಆನಂದಾದಿ-ಗಳೇ ಆಗಿವೆ. ಯಾಕೆ? ಆನಂದಾದಿಶಬ್ದವಾಚ್ಯವಾಗಿದ್ದರಿಂದ. ಒಂದುವೇಳೆ ಈಶ್ವರನ ಆನಂದಾದಿಗಳು ಲೌಕಿಕ ಆನಂದಾದಿಗಳಂತೆ ಅಲ್ಲ ಎಂದಾಗಿದ್ದರೆ ಅವನ ಆನಂದಾದಿ-ಗಳು ಆನಂದಾದಿಶಬ್ದವಾಚ್ಯವೇ ಆಗಬಾರದಿತ್ತು. ಘಟವಿಲಕ್ಷಣವಾದ ವಸ್ತುವಿಷಯ-ದಲ್ಲಿ ಘಟಪದಪ್ರಯೋಗವು ಹೇಗೆ ಉಪಪನ್ನವಾಗುವುದಿಲ್ಲವೋ ಅದರಂತೆ ಬ್ರಹ್ಮನ ವಿಷಯದಲ್ಲಿ 'ಆನಂದಂ ಬ್ರಹ್ಮಣೋ ವಿದ್ವಾನ್' ಇತ್ಯಾದಿ ಪ್ರಯೋಗಗಳೇ ಆಗಬಾರದಿತ್ತು ಎಂದು ಭಾವ.

ಆದ್ದರಿಂದ ಲೌಕಿಕ ಆನಂದಾದಿಗಳಂತೆಯೇ ಈಶ್ವರನ ಆನಂದಾದಿಗಳು. ಆದ್ದರಿಂದ ಅವನಲ್ಲಿ ನಿರತಿಶಯವಾದ ಭಕ್ತಿಯನ್ನು ಮಾಡುವುದು ಯುಕ್ತವಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

## ॐ परमतः सेतून्मानसम्बन्धभेदव्यपदेशेभ्यः ॐ (३-२-३२)

**ಸೂತ್ರಾರ್ಥ** :- ಬ್ರಹ್ಮಗುಣಜಾತಂ = ಬ್ರಹ್ಮನ ಗುಣಸಮೂಹವು **ಅತಃ ಪರಂ** = ಲೌಕಿಕ ಆನಂದಾದಿಗಳಿಗಿಂತಲೂ ವಿಲಕ್ಷಣವಾಗಿದೆ (ಉತ್ತಮವಾಗಿದೆ). ಕುತಃ = ಯಾಕೆ? **ಸೇತೂನ್ಮಾನಸಂಬಂಧಭೇದವ್ಯಪದೇಶೇಭ್ಯಃ** = 'ಏಷ ಸೇತುಃ' (ಛಾಂ. 8-4-1) ಎಂಬುದಾಗಿ ಸೇತುತ್ವವನ್ನು ಹೇಳಿದ್ದರಿಂದ, ''ಯತೋ ವಾಚೋ'' (ತೈ. 2-4) ಎಂಬುದಾಗಿ ಉನ್ಮಾನಶಬ್ದಿತ ಪೂರ್ಣತ್ವವನ್ನು ಹೇಳಿದ್ದರಿಂದ, ''ಏತಸ್ಯೈವಾ-ನಂದಸ್ಯ'' (ಬೃ. 6-3-32) ಎಂಬುದಾಗಿ ಬಿಂಬ-ಪ್ರತಿಬಿಂಬಭಾವಸಂಬಂಧವನ್ನು ಹೇಳಿದ್ದರಿಂದ, ''ಅನ್ಯಜ್ಞಾನಂ ತು'' ಎಂಬುದಾಗಿ ಲೌಕಿಕ ಆನಂದಾದಿಗಳಿಂದ ಭೇದವನ್ನು ಹೇಳಿದ್ದರಿಂದ.

**ಸೂ.ರ.:- एवं च निर्दिष्टश्रुत्यादिभिर्ब्रह्मानन्दादिसेतुत्वपूर्णत्व-विम्वत्वादीनां वैलक्षण्यस्योक्तत्वादलौकिकगुणे हरौ भक्तिः कर्तव्येति सिद्धम् ॥**

ಬ್ರಹ್ಮನ ಆನಂದಾದಿ ಗುಣಗಳಿಗೆ ''ಏಷ ಸೇತುರ್ವಿಧೃತಿಃ'' (ಛಾಂ.ಉ. 8-4-1) ''ಯ ಏಷ ಆನಂದಃ ಪರಸ್ಯ'' ''ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ'' (ಬೃ.ಉ. 6-4-23) ಎಂಬುದಾಗಿ ಸೇತುತ್ವವನ್ನು ಹೇಳಿದ್ದರಿಂದ, ಮತ್ತು ''ಯತೋ ವಾಚೋ ನಿವರ್ತಂತೇ'' (ತೈ.ಉ. 2-4) ಎಂಬುದಾಗಿ ಉನ್ಮಾನತ್ವವನ್ನು ಅರ್ಥಾತ್ ಪೂರ್ಣತ್ವವನ್ನು ಹೇಳಿದ್ದರಿಂದ, ಮತ್ತು ''ಏತಸ್ಯೈವಾನಂದಸ್ಯಾನ್ಯಾನಿ ಭೂತಾನಿ ಮಾತ್ರಾಮುಪಜೀವಂತಿ'' (ಬೃ.ಉ. 6-3-32) ಎಂಬುದಾಗಿ ಬಿಂಬ-ಪ್ರತಿಬಿಂಬ-ಭಾವ ಸಂಬಂಧವನ್ನು ಹೇಳಿದ್ದರಿಂದ, ಹಾಗೂ

ಅನ್ಯಜ್ಞಾನಂ ತು ಜೀವಾನಾಮನ್ಯಜ್ಞಾನಂ ಪರಸ್ಯ ಚ ।
ನಿತ್ಯಾನಂದಾವ್ಯಯಂ ಪೂರ್ಣಂ ಪರಜ್ಞಾನಂ ವಿಧೀಯತೇ ॥

ಎಂಬುದಾಗಿ ಭೇದವನ್ನೂ ಹೇಳಿದ್ದರಿಂದ ಬ್ರಹ್ಮನ ಆನಂದಾದಿ ಗುಣಗಳು ಲೌಕಿಕ ಆನಂದಾದಿಗುಣಗಳಿಗಿಂತಲೂ ವಿಲಕ್ಷಣವಾಗಿವೆ ಎಂದು ತಿಳಿದುಬರುತ್ತದೆ.

ಹಾಗಾಗಿ ಅಲೌಕಿಕಗುಣಗಳುಳ್ಳ ಹರಿಯಲ್ಲಿ ಭಕ್ತಿಯು ಕರ್ತವ್ಯವೇ ಆಗಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 33

ಸೂ.ರ.:– नन्वन्यानन्दादीनां मनोवाग्गोचरत्वाद्भवतु लौकिकत्वम् । तावता ब्रह्मानन्दादेः कथमलौकिकत्वसिद्धिः । मानाभावादित्यतस्तत्प्रमाणत्वेन दर्शनपदोक्तां श्रुतिं हेत्वन्तरेणानन्दादेरलौकिकत्वं समर्थयत्सूत्रं पठति ॥

ಲೌಕಿಕವಾದ ಆನಂದಾದಿಗಳು ಮನೋವಾಕ್‌ಗೋಚರವಾದ್ದರಿಂದ ಅವು ಲೌಕಿಕವಾಗಲಿ. ಅಂದಮಾತ್ರಕ್ಕೆ ಬ್ರಹ್ಮನ ಆನಂದಾದಿಗಳಿಗೆ ಅಲೌಕಿಕತ್ವ ಹೇಗೆ ಸಿದ್ಧಿಸುತ್ತದೆ? ಆ ವಿಷಯದಲ್ಲಿ ಪ್ರಮಾಣವಿಲ್ಲವಾದ್ದರಿಂದ ಎಂಬುದಾಗಿ ಶಂಕೆ ಬಂದರೆ, ಅದಕ್ಕೆ ಪ್ರಮಾಣವಾಗಿ ದರ್ಶನಪದದಿಂದ ಉಕ್ತವಾದ ಶ್ರುತಿಯನ್ನು ಮತ್ತೊಂದು ಹೇತುವಿನಿಂದ ಬ್ರಹ್ಮನ ಆನಂದಾದಿಗಳಿಗೆ ಅಲೌಕಿಕತ್ವವನ್ನು ಸಮರ್ಥಿಸುವ ಸೂತ್ರವನ್ನು ಹೇಳುತ್ತಾರೆ -

### ॐ दर्शनात् ॐ (३-२-३३)

**ಸೂತ್ರಾರ್ಥ :- ದರ್ಶನಾತ್** = ಲೌಕಿಕವಾದ ಆನಂದಾದಿಗಳು ಪ್ರತ್ಯಕ್ಷಸಿದ್ಧವಾದ್ದರಿಂದ, ಮನೋವಾಕ್‌ವಿಷಯವೂ ಆದ್ದರಿಂದ ಅವು ಲೌಕಿಕವಾಗಿವೆ. ಬ್ರಹ್ಮನ ಆನಂದಾದಿಗಳು ಪ್ರತ್ಯಕ್ಷಸಿದ್ಧವಾಗಿಲ್ಲವಾದ್ದರಿಂದ, ಮನೋವಾಕ್‌ಗೋಚರವೂ ಆಗಿಲ್ಲವಾದ್ದರಿಂದ ಲೋಕವಿಲಕ್ಷಣವಾಗಿವೆ.

ಸೂ.ರ.:– एवं च लौकिकानन्दादिकं हि दर्शनयोग्यम् । ईश्वरानन्दादि तु 'अदृष्टमव्यवहार्यं' (कौण्डिन्य.) इत्यादिना दर्शनायोग्यमित्युच्यते । ततश्च तल्लोकविलक्षणमेवेति तस्मिन्भक्तिः कर्तव्येति सिद्धम् ॥

ಲೌಕಿಕವಾದ ಆನಂದಾದಿಗಳು ದರ್ಶನಯೋಗ್ಯವಾಗಿವೆ. ಆದರೆ ಈಶ್ವರನ ಆನಂದಾದಿಗಳು ಮಾತ್ರ

"ಅದೃಷ್ಟಮವ್ಯವಹಾರ್ಯಮವ್ಯಪದೇಶ್ಯಂ ಸುಖಂ ಜ್ಞಾನಮೋಜೋ ಬಲಮಿತಿ ಬ್ರಹ್ಮಣಸ್ತಸ್ಮಾತ್ ಬ್ರಹ್ಮೇತ್ಯಾಚಕ್ಷತೇ ತಸ್ಮಾತ್ ಬ್ರಹ್ಮೇತ್ಯಾಚಕ್ಷತೇ" (ಕೌಂಡಿನ್ಯಶ್ರುತಿಃ)

ಎಂಬುದಾಗಿ ದರ್ಶನಅಯೋಗ್ಯವೆಂದು ಹೇಳಲ್ಪಟ್ಟಿವೆ. ಆದ್ದರಿಂದ ಬ್ರಹ್ಮನ ಆನಂದಾದಿಗಳು ಲೋಕವಿಲಕ್ಷಣವೇ ಆಗಿವೆಯಾದ್ದರಿಂದ ಅವನಲ್ಲಿ ಭಕ್ತಿಯು ಕರ್ತವ್ಯವಾಗಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 34

**ಸೂ.ರ.:– ननु यदीश्वरानन्दादिर्लोकानन्दादिविलक्षणः । कथं तर्हि लोकानन्दादिः श्रुतिपुराणादौ गृहीतसङ्गतिकस्यानन्दादिशब्दस्य तत्र प्रयोगः । न हि लवणे गृहीतसङ्गतिकः सैन्धवशब्दोऽश्वे पृथक् सङ्गतिग्रहं विना युज्यते । येनेहापि तत्र सङ्गतिग्रहाभावेऽपि लौकिकेषु सङ्गतिग्रहणमात्रेण तत्र प्रयुज्यत इति प्राप्ते सूत्रितम् ॥**

ಒಂದುವೇಳೆ ಈಶ್ವರನ ಆನಂದಾದಿಗಳು ಲೋಕಾನಂದಾದಿವಿಲಕ್ಷಣ–ವಾಗಿದ್ದಾದರೆ ಹಾಗಾದರೆ ಶ್ರುತಿಪುರಾಣಾದಿಗಳಲ್ಲಿ ಹೇಗೆ ಆನಂದಾದಿ–ಪದಪ್ರಯೋಗವು ಉಪಪನ್ನವಾಗುತ್ತದೆ?

ಉಪ್ಪು ಎಂಬ ಅರ್ಥದಲ್ಲಿ ಸಂಗತಿಗ್ರಹಣ ಪಡೆದ ಸೈಂಧವಶಬ್ದವು ಕುದುರೆ ಎಂಬ ಅರ್ಥದಲ್ಲಿ ಪ್ರತ್ಯೇಕ ಸಂಗತಿಗ್ರಹಣವಿಲ್ಲದೇ ಕುದುರೆಯ ಅರ್ಥದಲ್ಲಿ ಪ್ರಯೋಗಿಸಲ್ಪಡುವುದಿಲ್ಲ. ಒಂದುವೇಳೆ ಹಾಗಾಗಿದ್ದರೆ ಈಶ್ವರಾನಂದಾದಿಗಳಲ್ಲಿ ಸಂಗತಿಗ್ರಹಣ ಇಲ್ಲದಿದ್ದರೂ ಸಹ ಲೌಕಿಕಾನಂದಾದಿಗಳಲ್ಲಿ ಸಂಗತಿಗ್ರಹಣಮಾತ್ರದಿಂದ ಈಶ್ವರಾನಂದಾದಿಗಳ ವಿಷಯದಲ್ಲಿ ಆನಂದಾದಿಪದಪ್ರಯೋಗವು ಉಪಪನ್ನವಾಗು–ತ್ತಿತ್ತೇನೋ ಎಂಬುದಾಗಿ ಶಂಕೆ ಬಂದರೆ, ಪರಿಹಾರಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

### ॐ बुद्ध्यर्थः पादवत् ॐ (३-२-३४)

**ಸೂತ್ರಾರ್ಥ** :- **ಪಾದವತ್** = ಯಾವ ರೀತಿಯಾಗಿ ಲೋಕಪಾದ–ವಿಲಕ್ಷಣವಾದ ಜೀವ ಎಂಬ ಭೂತಗಳಲ್ಲಿ "ಪಾದೋಽಸ್ಯ ವಿಶ್ವಾ ಭೂತಾನಿ" (ಋ. 10-90-6) ಎಂಬುದಾಗಿ ಪಾದಪದದ ಪ್ರಯೋಗವು **ಬುದ್ಧ್ಯರ್ಥಃ** = ಭೂತಗಳಿಗೆ ಈಶಾಂಶತ್ವಜ್ಞಾಪನಾರ್ಥವಾಗಿದೆಯೋ, ತಥಾ = ಅದೇ ರೀತಿಯಾಗಿ ಅಲೌಕಿಕೇಽಪಿ ಬ್ರಹ್ಮಾನಂದಾದೌ ಆನಂದಪದಪ್ರಯೋಗಃ = ಅಲೌಕಿಕವಾದ ಬ್ರಹ್ಮನ ಆನಂದಾದಿ–ಗಳಲ್ಲಿಯೂ ಸಹ ಆನಂದಪದಪ್ರಯೋಗವು **ಬುದ್ಧ್ಯರ್ಥಃ** = ಅನುಕೂಲತಯಾ ವೇದನೀಯತ್ವಾದಿಧರ್ಮಜ್ಞಾಪನಾರ್ಥವಾಗಿದೆ.

ಸೂ.ಠ.:- एवं च लौकिकपादस्वरूपांशाभ्यां विलक्षणेषु भिन्नांशेषु जीवेषु पादोऽस्येति पादशब्दप्रयोगवत् लौकिकानां बुद्ध्यर्थमेव लोके गृहीतसङ्गतिकस्यानन्दादिशब्दस्य किञ्चित्सादृश्यमात्रेण भगवदानन्दादौ प्रयोगोपपत्तेः । ज्ञाततावन्मात्रस्य प्रमाणान्तरवशात् वैलक्षण्ये ज्ञाते शब्दानां तत्र परममुख्यवृत्तिग्रहोऽपि भवति । अतोऽलौकिकगुणे हरौ भक्तिः कार्येति सिद्धम् ॥

ಲೌಕಿಕ ಪಾದ-ಸ್ವರೂಪಾಂಶಗಳಿಂದ ವಿಲಕ್ಷಣರಾದ, ಭಿನ್ನಾಂಶರಾದ ಜೀವರಲ್ಲಿ "ಪಾದೋऽಸ್ಯ ವಿಶ್ವಾ ಭೂತಾನಿ" ಎಂಬುದಾಗಿ ಪಾದಶಬ್ದಪ್ರಯೋಗದಂತೆ, ಲೋಕದಲ್ಲಿ ಗೃಹೀತಸಂಗತಿಕವಾದ ಆನಂದಾದಿಶಬ್ದದ ಕಿಂಚಿತ್ ಸಾದೃಶ್ಯಮಾತ್ರದಿಂದ ಅನುಕೂಲತಯಾ ವೇದನೀಯತ್ವಾದಿಧರ್ಮಜ್ಞಾಪನಕ್ಕಾಗಿ ಭಗವದಾನಂದಾದಿಗಳ ವಿಷಯದಲ್ಲಿ ಪ್ರಯೋಗವು ಉಪಪನ್ನವಾಗುತ್ತದೆ.

ಅನುಕೂಲವೇದ್ಯತ್ವ ಮಾತ್ರ ಜ್ಞಾನ ಉಳ್ಳವರಿಗೆ 'ಅದೃಷ್ಟಮವ್ಯವಹಾರ್ಯಂ' ಇತ್ಯಾದಿಪ್ರಮಾಣಬಲದಿಂದ ಈಶಾನಂದಾದಿಗಳಲ್ಲಿ ಲೌಕಿಕಾನಂದಾದಿವೈಲಕ್ಷಣ್ಯವು ಜ್ಞಾತವಾದಾಗ ಆನಂದಾದಿಶಬ್ದಗಳಿಗೆ ಈಶ್ವರವಿಷಯದಲ್ಲಿ ಪರಮಮುಖ್ಯವೃತ್ತಿ-ಜ್ಞಾನವೂ ಸಹ ಉಂಟಾಗುತ್ತದೆ.

ಆದ್ದರಿಂದ ಅಲೌಕಿಕಗುಣಗಳುಳ್ಳ ಹರಿಯಲ್ಲಿ ಭಕ್ತಿಯು ಕರ್ತವ್ಯವಾಗಿದೆ ಎಂದು ಸಿದ್ಧವಾಗುತ್ತದೆ.

ಪರಮತಾಧಿಕರಣವು ಮುಗಿಯಿತು.

*ಅಧಿಕರಣ – 17*

# ಸ್ಥಾನವಿಶೇಷಾಧಿಕರಣ

## ಸಂಗತಿ

**ಸೂ.ರ.:– अत्र ब्रह्माद्यानन्दादीनां भगवदानन्दादिप्रतिबिम्बत्वं पूर्वनयोक्तं समर्थ्यते ।**

ಬ್ರಹ್ಮಾದಿಗಳ ಆನಂದಾದಿ ಗುಣಗಳು ಭಗವಂತನ ಆನಂದಾದಿಗುಣಗಳಿಗೆ ಪ್ರತಿಬಿಂಬವಾಗಿವೆ ಎಂದು ಸಮರ್ಥಿಸುತ್ತಾರೆ ಹದಿನೇಳನೇ ಈ ಸ್ಥಾನವಿಶೇಷಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु न ब्रह्माद्यानन्दादयो भगवदानन्दादिप्रतिबिम्बभूताः । तथात्वे वैचित्र्याभावप्रसङ्गात् । प्रतिबिम्बवैचित्र्ये हि कारणद्वयम् । बिम्बवैचित्र्यं स्थानवैचित्र्यं चेति । न चात्र ब्रह्मादिस्थानवैचित्र्यं प्रतिबिम्बवैचित्र्योपपादकं सम्भवति । तस्यापि भगवद्धर्मप्रतिबिम्बत्वेन वैचित्र्यसिद्धये स्थानगुणान्तरवैचित्र्यानुसरणेऽनवस्थानात् । नापि बिम्बानन्दादिवैचित्र्यम् । भक्त्यभावप्रसङ्गात् । ततश्च कारणाभावेन वैचित्र्यासम्भवात् न ब्रह्मानन्दादिर्भगवदानन्दादिप्रतिबिम्ब इति तस्यालौकिकत्वाभावान्न तत्र निरतिशया भक्तिरिति प्राप्ते सूत्रमाह ॥**

ಬ್ರಹ್ಮಾದಿಗಳ ಆನಂದಾದಿಗಳು ಭಗವಂತನ ಆನಂದಾದಿಗಳಿಗೆ ಪ್ರತಿಬಿಂಬವಾಗಲು ಸಾಧ್ಯವಿಲ್ಲ. ಏಕೆಂದರೆ – ಹಾಗೆ ಪ್ರತಿಬಿಂಬವಾಗಿದ್ದೇ ಆದರೆ ಪ್ರತಿಬಿಂಬಗಳಲ್ಲಿ ಪರಸ್ಪರ ವೈಚಿತ್ರ್ಯ ಇಲ್ಲದೇ ಹೋಗಬೇಕಾಗುತ್ತದೆ.

ಪ್ರತಿಬಿಂಬವೈಚಿತ್ರ್ಯಕ್ಕೆ ಎರಡು ಕಾರಣಗಳು. ಒಂದು ಬಿಂಬವೈಚಿತ್ರ್ಯ, ಮತ್ತೊಂದು ಸ್ಥಾನವೈಚಿತ್ರ್ಯ ಎಂದು. ಪ್ರಕೃತ ಬ್ರಹ್ಮಾದಿಸ್ಥಾನವೈಚಿತ್ರ್ಯವು ಪ್ರತಿಬಿಂಬವೈಚಿತ್ರ್ಯಕ್ಕೆ

ಉಪಪಾದಕವಾಗುವುದಿಲ್ಲ, ಕಾರಣ - ಅದೂ ಭಗವಂತನ ಧರ್ಮದ ಪ್ರತಿಬಿಂಬ-ವಾದ್ದರಿಂದ. ವೈಚಿತ್ರ್ಯಸಿದ್ಧಿಗಾಗಿ ಸ್ಥಾನಾಂತರ - ಗುಣಾಂತರ ವೈಚಿತ್ರ್ಯವನ್ನು ಅನುಸರಿಸುವುದಾದರೆ ಅನವಸ್ಥಾ ಬರುತ್ತದೆ.

ಇನ್ನು ಬಿಂಬಾನಂದಾದಿವೈಚಿತ್ರ್ಯವೂ ಉಪಪಾದಕವಾಗುವುದಿಲ್ಲ. ಹಾಗಾದರೆ ಭಗವದಾನಂದಾದಿಗಳಲ್ಲಿ ವೈಚಿತ್ರ್ಯವನ್ನು ಅಂಗೀಕರಿಸಿದರೆ ಭಗವದ್ರೂಪಗಳಲ್ಲಿ ಗುಣತಾರತಮ್ಯ ಬರುವುದರಿಂದ ಭಗವಂತನಲ್ಲಿ ಭಕ್ತಿ ಮಾಡುವುದು ಯುಕ್ತವಾಗದೇ ಹೋಗಬೇಕಾದ ಪ್ರಸಂಗ ಬರುತ್ತದೆ. ಹೀಗೆ ಕಾರಣ ಇಲ್ಲವಾದ್ದರಿಂದ ಪ್ರತಿಬಿಂಬ-ವೈಚಿತ್ರ್ಯವು ಕೂಡುವುದಿಲ್ಲ.

ಆದ್ದರಿಂದ ಬ್ರಹ್ಮಾದಿಗಳ ಆನಂದಾದಿಗುಣಗಳು ಭಗವಂತನ ಆನಂದಾದಿ ಗುಣಗಳಿಗೆ ಪ್ರತಿಬಿಂಬವಾಗುವುದಿಲ್ಲವಾದ್ದರಿಂದ ಭಗವಂತನು ಅಲೌಕಿಕನಾಗದ ಕಾರಣ ಅವನಲ್ಲಿ ನಿರತಿಶಯವಾದ ಭಕ್ತಿಯು ಕೂಡುವುದಿಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

## ॐ स्थानविशेषात् प्रकाशादिवत् ॐ (३-२-३५)

**ಸೂತ್ರಾರ್ಥ :- ಪ್ರಕಾಶಾದಿವತ್** = ಯಾವ ರೀತಿಯಾಗಿ ಸೂರ್ಯಕಾಂತಾದಿ-ಗಳಲ್ಲಿರುವ ಸೂರ್ಯಾದಿಗಳ ಪ್ರತಿಬಿಂಬದಲ್ಲಿ ಅಗ್ನಿಜನಕತ್ವಾದಿ ವೈಚಿತ್ರ್ಯವು **ಸ್ಥಾನವಿಶೇಷಾತ್** = ಸೂರ್ಯಕಾಂತಾದಿ ಸ್ಥಾನಗುಣವೈಚಿತ್ರ್ಯದಿಂದ ಉಪಪನ್ನ-ವಾಗುತ್ತದೆಯೋ ತಥಾ = ಅದರಂತೆ **ಸ್ಥಾನವಿಶೇಷಾತ್** = ಬ್ರಹ್ಮಾದಿಸ್ಥಾನಗತ-ಭಕ್ತ್ಯಾದಿಗುಣವೈಚಿತ್ರ್ಯದಿಂದ ಭಗವಂತನ ಆನಂದಪ್ರತಿಬಿಂಬವಾದ ಬ್ರಹ್ಮಾದಿಗಳ ಆನಂದಗಳಲ್ಲಿಯೂ ವೈಚಿತ್ರ್ಯಮುಪಪದ್ಯತೇ = ವೈಚಿತ್ರ್ಯವು ಉಪಪನ್ನವಾಗುತ್ತದೆ.

## ಸಿದ್ಧಾಂತ

**ಸೂ.ರ.:– एवं च प्रतिबिम्ब एव ब्रह्माद्यानन्दादिः भगवदानन्दादेः ।** ब्रह्मादीनामनादिकालीनभक्त्यादिगुणवैचित्र्यपरमैश्वर्याभ्यां सूर्यप्रतिबिम्ब वैचित्र्यवत् आनन्दादिवैचित्र्यसम्भवात् । ब्रह्मादिगुणेति (वाराहे.) स्मृतेः । अतो ब्रह्मादिगुणबिम्बालौकिकगुणे हरौ भक्तिर्युक्तेति सिद्धम् ॥

ಬ್ರಹ್ಮಾದಿಗುಣವೈಶೇಷ್ಯಾತ್ ಆನಂದಾದಿಃ ಪರಸ್ಯ ಚ ।
ಪ್ರತಿಬಿಂಬತ್ವಮಾಯಾತಿ ಮಧ್ಯೋಽಚ್ಚಾದಿವಿಶೇಷತಃ ॥

ಎಂಬುದಾಗಿ ವಾರಾಹಸ್ಮೃತಿವಚನ ಇರುವುದರಿಂದ, ಬ್ರಹ್ಮಾದಿಗಳ ಆನಂದಾದಿ ಗುಣಗಳು ಭಗವಂತನ ಆನಂದಾದಿಗುಣಗಳಿಗೆ ಪ್ರತಿಬಿಂಬ ಆಗುತ್ತವೆ. ಬ್ರಹ್ಮಾದಿಗಳ ಅನಾದಿಕಾಲೀನ ಭಕ್ತ್ಯಾದಿಗುಣವೈಚಿತ್ರ್ಯ-ಪರಮೈಶ್ವರ್ಯಗಳಿಂದ ಸೂರ್ಯ-ಪ್ರತಿಬಿಂಬವೈಚಿತ್ರ್ಯದಂತೆ ಭಗವದಾನಂದಾದಿ ಪ್ರತಿಬಿಂಬವಾದ ಬ್ರಹ್ಮಾದಿಗಳ ಆನಂದಾದಿಗಳಲ್ಲಿ ವೈಚಿತ್ರ್ಯವು ಉಪಪನ್ನವಾಗುತ್ತದೆ.

ಆದ್ದರಿಂದ ಬ್ರಹ್ಮಾದಿಗಳ ಗುಣಗಳಿಗೆ ಬಿಂಬವಾದ, ಅಲೌಕಿಕವಾದ ಗುಣಗಳುಳ್ಳ ಹರಿಯಲ್ಲಿ ಭಕ್ತಿ ಮಾಡುವುದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 36

**ಸೂ.ರ.:- युक्त्यन्तरेण बिम्बानन्दाद्यवैचित्र्येऽपि प्रतिबिम्ब-वैचित्र्यमुपपादयत्सूत्रं पठति ॥**

ಮತ್ತೊಂದು ಯುಕ್ತಿಯಿಂದಲೂ ಸಹ, ಬಿಂಬದ ಆನಂದಾದಿಗಳಲ್ಲಿ ವೈಚಿತ್ರ್ಯ ಇಲ್ಲದಿದ್ದರೂ ಸಹ ಪ್ರತಿಬಿಂಬದಲ್ಲಿ ವೈಚಿತ್ರ್ಯವನ್ನು ಉಪಪಾದಿಸುವ ಸೂತ್ರವನ್ನು ಹೇಳುತ್ತಾರೆ-

**ॐ उपपत्तेश्च ॐ (३-२-३६)**

**ಸೂತ್ರಾರ್ಥ :-** ಉಪಪತ್ತೇಶ್ಚ = ಬಿಂಬಭೂತ ಭಗವಂತನ ಐಶ್ವರ್ಯ-ವಶದಿಂದಲೇ ಪ್ರತಿಬಿಂಬಭೂತ ಬ್ರಹ್ಮಾದ್ಯಾನಂದವೈಚಿತ್ರ್ಯವು ಉಪಪನ್ನವಾಗುವುದ-ರಿಂದಲೂ ಇತರರ ಗುಣಗಳಿಗೆ ಭಗವದ್ಗುಣಪ್ರತಿಬಿಂಬತ್ವವು ಯುಕ್ತ.

**ಸೂ.ರ.:- एवं च भक्त्यादिवैचित्र्यानुपपत्त्यभावात् । तस्य परमेश्वरैश्वर्यादेवोपपत्तेः । परमेश्वरो हि वेदाप्रामाण्यकारणवैषम्यादि-परिहाराय भक्त्यादिवैचित्र्यमपेक्ष्यैव विचित्रानन्दादीन् ददाति । अनादिकालीनभक्त्यादिविचित्रगुणांस्तु स्वैच्छयैवैश्वर्यवशाद्ददाति । तत्र वैषम्यादेरदोषत्वात् । ऐश्वर्यात्परमादिति (पाद्मे.) स्मृतेः । अतो ब्रह्मादिगुणबिम्बालौकिकगुणे हरौ युक्तैव भक्तिरिति सिद्धम् ॥**

ಭಕ್ತ್ಯಾದಿವೈಚಿತ್ರ್ಯಾನುಪಪತ್ತಿ ಇಲ್ಲದ ಕಾರಣ ಅದು ಪರಮೇಶ್ವರನ ಐಶ್ವರ್ಯ-ದಿಂದಲೇ ಉಪಪನ್ನವಾಗುತ್ತದೆ. ಪರಮೇಶ್ವರನು ವೇದ ಅಪ್ರಾಮಾಣ್ಯಕಾರಣ ವೈಷಮ್ಯಾದಿಪರಿಹಾರಕ್ಕಾಗಿ ಭಕ್ತ್ಯಾದಿವೈಚಿತ್ರ್ಯವನ್ನು ಅಪೇಕ್ಷಿಸಿಯೇ ವಿಚಿತ್ರಾ-ನಂದಾದಿಗಳನ್ನು ಕೊಡುತ್ತಾನೆ. ಅನಾದಿಕಾಲೀನಭಕ್ತ್ಯಾದಿ ವಿಚಿತ್ರಗುಣಗಳನ್ನು ಮಾತ್ರ ತನ್ನ ಇಚ್ಛೆಯಿಂದಲೇ ಐಶ್ವರ್ಯವಶಾತ್ ಕೊಡುತ್ತಾನೆ. ಅಲ್ಲಿ ವೈಷಮ್ಯಾದಿಗಳು ದೋಷವಾಗುವುದಿಲ್ಲ.

ಐಶ್ವರ್ಯಾತ್ ಪರಮಾದ್ವಿಷ್ಣೋಃ ಭಕ್ತ್ಯಾದೀನಾಮನಾದಿತಃ ।
ಬ್ರಹ್ಮಾದೀನಾಂ ಸೂಪಪನ್ನಾ ಹ್ಯಾನಂದಾದೇರ್ವಿಚಿತ್ರತಾ ॥

ಎಂಬುದಾಗಿ ಪಾದ್ಮಪುರಾಣವಚನವೂ ಇದೆ.

ಆದ್ದರಿಂದ ಬ್ರಹ್ಮಾದಿಗುಣಬಿಂಬವಾದ, ಅಲೌಕಿಕವಾದ ಗುಣಗಳುಳ್ಳ ಹರಿಯಲ್ಲಿ ಭಕ್ತಿಯು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

**ಸ್ಥಾನವಿಶೇಷಾಧಿಕರಣವು ಮುಗಿಯಿತು.**

*ಅಧಿಕರಣ – 18*

## ತಥಾऽನ್ಯತ್ವಾಧಿಕರಣ

### ಸಂಗತಿ

**ಸೂ.ರ.:– अत्र ब्रह्मणो ध्यानप्रतीतादन्यत्वोक्त्या पुनरव्यक्तत्वं समर्थ्यते ।**

ಬ್ರಹ್ಮನಿಗೆ ಧ್ಯಾನಪ್ರತೀತವಾದ ವಸ್ತುವಿನಿಂದ ಅನ್ಯತ್ವವನ್ನು ಹೇಳುವ ಮೂಲಕ ಅವ್ಯಕ್ತತ್ವವನ್ನು ಸಮರ್ಥಿಸುತ್ತಾರೆ ಹದಿನೆಂಟನೇ ಈ ತಥಾऽನ್ಯತ್ವಾಧಿಕರಣದಲ್ಲಿ

### ಪೂರ್ವಪಕ್ಷ

**ಸೂ.ರ.:– ननु व्यक्तमेव ब्रह्म । ध्यानकाले प्रतीयमानत्वात् । न च ध्येयानां बहुत्वेन ब्रह्मभेदापत्तिः । विशेषबलेनैव बहुत्वोपपत्तेः । ध्येयस्याब्रह्मत्वे च ब्रह्मध्यानाभावेन फलं न स्यात् । अतो ध्यानकाले प्रतीतस्य ब्रह्मत्वेनाव्यक्तत्वाभावाद्व्यर्था भक्तिरिति प्राप्ते सूत्रितम् ॥**

ಬ್ರಹ್ಮನು ಧ್ಯಾನಕಾಲದಲ್ಲಿ ಪ್ರತೀಯಮಾನನಾದ್ದರಿಂದ ವ್ಯಕ್ತನೇ ಆಗಿದ್ದಾನೆ. ಹಾಗಾದರೆ ಧ್ಯೇಯವಾದ ವಸ್ತು ಬಹಳವಾಗಿರುವುದರಿಂದ ಬ್ರಹ್ಮನಲ್ಲಿ ಭೇದ ಬರಬೇಕಾದ ಅತಿಪ್ರಸಂಗ ಬರುವುದಲ್ಲ? ಎಂದರೆ, ಅದು ಸರಿಯಲ್ಲ, ಬ್ರಹ್ಮನಲ್ಲಿ ಸ್ವರೂಪಭೇದ ಇಲ್ಲದಿದ್ದರೂ ವಿಶೇಷಬಲದಿಂದ ಬಹುತ್ವವು ಉಪಪನ್ನವಾಗುತ್ತದೆ. ಧ್ಯೇಯವಾದ ವಸ್ತು ಬ್ರಹ್ಮ ಅಲ್ಲ ಎಂದಾದರೆ ಬ್ರಹ್ಮಧ್ಯಾನ ಇಲ್ಲದ ಕಾರಣ ಫಲ ಇಲ್ಲದೇ ಹೋಗಬೇಕಾಗುತ್ತದೆ.

ಆದ್ದರಿಂದ ಧ್ಯಾನಕಾಲದಲ್ಲಿ ಪ್ರತೀತನಾದವನು ಬ್ರಹ್ಮನೇ ಆದ್ದರಿಂದ ಅವನು ಅವ್ಯಕ್ತನಾಗದ ಕಾರಣ ಅವನಲ್ಲಿ ಭಕ್ತಿ ಮಾಡುವುದು ವ್ಯರ್ಥವೇ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರ ಹೇಳುತ್ತಾರೆ –

**ॐ तथाऽन्यत् प्रतिषेधात् ॐ (३-२-३७)**

**ಸೂತ್ರಾರ್ಥ** :- ಯಥಾ ಜೀವಾನಂದಾದಿ ಬ್ರಹ್ಮಾನಂದಾದೇಃ ವಿಲಕ್ಷಣಂ = ಯಾವ ರೀತಿಯಾಗಿ ಜೀವನ ಆನಂದಾದಿಗಳು ಬ್ರಹ್ಮನ ಆನಂದಾದಿಗಳಿಂದ ವಿಲಕ್ಷಣವಾಗಿದೆಯೋ **ತಥಾ** = ಅದೇ ರೀತಿಯಾಗಿ ಧ್ಯಾನಕಾಲೇ ಪ್ರತೀತಂ ವಾಸನಾತ್ಮಕಂ ವಸ್ತು ಬ್ರಹ್ಮಣೋ **ಅನ್ಯತ್** = ಧ್ಯಾನಕಾಲದಲ್ಲಿ ಪ್ರತೀತವಾಗುವ, ವಾಸನಾಮಯವಾದ ವಸ್ತು ಬ್ರಹ್ಮನಿಂದ ಭಿನ್ನವಾಗಿದೆ. ಕುತಃ = ಯಾಕೆ? "ಯನ್ಮನಸಾ ನ ಮನುತೇ" (ಕೇನ. 3-1-6) ಎಂಬ ಶ್ರುತಿಯಲ್ಲಿ ಅನ್ಯಸ್ಯ = ಧ್ಯಾನಪ್ರತೀತನಾಗುವ ವ್ಯಕ್ತಿಗೆ **ಪ್ರತಿಷೇಧಾತ್** = ಬ್ರಹ್ಮತ್ವವನ್ನು ನಿಷೇಧಿಸಿದ್ದರಿಂದ.

## ಸಿದ್ಧಾಂತ

**ಸೂ.ರ.:- एवं चाव्यक्तमेव ब्रह्म । जीवानन्दाद्ब्रह्मानन्दस्य भिन्नत्ववत्ध्येयस्य दुर्लक्षणत्वेन ब्रह्मणस्तदन्यत्वात् । तदेवेति ध्येयस्य ब्रह्मत्वनिषेधाच्च । प्रतिमोपासनवत्प्रतिबिम्बोपासनस्यापि ब्रह्मोपासनत्वेन ध्यानकालानुपपत्त्यभावात् । अतो ध्यानकाले प्रतीतस्याब्रह्मत्वेनाव्यक्तत्वात्कर्तव्यैव तद्भक्तिरिति सिद्धम् ॥**

ಬ್ರಹ್ಮನು ಅವ್ಯಕ್ತನೇ ಆಗಿದ್ದಾನೆ. ಜೀವಾನಂದಾದಿಗಳಿಂದ ಬ್ರಹ್ಮಾನಂದಾದಿಗಳು ಭಿನ್ನವಾದಂತೆ ಧ್ಯಾನಪ್ರತೀತನಾದ ವ್ಯಕ್ತಿಯು ಬ್ರಹ್ಮನಿಂದ ಭಿನ್ನನಾಗಿದ್ದಾನೆ.

ಯನ್ಮನಸಾ ನ ಮನುತೇ ಯೇನಾऽऽಹುರ್ಮನೋ ಮತಮ್ ।
ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ ॥

ಎಂಬುದಾಗಿ ಧ್ಯೇಯವಾದ ವಸ್ತುವಿಗೆ ಬ್ರಹ್ಮತ್ವವನ್ನು ನಿಷೇಧಿಸಲಾಗಿದೆ. ಪ್ರತಿಮೋಪಾಸನದಂತೆ ಪ್ರತಿಬಿಂಬೋಪಾಸನವೂ ಬ್ರಹ್ಮೋಪಾಸನವಾದ್ದರಿಂದ ಧ್ಯಾನಕಾಲಾನುಪಪತ್ತಿ ಇಲ್ಲ.

ಆದ್ದರಿಂದ ಧ್ಯಾನಕಾಲದಲ್ಲಿ ಪ್ರತೀತನಾದ ವ್ಯಕ್ತಿ ಬ್ರಹ್ಮನಿಂದ ಭಿನ್ನನಾದ್ದರಿಂದ, ಅವ್ಯಕ್ತನೇ ಆದ್ದರಿಂದ ಅವನಲ್ಲಿ ಭಕ್ತಿ ಮಾಡುವುದು ಕರ್ತವ್ಯವೇ ಆಗಿದೆ ಎಂದು ಸಿದ್ಧವಾಗುತ್ತದೆ.

ತಥಾऽನ್ಯತ್ವಾಧಿಕರಣವು ಮುಗಿಯಿತು.

ಅಧಿಕರಣ - 19

# ಸರ್ವಗತತ್ವಾಧಿಕರಣ

## ಸಂಗತಿ

**ಸೂ.ರ.:– अत्र भगवत एव सर्वकर्तृत्वादि समर्थ्यते ।**

ಭಗವಂತನಿಗೇ ಸರ್ವಕರ್ತೃತ್ವಾದಿಗಳನ್ನು ಸಮರ್ಥಿಸುತ್ತಾರೆ ಹತ್ತೊಂಭತ್ತನೇ ಈ ಫಲಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु न भगवत एव सर्वसृष्ट्यादिक्रिया युज्यते । किन्तु देशकालान्तरेऽन्यतोऽपि जगतः सा भवति । राजादौ तथा दर्शनात् । तथा च न ब्रह्मणः सकाशादेव सर्वसृष्ट्यादिकं युक्तमिति प्राप्ते सूत्रं पठति ॥**

ಭಗವಂತನಿಗೇ ಸರ್ವಸೃಷ್ಟ್ಯಾದಿಕ್ರಿಯಾ ಉಪಪನ್ನವಾಗುವುದಿಲ್ಲ. ಕಿಂತು ದೇಶಾಂತರ - ಕಾಲಾಂತರದಲ್ಲಿ ಮತ್ತೊಬ್ಬರಿಂದಲೂ ಜಗತ್ತಿಗೆ ಸೃಷ್ಟ್ಯಾದಿಕ್ರಿಯೆ ನಡೆಯುತ್ತದೆ. ರಾಜಾದಿಗಳಲ್ಲಿ ಹಾಗೆ ಕಂಡಿದೆ. ಆದ್ದರಿಂದ ಬ್ರಹ್ಮನಿಂದಲೇ ಸರ್ವಸೃಷ್ಟ್ಯಾದಿಗಳು ಯುಕ್ತವಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ अनेन सर्वगतत्वमायामयशब्दादिभ्यः ॐ (३-२-३८)**

**ಸೂತ್ರಾರ್ಥ :- ಅನೇನ** = ಭಗವಂತನಿಂದಲೇ, ಸರ್ವದೇಶಕಾಲಯೋಃ ಸೃಷ್ಟ್ಯಾದಿರ್ಭವತಿ = ಎಲ್ಲ ದೇಶ-ಕಾಲಗಳಲ್ಲಿ ಸೃಷ್ಟ್ಯಾದಿಗಳು ಆಗುತ್ತವೆ. ನ ತು ದೇಶಕಾಲಾಂತರಯೋಃ ಅನ್ಯೇನ = ಹೊರತು ದೇಶಾಂತರ - ಕಾಲಾಂತರದಲ್ಲಿ ಮತ್ತೊಬ್ಬರಿಂದ ಆಗುವುದಿಲ್ಲ. ಕುತಃ = ಯಾಕೆ? **ಸರ್ವಗತತ್ವಮಾಯಾಮಯ-ಶಬ್ದಾದಿಭ್ಯಃ** = 'ಏಷ ಸರ್ವಗತಃ' ಎಂಬುದಾಗಿ (ಭಾಲ್ಲವೇಯ) ಸರ್ವಗತತ್ವಶ್ರುತಿ ಇರುವುದರಿಂದ, ವಿಷ್ಣೌ ಪ್ರಯುಕ್ತಮಾಯಾಮಯಶಬ್ದವ್ಯಾಖ್ಯಾನರೂಪ ಸರ್ವತ್ರೇತ್ಯಾದಿ (ಚತುರ್ವೇದಶಿಖಾ) ಶ್ರುತೇಶ್ಚ = ವಿಷ್ಣುವಿನಲ್ಲಿ ಪ್ರಯುಕ್ತವಾದ

ಮಾಯಾಮಯಶಬ್ದದ ವ್ಯಾಖ್ಯಾನರೂಪವಾದ, 'ಸರ್ವತ್ರ' (ಚತುರ್ವೇದ) ಎಂದು ಶ್ರುತಿಯೂ ಇರುವುದರಿಂದ, ಅನ್ಯತ್ರ ಪ್ರಮಾಣ ಇಲ್ಲದಿರುವುದರಿಂದ ಎನ್ನುವುದು ಆದಿಶಬ್ದದ ಅರ್ಥ.

## ಸಿದ್ಧಾಂತ

**ಸೂ.ರ.:- एवं च भगवतैव सर्वदेशकालीनसृष्ट्यादि । अनुप्रविश्येति (छां.६-३-३.) श्रुतिसिद्धसृष्ट्युपयोगिसर्वगतत्वस्यैष सर्वगत इति श्रुतौ विष्णोरभिधानात् । मायामयशब्दव्याख्यानरूपसर्वत्र सर्वमेतस्मादिति चतुर्वेदशिखोक्तेश्च । कालतोऽन्यस्य जगत्कारणत्वे प्रमाणाभावात् । तदभावे सम्भावनामात्रस्याप्रयोजकत्वात् । अतः सर्वजगज्जन्मादिकर्तरि ब्रह्मणि भक्तिः कार्यैवेति सिद्धम् ॥**

ಭಗವಂತನಿಂದಲೇ ಸರ್ವದೇಶಕಾಲೀನ ಸೃಷ್ಟ್ಯಾದಿಗಳು ಆಗುತ್ತವೆ. ಯಾಕೆ? "ಅನುಪ್ರವಿಶ್ಯ" (ಛಾಂ. 6-3-3) ಎಂಬ ಶ್ರುತಿಸಿದ್ಧವಾದ ಸೃಷ್ಟ್ಯುಪಯೋಗಿಯಾದ ಸರ್ವಗತತ್ವವನ್ನು 'ಏಷ ಸರ್ವಗತಃ' ಎಂಬ ಶ್ರುತಿಯಲ್ಲಿ ವಿಷ್ಣುವಿಗೆ ಹೇಳಿದ್ದರಿಂದ.

ಮಾಯಾಮಯ ಶಬ್ದವ್ಯಾಖ್ಯಾನರೂಪವಾದ

ಸರ್ವತ್ರ ಸರ್ವಮೇತಸ್ಮಾತ್ ಸರ್ವದಾ ಸರ್ವವಸ್ತುಷು ।
ಸ್ವರೂಪಭೂತಯಾ ನಿತ್ಯಶಕ್ತ್ಯಾ ಮಾಯಾಖ್ಯಯಾ ಯತಃ ॥
ಅತೋ ಮಾಯಾಮಯಂ ವಿಷ್ಣುಂ ಪ್ರವದಂತಿ ಸನಾತನಮ್ ॥

ಎಂಬುದಾಗಿ ಚತುರ್ವೇದ ಶಿಖೆಯಲ್ಲಿ ಹೇಳಿದ್ದರಿಂದ. ಕಾಲಾಂತರದಲ್ಲಿ ಮತ್ತೊಬ್ಬರು ಜಗತ್ಕಾರಣರಾಗುತ್ತಾರೆ ಎಂಬ ವಿಷಯದಲ್ಲಿ ಪ್ರಮಾಣವೂ ಇಲ್ಲ. ಪ್ರಮಾಣ ಇಲ್ಲದೇ ಕೇವಲ ಸಂಭಾವನಾವು ಅಪ್ರಯೋಜಕವಾಗಿದೆ.

ಆದ್ದರಿಂದ ಸರ್ವಜಗಜ್ಜನ್ಮಾದಿಕರ್ತೃವಾದ ಬ್ರಹ್ಮನಲ್ಲಿ ಭಕ್ತಿಯು ಕರ್ತವ್ಯವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಸರ್ವಗತತ್ವಾಧಿಕರಣವು ಮುಗಿಯಿತು.

ಅಧಿಕರಣ – 20

## ಫಲಾಧಿಕರಣ

### ಸಂಗತಿ

**ಸೂ.ರ.:– अत्र भगवतः स्वर्गादिकर्मफलदातृत्वं साध्यते ।**

ಭಗವಂತನಿಗೆ ಸ್ವರ್ಗಾದಿ ಕರ್ಮಫಲದಾತೃತ್ವವನ್ನು ಸಮರ್ಥಿಸುತ್ತಾರೆ ಇಪ್ಪತ್ತನೇ ಈ ಫಲಾಧಿಕರಣದಲ್ಲಿ.

### ಪೂರ್ವಪಕ್ಷ

**ಸೂ.ರ.:– नन्वीश्वरो न फलदाता । अवश्यक्लृप्तनियतपूर्ववृत्तिना कर्मणैव फलसम्भवेनान्यथासिद्धत्वात् । ततश्च न तद्भक्तिः कार्येति प्राप्ते सूत्रमाह ॥**

ಈಶ್ವರನು ಫಲದಾತಾ ಅಲ್ಲ, ಕಾರಣ - ಅವಶ್ಯಕ್ಲೃಪ್ತನಿಯತಪೂರ್ವ-ವೃತ್ತಿಯಾದ ಕರ್ಮದಿಂದಲೇ ಫಲವು ಸಂಭಾವಿತವಾದಾಗ ಈಶ್ವರನು ಅನ್ಯಥಾ-ಸಿದ್ಧನಾಗಿದ್ದಾನೆ. ಆದ್ದರಿಂದ ಅವನಲ್ಲಿ ಭಕ್ತಿ ಮಾಡುವುದು ಯುಕ್ತವಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ फलमत उपपत्तेः ॐ (३-२-३९)**

**ಸೂತ್ರಾರ್ಥ** :- **ಫಲಂ** = ಸ್ವರ್ಗಾದಿ ಫಲವು **ಅತಃ** = ಈಶ್ವರನಿಂದಲೇ ಆಗುತ್ತದೆ. ನ ಕರ್ಮತಃ = ಹೊರತು ಕರ್ಮದಿಂದ ಅಲ್ಲ. ಕುತಃ = ಯಾಕೆ? **ಉಪಪತ್ತೇಃ** = ಈಶ್ವರನು ಚೇತನನಾದ್ದರಿಂದ ಫಲದಾತೃತ್ವವು ಯುಕ್ತವಾಗು-ವುದರಿಂದ.

### ಸಿದ್ಧಾಂತ

**ಸೂ.ರ.:– एवं चाचेतनत्वात्कर्मणैव फलसम्भवाभावेनान्यथा-**

**सिद्धत्वहेतोरसिद्धत्वेन बाधकाभावात् । अतः परमेश्वर एव कर्मफलदातेति तस्मिन्भक्तिः कार्येति सिद्धम् ॥**

ಕರ್ಮವು ಅಚೇತನವಾದ್ದರಿಂದ ಕರ್ಮದಿಂದಲೇ ಫಲಸಂಭವ ಇಲ್ಲ-ವಾದ್ದರಿಂದ, ಅನ್ಯಥಾಸಿದ್ಧತ್ವ ಹೇತುವು ಅಸಿದ್ಧವಾದ ಕಾರಣ ಬಾಧಕ ಇಲ್ಲ.

ಆದ್ದರಿಂದ ಪರಮೇಶ್ವರನೇ ಕರ್ಮಫಲದಾತಾ ಆದ್ದರಿಂದ ಅವನಲ್ಲಿ ಭಕ್ತಿ ಮಾಡುವುದು ಯುಕ್ತವಾಗಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 40

**ಸೂ.ರ.:– नन्वीश्वरस्य चेतनत्वेन फलदातृत्वसम्भावनैव भवेत् । न निश्चयः । अतः कुतोऽसौ निश्चय इत्याशङ्कां परिहरत्सूत्रं पठति ।**

ಈಶ್ವರನು ಚೇತನನಾದ್ದರಿಂದ ಫಲದಾತೃತ್ವಸಂಭಾವನಾ ಹೇಳಿದಂತಾಗುತ್ತದೆ. ಹೊರತು ನಿಶ್ಚಯ ಆಗುವುದಿಲ್ಲ. ಆದ್ದರಿಂದ ಈಶ್ವರನಿಗೆ ಫಲದಾತೃತ್ವ ನಿಶ್ಚಯವು ಯಾವುದರಿಂದ (ಯಾವ ಪ್ರಮಾಣದಿಂದ) ಆಗುತ್ತದೆ? ಎಂದು ಶಂಕೆ ಬಂದರೆ, ಪರಿಹಾರಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

### ॐ श्रुतत्वाच्च ॐ (३-२-४०)

**ಸೂತ್ರಾರ್ಥ :- ಶ್ರುತತ್ವಾಚ್ಚ** = 'ರಾತಿಃ' (ಬೃ. 5-9-27) ಎಂಬುದಾಗಿ ಶ್ರುತಿ-ಯಿಂದ ಉಕ್ತವಾದದ್ದರಿಂದಲೂ ಸಹ ಈಶ್ವರನಿಗೆ ಫಲದಾತೃತ್ವವು ಉಪಪನ್ನ-ವಾಗುತ್ತದೆ.

**ಸೂ.ರ.:– एवं च न केवलं चेतनत्वाद्युपपत्तेः । किन्तु श्रुत्युक्तत्वाच्चेश्वरस्य फलदातृत्वेन निश्चितत्वात्तस्मिन्भक्तिः कार्येति सिद्धम् ॥**

ಈಶ್ವರನು ಚೇತನನಾದ್ದರಿಂದ ಫಲದಾತೃತ್ವವು ಉಪಪನ್ನವಾಗುತ್ತದೆ ಎಂದಷ್ಟೇ ಅಲ್ಲ. ಕಿಂತು – "ವಿಜ್ಞಾನಮಾನಂದಂ ಬ್ರಹ್ಮ ರಾತಿರ್ದಾತುಃ ಪರಾಯಣಮ್" (ಬೃ.ಉ.5-9-27) ಎಂಬುದಾಗಿ ಶ್ರುತ್ಯುಕ್ತವಾದ್ದರಿಂದಲೂ ಸಹ ಈಶ್ವರನು ಫಲದಾತೃತ್ವೇನ ನಿಶ್ಚಿತನಾದ್ದರಿಂದ ಅವನಲ್ಲಿ ಭಕ್ತಿ ಮಾಡುವುದು ಯುಕ್ತವಾಗಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 41

**ಸೂ.ರ.:- ननु नैतच्छ्रुतिबलेनेश्वरस्य फलदातृत्वमङ्गीकार्यम् । कारणस्य कर्मण ईश्वरजन्यत्वेन श्रुतावीश्वरस्य फलदातृत्वस्योपाचारेणै-वोक्तत्वात् । किञ्चैवमाप्ततमो जैमिनिराचार्यो मन्यत इति चेत्तत्परिहर-त्सूत्रमुपन्यस्यति ॥**

ಈ ಶ್ರುತಿಯ ಬಲದಿಂದಾಗಿ ಈಶ್ವರನಿಗೆ ಫಲದಾತೃತ್ವವನ್ನು ಅಂಗೀಕರಿಸಲು ಬರುವುದಿಲ್ಲ. ಏಕೆಂದರೆ - ಕಾರಣವಾದ ಕರ್ಮವೇ ಈಶ್ವರಜನ್ಯವಾದ್ದರಿಂದ ಶ್ರುತಿಯಲ್ಲಿ ಈಶ್ವರನಿಗೆ ಫಲದಾತೃತ್ವವನ್ನು ಉಪಚಾರದಿಂದಾಗಿ ಹೇಳಲಾಗಿದೆ. ಮತ್ತು ಈ ರೀತಿಯಾಗಿ ಆಪ್ತತಮರಾದ ಜೈಮಿನಿ ಆಚಾರ್ಯರೂ ತಿಳಿಯುತ್ತಾರೆ ಎಂದು ಬಂದರೆ, ಪರಿಹಾರಕ್ಕಾಗಿ ಸೂತ್ರ ಹೇಳುತ್ತಾರೆ -

### ॐ धर्मं जैमिनिरत एव ॐ (३-२-४१)

**ಸೂತ್ರಾರ್ಥ** :- **ಜೈಮಿನಿಃ** = ಜೈಮಿನಿ ಆಚಾರ್ಯರು **ಧರ್ಮಂ** ಫಲಪ್ರದಮಾಹ = ಧರ್ಮವನ್ನೇ ಫಲಪ್ರದವನ್ನಾಗಿ ಹೇಳುತ್ತಾರೆ. ತಂ ಚ **ಧರ್ಮಂ** = ಆ ಧರ್ಮವನ್ನಾದರೂ **ಅತ** ಏವ = ಈಶ್ವರನಿಂದಲೇ ಜನ್ಯವಾಗಿದೆಯೆಂದು ತಿಳಿಯುತ್ತಾರೆ. ಕುತಃ = ಯಾಕೆ? **ಅತ** ಏವ = "ಏಷ ಹ್ಯೇವ" (ಕೌ. 3-8) ಎಂಬುದಾಗಿ ಶ್ರುತಿ ಇರುವುದರಿಂದಲೇ.

**ಸೂ.ರ.:- एवं चोक्तश्रुत्या जैमिन्याचार्याभिप्रायेण यतः फलं तस्मादीश्वरादेव कर्म भवतीति सिद्धम् ॥**

ಹಿಂದೆ ಹೇಳಿದ ಪ್ರಕಾರ ಮತ್ತು ಜೈಮಿನಿ ಆಚಾರ್ಯರ ಅಭಿಪ್ರಾಯದಿಂದ ಯಾವ ಈಶ್ವರನಿಂದ ಫಲ ಉಂಟಾಗುವುದೋ ಆ ಈಶ್ವರನಿಂದಲೇ ಕರ್ಮವೂ ಜನ್ಯವಾಗುತ್ತದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 42

**ಸೂ.ರ.:- एतत्परिहाराय सूत्रमुपन्यस्यति ॥**

ಈ ಶಂಕೆಯ ಪರಿಹಾರಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ पूर्वं तु बादरायणो हेतुव्यपदेशात् ॐ (३-२-४२)**

**ಸೂತ್ರಾರ್ಥ :- ಬಾದರಾಯಣಃ** = ಬಾದರಾಯಣ ಆಚಾರ್ಯರಾದರೂ **ಪೂರ್ವಂ** = ಪೂರ್ವೋಕ್ತವಾದ ಬ್ರಹ್ಮ ಹಾಗೂ ಧರ್ಮ ಎರಡನ್ನೂ ಫಲಹೇತುವನ್ನಾಗಿ ತಿಳಿಯುತ್ತಾರೆ. ತತ್ರ ಬ್ರಹ್ಮ ಕರ್ತೃತ್ವೇನ ಕರ್ಮ ಕರಣತ್ವೇನ ಹೇತುರಿತಿ ವಿಶೇಷಃ ತುಶಬ್ದಾರ್ಥಃ = ಅದರಲ್ಲಿ ಬ್ರಹ್ಮನು ಕರ್ತೃವಾಗಿ ಹೇತುವಾದರೆ, ಕರ್ಮವು ಕರಣವಾಗಿ ಹೇತುವಾಗಿದೆ ಎಂಬ ವಿಶೇಷವು ತುಶಬ್ದಾರ್ಥವಾಗಿದೆ. ಕುತಃ = ಯಾಕೆ? **ಹೇತುವ್ಯಪದೇಶಾತ್** = 'ಪುಣ್ಯೇನ' ಎಂಬ ಶ್ರುತಿಯಲ್ಲಿ (ಪ್ರ. 3-7) ಬ್ರಹ್ಮ-ಕರ್ಮ ಎರಡಕ್ಕೂ ಕರ್ತೃತ್ವ-ಕರಣತ್ವ ರೂಪವಾದ ಹೇತುತ್ವವನ್ನು ಹೇಳಿದ್ದರಿಂದ.

**ಸೂ.ರ.:– एवं च श्रुतेरौपचारिकत्वकल्पनं भवेत् । यदीश्वरं विना केवलेन कर्मणा फलं भवेत् । न च तत्सम्भवति । अचेतनस्य स्वतः प्रवृत्त्ययोगात् । एवं च श्रुत्यन्वयव्यतिरेकबलादुभयोरपि कारणत्वे सिद्धे कर्मैवेश्वरप्रयोज्यमभ्युपगन्तव्यम् । पुण्येन पुण्यं पापेन पापमिति हेतु-व्यपदेशात् । जैमिनेरपि कर्मादेरीश्वराधीनकारणत्वमभिमतमिति न तन्मतमप्रमाणम् । अतः परमेश्वरस्यैव कर्मफलदातृत्वान्निरतिशय-महिम्नि तस्मिन्भक्तिः कर्तव्येति सिद्धम् ॥**

ಶ್ರುತಿಗೆ ಔಪಚಾರಿಕತ್ವ ಕಲ್ಪನ ಮಾಡುವುದು ಯುಕ್ತವಾಗುತ್ತಿತ್ತು. ಒಂದುವೇಳೆ ಈಶ್ವರ ಇಲ್ಲದೇ ಕೇವಲ ಕರ್ಮದಿಂದ ಫಲವು ಉಂಟಾಗುತ್ತಿದ್ದರೆ ಆಗ ಶ್ರುತಿಗೆ ಔಪಚಾರಿಕತ್ವ ಕೂಡುತ್ತಿತ್ತು. ಆದರೆ ಈಶ್ವರ ಇಲ್ಲದೇ ಕೇವಲ ಕರ್ಮದಿಂದ ಫಲವು ಸಂಭಾವಿತವಾಗಿಲ್ಲ. ಯಾಕೆ? ಅಚೇತನವಾದ ಕರ್ಮಕ್ಕೆ ಸ್ವತಃಪ್ರವೃತ್ತಿ ಉಪಪನ್ನವಾಗುವುದಿಲ್ಲವಾದ್ದರಿಂದ.

ಹೀಗೆ ಶ್ರುತ್ಯನ್ವಯವ್ಯತಿರೇಕಬಲದಿಂದಾಗಿ ಬ್ರಹ್ಮ-ಕರ್ಮ ಎರಡಕ್ಕೂ ಕಾರಣತ್ವವು ಸಿದ್ಧವಾಗುತ್ತಿರಲು, ಕರ್ಮವೇ ಈಶ್ವರನಿಂದ ಪ್ರಯೋಜ್ಯವಾಗಿದೆ ಎಂದು ಅಂಗೀಕರಿಸಬೇಕು.

"ಪುಣ್ಯೇನ ಪುಣ್ಯಂ ಲೋಕಂ ನಯತಿ ಪಾಪೇನ ಪಾಪಮ್" (ಪ್ರ.ಉ. 3-2) ಎಂಬುದಾಗಿ ಹೇತುವ್ಯಪದೇಶ ಇರುವುದರಿಂದ.

ಇನ್ನು ಜೈಮಿನಿ ಆಚಾರ್ಯರಿಗಾದರೂ ಕರ್ಮಾದಿಗಳಿಗೆ ಈಶ್ವರಾಧೀನ ಕಾರಣತ್ವವು ಅಭಿಮತವಾಗಿದೆ ಎಂದು ಇರುವುದರಿಂದ ಅವರ ಮತವೂ ಅಪ್ರಮಾಣವಲ್ಲ.

ಆದ್ದರಿಂದ ಪರಮೇಶ್ವರನೇ ಫಲದಾತೃವಾದ್ದರಿಂದ ಅಂತಹ ನಿರತಿಶಯ-ಮಹಿಮೆಯುಳ್ಳ ಅವನಲ್ಲಿ ಭಕ್ತಿಯು ಕರ್ತವ್ಯವಾಗಿದೆ ಎಂದು ಸಿದ್ಧವಾಗುತ್ತದೆ.

**ಫಲಾಧಿಕರಣವು ಮುಗಿಯಿತು**

**ಇಲ್ಲಿಗೆ ಸೂತ್ರಾರ್ಥರತ್ನಾವಲೀ ವ್ಯಾಖ್ಯಾನಸಹಿತವಾದ ಬ್ರಹ್ಮಸೂತ್ರಗಳಲ್ಲಿ ಮೂರನೇ ಅಧ್ಯಾಯದ ಎರಡನೇ ಪಾದವು ಮುಗಿಯಿತು.**

# तृतीयाध्यायस्य तृतीयः पादः

## ಪಾದಸಂಗತಿ

**ಸೂ.ರ.:– उपासनाऽस्मिन्पाद उच्यते ।**

ಮೂರನೆಯ ಈ ಪಾದದಲ್ಲಿ ಉಪಾಸನೆಯನ್ನು ಹೇಳುತ್ತಾರೆ. ಅಂದರೆ – ಉಪಾಸನೆ ಎಂದರೆ ಬ್ರಹ್ಮಜಿಜ್ಞಾಸಾ. ಅದು ಭಕ್ತಿಸಾಧ್ಯವಾದ್ದರಿಂದ ಜ್ಞಾನಸಾಧನವಾದ್ದರಿಂದ ಭಕ್ತಿಯನ್ನು (ದ್ವಿತೀಯ ಪಾದದಲ್ಲಿ) ಹೇಳಿದ ನಂತರ, ಜ್ಞಾನವನ್ನು (ನಾಲ್ಕನೇ ಪಾದದಲ್ಲಿ) ಹೇಳುವುದಕ್ಕಿಂತಲೂ ಮುಂಚೆ ಈ ಮೂರನೇ ಪಾದದಲ್ಲಿ ಹೇಳಲ್ಪಡುತ್ತದೆ ಎಂದು ಅಭಿಪ್ರಾಯ.

*ಅಧಿಕರಣ – 1*

# ಸರ್ವವೇದಾಧಿಕರಣ

## ಅಧಿಕರಣ ಸಂಗತಿ

**ಸೂ.ರ.:– अत्र सर्वपरिज्ञानं समर्थ्यते ।**

ಅಂತಹ ಉಪಾಸನೆಯೂ ಎರಡುವಿಧ. 1) ಸಮಸ್ತಸಚ್ಛಾಸ್ತ್ರ ಅಭ್ಯಾಸರೂಪವಾದದ್ದು (ಶ್ರವಣ-ಮನನಗಳು), 2) ಧ್ಯಾನರೂಪವಾದದ್ದು. ಮೊದಲನೆಯದಾದ ಸಮಸ್ತಸಚ್ಛಾಸ್ತ್ರ ಅಭ್ಯಾಸರೂಪವಾದದ್ದು ಅದು ಧ್ಯಾನಕ್ಕೆ ಅಂಗವಾದ್ದರಿಂದ, ಸಮಸ್ತಸಚ್ಛಾಸ್ತ್ರಗಳ ಶ್ರವಣ-ಮನನಗಳಿಂದ ದೂರೋತ್ಸಾರಿತವಾದ ಅಜ್ಞಾನ-ಸಂಶಯ-ವಿಪರೀತ ಜ್ಞಾನಗಳುಳ್ಳ ವ್ಯಕ್ತಿಯೇ ಧ್ಯಾನಕ್ಕೆ ಅಧಿಕಾರಿಯಾಗುವುದರಿಂದ ಅದನ್ನು ಸಮಸ್ತಸಚ್ಛಾಸ್ತ್ರಗಳ ಅಭ್ಯಾಸರೂಪವಾದ ಉಪಾಸನೆಯನ್ನು (ಶ್ರವಣ-ಮನನಗಳನ್ನು) ಮೊದಲನೇ ಈ ಸರ್ವವೇದಾಧಿಕರಣದಲ್ಲಿ ಸಮರ್ಥಿಸುತ್ತಾರೆ.

ವೇದೋದಿತನಾದ ಬ್ರಹ್ಮನೇ ವಿಷಯ. ಶ್ರವಣ-ಮನನಗಳಿಂದ ಸರ್ವಶಾಖೋಕ್ತನಾದ ಬ್ರಹ್ಮನನ್ನು ತಿಳಿಯುವುದೋ? ಅಥವಾ ಸ್ವಸ್ವಶಾಖೋಕ್ತನಾದ ಬ್ರಹ್ಮನನ್ನು ಮಾತ್ರ ತಿಳಿಯುವುದೋ? ಎಂದು ಸಂದೇಹ.

## ಪೂರ್ವಪಕ್ಷ

**ಸೂ.ರ.:– ननु स्वस्वशाखोक्तमेवान्तेन ज्ञेयं न सर्वशाखोक्तम् । शाखाप्रतिपाद्यानां नानात्वात् । न च नानात्वेऽपि सर्वेषामेकोपास्यता। अनेकप्रागुक्तन्यायेन मोक्षासिद्धिप्रसङ्गात् । ततश्च सर्वशाखानिर्णायकं ब्रह्ममीमांसाशास्त्रमनुपादेयमिति प्राप्ते पराकुर्वत्सूत्रमाह ॥**

ಶಾಖಾಪ್ರತಿಪಾದ್ಯವಾದ ರೂಪಗಳು ಭಿನ್ನ ಭಿನ್ನಗಳಾದ್ದರಿಂದ ಜಿಜ್ಞಾಸುವಾದ ವ್ಯಕ್ತಿ ಸ್ವಸ್ವಶಾಖೋಕ್ತನಾದ ಬ್ರಹ್ಮನನ್ನು ಮಾತ್ರ ತಿಳಿಯಬೇಕು. ಹೊರತು ಸರ್ವ-ಶಾಖೋಕ್ತನಾದ ಬ್ರಹ್ಮನನ್ನು ತಿಳಿಯುವುದಲ್ಲ. ರೂಪಗಳಲ್ಲಿ ನಾನಾತ್ವ ಇದ್ದರೂ ಸಹ (ರೂಪಗಳು ಭಿನ್ನಭಿನ್ನವಾದರೂ ಸಹ) ಎಲ್ಲ ರೂಪಗಳಿಗೂ ಏಕೋಪಾಸ್ಯತಾ ಕೂಡುವುದಿಲ್ಲ.

ಆದ್ದರಿಂದ ಸರ್ವಶಾಖಾನಿರ್ಣಾಯಕವಾದ ಬ್ರಹ್ಮಮೀಮಾಂಸಾಶಾಸ್ತ್ರವು ಅನುಪಾದೇಯವಾಗಿದೆ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

### ॐ सर्ववेदान्तप्रत्ययं चोदनाद्यविशेषात् ॐ (३-३-१)

**ಸೂತ್ರಾರ್ಥ** :- ಪೂರ್ವಸೂತ್ರೇ ಪೂರ್ವಪದೋದಿತಂ ಬ್ರಹ್ಮ = ಪೂರ್ವ-ಸೂತ್ರದಲ್ಲಿ ಪೂರ್ವಪದೋದಿತನಾದ ಬ್ರಹ್ಮನು, ('ಪೂರ್ವಂ ತು' ಎನ್ನುವಲ್ಲಿ ಪೂರ್ವಶಬ್ದದಿಂದ ವಾಚ್ಯನಾದ ಬ್ರಹ್ಮನು) **ಸರ್ವವೇದಾಂತಪ್ರತ್ಯಯಂ** = ಯಥಾಶಕ್ತಿಯಾಗಿ ಸರ್ವವೇದವಿಷಯಕ ಶ್ರವಣಾದ್ಯುತ್ಪನ್ನನಿರ್ಣಯಜನ್ಯ ಜ್ಞಾನವಿಷಯನಾಗುತ್ತಾನೆ. ಕುತಃ = ಯಾಕೆ? **ಚೋದನಾದ್ಯವಿಶೇಷಾತ್** = "ಆತ್ಮೇತ್ಯೇವೋಪಾಸೀತ" (ಬೃ.ಉ. 3-4-7) ಇತ್ಯಾದಿ ವಿಧಿಗಳು ಹಾಗೂ ಆದಿಪದೋಕ್ತವಾದ "ಅತ್ರ ಹ್ಯೇತೇ" (ಬೃ. 3-4-7) ಇತ್ಯಾದಿವಾಕ್ಯೋಕ್ತ ಯುಕ್ತಿಗಳೂ ಸಹ, **ಅವಿಶೇಷಾತ್** = ಸರ್ವಾಧಿಕಾರಿ ಸಾಧಾರಣವಾದ್ದರಿಂದ.

## ಸಿದ್ಧಾಂತ

**ಸೂ.ರ.:– एवं च सर्ववेदश्रवणमननाद्युत्पाद्यज्ञानमेव ब्रह्म सर्वैरुपास्यम् । श्रोतव्यो मन्तव्य (बृ. ४-४-५.) इत्यादिविधीनां**

सर्वसाधारणत्वात् । न हि काण्वादिशाखासु तैरेवेदं ज्ञेयं नान्यै-रित्युच्यते येन साधारण्यं न स्यात् । अतो भगवद्ध्यानार्थं सर्ववेदोक्तं ज्ञेयमिति सर्वोपादेयं शास्त्रमिति सिद्धम् ॥

"ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ ..." (ಬೃ. 4-4-5) ಎಂಬುದಾಗಿ ಇತ್ಯಾದಿ ವಿಧಿಗಳು ಸರ್ವಸಾಧಾರಣವಾದ್ದರಿಂದ, ಸರ್ವವೇದವಿಷಯಕ ಶ್ರವಣ-ಮನನಾದ್ಯುತ್ಪಾದ್ಯಜ್ಞಾನವಿಷಯನಾದ ಬ್ರಹ್ಮನೇ ಎಲ್ಲರಿಂದಲೂ ಉಪಾಸ್ಯನಾಗಿದ್ದಾನೆ.

ಕಾಣ್ವಾದಿಶಾಖೆಗಳಲ್ಲಿ "ತೈರೇವೇದಂ ಜ್ಞೇಯಂ ನಾನ್ಯೈಃ" ಅವರಿಂದಲೇ ಇದು ತಿಳಿಯಲ್ಪಡಬೇಕು. ಬೇರೆಯವರಿಂದ ತಿಳಿಯಲ್ಪಡಬಾರದು ಎಂಬುದಾಗಿ ಹೇಳಲ್ಪಡುವುದಿಲ್ಲ. ಹಾಗೆ ಹೇಳಿದ್ದರೆ ಸಾಧಾರಣ್ಯ ಬರುತ್ತಿರಲಿಲ್ಲ.

ಆದ್ದರಿಂದ ಭಗವಂತನ ಧ್ಯಾನಕ್ಕಾಗಿ ಸರ್ವವೇದೋಕ್ತನಾದ ಬ್ರಹ್ಮನೇ ಜ್ಞೇಯ-ನಾಗಿದ್ದಾನೆ, ಆದ್ದರಿಂದ ಸರ್ವರಿಂದಲೂ ಉಪಾದೇಯವಾಗಿದೆ ಶಾಸ್ತ್ರ ಎಂದು ಸಿದ್ಧವಾಗುತ್ತದೆ.

## ಸೂತ್ರ - 2

ಸೂ.ರ.:- नन्वेकस्यां शाखायामनन्तं ब्रह्मेत्युच्यते । अपरस्यां विज्ञानमिति सत्त्वान्वयपरित्यागेनोच्यते । सत्यत्वभावाभावाभ्यां प्रतिपाद्यं भिद्यते । किं च वस्त्वैक्येंऽशे पौनरुक्त्यं स्यात् । शाखान्त-रोक्तस्यैव ज्ञानरूपत्वादेः शाखान्तरेऽभिधानात् । ततश्च सर्वशाखा-निर्णायकं ब्रह्ममीमांसाशास्त्रमनुपादेयमिति प्राप्ते सूत्रितम् ॥

ಒಂದು ಶಾಖೆಯಲ್ಲಿ 'ಅನಂತಂ ಬ್ರಹ್ಮ' ಎಂದು ಹೇಳಲ್ಪಡುತ್ತದೆ. ಮತ್ತೊಂದು ಶಾಖೆಯಲ್ಲಿ 'ವಿಜ್ಞಾನಂ ಬ್ರಹ್ಮ' ಎಂಬುದಾಗಿ ಸತ್ವಾನ್ವಯಪರಿತ್ಯಾಗದಿಂದ ಹೇಳ-ಲ್ಪಡುತ್ತದೆ. ಸತ್ಯತ್ವಭಾವಾಭಾವಗಳಿಂದ ಪ್ರತಿಪಾದ್ಯವಾದದ್ದು ಭಿನ್ನಭಿನ್ನವಾಗುತ್ತದೆ.

ಮತ್ತು ವಸ್ತ್ವೈಕ್ಯಾಂಶದಲ್ಲಿ ಪೌನರುಕ್ತ್ಯವೂ ಬರುತ್ತದೆ. ಶಾಖಾಂತರೋಕ್ತವಾದ ಜ್ಞಾನರೂಪತ್ವಾದಿಗಳೇ ಶಾಖಾಂತರದಲ್ಲಿ ಹೇಳಲ್ಪಟ್ಟಿದ್ದರಿಂದ. ಆದ್ದರಿಂದ ಸರ್ವ-ಶಾಖಾನಿರ್ಣಾಯಕವಾದ ಬ್ರಹ್ಮಮೀಮಾಂಸಾಶಾಸ್ತ್ರವು ಅನುಪಾದೇಯವಾಗಿದೆ

ಎಂಬುದಾಗಿ ಆಕ್ಷೇಪ ಬಂದರೆ, ಅದನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

### ॐ भेदान्नेति चेदेकस्यामपि ॐ (३-३-२)

ಇಲ್ಲಿ ಚೇತ್ ಎನ್ನುವುದು, ನ ಎನ್ನುವುದು, ಭೇದಾತ್ ಎನ್ನುವುದು, ಅಪಿ ಎನ್ನುವುದು ಮತ್ತೊಮ್ಮೆ ಆವರ್ತನಗೊಳ್ಳುತ್ತವೆ. ತರ್ಹಿ ಎನ್ನುವುದು, ಶಾಖಾಯಾಂ ಎನ್ನುವುದು ಉಪಲಬ್ಧವಾಗುತ್ತದೆ. ಹಾಗಾದರೆ -

**ಸೂತ್ರಾರ್ಥ :- ಚೇತ್** = ಯದಿ ಒಂದುವೇಳೆ, ಸರ್ವಶಾಖೋಕ್ತಾರ್ಥಾನಾಂ = ಸರ್ವಶಾಖೋಕ್ತವಾದ ಅರ್ಥಗಳು **ಭೇದಾತ್** = ಭಿನ್ನಭಿನ್ನವಾದ್ದರಿಂದ ಏಕೈಕೇನ ಸರ್ವಶಾಖೋಕ್ತಂ ಜ್ಞೇಯಂ ನ = ಪ್ರತಿಯೊಬ್ಬ ವ್ಯಕ್ತಿಯಿಂದಲೂ ಸರ್ವಶಾಖೋಕ್ತನಾದ ಬ್ರಹ್ಮನು ಜ್ಞೇಯನಾಗಿಲ್ಲ, ಕಿಂತು ಸ್ವಸ್ವಶಾಖೋಕ್ತಮೇವೇತ್ಯುಚ್ಯತೇ = ಕಿಂತು ಸ್ವಸ್ವಶಾಖೋಕ್ತನಾದ ಬ್ರಹ್ಮನೇ ಜ್ಞೇಯನಾಗಿದ್ದಾನೆ ಎನ್ನುವುದಾದರೆ, ತರ್ಹಿ = ಹಾಗಾದರೆ **ಅಪಿ** = ಸ್ವಸ್ವಶಾಖೋಕ್ತನಾದ ಬ್ರಹ್ಮನೂ ಸಹ ನ ಜ್ಞೇಯಂ ಸ್ಯಾತ್ = ಜ್ಞೇಯನಾಗದೇ ಹೋಗಬೇಕಾಗುತ್ತದೆ. ಕುತಃ = ಯಾಕೆ? **ಏಕಸ್ಯಾಮಪಿ ಭೇದಾತ್** = ಒಂದೊಂದು ಶಾಖೆಯಲ್ಲಿಯೂ ಅರ್ಥಭೇದ ಕಂಡಿದ್ದರಿಂದ.

ಅಥ ಯದಿ ತತ್ರ ಧರ್ಮಭೇದಾತ್ ಏಕಸ್ಮಿನ್ ಧರ್ಮಿಣಿ ಭಿನ್ನಧರ್ಮವಿಧಾನಾತ್ ಪ್ರಸಂಗಭೇದಾಚ್ಚೇತಿ ಪರಿಹಾರ ಉಚ್ಯತೇ = ಒಂದುವೇಳೆ ಅಲ್ಲಿ ಧರ್ಮಭೇದದಿಂದಾಗಿ ಒಂದೇ ಧರ್ಮಿಯಲ್ಲಿ ಭಿನ್ನಧರ್ಮಗಳನ್ನು ವಿಧಾನ ಮಾಡಿದ್ದರಿಂದ ಮತ್ತು ಪ್ರಸಂಗಭೇದದಿಂದಲೂ ಸಹ ಪರಿಹಾರವನ್ನು ಹೇಳುವುದಾದರೆ, ತಸ್ಯ ಸರ್ವಶಾಖೋಕ್ತಪರಿಜ್ಞಾನೇಽಪಿ ಸಮಃ = ಅದು ಸರ್ವಶಾಖೋಕ್ತ ಪರಿಜ್ಞಾನಪಕ್ಷದಲ್ಲಿಯೂ ಸಮವಾಗಿದೆ.

**ಸೂ.ರ.:-** एवं वादिनाऽप्येकत्वेनाभ्युपगते एकशाखाप्रतिपाद्येऽप्युपदेशादिभेददर्शनेन व्यभिचारात् । यदपि वस्त्वैक्येऽशे पौनरुक्त्यमिति । तन्न । एकस्यामपि शाखायामुक्तानामेव गुणानां पुनरभिधानेन समानम् । यदि तत्र धर्म्यनुवादेन धर्मविधानान्नोपदेशभेदः । नापि पौनरुक्त्यम् । प्रसङ्गभेदानुवादकत्वाद्वोच्यते । तच्छाखान्तरेऽपि समानम् । ततश्च सर्वशाखाप्रतिपाद्यमेकमेव वस्त्विति सिद्धम् ॥

ವಾದಿಯಿಂದಲೂ ಸಹ ಏಕತ್ವೇನ ಅಂಗೀಕರಿಸಲ್ಪಟ್ಟ ಏಕಶಾಖಾಪ್ರತಿಪಾದ್ಯವಾ-ದದ್ದರಲ್ಲಿಯೂ ಸಹ ಉಪದೇಶಾದಿಭೇದ ಕಂಡಿದ್ದರಿಂದ ವ್ಯಭಿಚಾರ ಬರುವುದರಿಂದ ಸರ್ವಶಾಖೋಕ್ತನಾದ ಬ್ರಹ್ಮನೇ ಜ್ಞೇಯನಾಗಿದ್ದಾನೆ.

ವಸ್ತ್ವೈಕ್ಯಾಂಶದಲ್ಲಿ ಪೌನರುಕ್ತ್ಯ ಬರುತ್ತದೆ ಎಂದು ಶಂಕಿಸುವುದೂ ಸರಿಯಲ್ಲ. ಒಂದೇ ಶಾಖೆಯಲ್ಲಿಯೇ ಹೇಳಿದ ಗುಣಗಳನ್ನೇ ಮತ್ತೆ ಮತ್ತೆ ಹೇಳಿದ್ದರಿಂದ ಸಮಾನವಾಗಿದೆ.

ಒಂದುವೇಳೆ ಅಲ್ಲಿ ಧರ್ಮಿಯನ್ನು ಅನುವಾದ ಮಾಡಿ ಧರ್ಮಗಳನ್ನು ವಿಧಾನ ಮಾಡಿದ್ದರಿಂದ ಉಪದೇಶಭೇದ ಇಲ್ಲ, ಮತ್ತು ಪೌನರುಕ್ತ್ಯವೂ ಇಲ್ಲ ಕಾರಣ ಪ್ರಸಂಗಭೇದದಿಂದ ಅನುವಾದಕವಾದ್ದರಿಂದ ಎಂದು ಹೇಳುವುದಾದರೆ, ಅದು ಶಾಖಾಂತರದಲ್ಲಿಯೂ ಸಮಾನವಾಗಿದೆ.

ಆದ್ದರಿಂದ ಸರ್ವಶಾಖಾಪ್ರತಿಪಾದ್ಯವಾದ ವಸ್ತು ಒಂದೇ ಎಂದು ಸಿದ್ಧವಾಗುತ್ತದೆ.

## ಸೂತ್ರ - 3

**ಸೂ.ರ.:– ननु लोके शाखाभेदस्य प्रसिद्धत्वाद्विधेरपि विशेष-निष्ठताऽऽवश्यकीत्यत्रसूत्रोक्तहेतोरसिद्धेः । किञ्चानुष्ठानापेक्षया ज्ञान-मात्रस्य सुलभत्वात् यदा सर्ववेदोक्तशक्यकर्मानुष्ठाने सर्वेषामधिकार-सद्भावस्तदा तदुक्तब्रह्मज्ञाने सुतरामित्याशङ्कायां प्रथमसूत्रस्यैव हेत्वन्तराभिधायकसूत्रमाह ॥**

ಲೋಕದಲ್ಲಿ ಋಕ್‌ಶಾಖೆ, ಯಜುಃಶಾಖೆ ಎಂಬುದಾಗಿ ಶಾಖಾಭೇದವು ಪ್ರಸಿದ್ಧವಾದ್ದರಿಂದ ''ಸ್ವಾಧ್ಯಾಯೋಽಧ್ಯೇತವ್ಯಃ'' ಎಂಬ ವಿಧಿಯು ವಿಶೇಷನಿಷ್ಠವಾಗಿದೆ (ಅಧಿಕಾರಿವಿಶೇಷಪರವಾಗಿದೆ) ಎಂದು ಹೇಳಬೇಕಾದದ್ದು ಆವಶ್ಯಕವಾದ್ದರಿಂದ ಸೂತ್ರೋಕ್ತಹೇತುವು ಅಸಿದ್ಧವಾಗಿದೆ. ಮತ್ತು ಅನುಷ್ಠಾನಕ್ಕಿಂತಲೂ ಕೇವಲ ಜ್ಞಾನವು ಸುಲಭವಾದ್ದರಿಂದ, ಸರ್ವವೇದೋಕ್ತಶಕ್ಯಕರ್ಮಾನುಷ್ಠಾನದಲ್ಲಿ ಎಲ್ಲರಿಗೂ ಅಧಿಕಾರ ಇರುವುದಾದರೆ ಆಗ ವೇದೋಕ್ತವಾದ ಬ್ರಹ್ಮಜ್ಞಾನವನ್ನು ಪಡೆಯುವುದರಲ್ಲಿಯೂ ಸುತರಾಂ ಅಧಿಕಾರ ಬಂದಂತಾಗುತ್ತದೆ ಎಂಬುದಾಗಿ ಆಶಂಕೆ ಬಂದರೆ, ಪರಿಹಾರಕ್ಕಾಗಿ

ಮೊದಲನೇ ಸೂತ್ರಕ್ಕೇನೇ ಮತ್ತೊಂದು ಹೇತುವನ್ನು ಹೇಳುವ ಸೂತ್ರವನ್ನು ಹೇಳುತ್ತಾರೆ –

**ॐ स्वाध्यायस्य तथात्वेन हि समाचारेऽधिकाराच्च ॐ (३-३-३)**

**ಸೂತ್ರಾರ್ಥ :- ಸ್ವಾಧ್ಯಾಯಸ್ಯ** = 'ಸ್ವಾಧ್ಯಾಯೋಽಧ್ಯೇತವ್ಯಃ' (ತೈ.ಆ. 2-15) ಎಂಬ ವಿಧಿಯು **ತಥಾತ್ವೇನ** = ಸರ್ವಸಾಧಾರಣವಾಗಿ ಅಧ್ಯಯನ ಮಾಡುತ್ತಿರು-ವುದರಿಂದ **ಸಮಾಚಾರೇ** = ಸರ್ವವೈದಿಕಕರ್ಮ ಮಾಡುವ ವಿಷಯದಲ್ಲಿ **ಅಧಿಕಾರಾಚ್ಚ** = ಎಲ್ಲರಿಗೂ ಅಧಿಕಾರ ಇರುವುದರಿಂದಲೂ ಸಹ **ಹಿ** = ಸೂಚಿತವಾದ "ವೇದಃ ಕೃತ್ಸ್ನೋಽಧಿಗಂತವ್ಯಃ" ಎಂಬುದಾಗಿ ಸ್ಮೃತಿಯೂ ಇರುವುದರಿಂದ ಏಕೈಕೇನಾಪಿ ಸರ್ವಶಾಖಾಧ್ಯಯನೇನ ಬ್ರಹ್ಮ ಜ್ಞಾತವ್ಯಂ = ಪ್ರತಿಯೊಬ್ಬ ಅಧಿಕಾರಿಯೂ ಎಲ್ಲ ವೇದಗಳನ್ನು ಅಧ್ಯಯನ ಮಾಡಿ (ಬ್ರಹ್ಮಜ್ಞಾನವನ್ನು ಪಡೆಯಬೇಕು) ಬ್ರಹ್ಮನನ್ನು ತಿಳಿಯಬೇಕು ಎಂದರ್ಥ.

**ಸೂ.ರ.:– एवं च स्वाध्यायोऽध्येतव्य इत्यध्ययनविधेः सामान्यात् । अध्ययनस्य च ज्ञानार्थत्वात् । ततश्च सर्वेषां सर्ववेदोक्तज्ञानेऽधिकार इति सिद्धम् ॥**

"ಸ್ವಾಧ್ಯಾಯೋಽಧ್ಯೇತವ್ಯಃ" ಎಂಬ ಅಧ್ಯಯನವಿಧಿಯು ಸಾಮಾನ್ಯವಾದ-ದ್ದಾಗಿದೆ. ಅಧ್ಯಯನವೂ ಸಹ ಜ್ಞಾನಕ್ಕಾಗಿ ಮಾಡುವಂತಹದ್ದಾಗಿದೆ. ಆದ್ದರಿಂದ ಎಲ್ಲರಿಗೂ ಸರ್ವವೇದೋಕ್ತಜ್ಞಾನ ಪಡೆಯಲು ಅಧಿಕಾರ ಇದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 4

**ಸೂ.ರ.:– ननु यदि सर्वशाखोक्तप्रकारेण जानतो ध्यानाधिकार-स्तर्ह्यधमाधिकारिणां ध्यानाभावः प्राप्त इत्याशङ्कां परिहरत्सूत्र-मुपन्यस्यति ॥**

ಒಂದುವೇಳೆ ಎಲ್ಲ ಶಾಖೆಗಳಲ್ಲಿ ತಿಳಿಸಿದ ಪ್ರಕಾರದಿಂದ ಬ್ರಹ್ಮನನ್ನು ತಿಳಿದವನಿಗೆ ಧ್ಯಾನಾಧಿಕಾರ ಎಂದಾದರೆ ಅಧಮಾಧಿಕಾರಿಗಳಿಗೆ ಧ್ಯಾನ ಇಲ್ಲದೇ ಹೋಗಬೇಕಾದ

ಪ್ರಸಂಗ ಬರುತ್ತದೆ ಎಂಬುದಾಗಿ ಆಶಂಕೆ ಬಂದರೆ, ಪರಿಹರಿಸುವ ಸೂತ್ರವನ್ನು ಹೇಳುತ್ತಾರೆ –

## ॐ सलिलवच्च तन्नियमः ॐ (३-३-४)

**ಸೂತ್ರಾರ್ಥ** :- (ಚಶಬ್ದವು ಅವಧಾರಣಾರ್ಥದಲ್ಲಿದೆ.) **ಸಲಿಲವತ್** = ನೀರಿನಂತೆ **ತನ್ನಿಯಮಃ** = ಯಾವ ರೀತಿಯಾಗಿ ಎಲ್ಲ ನೀರೂ ಮುಖ್ಯವಾಗಿ ಸಮುದ್ರವನ್ನೇ ಸೇರುವುದೆಂಬ ನಿಯಮವು ಪ್ರತಿಬಂಧಕಾಭಾವವನ್ನು ಅಪೇಕ್ಷಿಸಿ ಇರುವುದೋ ತಥಾ ಅತ್ರಾಪಿ = ಅದರಂತೆ ಇಲ್ಲಿಯೂ ಸಹ **ತನ್ನಿಯಮಃ** = ಸರ್ವವೇದೋಕ್ತಪ್ರಕಾರದಿಂದ ಧ್ಯಾನದಿಂದ ಬ್ರಹ್ಮನನ್ನು ತಿಳಿಯಬೇಕು ಎಂಬ ನಿಯಮವೂ ಸಹ ಪುರುಷರ ಶಕ್ತಿಯನ್ನು ಅಪೇಕ್ಷಿಸಿಯೇ ಇದೆ ಎಂದು ಅರ್ಥ.

**ಸೂ.ರ.:– एवं च सर्वेषां सर्ववेदोक्तकर्माधिकारस्तावद्दृश्यते । ततो ज्ञानाधिकारोऽपि मन्तव्यः । विशेषाभावात् । यानि चेमानि विरुद्ध-कर्माणि सामगो बटुर्मुण्डोऽन्यः शिखीत्यादीनि तानि चैकशाखागत-विरुद्धधर्मवद्विकल्पेन भवन्ति । न च मन्दानां ज्ञानाभावः । यथा नदीनामि (आग्नेये.) त्यादिवाक्यानां बाधकाभावे समुद्रायतनत्व-नियमतात्पर्यवच्छ्रवणादिविधीनामपि यथाशक्ति सर्वश्रवणविधौ तात्पर्याङ्गीकारात् । ततश्चोक्तं युक्तमिति सिद्धम् ॥**

ಎಲ್ಲರಿಗೂ ಸರ್ವವೇದೋಕ್ತಕರ್ಮಾಧಿಕಾರವಂತೂ ದೃಷ್ಟವಾಗುತ್ತಿದೆ. ಆದರಂತೆಯೇ ಎಲ್ಲರಿಗೂ ಸರ್ವವೇದೋಕ್ತಜ್ಞಾನಾಧಿಕಾರವನ್ನೂ ತಿಳಿಯಬೇಕು. ಕಾರಣ – ಕರ್ಮಾಧಿಕಾರ – ಜ್ಞಾನಾಧಿಕಾರಗಳಲ್ಲಿ ವಿಶೇಷ ಇಲ್ಲವಾದ್ದರಿಂದ. ಮತ್ತು 'ಸಾಮಗೋ ಬಟುರ್ಮುಂಡೋ ಅನ್ಯಃ ಶಿಖೀ' ಮೊದಲಾದ ಯಾವ ವಿರುದ್ಧ-ಧರ್ಮಗಳು ಶ್ರುತವಾಗುತ್ತಿವೆಯೋ ಅವುಗಳು ಒಂದೇ ಶಾಖೆಯಲ್ಲಿಯೇ ಇರುವ ವಿರುದ್ಧ ಧರ್ಮಗಳಂತೆ ವಿಕಲ್ಪೇನ ಬರುತ್ತವೆ.

ಹಾಗಾದರೆ ಅಧಮಾಧಿಕಾರಿಗಳಿಗೆ (ಸರ್ವವೇದೋಕ್ತಜ್ಞಾನವಿಲ್ಲದ್ದರಿಂದ) ಜ್ಞಾನವಿಲ್ಲದೇ ಹೋಗಬೇಕಾದ ಪ್ರಸಂಗ ಬರುವುದಿಲ್ಲ. ಕಾರಣ –

ಯಥಾ ನದೀನಾಂ ಸಲಿಲಂ ಶಕ್ಯೇ ಸಾಗರಗಂ ಭವೇತ್ ।
ಏವಂ ವಾಕ್ಯಾನಿ ಸರ್ವಾಣಿ ಪುಂಶಕ್ತ್ಯಾ ಬ್ರಹ್ಮವಿತ್ತಯೇ ॥

(ಆಗ್ನೇಯವಚನ) ಇತ್ಯಾದಿವಾಕ್ಯಗಳಿಗೆ ಬಾಧಕವಿಲ್ಲದಿದ್ದಾಗ ಸಮುದ್ರಾಯ-ತನತ್ವ ನಿಯಮದಲ್ಲಿ ತಾತ್ಪರ್ಯವಿದ್ದಂತೆ ಶ್ರವಣಾದಿವಿಧಿಗಳಿಗೂ ಸಹ ಶಕ್ತ್ಯನುಸಾರ ಎಲ್ಲವನ್ನು ಶ್ರವಣ ಮಾಡುವ ವಿಧಿಯಲ್ಲಿ ತಾತ್ಪರ್ಯವನ್ನು ಅಂಗೀಕರಿಸಿದ್ದರಿಂದ. ಆದ್ದರಿಂದ ಎಲ್ಲರಿಗೂ ಸರ್ವವೇದೋಕ್ತಜ್ಞಾನದಲ್ಲಿ ಅಧಿಕಾರ ಇದೆ ಎಂದು ಹೇಳಿದ್ದು ಸರಿಯಿದೆ ಎಂಬುದಾಗಿ ಸಿದ್ಧವಾಗುತ್ತದೆ.

## ಸೂತ್ರ - 5

**ಸೂ.ರ.:- चोदनाद्यविशेषादित्युक्तिसमर्थितार्थं श्रुतिस्मृतिभ्याञ्च साधयत्सूत्रं पठति ॥**

'ಚೋದನಾದ್ಯವಿಶೇಷಾತ್' ಎಂದು ಹೇಳಿ ಸಮರ್ಥಿಸಿದ ವಿಷಯವನ್ನು ಶ್ರುತಿ-ಸ್ಮೃತಿಗಳಿಂದಲೂ ಸಮರ್ಥಿಸುವ ಸೂತ್ರವನ್ನು ಹೇಳುತ್ತಾರೆ -

**ॐ दर्शयति च ॐ (३-३-५)**

**ಸೂತ್ರಾರ್ಥ** :- ಚ = ಶ್ರುತಿ ಮತ್ತು ಸ್ಮೃತಿಯು ಸರ್ವಶಾಖೋಕ್ತಮಾರ್ಗೇಣ ಬ್ರಹ್ಮ ಜ್ಞಾತವ್ಯಂ ಇತ್ಯರ್ಥಂ = ಸರ್ವಶಾಖೋಕ್ತಮಾರ್ಗದಿಂದ ಬ್ರಹ್ಮ ತಿಳಿಯಲ್ಪಡಬೇಕು ಎಂಬ ಅರ್ಥವನ್ನು **ದರ್ಶಯತಿ** = ತಿಳಿಸುತ್ತದೆ.

**ಸೂ.ರ.:- एवं च सर्वैश्च वेदैरिति (चतुर्वेदशिखायां) सर्वान्वेदानिति (ब्रह्मतर्के.) च श्रुतिस्मृत्योर्भगवतः सर्वैरेव वेदैर्न त्वल्पवेदैर्जिज्ञास्यत्वेन विष्णुमपरोक्षतो ज्ञातुं मुमुक्षोः सर्ववेदानां श्रवणमननादिना ज्ञातव्यत्वस्योक्तत्वात् । अतो भगवज्ज्ञानार्थं सर्ववेदोक्तं ज्ञेयमिति सर्वोपादेयं शास्त्रमिति सिद्धम् ॥**

ಸರ್ವೈಶ್ಚ ವೇದೈಃ ಪರಮೋ ಹಿ ದೇವೋ
ಜಿಜ್ಞಾಸ್ಯೋಽಸೌ ನಾಲ್ಪವೇದೈಃ ಪ್ರಸಿದ್ಧ್ಯೇತ್ ।

ತಸ್ಮಾದೇನಂ ಸರ್ವವೇದಾನಧೀತ್ಯ
ವಿಚಾರ್ಯ ಚ ಜ್ಞಾತುಮಿಚ್ಛೇನ್ಮುಮುಕ್ಷುಃ ॥

ಎಂಬುದಾಗಿ ಚತುರ್ವೇದಶಿಖಾ ಶ್ರುತಿಯಲ್ಲಿ ಹಾಗೂ

ಸರ್ವಾನ್ ವೇದಾನ್ ಸೇತಿಹಾಸಾನ್
ಸಪುರಾಣಾನ್ ಸಯುಕ್ತಿಕಾನ್ ।
ಸಪಂಚರಾತ್ರಾನ್ ವಿಜ್ಞಾಯ
ವಿಷ್ಣುರ್ಜ್ಞೇಯೋ ನ ಚಾನ್ಯಥಾ ॥

ಎಂಬುದಾಗಿ ಸ್ಮೃತಿಯಲ್ಲಿ "ಭಗವಂತನು ಎಲ್ಲ ವೇದಗಳಿಂದಲೂ ಜಿಜ್ಞಾಸ್ಯ-ನಾಗಿದ್ದಾನೆಯೇ ಹೊರತು ಅಲ್ಪವೇದಗಳಿಂದ ಜಿಜ್ಞಾಸ್ಯನಾಗಿಲ್ಲ. ಹಾಗಾಗಿ ವಿಷ್ಣುವನ್ನು ಅಪರೋಕ್ಷವಾಗಿ ತಿಳಿಯಲು (ಭಗವಂತನ ಸಾಕ್ಷಾತ್ಕಾರ ಪಡೆಯಲು) ಮುಮುಕ್ಷು-ವಾದವನು ಶ್ರವಣ-ಮನನಾದಿಗಳಿಂದ ಎಲ್ಲ ವೇದಗಳನ್ನೂ ತಿಳಿಯಬೇಕು" ಎಂದು ಹೇಳಲಾಗಿದೆ. ಆದ್ದರಿಂದ ಭಗವಂತನ ಜ್ಞಾನಕ್ಕಾಗಿ ಸರ್ವವೇದೋಕ್ತವಾದದ್ದು ಜ್ಞೇಯವಾಗಿದೆಯಾದ್ದರಿಂದ ಶಾಸ್ತ್ರವು ಸರ್ವೋಪಾದೇಯವಾಗಿದೆ (ಎಲ್ಲರಿಂದಲೂ ಉಪಾದೇಯವಾಗಿದೆ) ಎಂದು ಸಿದ್ಧವಾಗುತ್ತದೆ.

**ಸರ್ವವೇದಾಧಿಕರಣವು ಮುಗಿಯಿತು.**

*ಅಧಿಕರಣ – 2*

# ಉಪಸಂಹಾರಾಧಿಕರಣ

## ಸಂಗತಿ

**ಸೂ.ರ.:– अत्र ज्ञानार्थं सार्वत्रिकगुणोपसंहारः समर्थ्यते ।**

ಜ್ಞಾನಕ್ಕಾಗಿ ಸಾರ್ವತ್ರಿಕಗುಣಗಳ ಉಪಸಂಹಾರವನ್ನು ಸಮರ್ಥಿಸುತ್ತಾರೆ ಎರಡನೇ ಈ ಉಪಸಂಹಾರಾಧಿಕರಣದಲ್ಲಿ.

ಸರ್ವವೇದೋಕ್ತಗುಣಗಳನ್ನು ಉಪಸಂಹಾರ ಮಾಡಿ ಪರಮಾತ್ಮನು ಧ್ಯಾನ ಮಾಡಲ್ಪಡಬೇಕೋ? ಅಥವಾ ಕೇವಲ ಹಾಗೇ ತಿಳಿಯಲ್ಪಡಬೇಕೋ? ಎಂದು ಸಂದೇಹ.

## ಪೂರ್ವಪಕ್ಷ

**ಸೂ.ರ.:– नन्वीश्वरः सर्ववेदोक्तगुणोपसंहारेण ज्ञेय एव । न तु ध्यातव्यः । अशक्यत्वात् । अनन्तवेदोदितानन्तगुणानां स्वभुजवद्युगपद्बुद्ध्यावारोहरूपोपसंहारस्याशक्यत्वेन तत्पूर्वकोपासनस्याप्यशक्यत्वात् । ततश्च तदर्थमापाद्यं सर्वज्ञानं व्यर्थमिति प्राप्ते सूत्रितम् ॥**

ಈಶ್ವರನು ಸರ್ವವೇದೋಕ್ತ ಗುಣಗಳನ್ನು ಉಪಸಂಹಾರ ಮಾಡಿ ತಿಳಿಯಲ್ಪಡುವವನೇ ಆಗಿದ್ದಾನೆ. ಹೊರತು ಧ್ಯಾನ ಮಾಡಲ್ಪಡುವವನಲ್ಲ, ಯಾಕೆ? ಅದು ಅಸಾಧ್ಯವಾದ್ದರಿಂದ. ಅನಂತವೇದೋದಿತ ಅನಂತಗುಣಗಳ ಯುಗಪತ್ ಬುದ್ಧ್ಯಾ ಆರೋಹರೂಪವಾದ ಉಪಸಂಹಾರವು ಅಶಕ್ಯವಾದ್ದರಿಂದ, ತತ್ಪೂರ್ವಕವಾದ ಉಪಾಸನವೂ ಅಶಕ್ಯವಾಗಿದೆ. ಆದ್ದರಿಂದ ಅದಕ್ಕಾಗಿ ಆಪಾದ್ಯವಾದ ಸರ್ವಜ್ಞಾನವು ವ್ಯರ್ಥವೇ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ उपसंहारोऽर्थाभेदात् विधिशेषवत्समाने च ॐ (३-३-६)**

ಸೂತ್ರಾರ್ಥ :- ವಿಧಿಶೇಷವತ್ = ವಿಧಿವಿಹಿತವಾದದ್ದರಂತೆ, ಯಾವ

ರೀತಿಯಾಗಿ ವಿಧಿವಿಹಿತವಾದದ್ದರಿಂದ ಸಂಧ್ಯಾವಂದನಾದಿಗಳು ಅವಶ್ಯ ಕರ್ತವ್ಯ-ವಾಗಿವೆಯೋ ಅದರಂತೆ **ಅರ್ಥಾಭೇದಾತ್** = (ಭೇದ ಎಂದರೆ ವಿಭಾಗ.) ಸರ್ವ-ವೇದಾರ್ಥಭೂತವಾದ ಆನಂದಾದಿ ಗುಣಗಳ ಹಾಗೂ ಅಪಹತಪಾಪ್ಮತ್ವಾದಿ-ದೋಷಾಭಾವಗಳ ಅಭೇದದಿಂದ, ಅವಿಭಾಗದಿಂದ, ಅವುಗಳನ್ನು ವಿಭಾಗಿಸದೇ **ಉಪಸಂಹಾರಃ** = ಎಲ್ಲ ಗುಣಗಳ ಏಕಬುದ್ಧ್ಯಾರೋಹಣರೂಪವಾದ ಉಪಸಂಹಾರವು "ಉಪಾಸ್ಯ ಏಕಃ" ಎಂಬ ಶ್ರುತಿಯಲ್ಲಿ ವಿಹಿತವಾದ್ದರಿಂದ ಕರ್ತವ್ಯವಾಗಿದೆ ಸೋಽಪಿ = ಆ ಉಪಸಂಹಾರವಾದರೂ ಸಹ **ಸಮಾನೇ ಚ** = ಸಮಾನವಿಷಯದಲ್ಲಿಯೇ ಅಂದರೆ, ಯೇ ಬ್ರಹ್ಮಣಿ ಯೋಗ್ಯಾಃ ಪೂರ್ಣತ್ವಾ-ವಿರೋಧಿನೋ ಗುಣಾಃ ತದ್ವಿಷಯ ಏವ = ಬ್ರಹ್ಮನಲ್ಲಿ ಯೋಗ್ಯವಾದ, ಪೂರ್ಣತ್ವಅವಿರೋಧಿಯಾದ ಯಾವ ಗುಣಗಳಿವೆಯೋ ಅದರ ವಿಷಯದಲ್ಲಿಯೇ ಆಗಿದೆ. ನ ತ್ವಯೋಗ್ಯರೋದನಾದೌ = ಹೊರತು ಅಯೋಗ್ಯವಾದ ರೋದನಾದಿಗಳ ವಿಷಯದಲ್ಲಿ ಅಲ್ಲ, ಹಾಗೆ ರೋದನಾದಿಗಳನ್ನೂ ಸ್ವೀಕರಿಸಿದರೆ ಅನರ್ಥಪ್ರಾಪ್ತಿ-ಯಾಗುತ್ತದೆ.

## ಸಿದ್ಧಾಂತ

**ಸೂ.ರ.:- एवं च सर्ववेदार्थानामानन्दादिगुणानामपहत-पाप्मत्वादिदोषाभावानां च केषाञ्चिदुपसंहारः केषाञ्चिन्नेति विभागम-कृत्वोपसंहारेण परमात्मा ध्यातव्यः । सर्वे गुणा एव ह्युपास्या इति विहितत्वात् । अन्यथा विहितसन्ध्यावन्दनाद्यकरणे प्रत्यवायः स्यात् । अपि च तात्पर्यविषयीभूता धर्मा एवोपास्या न त्वतात्पर्यविषयीभूताः सोऽरोदीदित्यादिना प्रतीता रोदनादयः । दुःखकार्याणां तेषां परमेश्वरेऽयोगात् । अयोग्योपासनस्यानर्थहेतुत्वात् । अतः सर्वगुणोप-संहारस्य कर्तव्यत्वात्सार्थकमेव सर्वपरिज्ञानमिति सिद्धम् ॥**

ಸರ್ವವೇದಾರ್ಥವಾದ ಆನಂದಾದಿಗುಣಗಳನ್ನು ಹಾಗೂ ಅಪಹತಪಾಪ್ಮತ್ವಾದಿ ದೋಷಾಭಾವಗಳನ್ನು ಉಪಸಂಹಾರ ಮಾಡಿ (ಕೆಲವುದನ್ನು ಉಪಸಂಹಾರ ಮಾಡಬೇಕು, ಕೆಲವುದನ್ನು ಮಾಡಬಾರದು ಎಂದು ವಿಭಾಗ ಮಾಡದೇ

ಉಪಸಂಹಾರ ಮಾಡಿ) ಪರಮಾತ್ಮನು ಧ್ಯಾತವ್ಯನಾಗಿದ್ದಾನೆ. "ಸರ್ವೇ ಗುಣಾ ಏವ ಹ್ಯುಪಾಸ್ಯಾಃ" ಎಂದು ವಿಹಿತವಾದ್ದರಿಂದ, ಅನ್ಯಥಾ ವಿಹಿತವಾದ ಸಂಧ್ಯಾವಂದನಾದಿ- ಗಳನ್ನು ಮಾಡದಿದ್ದರೆ ಪ್ರತ್ಯವಾಯ (ಪಾಪ) ಬರುತ್ತದೆ.

ಮತ್ತು ತಾತ್ಪರ್ಯವಿಷಯೀಭೂತವಾದ ಧರ್ಮಗಳು ಮಾತ್ರ (ಆನಂದಾದಿಗಳು ಮಾತ್ರ) ಉಪಾಸ್ಯವಾಗಿವೆ. ಹೊರತು ಅತಾತ್ಪರ್ಯವಿಷಯೀ- ಭೂತವಾದ "ಸೋಽರೋದೀತ್" ಇತ್ಯಾದಿಯಾಗಿ ಪ್ರತೀತವಾದ ರೋದನಾದಿಗಳು ಉಪಾಸ್ಯವಾಗಿಲ್ಲ. ಯಾಕೆ? ದುಃಖಕಾರ್ಯವಾದ ಅವುಗಳು ಪರಮೇಶ್ವರನಲ್ಲಿ ಕೂಡುವುದಿಲ್ಲವಾದ್ದರಿಂದ, ಅಯೋಗ್ಯೋಪಾಸನ ಮಾಡಿದರೆ ಅನರ್ಥವಾಗುತ್ತದೆ.

ಆದ್ದರಿಂದ ಸರ್ವಗುಣೋಪಸಂಹಾರವು ಕರ್ತವ್ಯವಾದ್ದರಿಂದ ಸರ್ವಪರಿಜ್ಞಾನವು ಸಾರ್ಥಕವೇ ಆಗಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 7

**ಸೂ.ರ.:- नन्वात्मेत्येवोपासीतेति (बृ.३-४-७.) गुणान्तरोप- संहारनिषेधेनात्मत्वमात्रोपासनस्य विहितत्वात् । सर्वगुणोपसंहारे विहितक्रियालोपप्रसङ्ग इति प्राप्ते सूत्रमाह ॥**

"ಆತ್ಮೇತ್ಯೇವೋಪಾಸೀತ" (ಬೃ. 3-4-7) ಎಂಬುದಾಗಿ ಇತರ ಗುಣಗಳ ಉಪಸಂಹಾರವನ್ನು ನಿಷೇಧಿಸಿದ್ದರಿಂದ, ಕೇವಲ ಆತ್ಮತ್ವೋಪಾಸನವು ವಿಹಿತ- ವಾದ್ದರಿಂದ, ಎಲ್ಲ ಗುಣಗಳನ್ನು ಉಪಸಂಹಾರ ಮಾಡಿದರೆ ವಿಹಿತಕ್ರಿಯಾಲೋಪ- ಪ್ರಸಂಗ ಬರುತ್ತದೆ ಎಂಬುದಾಗಿ ಆಕ್ಷೇಪ ಬಂದರೆ, ಅದಕ್ಕೆ ಸಮಾಧಾನ ಹೇಳುವುದ- ಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ अन्यथात्वं च शब्दादिति चेन्नाविशेषात् ॐ (३-३-७)**

**ಸೂತ್ರಾರ್ಥ :- ಅನ್ಯಥಾತ್ವಂ** = ಸರ್ವಗುಣೋಪಸಂಹಾರಃ ಕಾರ್ಯಃ ಎಂದು ಹೇಳಿದ್ದಕ್ಕೆ ಅನ್ಯಥಾಭಾವವು ಅಂದರೆ ಅದಕ್ಕೆ ಅಕರ್ತವ್ಯತ್ವವನ್ನೇ ಅವಶ್ಯ ಅಂಗೀಕರಿಸಬೇಕು ಕುತಃ = ಯಾಕೆ? **ಶಬ್ದಾತ್** = 'ಆತ್ಮೇತ್ಯೇವೋಪಾಸೀತ' ಎಂಬು- ದಾಗಿ ಅನುಪಸಂಹಾರಶ್ರುತಿ (ಇತರಗುಣಗಳನ್ನು ಉಪಸಂಹಾರ ಮಾಡಬಾರದು ಎಂದು ಹೇಳುವ ಶ್ರುತಿ) ಇರುವುದರಿಂದ **ಇತಿ ಚೇತ್** = ಎಂದು ಆಕ್ಷೇಪ ಬಂದರೆ ನ

= ಅದು ಸರಿಯಲ್ಲ **ಅವಿಶೇಷಾತ್** = ಏತೇ ಗುಣಾಃ ನೋಪಸಂಹಾರ್ಯಾಃ (ಈ ಗುಣಗಳು ಉಪಸಂಹಾರ್ಯವಲ್ಲ) ಎಂಬ ವಿಷಯದಲ್ಲಿ ವಿಶೇಷಪ್ರಮಾಣ ಇಲ್ಲವಾದ್ದರಿಂದ. ಸರ್ವೈಃ ಗುಣೈಃ = ಎಂಬುದಾಗಿ ಅವಿಶೇಷೇಣ ಉಪಸಂಹಾರ ಮಾಡುವ ವಿಷಯದಲ್ಲಿ ವಿಶೇಷಪ್ರಮಾಣಸದ್ಭಾವಾಚ್ಚ = ವಿಶೇಷಪ್ರಮಾಣ ಇರುವುದರಿಂದ. ಇನ್ನು 'ಆತ್ಮೇತ್ಯೇವ' ಎಂಬುದಾಗಿ ಹೇಳಿರುವ, ಏವಕಾರವಾದರೂ ಅಯೋಗವ್ಯವಚ್ಛೇದಕವಾಗಿದೆ ಎಂದು ಭಾವ.

ಸೂ.ರ.:- एवं चैते गुणा नोपसंहर्तव्या इति प्रमाणाभावात् । सर्वैर्गुणैरेक एवेशिताऽसावुपासितव्यो न तु दोषैः कथञ्चिदिति विशेष-वचनाच्च । निरवकाशैतच्छ्रुतिविरोधादेवात्मेत्येवोपासीतेत्यवधारणस्या-नात्मत्वरूपदोषव्यवच्छेदकत्वमेव न तु गुणान्तरव्यवच्छेदकत्वमिति तदपि नानुपसंहारे प्रमाणं अतः सर्वगुणोपसंहारः कर्तव्य इति सिद्धम् ॥

'ಏತೇ ಗುಣಾಃ ನೋಪಸಂಹರ್ತವ್ಯಾಃ' ಎಂಬುದಾಗಿ ಪ್ರಮಾಣ ಇಲ್ಲದಿರು-ವುದರಿಂದ, ''ಸರ್ವೈಃ ಗುಣೈಃ ಏಕ ಏವೇಶಿತಾ ಉಪಾಸಿತವ್ಯಃ ನ ತು ದೋಷೈಃ ಕಥಂಚಿತ್'' (ಎಲ್ಲ ಗುಣಗಳಿಂದಲೂ ಒಬ್ಬನೇ ಪರಮಾತ್ಮನು ಉಪಾಸ್ಯನಾಗಿದ್ದಾನೆ. ಹೊರತು ದೋಷಗಳಿಂದ ಅಲ್ಲ) ಎಂಬುದಾಗಿ ವಿಶೇಷವಚನ ಇರುವುದರಿಂದಲೂ ಸಹ, ನಿರವಕಾಶವಾದ ಈ ಶ್ರುತಿಯ ವಿರೋಧ ಬರುವುದರಿಂದಲೇ 'ಆತ್ಮೇತ್ಯೇವೋ-ಪಾಸೀತ' ಎನ್ನುವಲ್ಲಿನ ಅವಧಾರಣವು ಅನಾತ್ಮತ್ವರೂಪ ದೋಷವ್ಯವಚ್ಛೇದಕವೇ ಆಗಿದೆ, ಹೊರತು ಗುಣಾಂತರವ್ಯವಚ್ಛೇದಕವಾಗಿಲ್ಲ. ಆ ಕಾರಣ ಅದೂ ಸಹ ಅನುಪಸಂಹಾರ ವಿಷಯದಲ್ಲಿ ಪ್ರಮಾಣವಾಗುವುದಿಲ್ಲ. ಆದ್ದರಿಂದ ಸರ್ವಗುಣೋಪ-ಸಂಹಾರವನ್ನು ಮಾಡಬೇಕು ಎಂದು ಸಿದ್ಧವಾಗುತ್ತದೆ.

## ಸೂತ್ರ - 8

ಸೂ.ರ.:- ननु नायं सर्वगुणोपसंहारो युक्तोऽशक्यत्वादित्याशङ्का-मभ्युपगमवादेन परिहरन् न वेति सूत्रमुपसंहारः कार्य इत्येतयो-रनुवृत्यध्याहाराभ्यां व्याचष्टे ॥

'ಅಯಂ ಸರ್ವಗುಣೋಪಸಂಹಾರಃ ನ ಯುಕ್ತಃ ಅಶಕ್ಯತ್ವಾತ್' (ಈ ಸರ್ವಗುಣೋಪಸಂಹಾರವು ಅಶಕ್ಯವಾದ್ದರಿಂದ ಯುಕ್ತವಲ್ಲ) ಎಂಬ ಶಂಕೆಯನ್ನು ಅಭ್ಯುಪಗಮವಾದದಿಂದ ಪರಿಹರಿಸುವವರಾಗಿ, 'ನ ವಾ' ಎಂಬ ಸೂತ್ರವನ್ನು 'ಉಪಸಂಹಾರಃ ಕಾರ್ಯಃ' ಎಂಬ ಎರಡು ಪದಗಳ ಅನುವೃತ್ತಿ-ಅಧ್ಯಾಹಾರಗಳಿಂದ ವ್ಯಾಖ್ಯಾನಿಸುತ್ತಾರೆ –

**ॐ न वा प्रकरणभेदात् परोवरीयस्त्वादिवत् ॐ (३-३-८)**

**ಸೂತ್ರಾರ್ಥ :- ಪರೋವರೀಯಸ್ತ್ವಾದಿವತ್** = ಯಾವ ರೀತಿಯಾಗಿ ಪರೋವರೀಯಸ್ತ್ವಾದಿ ಪ್ರಕರಣದಲ್ಲಿ 'ಸ ಏಷಃ' (ಛಾಂ. 1-9-2) ಎಂದು ಪ್ರತಿಪಾದಿತವಾದ ನಿರವಧಿಕ ಸರ್ವೋತ್ತಮತ್ವ ರೂಪ ಪರೋವರೀಯಸ್ತ್ವಾದಿ ಗುಣಗಳನ್ನೇ ಉಪಾಸನೆಗಾಗಿ ಉಪಸಂಹಾರ ಮಾಡಲಾಗುತ್ತದೆ. ಹೊರತು ಎಲ್ಲ ಗುಣಗಳ ಉಪಸಂಹಾರ ಅಲ್ಲ, ಅದರಂತೆ ಸರ್ವಗುಣೋಪಸಂಹಾರೋ ನ ಕರ್ತವ್ಯೋ **ವಾ** = ಎಲ್ಲ ಗುಣಗಳ ಉಪಸಂಹಾರ ಮಾಡುವುದು ಬೇಡ. ಕುತಃ = ಯಾಕೆ? **ಪ್ರಕರಣಭೇದಾತ್** = ಪರೋವರೀಯ ಪ್ರಕರಣ, ವೈಶ್ವಾನರ ಪ್ರಕರಣ ಮೊದಲಾಗಿ ಪ್ರಕರಣಗಳು ಭಿನ್ನಭಿನ್ನವಾಗಿರುವುದರಿಂದ.

**ಸೂ.ರ.:– एवं चास्त्वनुपसंहार एव सर्वगुणानाम् । प्रकरण-भेदात् । अन्यथा प्रकरणानि न भिद्येरन् । सर्वाण्यपि प्रकरणान्युप-लक्षणतया सर्वगुणपराणीति सर्वोपसंहृतिः कार्यैवेति न मन्तव्यम् । परोवरीयस्त्वादिप्रकरणस्य श्रूयमाणगुणमात्रपरत्वात् । अन्यथैकेनैव शब्देन सर्वगुणोपलक्षणसम्भवेनोद्गीथादिशब्दवैयर्थ्यं स्यांत् । अत उक्तं युक्तमिति सिद्धम् ॥**

ಪರೋವರೀಯ ಪ್ರಕರಣ, ವೈಶ್ವಾನರ ಪ್ರಕರಣ ಮೊದಲಾಗಿ ಪ್ರಕರಣಗಳು ಭಿನ್ನಭಿನ್ನವಾಗಿರುವುದರಿಂದ ಎಲ್ಲ ಗುಣಗಳ ಉಪಸಂಹಾರ ಮಾಡುವುದೇ ಬೇಡ. ಹಾಗೆ ಒಂದುವೇಳೆ ಎಲ್ಲ ಗುಣಗಳ ಉಪಸಂಹಾರ ಮಾಡುವುದೇ ಆಗಿದ್ದರೆ ಪ್ರಕರಣಗಳು ಭಿನ್ನಭಿನ್ನವಾಗಬಾರದಿತ್ತು.

ಎಲ್ಲ ಪ್ರಕರಣಗಳೂ ಉಪಲಕ್ಷಣತಯಾ ಸರ್ವಗುಣಪರವಾಗಿವೆಯಾದ್ದರಿಂದ

ಸರ್ವಗುಣಗಳ ಉಪಸಂಹಾರ ಮಾಡಲೇಬೇಕು ಎಂದು ಶಂಕಿಸುವುದು ಸರಿಯಲ್ಲ. ಕಾರಣ ಪರೋವರೀಯಸ್ತ್ವಾದಿ ಪ್ರಕರಣವು ಶ್ರೂಯಮಾಣಗುಣಮಾತ್ರಪರವಾಗಿದೆ.

ಒಂದುವೇಳೆ ಎಲ್ಲ ಪ್ರಕರಣಗಳೂ ಉಪಲಕ್ಷಣತಯಾ ಸರ್ವಗುಣಪರ-ವಾಗಿದ್ದಾದರೆ ಒಂದೇ ಶಬ್ದದಿಂದಲೇ ಎಲ್ಲ ಗುಣಗಳನ್ನೂ ಉಪಲಕ್ಷಣತ್ವೇನ ಸ್ವೀಕರಿಸಲು ಬರುವುದರಿಂದ ಉದ್ಗೀಥಾದಿ ಶಬ್ದಗಳು ವ್ಯರ್ಥವಾಗಬೇಕಾಗುತ್ತದೆ. ಆದ್ದರಿಂದ ವಿಕಲ್ಪೇನ ಎಲ್ಲ ಗುಣಗಳ ಉಪಸಂಹಾರ ಮಾಡುವುದು ಬೇಡ ಎಂದು ಹೇಳಿದ್ದು ಯುಕ್ತವಾಗಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 9

**ಸೂ.ರ.:– ननु कर्तव्य एव सर्वगुणोपसंहारः । सर्ववेदानां भगवन्नामत्वेन गुणाभिधायित्वात् । गुणाभिधानस्यैव ध्यानार्थत्वादिति प्राप्ते परिहरत्सूत्रमाह ॥**

ಸರ್ವಗುಣೋಪಸಂಹಾರವು ಕರ್ತವ್ಯವೇ ಆಗಿದೆ. ಸರ್ವವೇದಗಳು ಭಗವಂತನ ನಾಮವೇ ಆದ ಕಾರಣ ಗುಣಾಭಿಧಾಯಿಯಾದ್ದರಿಂದ. ಗುಣಾಭಿಧಾನವು ಧ್ಯಾನಾರ್ಥವಾಗಿದ್ದರಿಂದ (ಧ್ಯಾನಕ್ಕಾಗಿ = ಉಪಸಂಹಾರಕ್ಕಾಗಿ ಮಾಡಲ್ಪಡುವು-ದಾದ್ದರಿಂದ) ಎಂಬುದಾಗಿ ಆಕ್ಷೇಪ ಬಂದರೆ, ಅದಕ್ಕೆ ಸಮಾಧಾನ ಹೇಳಲು ಸೂತ್ರವನ್ನು ಹೇಳುತ್ತಾರೆ –

### ॐ संज्ञातश्चेत्तदुक्तमस्ति तु तदपि ॐ (३-३-९)

**ಸೂತ್ರಾರ್ಥ :-** ಸಂಜ್ಞಾತಃ = ಎಲ್ಲ ವಿದ್ಯೆಗಳೂ ಭಗವಂತನ ನಾಮವೇ ಆದ ಕಾರಣ ಅವನ ಗುಣೋಕ್ತಿರೂಪವಾದ್ದರಿಂದ ಸರ್ವವಿದ್ಯೋಕ್ತಗುಣೋಪಸಂಹಾರಃ ಕಾರ್ಯಃ = ಸರ್ವವಿದ್ಯೋಕ್ತ ಗುಣೋಪಸಂಹಾರವು ಕಾರ್ಯವಾಗಿದೆ ಇತಿ **ಚೇತ್** = ಎಂದು ಆಕ್ಷೇಪ ಬಂದರೆ, **ತದುಕ್ತಂ** = ಆ ಪ್ರಶ್ನೆಗೆ 'ಇಷ್ಟಮೇವ ತತ್' ಅದು ಇಷ್ಟವೇ ಆಗಿದೆ ಎಂಬುದಾಗಿ ಆ ಉಪಸಂಹಾರಸೂತ್ರದಿಂದ ಹೇಳಲ್ಪಟ್ಟಿದೆ. ನ ಕೇವಲಂ ಯುಕ್ತಿಸಿದ್ಧಮೇತತ್ = ಇದು ಕೇವಲ ಯುಕ್ತಿಸಿದ್ಧವಷ್ಟೇ ಆಗಿಲ್ಲ. ಕಿಂತು ತಸ್ಮಿನ್ನರ್ಥೇ = ಆ ವಿಷಯದಲ್ಲಿ ನಾಮ ವಾ ಏತಾಃ = (ಕೌಂಡಿನ್ಯಶ್ರುತಿ) ಎಂಬ ಪ್ರಮಾಣಮಪ್ಯಸ್ತಿ = ಪ್ರಮಾಣವೂ ಕೂಡ ಇದೆ. ತು = ಇದ್ದೇ ಇದೆ.

**ಸೂ.ರ.:– एवं चास्तु । अस्माभिरपि सर्वगुणोपसंहारस्योक्त-त्वेनेष्टत्वात् । नाम वेति कौण्डिन्यश्रुतौ विहितत्वेन प्रामाणिकत्वाच्च । अतः सर्वगुणोपसंहारस्य कर्तव्यत्वात्सार्थकमेव सर्वपरिज्ञानमिति सिद्धम् ॥**

ನಮ್ಮಿಂದಲೂ ಸಹ ಸರ್ವಗುಣೋಪಸಂಹಾರವು ಹೇಳಲ್ಪಟ್ಟಿದ್ದರಿಂದ, "ನಾಮ ವಾ ಏತಾ ಬ್ರಹ್ಮಣಃ ಸರ್ವವಿದ್ಯಾಸ್ತಸ್ಮಾದೇಕಃ ಸರ್ವಗುಣೈರ್ವಿಚಿಂತ್ಯಃ" ಎಂಬ ಕೌಂಡಿನ್ಯಶ್ರುತಿಯಲ್ಲಿ ವಿಹಿತವಾದ್ದರಿಂದ ಪ್ರಾಮಾಣಿಕವೂ ಆಗಿದೆ.

ಆದ್ದರಿಂದ ಸರ್ವಗುಣೋಪಸಂಹಾರವು ಕರ್ತವ್ಯವಾದ್ದರಿಂದ ಸರ್ವಪರಿಜ್ಞಾನವು ಸಾರ್ಥಕವೇ ಆಗಿದೆ ಎಂದು ಸಿದ್ಧವಾಗುತ್ತದೆ.

**ಉಪಸಂಹಾರಾಧಿಕರಣವು ಮುಗಿಯಿತು.**

ಅಧಿಕರಣ – 3

# ಪ್ರಾಪ್ತ್ಯಧಿಕರಣ

## ಸಂಗತಿ

**ಸೂ.ರ.:– अत्र प्रागुक्तोपसंहारानुपसंहारयोः पुरुषभेदेन कर्तव्यत्वं समर्थ्यते ।**

ಹಿಂದೆ ಹೇಳಿದ ಉಪಸಂಹಾರ-ಅನುಪಸಂಹಾರಗಳಿಗೆ ಪುರುಷಭೇದದಿಂದ ಕರ್ತವ್ಯತ್ವವನ್ನು ಸಮರ್ಥಿಸುತ್ತಾರೆ ಮೂರನೇ ಈ ಪ್ರಾಪ್ತ್ಯಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु न युक्तौ प्रागुक्तोपसंहारानुपसंहारौ । विरोधात् । विरुद्धयोर्युगपदनुष्ठानमेकेन न सम्भवति । न चाधिकारिभेदादुभयोपपत्तिः । नियामकाभावादिति प्राप्ते सूत्रमाह ॥**

ವಿರೋಧ ಬರುವುದರಿಂದ ಹಿಂದೆ ಹೇಳಿದ ಉಪಸಂಹಾರ – ಅನುಪಸಂಹಾರಗಳು ಯುಕ್ತವಲ್ಲ. ಒಬ್ಬನೇ ವ್ಯಕ್ತಿ ವಿರುದ್ಧವಾದವುಗಳನ್ನು ಏಕಕಾಲಕ್ಕೆ ಅನುಷ್ಠಾನ ಮಾಡಲು ಸಾಧ್ಯವಿಲ್ಲ. ಅಧಿಕಾರಿಭೇದದಿಂದ ಎರಡೂ ಉಪಪನ್ನವಾಗುತ್ತದೆ ಎಂದು ಶಂಕಿಸುವುದು ಸರಿಯಲ್ಲ. ಕಾರಣ ಅದಕ್ಕೆ ನಿಯಾಮಕವಾದದ್ದು ಯಾವುದೂ ಇಲ್ಲ ಎಂದು ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

### ॐ प्राप्तेश्च समञ्जसम् ॐ (३-३-१०)

ಉಪಸಂಹಾರಾನುಪಸಂಹಾರಯೋಃ ಕರ್ತವ್ಯತ್ವಂ = ಉಪಸಂಹಾರ – ಅನುಪಸಂಹಾರಗಳ ಕರ್ತವ್ಯತ್ವವು ಸಮಂಜಸಂ = ಯುಕ್ತವಾಗಿದೆ. ಕುತಃ = ಯಾಕೆ? ಪ್ರಾಪ್ತೇಃ = ಆ ಆ ಯೋಗ್ಯಪುರುಷಭೇದದಿಂದ ಅವುಗಳು ವ್ಯವಸ್ಥಿತವಾದ್ದರಿಂದ, ಅವಿರೋಧವು ಪ್ರಾಪ್ತವಾಗುವುದರಿಂದ.

## ಸಿದ್ಧಾಂತ

**एवं चोपपन्नावेवोपसंहारानुपसंहारौ पुरुषभेदेन । युगपत् प्रतीत्यादियोग्यताविशेषेण तदुपपत्तेः । यस्य युगपत्स्वभुजाविव यावन्तो गुणाः स्पष्टं प्रतिभासन्ते स तावन्त एव ध्यायेत् । ब्रह्मणा तु सर्वैः गुणै- रुपास्यः परमेश्वरः, अन्यैः रुद्रादिभिश्च तत्तद्योग्यतानुसारेणेति विवेको विज्ञेयः । अतस्तयोः सामञ्जस्याद्युक्तं पूर्वोक्तमिति सिद्धम् ॥**

ಆಯಾ ಅವರವರ ಯೋಗ್ಯತಾವಿಶೇಷದಿಂದ ಉಪಸಂಹಾರ - ಅನುಪಸಂಹಾರಗಳು ಉಪಪನ್ನವಾಗುತ್ತವೆ. ಅದು ಹೇಗೆ ?

ಯಸ್ಯ ಯಾವದ್ಗುಣಾಃ ಸ್ಪಷ್ಟಂ ಪ್ರತಿಭಾಸಂತ್ಯುಪಾಸನೇ ।
ಯುಗಪತ್ ಸ್ವಭುಜೌ ಯದ್ವತ್ ಧ್ಯಾಯೇತ್ತಾವಂತ ಏವ ಸಃ ॥

ಎಂಬ ಶ್ರುತಿಯಂತೆ, ಧ್ಯಾನಕಾಲದಲ್ಲಿ ತನ್ನ ಎರಡು ಕೈಗಳಂತೆ ಯಾರಿಗೆ ಎಷ್ಟು ಗುಣಗಳು ಒಮ್ಮೆಲೇ ತೋರುತ್ತವೆಯೋ ಅವರು ಅಷ್ಟು ಗುಣಗಳನ್ನು ಉಪಸಂಹಾರ ಮಾಡಬೇಕು.

ಗುಣೈಃ ಸರ್ವೈರುಪಾಸ್ಯೋಽಸೌ ಬ್ರಹ್ಮಣಾ ಪರಮೇಶ್ವರಃ ।
ಅನ್ಯೈರ್ಯಥಾಕ್ರಮಂ ಚೈವ ಮಾನುಷೈಃ ಕೈಶ್ಚಿದೇವ ತು ॥

ಎಂಬ ಭವಿಷ್ಯತ್ಪರ್ವವಚನದಂತೆ, ಬ್ರಹ್ಮದೇವರು ಎಲ್ಲ ಗುಣಗಳಿಂದ ಪರಮಾತ್ಮನ ಉಪಾಸನೆ ಮಾಡಿದರೆ, ಇತರ ರುದ್ರಾದಿಗಳು ತಮ್ಮ ತಮ್ಮ ಯೋಗ್ಯತಾನುಸಾರವಾಗಿ ಗುಣಗಳಿಂದ ಉಪಾಸನೆ ಮಾಡುತ್ತಾರೆ. ಮನುಷ್ಯೋತ್ತಮರು ಆನಂದಾದಿ ಕೆಲವೇ ಗುಣಗಳಿಂದ ಉಪಾಸಿಸುತ್ತಾರೆ. ಆದ್ದರಿಂದ ಉಪಸಂಹಾರ - ಅನುಪಸಂಹಾರಗಳು ಸಮಂಜಸವಾಗುವುದರಿಂದ ಪುರುಷಭೇದೇನ ಉಪಸಂಹಾರ - ಅನುಪಸಂಹಾರ- ಗಳಿಗೆ ಕರ್ತವ್ಯತ್ವವನ್ನು ಹೇಳಿದ್ದು ಯುಕ್ತವಾಗಿದೆ ಎಂದು ಸಿದ್ಧವಾಗುತ್ತದೆ.

ಪ್ರಾಪ್ತ್ಯಧಿಕರಣವು ಮುಗಿಯಿತು.

ಅಧಿಕರಣ – 4

# ಸರ್ವಾಭೇದಾಧಿಕರಣ

## ಸಂಗತಿ

ಸೂ.ರ.:– अत्र बहुगुणोपसंहारस्य फलातिशयोक्त्या कर्तव्यता समर्थ्यते ॥

ಫಲಾತಿಶಯವನ್ನು ಹೇಳುವ ಮೂಲಕ ಬಹುಗುಣೋಪಾಸಂಹಾರಕ್ಕೆ ಕರ್ತವ್ಯತ್ವವನ್ನು ಸಮರ್ಥಿಸುತ್ತಾರೆ ನಾಲ್ಕನೇ ಈ ಸರ್ವಾಭೇದಾಧಿಕರಣದಲ್ಲಿ.

## ಪೂರ್ವಪಕ್ಷ

ಸೂ.ರ.:– ननु न बहुगुणोपसंहारः कर्तव्यः । उपासनातारतम्यानुसारिफलतारतम्ये प्रमाणाभावादिति प्राप्ते सूत्रं पठति ॥

ಬಹುಗುಣೋಪಸಂಹಾರವು ಕರ್ತವ್ಯವಾಗಿಲ್ಲ, ಕಾರಣ – ಉಪಾಸನಾತಾರತಮ್ಯಾನುಸಾರಿ ಫಲತಾರತಮ್ಯ ವಿಷಯದಲ್ಲಿ ಪ್ರಮಾಣ ಇಲ್ಲವಾದ್ದರಿಂದ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ सर्वाभेदादन्यत्रेमे ॐ (३-३-११)**

**ಸೂತ್ರಾರ್ಥ** :- ಇಮೇ = ಸರ್ವಗುಣೋಪಸಂಹಾರ ಮಾಡುವ ಬ್ರಹ್ಮಾದಿಗಳು **ಅನ್ಯತ್ರ** = ತದನುಪಸಂಹರ್ತೃಭ್ಯೋಽನ್ಯತ್ರ ತತ್ಫಲವಿಲಕ್ಷಣಮಹಾಫಲೇ ಭವಂತಿ ತದ್ಭಾಜೋ ಭವಂತಿ = ಸರ್ವಗುಣೋಪಸಂಹಾರ ಮಾಡದವರಿಗಿಂತಲೂ ವಿಲಕ್ಷಣವಾದ ಮಹಾಫಲವನ್ನು ಪಡೆಯುತ್ತಾರೆ. ಕುತಃ = ಏಕೆ ? **ಸರ್ವಾಭೇದಾತ್** = ಸರ್ವವೇದೋಕ್ತಗುಣಗಳನ್ನು ವಿಭಾಗವಿಲ್ಲದೇ ಉಪಸಂಹಾರ ಮಾಡಿ ಉಪಾಸನೆ ಮಾಡುತ್ತಾರಾದ್ದರಿಂದ.

## ಸಿದ್ಧಾಂತ

ಸೂ.ರ.:– एवं च कर्तव्य एव बहुगुणोपसंहारः । साधनतारतम्ये

**फलतारतम्यनियमात् । वेदोक्तमहोपासनवतामतिशयफलाभावा-योगात् । अतो बहुगुणोपसंहारः कर्तव्य इति सिद्धम् ॥**

ಬಹುಗುಣೋಪಸಂಹಾರವು ಕರ್ತವ್ಯವೇ ಆಗಿದೆ. ಕಾರಣ - ಸಾಧನ-ತಾರತಮ್ಯವಿದ್ದಾಗ ಫಲತಾರತಮ್ಯನಿಯಮ ಇರುವುದರಿಂದ. ವೇದೋಕ್ತವಾದ ಮಹೋಪಾಸನ ಮಾಡುವವರಿಗೆ ಅತಿಶಯಫಲ ಇಲ್ಲ ಎನ್ನುವುದು ಕೂಡುವುದಿಲ್ಲ-ವಾದ್ದರಿಂದ.

ಆದ್ದರಿಂದ ಬಹುಗುಣೋಪಸಂಹಾರವು ಕರ್ತವ್ಯವಾಗಿದೆ ಎಂದು ಸಿದ್ಧವಾಗುತ್ತದೆ.

ಸರ್ವಾಭೇದಾಧಿಕರಣವು ಮುಗಿಯಿತು.

ಅಧಿಕರಣ – 5

# ಆನಂದಾಧಿಕರಣ

## ಸಂಗತಿ

ಸೂ.ರ.:- अत्र सर्वमुमुक्षुसाधारणोपास्यगुणा निर्णीयन्ते ।

ಸರ್ವಮುಮುಕ್ಷುಸಾಧಾರಣವಾದ ಉಪಾಸ್ಯಗುಣಗಳನ್ನು ನಿರ್ಣಯಿಸುತ್ತಾರೆ ಐದನೇ ಈ ಆನಂದಾಧಿಕರಣದಲ್ಲಿ.

## ಪೂರ್ವಪಕ್ಷ

ಸೂ.ರ.:- ननु न सन्त्येव साधारणतयोपास्या गुणाः क्लृप्ताः । नियामकाभावात् । ततश्च क्लृप्त्यभावेन प्राथमिकोपासनासम्भवात् उपासनामात्रासम्भव इति प्राप्ते सूत्रितम् ॥

ಸರ್ವಮುಮುಕ್ಷುಸಾಧಾರಣವಾಗಿ ಉಪಾಸ್ಯವಾದ, ಕ್ಲೃಪ್ತವಾದ ಗುಣಗಳು ಇಲ್ಲವೇ ಇಲ್ಲ. ಕಾರಣ – ಅಂತಹ ಗುಣಗಳಿಗೆ ನಿಯಾಮಕವಾದದ್ದು ಇಲ್ಲವಾದ್ದ-ರಿಂದ. ಆದ್ದರಿಂದ ಕ್ಲೃಪ್ತಿ ಇಲ್ಲದ ಕಾರಣ ಪ್ರಾಥಮಿಕೋಪಾಸನಾ ಕೂಡದ ಕಾರಣ ಯಾವ ಉಪಾಸನೆಯೂ ಕೂಡುವುದಿಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡಲು ಸೂತ್ರ ಹೇಳುತ್ತಾರೆ –

**ॐ आनन्दादयः प्रधानस्य ॐ (३-३-१२)**

ಸೂತ್ರಾರ್ಥ :- ಆನಂದಾದಯಃ = ಆನಂದ, ಜ್ಞಾನ, ಸತ್‌ಶಬ್ದೋಕ್ತವಾದ ನಿರ್ದೋಷತ್ವ, ಆತ್ಮಪದೋದಿತವಾದ ಸ್ವಾಮಿತ್ವ ಇತ್ಯೇತೇ ಚತ್ವಾರೋ ಗುಣಾಃ = ಎಂಬ ಈ ನಾಲ್ಕು ಗುಣಗಳು ಪ್ರಧಾನಸ್ಯ ಮೋಕ್ಷಸ್ಯ ಅರ್ಥೇ = ಪ್ರಧಾನಫಲವಾದ ಮೋಕ್ಷಕ್ಕಾಗಿ ಸರ್ವಮುಮುಕ್ಷುಭಿಃ ಉಪಾಸ್ಯಾಃ = ಎಲ್ಲ ಮುಮುಕ್ಷುಗಳಿಂದ ಉಪಾಸ್ಯವಾಗಿವೆ.

## ಸಿದ್ಧಾಂತ

ಸೂ.ರ.:- एवं च क्लृप्ता एव सर्वमुमुक्षूपास्या गुणाः । सर्वेषां

मुक्तावानन्दज्ञानदुःखाभावानामपेक्षितत्वात् । तत्सिद्धये तत्त्वविदा तावदुपास्याः । यत्त्वात्मत्वापर्यायं स्वामित्वं स्वयं बन्धानुस्मरणस्य भगवत्प्रीतिसाधनत्वात्तदप्युपास्यम् । एवं च प्राथमिकोपास्यनिर्णयात्सर्वाऽप्युपासना युक्तैवेति सिद्धम् ॥

ಸರ್ವಮುಮುಕ್ಷುಗಳಿಂದ ಉಪಾಸ್ಯವಾದ ಗುಣಗಳು ಕ್ಲೃಪ್ತವೇ ಆಗಿವೆ. ಎಲ್ಲರಿಗೂ ಮೋಕ್ಷದಲ್ಲಿ ಆನಂದ-ಜ್ಞಾನ-ದುಃಖಾಭಾವಗಳು ಅಪೇಕ್ಷಿತವಾದ್ದರಿಂದ, ಅದರ ಸಿದ್ಧಿಗಾಗಿ ತತ್ತ್ವಜ್ಞಾನಿಯಾದವನು ಆನಂದ-ಜ್ಞಾನ-ಸತ್ ಎಂಬ ಗುಣಗಳನ್ನು ಉಪಾಸನೆ ಮಾಡಲೇಬೇಕು. ಇನ್ನು ಆತ್ಮತ್ವ-ಅಪರಪರ್ಯಾಯವಾದ ಸ್ವಾಮಿತ್ವ ಏನಿದೆಯೋ ಅದಾದರೂ ತನಗೂ ಹಾಗೂ ಭಗವಂತನಿಗೂ ಇರುವ ಸ್ವಾಮಿಭೃತ್ಯಭಾವಸಂಬಂಧವನ್ನು ತಿಳಿಸುತ್ತಿರುವುದರಿಂದ ಅದರ ಸ್ಮರಣವು ಭಗವಂತನ ಪ್ರೀತಿಗೆ ಸಾಧನವೇ ಆಗಿದೆ. ಆದ್ದರಿಂದ ಆತ್ಮತ್ವವೂ ಉಪಾಸ್ಯವಾಗಿದೆ.

ಆದ್ದರಿಂದ ಪ್ರಾಥಮಿಕ ಉಪಾಸ್ಯನಿರ್ಣಯವಾಗುವುದರಿಂದ ಎಲ್ಲ ಉಪಾಸನೆಗಳೂ ಯುಕ್ತವೇ ಆಗಿವೆ ಎಂದು ಸಿದ್ಧವಾಗುತ್ತದೆ.

ಆನಂದಾಧಿಕರಣವು ಮುಗಿಯಿತು.

ಅಧಿಕರಣ – 6

# ಪ್ರಿಯಶಿರಸ್ತ್ವಾದ್ಯಧಿಕರಣ

## ಸಂಗತಿ

**ಸೂ.ರ.:– अत्र ब्रह्मोपासने प्रियशिरस्त्वादिगुणानां सर्वाधिकारिसाधारण्यनिरासेन सर्वेषां चतुर्गुणनियमः समर्थ्यते ।**

ಬ್ರಹ್ಮೋಪಾಸನ ವಿಷಯದಲ್ಲಿ ಪ್ರಿಯಶಿರಸ್ತ್ವಾದಿಗುಣಗಳಿಗೆ ಸರ್ವಾಧಿಕಾರಿ ಸಾಧಾರಣತ್ವ ನಿರಾಸ ಮಾಡುವುದರಿಂದ ಎಲ್ಲರಿಗೂ ಚತುರ್ಗುಣನಿಯಮವನ್ನು ಸಮರ್ಥಿಸುತ್ತಾರೆ ಆರನೇ ಈ ಪ್ರಿಯಶಿರಸ್ತ್ವಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु प्रियशिरस्त्वादयोऽपि सर्वोपास्याः । आनन्दादिघटितत्वात् । अन्यथाऽऽनन्दादेः सम्यगनुपासितत्वेन मोक्षासिद्धिः स्यात् । ततश्च चत्वार एव गुणाः सर्वोपास्या इत्ययुक्तमिति प्राप्ते सूत्रमुपन्यस्यति ॥**

ಪ್ರಿಯಶಿರಸ್ತ್ವಾದಿಗುಣಗಳು ಆನಂದಾದಿಘಟಿತವಾದ್ದರಿಂದ ಸರ್ವರಿಂದಲೂ ಉಪಾಸ್ಯವಾಗಿವೆ. ಪ್ರಿಯಶಿರಸ್ತ್ವಾದಿಗುಣಗಳ ಉಪಾಸನೆ ಮಾಡದಿದ್ದರೆ ಆನಂದಾದಿಗಳು ಸಮ್ಯಕ್ ಅನುಪಾಸಿತವಾಗುವುದರಿಂದ ಮೋಕ್ಷವು ಸಿದ್ಧಿಸದೇ ಹೋಗಬೇಕಾದೀತು. ಆದ್ದರಿಂದ ನಾಲ್ಕು ಗುಣಗಳು ಮಾತ್ರ ಸರ್ವರಿಂದ ಉಪಾಸ್ಯವಾಗಿವೆ ಎಂಬುದಾಗಿ ಹೇಳುವುದು ಸರಿಯಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಆದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ प्रियशिरस्त्वाद्यप्राप्तिरुपचयापचयौ हि भेदे ॐ (३-३-१३)**

ಸೂತ್ರಾರ್ಥ :- ಸರ್ವೇಷಾಂ ಅಧಿಕಾರಿಣಾಂ = ಎಲ್ಲ ಅಧಿಕಾರಿಗಳಿಗೆ ಪ್ರಿಯಶಿರಸ್ತ್ವಾದ್ಯಪ್ರಾಪ್ತಿಃ = 'ತಸ್ಯ ಪ್ರಿಯಮೇವ ಶಿರಃ' (ತೈ.ಉ. 2-5-2) ಇತ್ಯಾದಿ ಶ್ರುತ್ಯುಕ್ತ ಪ್ರಿಯಶಿರಸ್ತ್ವಾದಿ ಗುಣೋಪಾಸನಯೋಗ್ಯತೆಯು ಇಲ್ಲ. ಕಿಂತು ಕೇಷಾಂಚಿದೇವ = ಕಿಂತು ಕೆಲವು ಗುಣಗಳ ಉಪಾಸನಯೋಗ್ಯತೆಯು ಮಾತ್ರ

ಇರುತ್ತದೆ. ಕುತಃ = ಯಾಕೆ? ಹಿ = ಯಾವ ಕಾರಣ ತೇಷಾಂ = ಅಧಿಕಾರಿಗಳಿಗೆ **ಭೇದೇ** = ಫಲಭೇದವಿಷಯದಲ್ಲಿ ಫಲತಾರತಮ್ಯವಿಷಯದಲ್ಲಿ ಪ್ರಸಿದ್ಧಾ = ಪ್ರಸಿದ್ಧವಾದ "ನೈವ ಸರ್ವಾ" (ವಾರಾಹ) ಸ್ಮೃತಿಯು ಇದೆಯೋ, ಯಸ್ಮಾಚ್ಚ = ಯಾವ ಕಾರಣ **ಭೇದೇ** = ಫಲಭೇದಸಿದ್ಧಿಗಾಗಿ **ಉಪಚಯಾಪಚಯೌ** = ಉಪಾಸನೆಯಲ್ಲಿ ವೃದ್ಧಿಹ್ರಾಸಗಳು ಅರ್ಥಾತ್ ತಾರತಮ್ಯವು ಅಪೇಕ್ಷಿತೌ = ಅಪೇಕ್ಷಿತವಾಗಿವೆಯೋ ತಸ್ಮಾತ್ = ಆ ಕಾರಣ.

## ಸಿದ್ಧಾಂತ

**ಸೂ.ರ.:– एवं च न प्रियशिरस्त्वादयः सर्वोपास्याः । आनन्दादि-विशेषत्वावलम्बनेन तेषामुपासने सर्वेषां सर्वगुणोपास्तिप्रसङ्गात् । सर्वगुणानामप्यानन्दादिचतुष्टयविशेषत्वस्य वक्तुं शक्यत्वात् । न च प्रियशिरस्त्वाद्यनुपासने मोक्षाभावः । यथायोग्यान् गुणपूगानिति श्रुते-र्विशेषानुपासनेऽपि योग्यगुणोपासनामात्रेण फलप्राप्तिसम्भवात् । अतः प्रियशिरस्त्वादीनामसाधारण्याच्चत्वार एव सर्वोपास्या इति सिद्धम् ॥**

ಪ್ರಿಯಶಿರಸ್ತ್ವಾದಿಗಳು ಸರ್ವರಿಂದಲೂ ಉಪಾಸ್ಯವಾಗಿಲ್ಲ. ಕಾರಣ - ಆನಂದಾದಿ ವಿಶೇಷತ್ವವನ್ನು ಅವಲಂಬಿಸುವುದರಿಂದ ಅಂತಹ ಪ್ರಿಯಶಿರಸ್ತ್ವಾದಿ-ಗಳನ್ನು ಉಪಾಸನೆ ಮಾಡಿದರೆ ಎಲ್ಲರಿಗೂ ಎಲ್ಲ ಗುಣಗಳ ಉಪಾಸನಪ್ರಸಂಗ ಬರುವುದರಿಂದ. ಎಲ್ಲ ಗುಣಗಳಿಗೂ ಸಹ ಆನಂದಾದಿ ಚತುಷ್ಟಯ ವಿಶೇಷತ್ವವನ್ನು ಹೇಳಲು ಶಕ್ಯವಿರುವುದರಿಂದ.

ಹಾಗಾದರೆ ಪ್ರಿಯಶಿರಸ್ತ್ವಾದಿಗಳ ಉಪಾಸನೆ ಮಾಡದಿದ್ದರೆ ಮೋಕ್ಷ ಸಿಗುವುದಿಲ್ಲವಲ್ಲ? ಎಂದರೆ, ಅದು ಸರಿಯಲ್ಲ. "ಯಥಾಯೋಗ್ಯಾನ್ ಗುಣಪೂಗಾ-ನುಪಾಸ್ಯ ಫಲಂ ಭವೇನ್ಮುಕ್ತಿಗಂ ನೈವ ಚಾನ್ಯತ್ । ನಿತ್ಯೈಕಾಗ್ರ್ಯವ್ಯಂಗ್ಯತಾ ಹೇತುತಶ್ಚ ಸಾಕ್ಷಾತ್ ದೃಶಿರ್ನೋ ತದ್ವಿಶೇಷೈಃ ಸ್ಮೃತೇಶ್ಚ ॥" ಎಂದು ಶ್ರುತಿ ಇರುವುದರಿಂದ ವಿಶೇಷಗುಣಗಳ ಉಪಾಸನಾ ಮಾಡದಿದ್ದರೂ ಸಹ ಯೋಗ್ಯಗುಣೋಪಾಸನ ಮಾತ್ರದಿಂದ ಮೋಕ್ಷಪ್ರಾಪ್ತಿಯು ಸಂಭಾವಿತವಾಗಿದೆ.

ಆದ್ದರಿಂದ ಪ್ರಿಯಶಿರಸ್ತ್ವಾದಿಗಳು ಅಸಾಧಾರಣವಾದ್ದರಿಂದ ನಾಲ್ಕು ಗುಣಗಳು ಮಾತ್ರ ಎಲ್ಲರಿಂದ ಉಪಾಸ್ಯವಾಗಿವೆ ಎಂದು ಸಿದ್ಧವಾಗುತ್ತದೆ.

ಪ್ರಿಯಶಿರಸ್ತ್ವಾಧಿಕರಣವು ಮುಗಿಯಿತು.

ಅಧಿಕರಣ – 7

# ಇತರಾಧಿಕರಣ

## ಸಂಗತಿ

ಸೂ.ರ.:– अत्र देवगन्धर्वपर्यन्तानां ब्रह्मवाणीतरदेवादीनां प्रियशिरस्त्वादिबहुगुणोपासनं समर्थ्यते ।

ದೇವಗಂಧರ್ವಪರ್ಯಂತರಾದ ಬ್ರಹ್ಮ-ವಾಣೀ ಇತರ (ಬ್ರಹ್ಮ-ವಾಣಿಯರಿಂದ ಭಿನ್ನರಾದ) ದೇವಾದಿಗಳಿಗೆ ಪ್ರಿಯಶಿರಸ್ತ್ವಾದಿ ಬಹುಗುಣೋಪಾಸನವನ್ನು ಸಮರ್ಥಿಸುತ್ತಾರೆ ಏಳನೇ ಈ ಇತರಾಧಿಕರಣದಲ್ಲಿ.

## ಪೂರ್ವಪಕ್ಷ

ಸೂ.ರ.:– ननु विरिञ्चेतरदेवतादिभिश्चत्वार एव गुणा उपास्या नाधिकाः । सर्वमुमुक्षूणां चतुर्गुणोपासनयोग्यताया निर्णीतत्वात् । अधिकस्यानिर्णयात् । अतो मध्यमगुणानामनुपास्यत्वात् तदुपसंहारानुपपत्तिरिति प्राप्ते सूत्रितम् ॥

ವಿರಿಂಚಭಿನ್ನರಾದ ದೇವತಾದಿಗಳಿಂದ ನಾಲ್ಕು ಗುಣಗಳು ಮಾತ್ರ ಉಪಾಸ್ಯವಾಗಿವೆ. ಹೊರತು ಅಧಿಕ ಗುಣಗಳು ಉಪಾಸ್ಯವಾಗಿಲ್ಲ. ಎಲ್ಲ ಮುಮುಕ್ಷುಗಳಿಗೆ ಚತುರ್ಗುಣೋಪಾಸನಯೋಗ್ಯತೆಯು ನಿರ್ಣೀತವಾಗಿದೆ. ಅಧಿಕಗುಣೋಪಾಸನ-ಯೋಗ್ಯತೆಯು ನಿರ್ಣೀತವಾಗಿಲ್ಲವಾದ್ದರಿಂದ. ಆದ್ದರಿಂದ ಮಧ್ಯಮಗುಣಗಳು ಅನುಪಾಸ್ಯವಾದ್ದರಿಂದ ಅದರ ಉಪಸಂಹಾರಾನುಪಪತ್ತಿ ಬರುತ್ತದೆ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ इतरे त्वर्थसामान्यात् ॐ (३-३-१४)**

ಸೂತ್ರಾರ್ಥ :- ಅರ್ಥಸಾಮಾನ್ಯಾತ್ = (ಲ್ಯಬ್‌ಲೋಪನಿಮಿತ್ತ ಪಂಚಮೀ) ಉಪಾಸನೆಗೆ ಸ್ವಸ್ವಪ್ರಾಪ್ಯಫಲಸಾಮ್ಯವನ್ನು ಅಪೇಕ್ಷಿಸಿ ಇತರೇ = ನಾಲ್ಕು ಗುಣಗಳಿಂದ

ಭಿನ್ನವಾದ ಮಧ್ಯಮಗುಣಗಳು ದೇವಾದಿಭಿಃ = ದೇವಾದಿಗಳಿಂದ ಉಪಸಂಹರ್ತವ್ಯಾ (ತು) ಏವ = ಉಪಸಂಹರ್ತವ್ಯವೇ ಆಗಿವೆ.

## ಸಿದ್ಧಾಂತ

**ಸೂ.ರ.:– एवं च चतुर्गुणाधिका गुणा देवादिभिरुपास्या एव । तदपेक्षितप्राप्यफलनिर्णयं प्रथमतः कृत्वा पश्चात्साधननिर्णयं विधाय ब्रह्मणोऽन्यस्य वा सर्वज्ञस्य गुरोरुपदेशेन योग्यतानिर्णयोपपत्तेः । अतो मध्यमगुणानामपि देवाद्युपास्यत्वाद्युक्तं तदुपसंहाराभिधानमिति सिद्धम् ॥**

ದೇವಾದಿಗಳಿಂದ ಚತುರ್ಗುಣಗಳಿಂದ ಅಧಿಕವಾದ ಗುಣಗಳು ಉಪಾಸ್ಯವೇ ಆಗಿವೆ. ಅದಕ್ಕೆ ಅಪೇಕ್ಷಿತವಾದ ಪ್ರಾಪ್ಯಫಲನಿರ್ಣಯವನ್ನು ಮೊದಲು ಮಾಡಿ-ಕೊಂಡು, ಅನಂತರ ಸಾಧನನಿರ್ಣಯವನ್ನು ಮಾಡಿಕೊಂಡು, ಬ್ರಹ್ಮ ಅಥವಾ ಇತರ ಸರ್ವಜ್ಞರಾದ ಗುರುಗಳ ಉಪದೇಶದಿಂದ ಯೋಗ್ಯತಾನಿರ್ಣಯವು ಉಪಪನ್ನ-ವಾಗುತ್ತದೆ. ಆದ್ದರಿಂದ ದೇವಾದಿಗಳಿಂದ ಮಧ್ಯಮಗುಣಗಳೂ ಉಪಾಸ್ಯವಾದ್ದರಿಂದ ಅದರ ಉಪಸಂಹಾರವನ್ನು ಹೇಳಿದ್ದು ಯುಕ್ತವಾಗಿದೆ ಎಂದು ಸಿದ್ಧವಾಗುತ್ತದೆ.

ಇತರಾಧಿಕರಣವು ಮುಗಿಯಿತು.

ಅಧಿಕರಣ – ೮

# ಆಧ್ಯಾನಾಧಿಕರಣ

## ಸಂಗತಿ

ಸೂ.ರ.:– अत्र सर्वगुणोपसंहारानुपसंहारयोः कर्तव्यत्वे प्रमाण-मुच्यते ।

ಸರ್ವಗುಣಗಳ ಉಪಸಂಹಾರ – ಅನುಪಸಂಹಾರಗಳ ಕರ್ತವ್ಯತ್ವವಿಷಯದಲ್ಲಿ ಪ್ರಮಾಣವನ್ನು ಹೇಳುತ್ತಾರೆ ಎಂಟನೇ ಈ ಆಧ್ಯಾನಾಧಿಕರಣದಲ್ಲಿ.

## ಪೂರ್ವಪಕ್ಷ

ಸೂ.ರ.:– ननु न सर्वगुणोपसंहारः कर्तव्यः । प्रमाणाभावात् । अनुपसंहारिणामपि चतुर्गुणोपासकानां मोक्षस्य जायमानत्वेनैकः परत इति श्रुत्यविरोधात् । व्यभिचारिणश्च साधनत्वायोगेन असाधनं साधन-तया प्रतिपादयतो वाक्यस्याप्रामाण्यात् । न च सर्वविद्यानां भगव-द्गुणाभिधायकत्वेन तदुपसंहारः कर्तव्य इति वाच्यम् । गुणानां नाना-स्थानेषूक्तत्वेन तदभिधानस्योपसंहारार्थत्वाभावेनोपसंहारस्य निष्फल-त्वेन भगवद्गुणाभिधानस्य तदर्थत्वायोगात् । नापि कतिपयमात्रगुणोप-संहारो युक्तः । प्रमाणाभावात् । एतावदेवोपास्यमित्यनुक्तत्वेन प्रकरण-भेदस्य तत्राप्रामाण्यात् । तथा च नोपासनं युक्तमिति प्राप्ते सूत्रितम् ॥

ಸರ್ವಗುಣೋಪಸಂಹಾರವು ಕರ್ತವ್ಯವಾಗಿಲ್ಲ. ಕಾರಣ ಆ ವಿಷಯದಲ್ಲಿ ಪ್ರಮಾಣ ಇಲ್ಲವಾದ್ದರಿಂದ. ಸರ್ವಗುಣೋಪಸಂಹಾರ ಮಾಡದ ಚತುರ್ಗುಣೋ-ಪಾಸಕರಿಗೂ ಮೋಕ್ಷವು ಜಾಯಮಾನವಾದ್ದರಿಂದ "ಏಕಃ ಪರತಃ" ಎಂಬ ಶ್ರುತಿಯ ವಿರೋಧ ಬರುವುದಿಲ್ಲ. ವ್ಯಭಿಚಾರಿಯಾದದ್ದಕ್ಕೆ ಸಾಧನತ್ವ ಕೂಡದ ಕಾರಣ ಅಸಾಧನವಾದದ್ದನ್ನು ಸಾಧನತ್ವೇನ ಪ್ರತಿಪಾದಿಸುವ ವಾಕ್ಯವು ಅಪ್ರಮಾಣವಾಗುತ್ತದೆ.

ಸರ್ವವಿದ್ಯೆಗಳೂ ಭಗವದ್ಗುಣಾಭಿಧಾಯಕವಾದ್ದರಿಂದ ಸರ್ವಗುಣೋಪ-ಸಂಹಾರ ಕರ್ತವ್ಯವಾಗಿದೆ ಎಂದು ಶಂಕಿಸುವುದು ಸರಿಯಲ್ಲ. ಗುಣಗಳು ನಾನಾ-ಸ್ಥಾನಗಳಲ್ಲಿ ಉಕ್ತವಾದ್ದರಿಂದ ಗುಣಾಭಿಧಾನವು ಗುಣೋಪಸಂಹಾರಕ್ಕಾಗಿ ಆಗದ ಕಾರಣ, ಉಪಸಂಹಾರವು ನಿಷ್ಫಲವಾದ್ದರಿಂದ ಭಗವದ್ಗುಣಾಭಿಧಾನಕ್ಕೆ ತದರ್ಥತ್ವ ಕೂಡುವುದಿಲ್ಲ.

ಹಾಗಾದರೆ ಕತಿಪಯಮಾತ್ರ ಗುಣೋಪಸಂಹಾರ ಹೇಳಬಹುದಲ್ಲ? ಎಂದರೆ, ಅದೂ ಯುಕ್ತವಲ್ಲ. ಆ ವಿಷಯದಲ್ಲಿ ಪ್ರಮಾಣ ಇಲ್ಲವಾದ್ದರಿಂದ, 'ಏತದೇವೋ-ಪಾಸ್ಯಂ' ಎಂದು ಹೇಳದ ಕಾರಣ ಪ್ರಕರಣಭೇದವು ಅಲ್ಲಿ ಪ್ರಮಾಣವಾಗುವುದಿಲ್ಲ-ವಾದ್ದರಿಂದ. ಆದ್ದರಿಂದ ಉಪಾಸನೆಯು ಯುಕ್ತವಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

## ॐ आध्यानाय प्रयोजनाभावात् ॐ (३-३-१५)

**ಸೂತ್ರಾರ್ಥ** :- ವೇದೇಷು ಸರ್ವಗುಣೋಕ್ತಿಃ ಉಪಸಂಹಾರಶ್ಚ = ವೇದಗಳಲ್ಲಿ ಸರ್ವಗುಣಗಳನ್ನು ಹೇಳಿರುವುದು ಹಾಗೂ ಉಪಸಂಹಾರವು **ಆಧ್ಯಾನಾಯ** = ಸಮ್ಯಕ್‌ಜ್ಞಾನ - ಧ್ಯಾನಕ್ಕಾಗಿ ಕ್ಲೃಪ್ತೋ ಭವೇತ್ = ಕ್ಲೃಪ್ತವಾಗುತ್ತದೆ. ಕುತಃ = ಯಾಕೆ? **ಪ್ರಯೋಜನಾಭಾವಾತ್** = ಗುಣೋಕ್ತಿಗೆ ಹಾಗೂ ಉಪಸಂಹಾರಕ್ಕೆ ಧ್ಯಾನವನ್ನು ಬಿಟ್ಟು ಪ್ರಯೋಜನ ಇಲ್ಲವಾದ್ದರಿಂದ.

## ಸಿದ್ಧಾಂತ

**ಸೂ.ರ.:– एवं च कर्तव्य एवोपसंहारः । सर्वविद्यानां भगवन्नामत्वेन तद्गुणाभिधायकत्वात् । तस्य च प्रयोजनान्तराभावेनोपसंहारपूर्वकाध्यानार्थत्वात् । न चोपसंहारो निष्फलः । आनन्दातिशयलक्षणफलसद्भावात् । तथा च विरिञ्चेतरैः कतिपयगुणानुपसंहारेण कतिपयगुणोपसंहारः कार्यः । आत्मेत्येवोपासीते (बृ. ३-४-७)त्याद्यनुपसंहारप्रमाणस्य विद्यमानत्वात् । अत उपासनं युक्तमिति सिद्धम् ॥**

ಆದ್ದರಿಂದ ಉಪಸಂಹಾರವು ಕರ್ತವ್ಯವೇ ಆಗಿದೆ. ಎಲ್ಲ ವಿದ್ಯೆಗಳೂ ಭಗವಂತನ ನಾಮವಾದ ಕಾರಣ ಭಗವದ್ಗುಣಾಭಿಧಾಯಕವಾದ್ದರಿಂದ. ಆ ಗುಣೋಕ್ತಿಗೆ ಬೇರೆ

ಪ್ರಯೋಜನ ಇಲ್ಲವಾದ್ದರಿಂದ ಉಪಸಂಹಾರಪೂರ್ವಕ ಆಧ್ಯಾನವೇ ಪ್ರಯೋಜನ-ವುಳ್ಳದ್ದಾಗಿದೆ.

ಇನ್ನು ಉಪಸಂಹಾರವು ನಿಷ್ಫಲ ಅಲ್ಲ, ಆನಂದಾತಿಶಯರೂಪವಾದ ಫಲ ಇರುವುದರಿಂದ.

ಆದ್ದರಿಂದ 'ಆತ್ಮೇತ್ಯೇವೋಪಾಸೀತ' (ಬೃ. 3-4-7) ಇತ್ಯಾದಿ ಅನುಪಸಂಹಾರ ಪ್ರಮಾಣಗಳು ಇರುವುದರಿಂದ ವಿರಿಂಚನಿಂದ ಇತರರಾದ ದೇವತೆಗಳು ಕೆಲವು ಗುಣಗಳನ್ನು ಉಪಸಂಹಾರ ಮಾಡದೇ ಕೆಲವು ಗುಣಗಳನ್ನು ಉಪಸಂಹಾರ ಮಾಡಬೇಕು. ಆದ್ದರಿಂದ ಉಪಸಂಹಾರವು ಯುಕ್ತವಾಗಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 16

**ಸೂ.ರ.:– एवं सर्वगुणोपसंहारं प्रमाणेन समर्थ्यानुपसंहारं च समर्थयत्सूत्रमुपन्यस्यति ॥**

ಈ ರೀತಿಯಾಗಿ ಸರ್ವಗುಣೋಪಸಂಹಾರವನ್ನು ಪ್ರಮಾಣದಿಂದ ಸಮರ್ಥಿಸಿ, ಅನುಪಸಂಹಾರವನ್ನೂ ಸಮರ್ಥಿಸುವ ಸೂತ್ರವನ್ನು ಹೇಳುತ್ತಾರೆ –

**ॐ आत्मशब्दाच ॐ (३-३-१६)**

**ಸೂತ್ರಾರ್ಥ** :- 'ಆತ್ಮೇತ್ಯೇವೋಪಾಸೀತ' (ಬೃ. 3-4-7) ಎನ್ನುವಲ್ಲಿ ಆತ್ಮಾ ಎನ್ನುವುದು ಭಾವಪ್ರಧಾನವಾಗಿದೆ ಮತ್ತು ಸಾವಧಾರಣವೂ ಆಗಿದೆ. **ಆತ್ಮಶಬ್ದಾತ್** = ಆತ್ಮತ್ವಮಾತ್ರೋಪಾಸನವನ್ನು ವಿಧಾನ ಮಾಡುವ ಶಬ್ದ ಆತ್ಮಶಬ್ದ 'ಆತ್ಮೇತ್ಯೇವೋ-ಪಾಸೀತ' ಎನ್ನುವಲ್ಲಿನ ಆತ್ಮಶಬ್ದವು ತಸ್ಮಾತ್ = ಅಂತಹ ಆತ್ಮಶಬ್ದ ಇರುವುದರಿಂದಾಗಿ, ಗುಣಾಂತರ ವ್ಯಾವೃತ್ತಿಪೂರ್ವಕವಾಗಿ ಆತ್ಮತ್ವೋಪಾಸ್ತಿ ವಿಧಾಯಕ ಶಬ್ದ ಇರುವುದ-ರಿಂದಾಗಿ **ಚ** = ಅನುಪಸಂಹಾರವೂ ಸಿದ್ಧವಾಗುತ್ತದೆ.

**ಸೂ.ರ.:– एवं चोपासनाक्षिप्ताल्पगुणोपसंहारे निर्दिष्टश्रुतेः प्रमाण-त्वात् । अन्यथा गुणान्तरव्यावृत्तिपूर्वकमात्मत्वोपासनस्यैवात्र विधानादसङ्गतेः । न चावधारणस्यान्यथात्वमिति सूत्रेऽयोगव्यवच्छेद-कत्वस्योक्तत्वात्कथमन्ययोगव्यवच्छेदकत्वमुच्यत इति वाच्यम् ।**

**उपसंहारानुपसंहारवद्ब्रह्मादीन् उत्तमाधिकारिणः प्रत्ययोगव्यवच्छेदकत्व-मधमाधिकारिणः प्रत्यन्ययोगव्यवच्छेदकत्वमित्यधिकारिभेदेनाविरोध-कत्वात् । अत उपसंहारानुसंहारयोः कर्तव्यत्वादुपासनं युक्तमिति सिद्धम् ॥**

ಉಪಾಸನಾಕ್ಷಿಪ್ತ ಅಲ್ಪಗುಣೋಪಸಂಹಾರ ವಿಷಯದಲ್ಲಿ ನಿರ್ದಿಷ್ಟಶ್ರುತಿಯು ಪ್ರಮಾಣವಾಗಿರುವುದರಿಂದ, ಅನ್ಯಥಾ ಗುಣಾಂತರವ್ಯಾವೃತ್ತಿಪೂರ್ವಕವಾಗಿ ಆತ್ಮತ್ವೋಪಾಸನವನ್ನೇ ಇಲ್ಲಿ ವಿಧಾನ ಮಾಡಿದ್ದರಿಂದ ಅಸಂಗತಿ ಬರುತ್ತದೆ.

ಹೌದು, ಅವಧಾರಣಸ್ಯ ಅನ್ಯಥಾತ್ವಂ ಎಂಬುದಾಗಿ ಸೂತ್ರದಲ್ಲಿ ಅಯೋಗ-ವ್ಯವಚ್ಛೇದಕತ್ವವನ್ನು ಹೇಳಿದ್ದರಿಂದ, ಪ್ರಕೃತ ಅನ್ಯಯೋಗವ್ಯವಚ್ಛೇದಕತ್ವವನ್ನು ಹೇಗೆ ಹೇಳುತ್ತೀರಿ? ಎಂದು ಶಂಕಿಸುವುದು ಸರಿಯಲ್ಲ.

ಉಪಸಂಹಾರ - ಅನುಪಸಂಹಾರ ಉಳ್ಳ ಬ್ರಹ್ಮಾದಿ ಉತ್ತಮಾಧಿಕಾರಿಗಳನ್ನು ಕುರಿತು ಅಯೋಗವ್ಯವಚ್ಛೇದಕತ್ವ, ಅಧಮಾಧಿಕಾರಿಗಳನ್ನು ಕುರಿತು ಅನ್ಯಯೋಗ-ವ್ಯವಚ್ಛೇದಕತ್ವ ಎಂಬುದಾಗಿ ಅಧಿಕಾರಿಭೇದದಿಂದಾಗಿ ವಿರೋಧ ಬರುವುದಿಲ್ಲ.

ಆದ್ದರಿಂದ ಉಪಸಂಹಾರ - ಅನುಪಸಂಹಾರಗಳು ಕರ್ತವ್ಯವಾದ್ದರಿಂದ ಉಪಾಸನವು ಯುಕ್ತವಾಗಿದೆ ಎಂದು ಸಿದ್ಧವಾಗುತ್ತದೆ.

**ಆಧ್ಯಾನಾಧಿಕರಣವು ಮುಗಿಯಿತು.**

ಅಧಿಕರಣ – 9

# ಆತ್ಮಗೃಹೀತ್ಯಧಿಕರಣ

## ಸಂಗತಿ

**ಸೂ.ರ.:– अत्रोपासनायामानन्दादिचतुर्गुणनियमः समर्थ्यते ।**

ಉಪಾಸನೆಯಲ್ಲಿ ಆನಂದಾದಿ ಚತುರ್ಗುಣನಿಯಮವನ್ನು ಸಮರ್ಥಿಸುತ್ತಾರೆ ಒಂಭತ್ತನೇ ಈ ಆತ್ಮಗೃಹೀತ್ಯಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– नन्वात्मत्वमेव सर्वोपास्यं नानन्दादयश्चत्वारः । आत्मेत्येवेति (बृ.३-४-७.) सावधारणवचनात् । इतरगुणहाने-नात्मत्वमात्रोपासनस्य सुशकत्वात् । शीघ्रेणेश्वरापरोक्ष्यसिद्धिगुण-लाभाच्च । अत आत्मत्वस्यैव सर्वोपास्यत्वादानन्दादयः प्रधानस्येत्युक्त-मयुक्तं चेत्याशङ्कां परिहरत्सूत्रं पठति ॥**

'ಆತ್ಮೇತ್ಯೇವೋಪಾಸೀತ' (ಬೃ. 3–4–7) ಎಂಬುದಾಗಿ ಸಾವಧಾರಣವಚನ ಇರುವುದರಿಂದ ಆತ್ಮತ್ವ ಒಂದೇ ಎಲ್ಲರಿಂದ ಉಪಾಸ್ಯವಾಗಿದೆ. ಹೊರತು ಆನಂದಾದಿ ಚತುರ್ಗುಣಗಳು ಉಪಾಸ್ಯವಾಗಿಲ್ಲ. ಇತರ ಗುಣಗಳನ್ನು ಪರಿತ್ಯಜಿಸಿ ಆತ್ಮತ್ವ-ಮಾತ್ರೋಪಾಸನವು ಸುಶಕವೂ (ಸುಲಭವಾಗಿ ಅನುಷ್ಠೇಯವೂ) ಆಗಿದೆ. ಮತ್ತು ಶೀಘ್ರವಾಗಿ ಈಶ್ವರಾಪರೋಕ್ಷ್ಯಸಿದ್ಧಿ ಗುಣಲಾಭವೂ ಸಿಗುತ್ತದೆ. ಆದ್ದರಿಂದ ಆತ್ಮತ್ವ ಒಂದೇ ಸರ್ವೋಪಾಸ್ಯವಾದ್ದರಿಂದ 'ಆನಂದಾದಯಃ ಪ್ರಧಾನಸ್ಯ' ಎಂದು ಹೇಳಿದ್ದು ಯುಕ್ತವಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದಕ್ಕೆ ಪರಿಹಾರ ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ आत्मगृहीतिरितरवदुत्तरात् ॐ (३-३-१७)**

**ಸೂತ್ರಾರ್ಥ** :- ಯತಃ = ಯಾವ ಕಾರಣ, ಇತರವತ್ = ಸತ್ಯಜ್ಞಾನಾದಿ ವಾಕ್ಯದಲ್ಲಿ (ತೈ. 2–1) ಸತ್ಯಾದಿಪದಗಳಿಂದ ಇತರ ಗುಣಗಳನ್ನು ಗ್ರಹಿಸುವಂತೆ,

**ಆತ್ಮಗೃಹೀತಿಃ** = 'ಆತ್ಮೇತ್ಯೇವೋಪಾಸೀತ' ಎಂಬ ವಾಕ್ಯದಲ್ಲಿಯೂ ಸಹ ಆತ್ಮಶಬ್ದದಿಂದ ನಾಲ್ಕು ಗುಣಗಳ ಗ್ರಹಣವು ಸಂಭವಿಸುತ್ತದೆ. **ಕುತಃ** = ಯಾಕೆ? **ಉತ್ತರಾತ್** = 'ಅತ್ರ ಹ್ಯೇತೇ' (ಬೃ.3-4-7) ಎಂಬ ಉತ್ತರವಾಕ್ಯ ಇರುವುದರಿಂದ. **ಅತೋ ನ ಚತುರ್ಗುಣೋಪಾಸ್ತುಕ್ತೇಸ್ತದ್ವಿರೋಧಃ** = ಆದ್ದರಿಂದ ಚತುರ್ಗುಣೋಪಾಸ್ತುಕ್ತಿಗೆ ಅದರ ವಿರೋಧ ಬರುವುದಿಲ್ಲ.

## ಸಿದ್ಧಾಂತ

**ಸೂ.ರ.:– एवं चानन्दादयश्चत्वारोऽप्युपास्या एव । आत्मशब्दस्य सत्यादिशब्दवदत्र ह्येते सर्व इत्युत्तरवाक्यबलाद्बह्वर्थकत्वेनानन्दाद्यभिधायकत्वात् । अतो विरोधाभावादुक्तं युक्तमिति सिद्धम् ॥**

ಆನಂದಾದಿ ನಾಲ್ಕು ಗುಣಗಳೂ ಉಪಾಸ್ಯವೇ ಆಗಿವೆ. ಆತ್ಮಶಬ್ದವು ಸತ್ಯಾದಿ-ಶಬ್ದದಂತೆ 'ಅತ್ರ ಹ್ಯೇತೇ ಸರ್ವ ಏಕೀಭವಂತಿ' (ಬೃ.ಉ. 3-4-7) ಎಂಬ ಉತ್ತರವಾಕ್ಯಬಲದಿಂದಾಗಿ ಬಹ್ವರ್ಥಕವಾಗಿರುವುದರಿಂದ ಆನಂದಾದ್ಯಭಿಧಾಯಕ-ವಾಗಿದೆ. (ಆನಂದಾದಿಗಳನ್ನೂ ತಿಳಿಸಿಕೊಡುತ್ತದೆ.)

ಆದ್ದರಿಂದ ವಿರೋಧ ಇಲ್ಲದ ಕಾರಣ 'ಆನಂದಾದಯಃ ಪ್ರಧಾನಸ್ಯ' ಎಂಬುದಾಗಿ ಹಿಂದೆ ಹೇಳಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

**ಆತ್ಮಗೃಹೀತ್ಯಧಿಕರಣವು ಮುಗಿಯಿತು.**

ಅಧಿಕರಣ - 10

## ಅನ್ವಯಾಧಿಕರಣ

### ಸಂಗತಿ

**ಸೂ.ರ.:- अत्रात्मशब्दस्य पूर्वोक्तमनुपसंहारमानत्वमाक्षिप्य समाधीयते ।**

ಆತ್ಮಶಬ್ದಕ್ಕೆ ಹಿಂದೆ ಹೇಳಿದ ಅನುಪಸಂಹಾರಮಾನತ್ವವನ್ನು ಆಕ್ಷೇಪಿಸಿಕೊಂಡು ಸಮಾಧಾನ ಹೇಳುತ್ತಾರೆ ಹತ್ತನೇ ಈ ಅನ್ವಯಾಧಿಕರಣದಲ್ಲಿ.

### ಪೂರ್ವಪಕ್ಷ

**ಸೂ.ರ.:- ननु आत्मशब्दोक्तगुणाः न सर्वोपास्याः । आप्तव्याप्तेः इति तस्य सर्वगुणाभिधायकत्वोक्तेः । ततश्च नास्यानुपसंहारप्रमाणत्व-मिति प्राप्ते सूत्रमाह ॥**

ಆತ್ಮಶಬ್ದವು ಸರ್ವಗುಣಾಭಿಧಾಯಕವಾದ್ದರಿಂದ ಅಸಾಧಾರಣವಾಗಿ ಆತ್ಮಶಬ್ದೋಕ್ತವಾದ ಎಲ್ಲ ಗುಣಗಳೂ ಉಪಾಸ್ಯವಾಗಿಲ್ಲ. ಆದ್ದರಿಂದ ಈ ಆತ್ಮಶಬ್ದವು ಅನುಸಂಹಾರ ವಿಷಯದಲ್ಲಿ ಪ್ರಮಾಣವಾಗುವುದಿಲ್ಲ ಎಂದು ಪೂರ್ವಪಕ್ಷ ಬಂದರೆ, ಸಮಾಧಾನ ಹೇಳಿ ಸಿದ್ಧಾಂತ ಹೇಳಲು ಸೂತ್ರ ಹೇಳುತ್ತಾರೆ -

### ॐ अन्वयादिति चेत्स्यादवधारणात् ॐ (३-३-१८)

**ಸೂತ್ರಾರ್ಥ** :- ನನ್ವಾತ್ಮೇತಿ ವಾಕ್ಯಸ್ಯಾನುಪಸಂಹಾರಮಾನತ್ವಮಯುಕ್ತಂ = 'ಆತ್ಮೇತ್ಯೇವೋಪಾಸೀತ' ಎಂಬ ವಾಕ್ಯವು ಅನುಪಸಂಹಾರ ವಿಷಯದಲ್ಲಿ ಪ್ರಮಾಣ-ವಾಗಿದೆ ಎಂದು ಹೇಳುವುದು ಯುಕ್ತವಲ್ಲ. ಕುತಃ = ಯಾಕೆ? **ಅನ್ವಯಾತ್** = ಆತ್ಮಶಬ್ದದಲ್ಲಿ ಎಲ್ಲ ಗುಣಗಳ ಅನ್ವಯವಾಗುವುದರಿಂದ **ಇತಿ ಚೇತ್** = ಎಂದು ಶಂಕೆ ಬಂದರೆ, **ಸ್ಯಾತ್** = ಪರರು ಆಕ್ಷೇಪಿಸಿದಂತೆಯೇ ಆಗುತ್ತಿತ್ತು. ತಥಾಪಿ ನಾನುಪತ್ತಿಃ = ಆದರೂ ಅನುಪಪತ್ತಿ ಏನಿಲ್ಲ. ಕುತಃ = ಯಾಕೆ? **ಅವಧಾರಣಾತ್** = 'ಆತ್ಮೇತ್ಯೇವ' ಎಂಬುದಾಗಿ ಅವಧಾರಣ ಇದ್ದದ್ದರಿಂದ, ನ ಚ ನಿರ್ಣಯಃ = ನಿರ್ಣಯ-

ವಾಗುವುದಿಲ್ಲ ಎನ್ನುವುದು ಸರಿಯಲ್ಲ, ಆತ್ಮಶಬ್ದೋ ಹಿ ಬ್ರಹ್ಮಾದೀನ್ಪ್ರತ್ಯೇವ ಸರ್ವಗುಣಾನ್ವದತಿ ನಾನ್ಯಾನ್ಪ್ರತೀತಿ ನಿರ್ಣಯೋಪಪತ್ತೇಃ = ಆತ್ಮಶಬ್ದವು ಬ್ರಹ್ಮಾದಿ-ಗಳನ್ನು ಕುರಿತು ಮಾತ್ರ ಎಲ್ಲ ಗುಣಗಳನ್ನು ತಿಳಿಸುತ್ತದೆ, ಹೊರತು ಇತರರನ್ನು ಕುರಿತು ತಿಳಿಸುವುದಿಲ್ಲ ಎಂದು ನಿರ್ಣಯ ಕೂಡುತ್ತದೆ.

## ಸಿದ್ಧಾಂತ

**ಸೂ.ರ.:– एवं च सत्यमात्मशब्दः सर्वगुणाभिधायकः । तथाऽपि न सर्वान्प्रति । किं नाम तत्तद्योग्यतानुसारेण तांस्तान्प्रति गुणाभि-धायकः । ततश्चात्मशब्देन यस्य यावन्तो गुणाः प्रतिभासन्ते तेन तावन्तो गुणा उपास्या इत्यात्मशब्दोक्तगुणानां सर्वोपास्यत्वादुक्तं युक्तमिति सिद्धम् ॥**

ಆತ್ಮಶಬ್ದವು ಸರ್ವಗುಣಾಭಿಧಾಯಕವಾಗಿದೆ ಎನ್ನುವುದು ಸತ್ಯವೇ. ತಥಾಪಿ ಅದು ಎಲ್ಲರನ್ನೂ ಕುರಿತು ಅಲ್ಲ, ಕಿಂ ನಾಮ ತತ್ತದ್ಯೋಗ್ಯತಾನುಸಾರವಾಗಿ (ಅವರವರ ಯೋಗ್ಯತಾನುಸಾರವಾಗಿ) ಅವರವರನ್ನು ಕುರಿತು ಗುಣಾಭಿಧಾಯಕ-ವಾಗಿದೆ. ಆದ್ದರಿಂದ ಯಾವ ವ್ಯಕ್ತಿಗೆ ಆತ್ಮಶಬ್ದದಿಂದ ಎಷ್ಟು ಗುಣಗಳು ತೋರು-ತ್ತವೆಯೋ ಅವನು ಅಷ್ಟು ಗುಣಗಳನ್ನು ಉಪಾಸನೆ ಮಾಡಬೇಕು, ಹಾಗಾಗಿ ಆತ್ಮಶಬ್ದೋಕ್ತವಾದ ಗುಣಗಳು ಎಲ್ಲರಿಂದಲೂ ಉಪಾಸ್ಯವೇ ಆದ್ದರಿಂದ ನಾವು ಹೇಳಿದ್ದು ಯುಕ್ತವಾಗಿದೆ ಎಂದು ಸಿದ್ಧವಾಗುತ್ತದೆ.

ಅನ್ವಯಾಧಿಕರಣವು ಮುಗಿಯಿತು.

ಅಧಿಕರಣ – 11

# ಕಾರ್ಯಾಧಿಕರಣ

## ಸಂಗತಿ

**ಸೂ.ರ.:– अत्रालौकिकगुणानामेवोपसंहार्यत्वं समर्थ्यते ।**

ಅಲೌಕಿಕಗುಣಗಳಿಗೇನೇ ಉಪಸಂಹಾರ್ಯತ್ವ ಇದೆ ಎಂದು ಸಮರ್ಥಿಸುತ್ತಾರೆ ಹನ್ನೊಂದನೇ ಈ ಕಾರ್ಯಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु भगवद्गुणा लौकिकत्वेनैव ध्यातव्याः । अन्यथाऽलौकिकानामननुभूतत्वात् वासनाभावेन स्मृतिरूपध्यानाभावाप्रसङ्गात् । कर्तव्यं च ध्यानम् । अतो लौकिका एव भगवद्गुणा ध्यातव्या इति प्राप्ते सूत्रमाह ॥**

ಲೌಕಿಕವಾದ ಗುಣಗಳೇ (ಭಗವದ್ಗುಣಗಳೇ) ಧ್ಯಾತವ್ಯವಾಗಿವೆ. ಅನ್ಯಥಾ ಅಲೌಕಿಕವಾದ ಗುಣಗಳು ಅನುಭೂತವಾಗದ ಕಾರಣ ವಾಸನಾ ಇಲ್ಲದ ನಿಮಿತ್ತ ಸ್ಮೃತಿರೂಪಧ್ಯಾನ ಇಲ್ಲದೇ ಹೋಗಬೇಕಾಗುತ್ತದೆ. ಈಗಲಾದರೋ ಧ್ಯಾನವು ಕರ್ತವ್ಯವಾಗಿದೆ. ಆದ್ದರಿಂದ ಲೌಕಿಕವಾದ ಭಗವದ್ಗುಣಗಳೇ ಉಪಾಸ್ಯವಾಗಿವೆ ಎಂದು ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ कार्याख्यानादपूर्वम् ॐ (३-३-१९)**

**ಸೂತ್ರಾರ್ಥ** :- **ಕಾರ್ಯಾಖ್ಯಾನಾತ್** = ಧ್ಯಾನಕಾರ್ಯವಾದ ಮೋಕ್ಷಕ್ಕೆ ಅಲೌಕಿಕತ್ವವನ್ನು ಹೇಳಿದ್ದರಿಂದ **ಅಪೂರ್ವಂ** = ಅಲೌಕಿಕವಾದ ಗುಣಜಾತವು (ಗುಣಸಮೂಹವು) ಧ್ಯಾತವ್ಯವಾಗಿದೆ.

## ಸಿದ್ಧಾಂತ

ಸೂ.ರ.:– एवं चालौकिका एव भगवद्गुणा ध्यातव्याः । तद्ध्यान-

**कार्यस्य मोक्षस्यालौकिकत्वात् । न चालौकिकगुणाप्रतीतेस्तद्ध्याना-भावप्रसङ्गः । लक्षणमुखेनेन्द्रादिरिवोपदेशेन तत्प्रतीत्युपपत्तेः । अतोऽ-लौकिका एव ध्यातव्या इति युक्तं पूर्वोक्तं भगवद्गुणानामलौकिकत्व-मिति सिद्धम् ॥**

ಧ್ಯಾನಕಾರ್ಯವಾದ ಮೋಕ್ಷವು ಅಲೌಕಿಕವಾದ್ದರಿಂದ ಅಲೌಕಿಕವಾದ ಭಗವ-ದ್ಗುಣಗಳೇ ಧ್ಯಾತವ್ಯವಾಗಿವೆ.

ಅಲೌಕಿಕಗುಣಗಳು ಅನುಭೂತವಾಗದ ಕಾರಣ ಅವುಗಳ ಧ್ಯಾನ ಇಲ್ಲದೇ ಹೋಗಬೇಕಾಗುತ್ತದೆಯಲ್ಲ? ಎಂದರೆ, ಅದು ಸರಿಯಲ್ಲ. ಇಂದ್ರಾದಿಗಳಂತೆ ಲಕ್ಷಣ-ಮುಖವಾಗಿ ಉಪದೇಶದ ಮೂಲಕವಾಗಿ ಅಲೌಕಿಕಗುಣಗಳ ಪ್ರತೀತಿಯು ಉಪಪನ್ನವಾಗುತ್ತದೆ.

ಆದ್ದರಿಂದ ಅಲೌಕಿಕವಾದ ಗುಣಗಳೇ ಧ್ಯಾತವ್ಯವಾಗಿವೆಯಾದ್ದರಿಂದ ಭಗವ-ದ್ಗುಣಗಳಿಗೆ ಹಿಂದೆ ಹೇಳಿದ ಅಲೌಕಿಕತ್ವವು ಯುಕ್ತವಾಗಿದೆ ಎಂದು ಸಿದ್ಧವಾಗುತ್ತದೆ.

**ಕಾರ್ಯಾಧಿಕರಣವು ಮುಗಿಯಿತು**

ಅಧಿಕರಣ - 12

# ಸಮಾನಾಧಿಕರಣ

## ಸಂಗತಿ

ಸೂ.ರ.:- अत्रोपासनस्य स्वसदृशफलप्रदत्वसिद्ध्यर्थं ब्रह्मणी-ब्रह्मणोरुपासनस्य समविषमत्वं समर्थ्यते ।

ಉಪಾಸನೆಗೆ ಸ್ವಸದೃಶಫಲಪ್ರದತ್ವ ಸಿದ್ಧಿಗಾಗಿ ಬ್ರಹ್ಮಾಣೀ-ಬ್ರಹ್ಮರ ಉಪಾಸನೆಗೆ ಸಮವಿಷಮತ್ವವನ್ನು ಸಮರ್ಥಿಸುತ್ತಾರೆ ಹನ್ನೆರಡನೇ ಈ ಸಮಾನಾಧಿಕರಣದಲ್ಲಿ.

## ಪೂರ್ವಪಕ್ಷ

ಸೂ.ರ.:- ननु भगवदुपासनं न स्वानुसारिफलप्रदस्वभावम् । ब्रह्माणीब्रह्मोपासने स्वानुसारिफलजनकत्वाभावात् । न हि यज्जातीयं यज्जनकं न भवति तज्जातीयं तज्जनकस्वभाववदिति शक्यते वक्तुम् । वेत्रबीजस्य कदलीकाण्डजननस्वाभाव्यापातात् । न च हेतोः समुचितदेशसिद्ध्यभावः शङ्कनीयः । तयोर्ह्युपासनं समं विषमं वा भवेत् । न तु समविषमम् । विरुद्धत्वात् । फलं तु समविषमम् । स्थानसाम्येऽपि गुणतारतम्यसद्भावात् । अत उपासनानुसारिफल-नियमाभावादितरे त्वर्थसामान्यादित्युक्तमयुक्तमिति प्राप्ते सूत्रितम् ॥

ಭಗವದುಪಾಸನೆಯು ಸ್ವಾನುಸಾರಿಫಲಪ್ರದಸ್ವಭಾವ ಉಳ್ಳದ್ದಲ್ಲ. ಕಾರಣ ಬ್ರಹ್ಮಾಣೀ-ಬ್ರಹ್ಮರ ಉಪಾಸನೆಯು ಸ್ವಾನುಸಾರಿಫಲಜನಕವಾಗಿಲ್ಲವಾದ್ದರಿಂದ.

ಯಜ್ಜಾತೀಯವಾದದ್ದು ಯಾವುದಕ್ಕೆ ಜನಕವಾಗುವುದಿಲ್ಲವೋ ಆ ಜಾತೀಯ-ವಾದದ್ದು ತಜ್ಜನಕಸ್ವಭಾವವುಳ್ಳದ್ದು ಎಂದು ಹೇಳಲು ಶಕ್ಯವಿಲ್ಲ. ಹಾಗೆ ಹೇಳುವುದಾದರೆ ವೇತ್ರಬೀಜಕ್ಕೆ ಕದಲೀಕಾಂಡ ಜನನಸ್ವಭಾವತ್ವ ಬರಬೇಕಾದೀತು.

ಹೇತುವಿಗೆ ಸಮುಚಿತದೇಶಸಿದ್ಧಿ ಇಲ್ಲ ಎಂದು ಶಂಕಿಸುವುದು ಸರಿಯಲ್ಲ. ಬ್ರಹ್ಮಾಣೀ-ಬ್ರಹ್ಮರ ಉಪಾಸನವು ಸಮ ಅಥವಾ ವಿಷಮ ಆಗಬಹುದು. ಆದರೆ ಸಮವಿಷಮ ಆಗಲು ಸಾಧ್ಯವಿಲ್ಲ. ವಿರುದ್ಧವಾದ್ದರಿಂದ. ಆದರೆ ಫಲವು ಮಾತ್ರ

ಸಮವಿಷಮವಾಗುತ್ತದೆ. ಕಾರಣ ಸ್ಥಾನಸಾಮ್ಯ ಇದ್ದರೂ ಸಹ ಗುಣತಾರತಮ್ಯ ಇರುವುದರಿಂದ.

ಆದ್ದರಿಂದ ಉಪಾಸನಾನುಸಾರಿ ಫಲನಿಯಮ ಇಲ್ಲವಾದ್ದರಿಂದ 'ಇತರೇ ತ್ವರ್ಥಸಾಮಾನ್ಯಾತ್' ಎಂದು ಹೇಳಿದ್ದು ಯುಕ್ತವಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

## ॐ समान एवं चाभेदात् ॐ (३-३-२०)

**ಸೂತ್ರಾರ್ಥ** :- ಏವಂ ಚ (ಏವಮಪಿ) = ಬ್ರಹ್ಮಗುಣಗಳು ಅಲೌಕಿಕವಾಗಿದ್ದರೂ ಸಹ ವಾಣ್ಯಾಃ = ಬ್ರಹ್ಮಾಣಿಯ **ಸಮಾನೇ** = ಯೋಗ್ಯಗುಣವಿಷಯದಲ್ಲಿಯೇ ಉಪಸಂಹಾರ ಕರ್ತವ್ಯವಾಗಿದೆ. ನ ತು ಅಯೋಗ್ಯಕ್ರಿಯಾಸು = ಹೊರತು ಅಯೋಗ್ಯವಾದ ಕ್ರಿಯಾಗಳಲ್ಲಿ ಅಲ್ಲ. ತತ್ರ ತು **ಅಭೇದಾತ್** = ಕಾದಾಚಿತ್ಕವಾದ (ಯಾವಾಗಲಾದರೊಮ್ಮೆ ಅಭಿವ್ಯಕ್ತವಾಗುವ) ತ್ರಿವಿಕ್ರಮತ್ವಾದಿ ಕ್ರಿಯೆಗಳು ಭಗವಂತನ ನಿತ್ಯವಿಕ್ರಾಂತ್ಯಾದಿ ಕ್ರಿಯೆಗಳಲ್ಲಿ ಅಂತರ್ಭಾವವಾಗುವುದರಿಂದ.

### ಸಿದ್ಧಾಂತ

**ಸೂ.ರ.:– एवं चोपासनं स्वानुसारिफलप्रदमेव । ब्रह्माणी-ब्रह्मणोरुपासनस्य समविषमत्वेन तयोरुपासनानुसारिफलस्यैव भावात् । तथा च यथोपासनं मुक्तौ फलसद्भावादुक्तं युक्तमिति सिद्धम् ॥**

ಬ್ರಹ್ಮಾಣೀ-ಬ್ರಹ್ಮರ ಉಪಾಸನೆಯು ಸಮವಿಷಮವೇ ಆದ್ದರಿಂದ ಉಪಾಸನಾನುಸಾರಿ ಫಲವೇ ಇರುವುದರಿಂದ ಉಪಾಸನವು ಸ್ವಾನುಸಾರಿಫಲಪ್ರದವೇ ಆಗಿದೆ.

ಆದ್ದರಿಂದ ಉಪಾಸನೆಗೆ ತಕ್ಕಂತೆ ಮೋಕ್ಷದಲ್ಲಿ ಫಲ ಇರುವುದರಿಂದ 'ಇತರೇ ತ್ವರ್ಥಸಾಮಾನ್ಯಾತ್' ಎಂದು ಹೇಳಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

### ಸೂತ್ರ - 21

**ಸೂ.ರ.:– ननु न विरिञ्चस्यापि सदा त्रिविक्रमत्वादिविशेषक्रियोपसंहारो युज्यते । तासामनित्यत्वेन ध्यानकालेऽभावादित्याशङ्कां पराकुर्वत्सूत्रमाह ॥**

ವಿರಿಂಚನಿಗೂ ಸಹ ತ್ರಿವಿಕ್ರಮತ್ವಾದಿ ವಿಶೇಷಕ್ರಿಯೋಪಸಂಹಾರವು ಸದಾ ಕೂಡುವುದಿಲ್ಲ, ಕಾರಣ ಅವುಗಳು ಅನಿತ್ಯವಾದ್ದರಿಂದ ಧ್ಯಾನಕಾಲದಲ್ಲಿ ಇರುವುದಿಲ್ಲ-ವಾದ್ದರಿಂದ ಎಂಬುದಾಗಿ ಆಕ್ಷೇಪ ಬಂದರೆ, ಅದಕ್ಕೆ ಸಮಾಧಾನ ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

## ॐ सम्बन्धादेवमन्यत्रापि ॐ (३-३-२१)

**ಸೂತ್ರಾರ್ಥ** :- ಹಿರಣ್ಯಗರ್ಭಸ್ಯ ತು = ಹಿರಣ್ಯಗರ್ಭನಿಗಾದರೂ ಸಹ **ಅನ್ಯತ್ರಾಪಿ** = ತ್ರಿವಿಕ್ರಮತ್ವಾದಿ ಕ್ರಿಯಾವಿಶೇಷದಲ್ಲಿಯೂ ಸಹ ಏವಂ = ಸರ್ವದಾ ಉಪಸಂಹಾರವು ಕೂಡುತ್ತದೆ. ಕುತಃ = ಯಾಕೆ? **ಸಂಬಂಧಾತ್** = ಕ್ರಿಯೆಗಳಿಗೆ ಬ್ರಹ್ಮನಿಂದ ತಾದಾತ್ಮ್ಯರೂಪ ಸಂಬಂಧ ಇರುವುದರಿಂದ ನಿತ್ಯವಾದ್ದರಿಂದ.

**ಸೂ.ರ.:– एवं च ब्रह्माणी हि ब्रह्मवत्सर्वान्गुणानुपसंहृत्येवोपास्ते। त्रिविक्रमादींस्तु नित्यविक्रान्त्यादिक्रियास्वन्तर्भाव्यैव न तु पृथक् । योग्यताविरहात् । ब्रह्मा तु त्रिविक्रमादींस्तु सदोपसंहृत्योपास्ते। त्रिविक्रमत्वादिरपि ब्रह्मस्वरूपत्वान्नित्य एव । अतो यथोपासनं मुक्तौ फलसद्भावादुक्तं युक्तमिति सिद्धम् ॥**

ವಾಣಿಯು ಬ್ರಹ್ಮನಂತೆ ಎಲ್ಲ ಗುಣಗಳನ್ನು ಉಪಸಂಹಾರ ಮಾಡಿಕೊಂಡೇ ಉಪಾಸನೆ ಮಾಡುತ್ತಾಳೆ. ತ್ರಿವಿಕ್ರಮಾದಿಗಳನ್ನು ಆದರೂ ನಿತ್ಯ ವಿಕ್ರಾಂತ್ಯಾದಿಕ್ರಿಯೆ-ಗಳಲ್ಲಿ ಅಂತರ್ಭಾವ ಮಾಡಿಕೊಂಡೇ ಉಪಾಸಿಸುತ್ತಾಳೆ. ಹೊರತು ಪ್ರತ್ಯೇಕವಾಗಿ ಅಲ್ಲ, ಕಾರಣ ಪ್ರತ್ಯೇಕವಾಗಿ ಉಪಾಸಿಸಲು ಯೋಗ್ಯತೆ ಇಲ್ಲದ ಕಾರಣ.

ಇನ್ನು ಹಿರಣ್ಯಗರ್ಭನಾದರೂ ತ್ರಿವಿಕ್ರಮಾದಿಗಳನ್ನು ಸದಾ ಉಪಸಂಹಾರ ಮಾಡಿಕೊಂಡು ಉಪಾಸಿಸುತ್ತಾನೆ. ತ್ರಿವಿಕ್ರಮತ್ವಾದಿಗಳು ಅನಿತ್ಯವಾಗಿವೆಯಲ್ಲ? ಎಂದರೆ, ಅದು ಸರಿಯಲ್ಲ, ಕಾರಣ ತ್ರಿವಿಕ್ರಮತ್ವಾದಿಗಳು ಬ್ರಹ್ಮಸ್ವರೂಪವಾದ್ದರಿಂದ ನಿತ್ಯವೇ ಆಗಿವೆ.

ಆದ್ದರಿಂದ ಉಪಾಸನೆಗೆ ಅನುಸಾರವಾಗಿ ಮುಕ್ತಿಯಲ್ಲಿ ಫಲ ಇರುವುದರಿಂದ 'ಇತರೇ ತ್ವರ್ಥಸಾಮಾನ್ಯಾತ್' ಎಂದು ಹೇಳಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಸಮಾನಾಧಿಕರಣವು ಮುಗಿಯಿತು.

ಅಧಿಕರಣ – 13

# ನ ವಾಧಿಕರಣ

## ಸಂಗತಿ

**ಸೂ.ರ.:– अत्रात्मशब्दोक्तगुणोपासनस्य सर्वैः कर्तव्यत्वं समर्थ्यते ।**

ಆತ್ಮಶಬ್ದೋಕ್ತವಾದ ಗುಣಗಳ ಉಪಾಸನೆಯು ಎಲ್ಲರಿಂದಲೂ ಕರ್ತವ್ಯವಾಗಿದೆ ಎಂದು ಸಮರ್ಥಿಸುತ್ತಾರೆ ಹದಿಮೂರನೇ ಈ ನ ವಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु नात्मेत्येवोपासीतेति विधिः सर्वाधिकारिसाधारणः। अनन्तगुणाभिधायकात्मशब्दघटितत्वात् । न चात्मशब्दस्योत्तमान्प्रति सर्वगुणाभिधायकत्वेऽपि तदितरान्प्रति तदभावेन तत्तद्योग्यगुणाभिधायकत्वादिति सर्वसाधारणमुपपन्नमिति वाच्यम् । असम्भवात् । न हि शब्दो बुद्धिमान् । येनोत्तमत्वादधिकारिविशेषं प्रति सर्वगुणान्बोधयित्वाऽनुत्तमत्वादपरं प्रत्यल्पानेव बोधयतीति स्यात् । ततश्चानुपसंहारप्रमाणत्वोक्तिरयुक्तेति प्राप्ते सूत्रितम् ॥**

'ಆತ್ಮೇತ್ಯೇವೋಪಾಸೀತ' ಎಂಬ ವಿಧಿಯು ಸರ್ವಾಧಿಕಾರಿಸಾಧಾರಣವಾದದ್ದಲ್ಲ. ಕಾರಣ – ಅನಂತಗುಣಾಭಿಧಾಯಕವಾದ ಆತ್ಮಶಬ್ದದಿಂದ ಘಟಿತವಾದ್ದರಿಂದ.

ಆತ್ಮಶಬ್ದವು ಉತ್ತಮರನ್ನು ಕುರಿತು ಸರ್ವಗುಣಾಭಿಧಾಯಕವಾಗಿದ್ದರೂ ಸಹ ಇತರರನ್ನು ಕುರಿತು ಸರ್ವಗುಣಾಭಿಧಾಯಕವಾಗದ ಕಾರಣ ಇತರರನ್ನು ಕುರಿತು ಅದು ತತ್ತದ್ಯೋಗ್ಯಗುಣಾಭಿಧಾಯಕವಾಗಿದೆ. ಹಾಗಾಗಿ ಸರ್ವಸಾಧಾರಣ ಎನ್ನುವುದು ಉಪಪನ್ನವಾಗುತ್ತದೆ ಎಂಬುದಾಗಿ ಆಕ್ಷೇಪಿಸುವುದು ಸರಿಯಲ್ಲ. ಕಾರಣ ಅದು ಅಸಂಭಾವಿತ. ಏಕೆಂದರೆ, ಶಬ್ದವು ಬುದ್ಧಿ ಉಳ್ಳದ್ದಲ್ಲ. ಒಂದುವೇಳೆ ಶಬ್ದವು ಬುದ್ಧಿ ಉಳ್ಳದ್ದಾಗಿದ್ದರೆ ಆಗ ಉತ್ತಮಾಧಿಕಾರಿ ವಿಶೇಷರನ್ನು ಕುರಿತು ಎಲ್ಲ ಗುಣಗಳನ್ನು ತಿಳಿಸಿ, ಉತ್ತಮರಾಗದ ಇತರರನ್ನು ಕುರಿತು ಅಲ್ಪವಾದ ಗುಣಗಳನ್ನು ಮಾತ್ರ

ತಿಳಿಸುತ್ತದೆ ಎನ್ನುವುದು ಸರಿಯಾಗುತ್ತಿತ್ತು. ಆದರೆ ಪ್ರಕೃತ ಶಬ್ದವು ಬುದ್ಧಿ ಉಳ್ಳದ್ದಾಗಿಲ್ಲವಾದ್ದರಿಂದ ಹಾಗೆ ಹೇಳಲು ಬರುವುದಿಲ್ಲ.

ಆದ್ದರಿಂದ ಆತ್ಮಶಬ್ದಕ್ಕೆ ಅನುಪಸಂಹಾರ ಪ್ರಮಾಣತ್ವವನ್ನು ಹೇಳಿದ್ದು ಯುಕ್ತವಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

## ॐ न वा विशेषात् ॐ (३-३-२२)

**ಸೂತ್ರಾರ್ಥ** :- ಆತ್ಮೇತಿ ವಾಕ್ಯಸ್ಥಾತ್ಮಶಬ್ದೇನ ಸರ್ವಗುಣಾನಾಂ ಗ್ರಹಣಂ = 'ಆತ್ಮೇತ್ಯೇವೋಪಾಸೀತ' ಎಂಬ ವಾಕ್ಯದಲ್ಲಿರುವ ಆತ್ಮಶಬ್ದದಿಂದ ಎಲ್ಲ ಗುಣಗಳನ್ನು ಸ್ವೀಕರಿಸುವುದು ನ ವಾ ಅಭ್ಯುಪಗಮ್ಯತೇ = ಅಂಗೀಕರಿಸಲ್ಪಡುವುದಿಲ್ಲ. ಕುತಃ = ಯಾಕೆ? **ವಿಶೇಷಾತ್** = ಅಧಿಕಾರಿಯೋಗ್ಯತಾವಿಶೇಷವನ್ನು ಅಪೇಕ್ಷಿಸಿ ಆತ್ಮಶಬ್ದವು ತದ್ಯೋಗ್ಯಗುಣಾಭಿಧಾಯಕವಾಗಿದೆಯಾದ್ದರಿಂದ.

## ಸಿದ್ಧಾಂತ

**ಸೂ.ರ.:– एवं च विधिरयं सर्वाधिकारिसाधारणः । तांस्तान्प्रति तत्तद्योग्यगुणाभिधायकत्वात् । न चासम्भवः । अधिकारमपेक्ष्य तत्त्व-मस्यादिवाक्यस्य (छां.६-८-७.) प्रमाऽप्रमाजनकत्ववत्सर्वगुणा-भिधायकस्याप्यात्मशब्दस्य तद्योग्यतामपेक्ष्यैव गुणबोधकत्वसम्भवात् । तस्मादात्मशब्दोक्तसर्वगुणानां सर्वोपास्यत्वमिति सिद्धम् ॥**

'ಆತ್ಮೇತ್ಯೇವೋಪಾಸೀತ' ಎಂಬ ಈ ವಿಧಿಯು ಸರ್ವಾಧಿಕಾರಿಸಾಧಾರಣ-ವಾದದ್ದೇ. ಕಾರಣ - ಆತ್ಮಶಬ್ದವು ಆ ಆ ಅಧಿಕಾರಿಗಳನ್ನು ಕುರಿತು ತತ್ತದ್ಯೋಗ್ಯ-ಗುಣಾಭಿ- ಧಾಯಕವಾದ್ದರಿಂದ.

ಇದು ಅಸಂಭಾವಿತ ಎಂದು ಹಿಂದೆ ಶಂಕಿಸಿದೆಯಲ್ಲ? ಎಂದರೆ, ಅದು ಸರಿಯಲ್ಲ. ಅಧಿಕಾರವನ್ನು ಅಪೇಕ್ಷಿಸಿ 'ತತ್ವಮಸಿ' (ಛಾಂ. 6-8-7) ಇತ್ಯಾದಿ ವಾಕ್ಯಗಳಿಗೆ ಪ್ರಮಾಜನಕತ್ವ - ಅಪ್ರಮಾಜನಕತ್ವ ಇರುವಂತೆ, ಆತ್ಮಶಬ್ದವು ಸರ್ವಗುಣಾಭಿಧಾಯಕವಾಗಿದ್ದರೂ ಸಹ ಅವರವರ ಯೋಗ್ಯತೆಯನ್ನು ಅಪೇಕ್ಷಿಸಿಯೇ ಗುಣಬೋಧಕವಾಗಬಹುದಾಗಿದೆ.

ಆದ್ದರಿಂದ ಆತ್ಮಶಬ್ದೋಕ್ತವಾದ ಸರ್ವಗುಣಗಳೂ ಎಲ್ಲರಿಂದ ಉಪಾಸ್ಯವಾಗಿವೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 23

**ಸೂ.ರ.:- ननु न्यूनाधिकोक्तिसम्भवेन चतुर्गुणोपासकस्याप्यात्मशब्दात् पञ्चगुणानामप्येवं बोधसम्भवेन प्रातिस्विकनियमायोगात् उपासनानुपपत्तिरिति प्राप्ते, विशेषात् इति युक्तिसिद्धार्थं श्रुत्याऽपि समर्थयत्सूत्रं पठति ।**

**ಅನುವಾದ :-** ಆತ್ಮಶಬ್ದವು ಕೆಲವೊಮ್ಮೆ ಕಡಿಮೆಗುಣಗಳನ್ನು, ಹಲವೊಮ್ಮೆ ಅಧಿಕಗುಣಗಳನ್ನು ಅಭಿಧಾನ ಮಾಡುವುದರಿಂದ ಚತುರ್ಗುಣೋಪಾಸಕನಾದವನಿಗೂ ಆತ್ಮಶಬ್ದದಿಂದ ಐದುಗುಣಗಳ ಬೋಧವು ಸಂಭಾವಿತವಾದ್ದರಿಂದ ಪ್ರಾತಿಸ್ವಿಕ-ನಿಯಮವು ಕೂಡುವುದಿಲ್ಲವಾದ್ದರಿಂದ ಉಪಾಸನೆಯು ಅನುಪಪನ್ನವಾಗುತ್ತದೆ ಎಂಬುದಾಗಿ ಆಕ್ಷೇಪ ಬಂದರೆ, ವಿಶೇಷಾತ್ ಎಂಬ ಹಿಂದಿನ ಸೂತ್ರದಲ್ಲಿ ಯುಕ್ತಿ-ಯಿಂದ ಸಿದ್ಧವಾದ ವಿಷಯವನ್ನು ಶ್ರುತಿಯಿಂದಲೂ ಸಮರ್ಥಿಸುವ ಸೂತ್ರವನ್ನು ಹೇಳುತ್ತಾರೆ -

### ॐ दर्शयति च ॐ (३-३-२३)

**ಸೂತ್ರಾರ್ಥ :-** 'ಸರ್ವಾನ್ ಇತಿ' (ಭಾಲ್ಲವೇಯ) ಶ್ರುತಿಃ **ದರ್ಶಯತಿ ಚ** ಸ್ವೋಕ್ತಾರ್ಥಂ ಪ್ರತಿಪಾದಯತಿ = "ಸರ್ವಾನ್ ಗುಣಾನ್ ..." ಎಂಬ ಶ್ರುತಿಯು ಯುಕ್ತಿಸಿದ್ಧವಾದ ಈ ಅರ್ಥವನ್ನು ಪ್ರತಿಪಾದಿಸುತ್ತದೆ ಕೂಡ.

**ಸೂ.ರ.:- एवं च यस्य युगपत्स्वभुजाविवात्मशब्देन यावन्तो गुणाः प्रतीयन्ते तावन्त एवोपास्या इति नियमसम्भवात् । सर्वान् गुणानिति श्रुतेः । तस्मादात्मशब्दोक्तगुणानां सर्वोपास्यत्वादुक्तं युक्तमिति सिद्धम् ॥**

"ಸರ್ವಾನ್ ಗುಣಾನಾತ್ಮಶಬ್ದೋ ಬ್ರವೀತಿ ಬ್ರಹ್ಮಾದೀನಾಮಿತರೇಷಾಂ ನ ಚೈವ" (ಭಾಲ್ಲವೇಯಶ್ರುತಿಃ)

ಎಂಬುದಾಗಿ ಶ್ರುತಿ ಇರುವುದರಿಂದ, ಯಾವನಿಗೆ ಯುಗಪತ್ ತನ್ನ ಭುಜ-ಗಳಂತೆ ಆತ್ಮಶಬ್ದದಿಂದ ಎಷ್ಟು ಗುಣಗಳು ತೋರುತ್ತವೆಯೋ ಅಷ್ಟು ಗುಣಗಳು ಮಾತ್ರ ಅವನಿಂದ ಉಪಾಸ್ಯವಾಗಿವೆ ಎಂಬುದಾಗಿ ನಿಯಮವು ಸಂಭವಿಸುತ್ತದೆ.

ಆದ್ದರಿಂದ ಆತ್ಮಶಬ್ದೋಕ್ತವಾದ ಎಲ್ಲ ಗುಣಗಳೂ ಎಲ್ಲರಿಂದ ಉಪಾಸ್ಯವಾದ್ದ-ರಿಂದ ನಾವು ಹೇಳಿದ್ದು ಯುಕ್ತವಾಗಿದೆ ಎಂದು ಸಿದ್ಧವಾಗುತ್ತದೆ.

**ನ ವಾಧಿಕರಣವು ಮುಗಿಯಿತು.**

ಅಧಿಕರಣ - 14

# ಸಂಭೃತ್ಯಧಿಕರಣ

## ಸಂಗತಿ

**ಸೂ.ರ.:- अत्र सम्भृत्यादिगुणस्य सर्वोपास्यत्वं नेत्युच्यते ।**

ಸಂಭೃತ್ಯಾದಿಗುಣಗಳು ಎಲ್ಲರಿಂದ ಉಪಾಸ್ಯವಲ್ಲ ಎಂದು ಸಮರ್ಥಿಸುತ್ತಾರೆ ಹದಿನಾಲ್ಕನೇ ಈ ಸಂಭೃತ್ಯಧಿಕರಣದಲ್ಲಿ.

ಸಂಭೃತಿ-ದ್ಯುವ್ಯಾಪ್ತಿ ಗುಣಗಳು ಸರ್ವಮುಮುಕ್ಷುಗಳಿಂದ ಉಪಾಸ್ಯ-ವಾಗಿವೆಯೋ? ಇಲ್ಲವೋ? ಎಂದು ಸಂದೇಹ.

## ಪೂರ್ವಪಕ್ಷ - 1

**ಸೂ.ರ.:- ननु सम्भृतिद्युव्याप्ती सर्वेषां मनुष्यादीनामुपास्ये सर्वेषां मुमुक्षुत्वसाम्यात् देवादिवत् । मोक्षे च तत्फलयोः स्वाधमभरण-प्रकाशव्याप्त्योर्भाव्यत्वात् । न चैवं सर्वगुणोपास्तिप्रसङ्गः । तत्फला-निच्छुत्वात् । ततश्च चतुर्गुणोपासननियमभङ्ग इति ॥**

"ಸಂಭೃತಿದ್ಯುವ್ಯಾಪ್ತೀ, ಸರ್ವೇಷಾಂ ಮನುಷ್ಯಾದೀನಾಮುಪಾಸ್ಯೇ, ಸರ್ವೇಷಾಂ ಮುಮುಕ್ಷುತ್ವಸಾಮ್ಯಾತ್, ದೇವಾದಿವತ್" ।

ಸಂಭೃತಿ-ದ್ಯುವ್ಯಾಪ್ತಿಗಳು, ಎಲ್ಲ ಮನುಷ್ಯರಿಂದಲೂ ಉಪಾಸ್ಯವಾಗಿವೆ, ಮುಮುಕ್ಷುತ್ವವು ಎಲ್ಲರಲ್ಲೂ ಸಮಾನವಾಗಿದೆಯಾದ್ದರಿಂದ. ದೇವಾದಿಗಳಂತೆ. ದೇವಾದಿಗಳು ಮುಮುಕ್ಷುಗಳಾದ್ದರಿಂದ ಅವರು ಹೇಗೆ ಸಂಭೃತಿ-ದ್ಯುವ್ಯಾಪ್ತಿಗಳನ್ನು ಉಪಾಸನೆ ಮಾಡುತ್ತಾರೋ ಅದರಂತೆ ಮನುಷ್ಯರೂ ಮುಮುಕ್ಷುಗಳಾದ್ದರಿಂದ ಸಂಭೃತಿ-ದ್ಯುವ್ಯಾಪ್ತಿಗಳು ಮನುಷ್ಯರಿಂದಲೂ ಉಪಾಸ್ಯವಾಗಿವೆ.

ಮನುಷ್ಯರು ಸಂಭೃತಿ-ದ್ಯುವ್ಯಾಪ್ತಿಗಳ ಉಪಾಸನೆಯನ್ನು ಏಕೆ ಮಾಡಬೇಕು? ಎಂದರೆ, ಆ ಉಪಾಸನೆಯ ಫಲಗಳಾದ ಸ್ವಾಧಮಭರಣ-ಪ್ರಕಾಶವ್ಯಾಪ್ತಿಗಳು ಮೋಕ್ಷದಲ್ಲಿಯೂ ಇರುತ್ತವೆಯಾದ್ದರಿಂದ.

ಹಾಗಾದರೆ ಎಲ್ಲ ಗುಣಗಳನ್ನು ಉಪಾಸನೆ ಮಾಡಬೇಕಾದ ಅತಿಪ್ರಸಂಗ ಬರುವುದಲ್ಲ? ಎಂದರೆ ಅದು ಸರಿಯಲ್ಲ, ಎಲ್ಲ ಗುಣಗಳ ಫಲವನ್ನು ಇಚ್ಛಿಸು-ವುದಿಲ್ಲವಾದ್ದರಿಂದ ಸರ್ವಗುಣೋಪಾಸ್ತಿಪ್ರಸಂಗ ಇಲ್ಲ.

ಆದ್ದರಿಂದ ಚತುರ್ಗುಣೋಪಾಸನ ನಿಯಮಭಂಗ ಬರುತ್ತದೆ ಎಂದು ಮೊದಲನೇ ಪೂರ್ವಪಕ್ಷ.

## ಪೂರ್ವಪಕ್ಷ - 2

ಸೂ.ರ.:- यद्वा देवादयो न सम्भृतिद्युव्याप्त्युपासनयोग्याः । प्रमाणाभावात् । न च मुमुक्षुत्वात्तदुपासनाधिकारसिद्धिरिति वाच्यम् । यदि मुमुक्षुत्वाद्देवाः सम्भृत्याद्युपासनाधिकारिणः स्युस्तर्हि मनुष्या अपि तथा स्युरविशेषादिति तर्कबाधात् । अत एव न तत्फलेच्छुत्वा-द्देवानामधिकारसिद्धिः । ततश्च देवानां मनुष्येभ्योऽतिशयासिद्धिरिति । एवं पूर्वपक्षद्विकप्राप्ते समादधत्सूत्रमाह ॥

"ದೇವಾದಯಃ, ನ ಸಂಭೃತಿದ್ಯುವ್ಯಾಪ್ತ್ಯುಪಾಸನಯೋಗ್ಯಾಃ, ಪ್ರಮಾಣಾಭಾವಾತ್"

ದೇವಾದಿಗಳು ಸಂಭೃತಿ-ದ್ಯುವ್ಯಾಪ್ತಿಗಳ ಉಪಾಸನೆಗೆ ಯೋಗ್ಯರಲ್ಲ, ಆ ವಿಷಯದಲ್ಲಿ ಪ್ರಮಾಣವಿಲ್ಲವಾದ್ದರಿಂದ.

ಹಾಗೇಕೆ ಹೇಳುತ್ತೀರಿ? ದೇವಾದಿಗಳು ಮುಮುಕ್ಷುಗಳಾದ್ದರಿಂದಲೇನೇ ಆ ಉಪಾಸನೆಗೆ ಅಧಿಕಾರವು ಸಿದ್ಧವಾಗುತ್ತದೆ ಎಂದರೆ, ಅದು ಸರಿಯಲ್ಲ. "ಯದಿ ಮುಮುಕ್ಷುತ್ವಾದ್ದೇವಾಃ ಸಂಭೃತ್ಯಾದ್ಯುಪಾಸನಾಧಿಕಾರಿಣಃ ಸ್ಯುಸ್ತರ್ಹಿ ಮನುಷ್ಯಾ ಅಪಿ ತಥಾ ಸ್ಯುಃ ಅವಿಶೇಷಾತ್" "ಒಂದುವೇಳೆ ಮುಮುಕ್ಷುಗಳಾದ್ದರಿಂದ ದೇವತೆಗಳು ಸಂಭೃತ್ಯಾದಿ ಉಪಾಸನೆಗೆ ಅಧಿಕಾರಿಗಳು ಆಗುವುದಾದರೆ ಮುಮುಕ್ಷುತ್ವಸಮಾನ-ವಾದ್ದರಿಂದ ಮನುಷ್ಯರೂ ಸಂಭೃತ್ಯಾದಿ ಉಪಾಸನೆಗೆ ಅಧಿಕಾರಿಗಳು ಆಗಬೇಕಾಗು-ತ್ತದೆ' ಎಂಬ ತರ್ಕಬಾಧ ಬರುತ್ತದೆ. ಅಂತೆಯೇ ತತ್ಫಲೇಚ್ಛುತ್ವದಿಂದಾಗಿ ದೇವತೆಗಳಿಗೆ ಅಧಿಕಾರ ಸಿದ್ಧವಾಗುತ್ತದೆ ಎಂಬ ಪಕ್ಷವೂ ನಿರಾಕೃತವಾಗುತ್ತದೆ.

ಆದ್ದರಿಂದ ದೇವತೆಗಳಿಗೆ ಮನುಷ್ಯರಿಗಿಂತಲೂ ಅತಿಶಯವು ಸಿದ್ಧವಾಗುವುದಿಲ್ಲ ಎಂದು ಎರಡನೇ ಪೂರ್ವಪಕ್ಷ.

ಈ ರೀತಿಯಾಗಿ ಎರಡು ಪೂರ್ವಪಕ್ಷಗಳು ಪ್ರಾಪ್ತವಾದರೆ, (ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ) ಸಮಾಧಾನ ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ-

**ॐ सम्भृतिद्युव्याप्त्यपि चातः ॐ (३-३-२४)**

**ಸೂತ್ರಾರ್ಥ** :- ಅಪಿ ಪದದಿಂದ, ನಞ್‌ನ ಸಮಾಕರ್ಷ ಮಾಡಿಕೊಳ್ಳುವುದು. ಚ ಶಬ್ದಕ್ಕೆ ಏವ ಎಂದರ್ಥ. **ಸಂಭೃತಿ-ದ್ಯುವ್ಯಾಪ್ತೀ** = ಸಮ್ಯಕ್‌ಭರಣ - ಪ್ರಕಾಶ-ವ್ಯಾಪ್ತಿಗಳು **ಅಪಿ** ನ ಸರ್ವೋಪಾಸ್ಯೇ = ಸರ್ವರಿಂದಲೂ ಉಪಾಸ್ಯವಾಗಿಲ್ಲ, ಕಿಂತು ದೇವಾದ್ಯುಪಾಸ್ಯೇ ಏವ = ಕಿಂತು ದೇವಾದಿಗಳಿಂದ ಮಾತ್ರ ಉಪಾಸ್ಯವಾಗಿವೆ. ಕುತಃ = ಯಾಕೆ? **ಅತಃ (ಚ)** ಏವ = ಅಧಿಕಾರಿಗಳ ಯೋಗ್ಯತೆಯಲ್ಲಿ ವಿಶೇಷ ಇರುವುದರಿಂದಲೇ.

## ಸಿದ್ಧಾಂತ - 1

**ಸೂ.ರ.:– एवं च सम्भृतिद्युव्याप्ती न सर्वोपास्ये । मनुष्याणां तत उपासनायोग्यताविरहात् । न च मुक्तावपेक्षितप्रकाशाद्यसिद्धिः । भगवद्रूपप्रतीतिविषयीकृतप्रकाशादिनैव तत्सिद्धेः । ततश्च नोक्त-चतुर्गुणोपासननियमभङ्गः ।**

ಸಂಭೃತಿ-ದ್ಯುವ್ಯಾಪ್ತಿಗಳು ಸರ್ವರಿಂದಲೂ ಉಪಾಸ್ಯವಲ್ಲ. ಯಾಕೆ? ಮನುಷ್ಯ-ರಿಗೆ ಅದನ್ನು ಉಪಾಸಿಸುವ ಯೋಗ್ಯತೆ ಇಲ್ಲವಾದ್ದರಿಂದ.

ಹಾಗಾದರೆ ಸಂಭೃತ್ಯಾದಿಗಳ ಉಪಾಸನೆ ಇಲ್ಲವಾದರೆ, ಮೋಕ್ಷದಲ್ಲಿ ಅಪೇಕ್ಷಿತ-ವಾದ ಪ್ರಕಾಶಾದಿಗಳು ಸಿದ್ಧವಾಗುವುದಿಲ್ಲವಲ್ಲ? ಎಂದರೆ ಅದು ಸರಿಯಲ್ಲ. ಭಗವದ್ರೂಪಪ್ರತೀತಿ ವಿಷಯೀಕೃತ ಪ್ರಕಾಶಾದಿಗಳಿಂದಲೇನೇ ಅದು ಸಿದ್ಧವಾಗುತ್ತದೆ. ಆದ್ದರಿಂದ ಹಿಂದೆ ಹೇಳಿದ ಚತುರ್ಗುಣೋಪಾಸನನಿಯಮಭಂಗ ಇಲ್ಲ.

## ಸಿದ್ಧಾಂತ - 2

**ಸೂ.ರ.:– यद्वा देवादयः सम्भृताद्युपासनावन्तः । देवाधि-कारेऽन्याधिकाराद्विशेषसद्भावात् । देवादीनामुपास्यास्तु भृतिव्याप्त्या-दयो गुणाः । आनन्दाद्यास्तु सर्वेषां अन्यथाऽनर्थकृद्भवेदिति**

(ब्रह्मतर्के.) वचनात् । ततश्च सम्भृत्याद्युपासनासद्भावान्नातिशयभङ्ग इति सिद्धान्तद्वयमुक्तं भवति ॥

ದೇವಾದಿಗಳು ಸಂಭೃತ್ಯಾದಿಉಪಾಸನಾ ಉಳ್ಳವರಾಗಿದ್ದಾರೆ. ದೇವತೆಗಳ ಅಧಿಕಾರದಲ್ಲಿ ಉಳಿದವರ ಅಧಿಕಾರಕ್ಕಿಂತಲೂ ವಿಶೇಷ ಇರುವುದರಿಂದ.

ದೇವಾದೀನಾಮುಪಾಸ್ಯಾಸ್ತು ಭೃತಿವ್ಯಾಪ್ತ್ಯಾದಯೋ ಗುಣಾಃ ।
ಆನಂದಾದ್ಯಾಸ್ತು ಸರ್ವೇಷಾಮನ್ಯಥಾಽನರ್ಥಕೃದ್ಭವೇತ್ ॥

ಎಂಬುದಾಗಿ ಬ್ರಹ್ಮತರ್ಕವಚನ ಇರುವುದರಿಂದ ಸಂಭೃತಿ-ವ್ಯಾಪ್ತ್ಯಾದಿ ಗುಣಗಳು ದೇವಾದಿಗಳಿಗೆ ಉಪಾಸ್ಯವಾಗಿವೆ. ಆನಂದಾದಿ ಗುಣಗಳು ಎಲ್ಲರಿಗೂ ಉಪಾಸ್ಯವಾಗಿವೆ.

ಆದ್ದರಿಂದ ದೇವಾದಿಗಳಿಗೆ ಸಂಭೃತ್ಯಾದಿ ಉಪಾಸನಾ ಇರುವುದರಿಂದ ಅವರಿಗೆ ಅತಿಶಯಭಂಗ ಇರುವುದಿಲ್ಲ ಎಂಬುದಾಗಿ ಎರಡು ಸಿದ್ಧಾಂತಗಳು ಹೇಳಿ-ದಂತಾಗುತ್ತವೆ.

**ಸಂಭೃತ್ಯಧಿಕರಣವು ಮುಗಿಯಿತು.**

ಅಧಿಕರಣ - 15

## ಪುರುಷಾಧಿಕರಣ

### ಸಂಗತಿ

**ಸೂ.ರ.:- अत्र सर्वविद्यातो गुणोपसंहारः कर्तव्य इति साध्यते ।**

ಸರ್ವತಃ ಗುಣೋಪಸಂಹಾರ ಮಾಡಬೇಕೆಂದು ಸಾಧಿಸುತ್ತಾರೆ ಹದಿನೈದನೇ ಈ ಪುರುಷಾಧಿಕರಣದಲ್ಲಿ.

ಸಾರ್ವತ್ರಿಕ ಗುಣೋಪಸಂಹಾರವು (ಎಲ್ಲ ವಿದ್ಯೆಗಳಿಂದಲೂ ಲಬ್ಧವಾಗುವ ಗುಣೋಪಸಂಹಾರವು) ಕರ್ತವ್ಯವಾಗಿದೆಯೋ? ಇಲ್ಲವೋ? ಎಂದು ಸಂದೇಹ.

### ಪೂರ್ವಪಕ್ಷ

**ಸೂ.ರ.:- ननु न विप्रकीर्णगुणोपसंहृतिः कार्या । प्रयोजनाभावात् । न च स्वयोग्यगुणोपासनायोपसंहृतिरिति वाच्यम् । उत्तमानां वहुगुणाभिधायकैकविद्योक्तगुणोपसंहारमात्रेण मन्दानामल्पगुणाभिधायकैकविद्योक्तगुणोपसंहारमात्रेणैव तत्सिद्धेः । अत उपसंहारवैयर्थ्यान्न सर्वज्ञानोपयोग इति प्राप्ते सूत्रितम् ॥**

ಸರ್ವತಃ ಗುಣೋಪಸಂಹಾರವು ಕರ್ತವ್ಯವಾಗಿಲ್ಲ, ಪ್ರಯೋಜನ ಇಲ್ಲವಾದ್ದರಿಂದ. ಹಾಗಲ್ಲ ಸ್ವಸ್ವಯೋಗ್ಯಗುಣೋಪಾಸನೆಗಾಗಿ ಉಪಸಂಹಾರ ಕರ್ತವ್ಯ ಎಂದು ಶಂಕಿಸುವುದು ಸರಿಯಲ್ಲ. ಉತ್ತಮರಿಗೆ ಬಹುಗುಣಾಭಿಧಾಯಕ ಏಕವಿದ್ಯೋಕ್ತಗುಣೋಪಸಂಹಾರ ಮಾತ್ರದಿಂದ, ಇನ್ನು ಮಂದರಿಗೆ ಅಲ್ಪಗುಣಾಭಿಧಾಯಕ ಏಕವಿದ್ಯೋಕ್ತ ಗುಣೋಪಸಂಹಾರ ಮಾತ್ರದಿಂದಲೇ ಅದು ಸಿದ್ಧವಾಗುವುದರಿಂದ ಹಾಗೆ ಹೇಳುವುದು ಸರಿಯಲ್ಲ. ಆದ್ದರಿಂದ ಉಪಸಂಹಾರವೈಯರ್ಥ್ಯ ಬರುವುದರಿಂದ ಸರ್ವಜ್ಞಾನೋಪಯೋಗ ಇಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ पुरुषविद्यायामपि चेतरेषामनाम्नानात् ॐ (३-३-२५)**

**ಸೂತ್ರಾರ್ಥ** :- **ಪುರುಷವಿದ್ಯಾಯಾಮಪಿ** = ಸರ್ವವಿದ್ಯೋತ್ತಮತ್ವೇನ ಪ್ರತಿಜ್ಞಾತವಾದ ಪುರುಷಸೂಕ್ತವೆಂಬ ವಿದ್ಯೆಯಲ್ಲಿ ಕೇಷಾಂಚಿದೇವೋಕ್ತತ್ವಾತ್ = ಕೆಲವು ಗುಣಗಳನ್ನು ಮಾತ್ರ ಹೇಳಿದ್ದರಿಂದ **ಇತರೇಷಾಂ** = ಅಲ್ಲಿ ಹೇಳಿದ ಗುಣಗಳಿಂದ ಭಿನ್ನವಾದ ಗುಣಗಳನ್ನು **ಅನಾಮ್ನಾನಾತ್** = ಹೇಳಿಲ್ಲವಾದ್ದರಿಂದ, ಕರ್ತವ್ಯ ಏವ ಸರ್ವವಿದ್ಯಾಗುಣೋಪಸಂಹಾರಃ = ಸರ್ವವಿದ್ಯಾಗುಣೋಪ-ಸಂಹಾರವು ಕರ್ತವ್ಯವೇ ಆಗಿರುತ್ತದೆ.

## ಸಿದ್ಧಾಂತ

**ಸೂ.ರ.:- एवं च कार्या एव विप्रकीर्णगुणोपसंहृतिः । सर्वगुणोपासकानामुत्तमानां भावात् । सर्वोत्तमायामपि पुरुषसूक्ताख्य-विद्यायां सर्वगुणानामनाम्नानात् । मन्दापेक्षितानामप्येकत्रोक्ति-नियमाभावाच्च । अतो सर्वतो गुणोपसंहारस्य कर्तव्यत्वादुक्तं युक्तमिति सिद्धम् ॥**

ಸರ್ವತಃ ಗುಣೋಪಸಂಹಾರವು ಕರ್ತವ್ಯವೇ ಆಗಿದೆ. ಕಾರಣ - ಸರ್ವ-ಗುಣೋಪಾಸಕರಾದ ಉತ್ತಮರು ಇರುವುದರಿಂದ. ಮತ್ತು ಸರ್ವೋತ್ತಮವಾದ ಪುರುಷಸೂಕ್ತವೆಂಬ ವಿದ್ಯೆಯಲ್ಲಿ ಎಲ್ಲ ಗುಣಗಳನ್ನು ಹೇಳಿಲ್ಲವಾದ್ದರಿಂದ. ಮತ್ತು ಮಂದಾಪೇಕ್ಷಿತವಾದದ್ದನ್ನು ಒಂದೇ ಕಡೆ ಹೇಳಬೇಕೆಂಬ ನಿಯಮವಿಲ್ಲವಾದ್ದರಿಂದ. ಆದ್ದರಿಂದ ಸರ್ವತಃ ಗುಣೋಪಸಂಹಾರವು ಕರ್ತವ್ಯವಾದ್ದರಿಂದ ಹಿಂದೆ ಹೇಳಿದ್ದು ಯುಕ್ತವಾಗಿದೆ ಎಂದು ಸಿದ್ಧವಾಗುತ್ತದೆ.

**ಪುರುಷಾಧಿಕರಣವು ಮುಗಿಯಿತು.**

ಅಧಿಕರಣ - 16

# ವೇಧಾಧಿಕರಣ

## ಸಂಗತಿ

**ಸೂ.ರ.:- अत्र भेदनादिगुणानां सर्वोपास्यत्वं निरस्यते ।**

ಭೇದನಾದಿ ಗುಣಗಳಿಗೆ ಸರ್ವೋಪಾಸ್ಯತ್ವವನ್ನು ನಿರಾಕರಿಸುತ್ತಾರೆ ಹದಿನಾರನೇ ಈ ವೇಧಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:- नन्वग्ने त्वचं यातुधानस्य भिन्धीत्यादिनोक्ता (ऋ. १०-८७-४,५) भेदनादिगुणाः सर्वोपास्याः । तत्फलस्य दुष्टनिग्रहस्य सर्वापेक्षितत्वात् । अतो वेधादीनां सर्वोपास्यत्वान्न चतुर्गुणोपासन-नियम इति प्राप्ते सूत्रितम् ॥**

"ಅಗ್ನೇ ತ್ವಚಂ ಯಾತುಧಾನಸ್ಯ ಭಿಂಧಿ" (ಋ. 10-87-4, 5) ಇತ್ಯಾದಿ-ಯಾಗಿ ಹೇಳಲ್ಪಡುವ ಭೇದನಾದಿ ಗುಣಗಳು ಸರ್ವೋಪಾಸ್ಯವಾಗಿವೆ. ಕಾರಣ - ಅದರ ಫಲವಾದ ದುಷ್ಟನಿಗ್ರಹವು ಸರ್ವಾಪೇಕ್ಷಿತವಾದ್ದರಿಂದ. ಆದ್ದರಿಂದ ವೇಧಾದಿ-ಗಳು ಸರ್ವೋಪಾಸ್ಯವಾದ್ದರಿಂದ ಚತುರ್ಗುಣೋಪಾಸನ ನಿಯಮ ಇಲ್ಲ ಎಂಬು-ದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ वेधाद्यर्थभेदात् ॐ (३-३-२६)**

**ಸೂತ್ರಾರ್ಥ :- ಅರ್ಥಭೇದಾತ್** = ವೇಧಾದ್ಯುಪಾಸನಫಲವಾದ ಹಿಂಸಾದಿ-ಗಳು ಯತ್ಯಾದಿಯೋಗ್ಯಫಲದಿಂದ ವಿಲಕ್ಷಣವಾದ್ದರಿಂದ **ವೇಧಾದಿ** = 'ಭಿಂಧಿ ವಿದ್ಧಿ ಪ್ರಣೀಹಿ' (ಬೃಹತ್ತಂತ್ರ) ಎನ್ನುವಲ್ಲಿ ಹೇಳಲ್ಪಟ್ಟ ವೇಧಾದಿಗಳು ನ ಸರ್ವೋಪಾಸ್ಯಮ್ = ಎಲ್ಲರಿಂದ ಉಪಾಸ್ಯವಾಗಿಲ್ಲ.

## ಸಿದ್ಧಾಂತ

**ಸೂ.ರ.:– एवं च न वेधादयः सर्वोपास्याः । तत्फले भेदनादौ यत्यादीनामनधिकारात् । अतो वेधादीनां सर्वोपास्यत्वाभावान्नाभिहितनियमो भज्यत इति सिद्धम् ॥**

ವೇಧಾದಿಗಳು ಸರ್ವೋಪಾಸ್ಯವಾಗಿಲ್ಲ, ಕಾರಣ - ಅದರ ಫಲವಾದ ಭೇದನಾದಿಗಳಲ್ಲಿ ಯತ್ಯಾದಿಗಳಿಗೆ ಅಧಿಕಾರವಿಲ್ಲವಾದ್ದರಿಂದ.

ಆದ್ದರಿಂದ ವೇಧಾದಿಗಳು ಸರ್ವೋಪಾಸ್ಯವಾಗದ ಕಾರಣ ಅಭಿಹಿತನಿಯಮವು ಭಗ್ನವಾಗುವುದಿಲ್ಲ ಎಂದು ಸಿದ್ಧವಾಗುತ್ತದೆ.

ವೇಧಾಧಿಕರಣವು ಮುಗಿಯಿತು.

ಅಧಿಕರಣ – 17

# ಹಾನ್ಯಧಿಕರಣ

## ಸಂಗತಿ

**ಸೂ.ರ.:– अत्रोपासनस्य मुक्तावप्यनुवृत्तिः समर्थ्यते ।**

ಉಪಾಸನೆಗೆ ಮುಕ್ತಿಯಲ್ಲಿಯೂ ಅನಾವೃತ್ತಿಯನ್ನು (ಮೋಕ್ಷದಲ್ಲಿಯೂ ಉಪಾಸನೆಯು ಕರ್ತವ್ಯವಾಗಿದೆ ಎಂದು) ಸಮರ್ಥಿಸುತ್ತಾರೆ ಹದಿನೇಳನೇ ಈ ಹಾನ್ಯಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु न मुक्तेनोपासना क्रियते । मुक्तस्योपासनाविध्यङ्गीकारे फलप्राप्तिप्रसङ्गात् । मुक्तत्वाभावप्रसङ्गाच्च । तदनङ्गीकारे च प्राप्तव्यफलप्रसङ्गात् । प्राप्तव्यमन्तरा प्रेक्षावत्प्रवृत्त्यनुपपत्तेः । ततश्च सोपाधिकमेवोपासनमिति मुक्तिसाधनत्वादेवोपासनं कार्यं न तूपासने आदरातिशय इति प्राप्ते सूत्रमाह ॥**

ಮುಕ್ತನಾದವನು ಉಪಾಸನೆಯನ್ನು ಮಾಡುವುದಿಲ್ಲ. ಯಾಕೆ? ಮುಕ್ತನಿಗೆ ಉಪಾಸನಾವಿಧಿಯನ್ನು ಅಂಗೀಕರಿಸಿದರೆ ಫಲಪ್ರಾಪ್ತಿಪ್ರಸಂಗ ಬರುತ್ತದೆ. ಮತ್ತು ಮುಕ್ತತ್ವವು ಇಲ್ಲದೇ ಹೋಗಬೇಕಾದ ಪ್ರಸಂಗವೂ ಬರುತ್ತದೆ. ಇನ್ನು ಉಪಾಸನಾವಿಧಿಯನ್ನು ಅಂಗೀಕರಿಸದಿದ್ದರೆ ಪ್ರಾಪ್ತವ್ಯಫಲಪ್ರಸಂಗ ಬರುತ್ತದೆ. ಪ್ರಾಪ್ತವ್ಯಫಲವಿಲ್ಲದೇ ಪ್ರೇಕ್ಷಾವತ್ಪ್ರವೃತ್ತಿ ಉಪಪನ್ನವಾಗುವುದಿಲ್ಲವಾದ್ದರಿಂದ.

ಆದ್ದರಿಂದ ಉಪಾಸನೆಯು ಸೋಪಾಧಿಕವೇ ಆಗಿದೆಯಾದ್ದರಿಂದ, ಮುಕ್ತಿಸಾಧನವಾದ್ದರಿಂದಲೇ ಉಪಾಸನೆಯು ಕಾರ್ಯವಾಗಿದೆ. ಹೊರತು ಉಪಾಸನೆಯಲ್ಲಿ ಆದರಾತಿಶಯ ಇಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ हानौ तूपायनशब्दशेषत्वात्कुशाच्छन्दस्तुत्युपगानवत्तदुक्तम् ॐ**

**(३-३-२७)**

**ಸೂತ್ರಾರ್ಥ** :- ಯತಃ = ಯಾವ ಕಾರಣ, **ಹಾನೌ** = ಬಂಧಹಾನಿ-ರೂಪವಾದ ಮುಕ್ತಿಯಲ್ಲಿ **ತದುಕ್ತಂ** = "ಏತತ್ಸಾಮ ಗಾಯನ್ನಾಸ್ತೇ" (ತೈ. 3-10) ಎಂಬ ಶ್ರುತಿಯಲ್ಲಿ ಮುಕ್ತರಿಗೆ ಉಪಾಸನೆಯು ಹೇಳಲ್ಪಟ್ಟಿದೆಯೋ ಅತಃ = ಆದ್ದರಿಂದ ಮೋಕ್ಷೇऽಪಿ ತೇಷಾಮುಪಾಸನಮಸ್ತ್ಯೇವ = ಮೋಕ್ಷದಲ್ಲಿಯೂ ಮುಕ್ತರಿಗೆ ಉಪಾಸನವು ಇದ್ದೇ ಇದೆ. ತದಪಿ = ಅದೂ ಕೂಡ ಕುಶಾಚ್ಛಂದಸ್ತುತ್ಯುಪಗಾನವತ್ ಏವ = ವಿಧಿವಿಹಿತವಾದ ಬ್ರಹ್ಮಯಜ್ಞದ ಅನಂತರದಲ್ಲಿಯೂ ಸ್ವೇಚ್ಛೆಯಿಂದಲೇ ಕೈಯಲ್ಲಿನ ದರ್ಭೆಗಳನ್ನು ಹಾಗೆಯೇ ಉಳಿಸಿಕೊಂಡು ಮಂತ್ರಗಳನ್ನು ಸಾಮವನ್ನು ಪಠಿಸುವಂತೆ ಸ್ವೇಚ್ಛಯೈವ ನ ವಿಧಿತಃ = ಸ್ವೇಚ್ಛೆಯಿಂದಲೇ ಹೊರತು ವಿಧಿಯಿಂದಾಗಿ ಅಲ್ಲ. ಕುತಃ = ಯಾಕೆ? **ಉಪಾಯನಶಬ್ದಶೇಷತ್ವಾತ್** = (ಉಪಾಯನ ಎಂದರೆ ಮೋಕ್ಷ) ಉಪಾಸನಾವಿಧಿಗಳು ಮೋಕ್ಷವಾಕ್ಯಶೇಷವಾದ್ದರಿಂದ. ಆದ್ದರಿಂದ ಮೋಕ್ಷಾರ್ಥೋ-ಪಾಸನಾವಿಧಯಃ ಕಥಂ ತತ್ರಾಪಿ ತಾ ವಿದಧ್ಯುಃ = ಮೋಕ್ಷಕ್ಕಾಗಿ ಮಾಡಿದ ಉಪಾಸನಾವಿಧಿಗಳಾದ್ದರಿಂದ ಅವುಗಳನ್ನು ಮೋಕ್ಷದಲ್ಲಿಯೂ ಹೇಗೆ ಬಿಟ್ಟಾರು?

## ಸಿದ್ಧಾಂತ

**ಸೂ.ರ.:- एवं चानुष्ठेयमेव मुक्तावुपासनम् । एतत्सामेति वचनात् । न च विधिबद्धत्वेन संसारसमानधर्मत्वं मुक्तेः । विनाऽपि विधिं स्वेच्छयैवोपासनमित्यङ्गीकारात् । दृश्यते च नियतब्रह्मयज्ञ-शब्दस्वाध्यायानन्तरमपि स्वेच्छयैव कुशैराच्छादनेनैव द्विजन्मनाम-ध्ययनादि । अत उक्तं युक्तमिति सिद्धम् ॥**

"ಏತತ್ಸಾಮ ಗಾಯನ್ನಾಸ್ತೇ" (ತೈ. 3-10) ಎಂಬುದಾಗಿ ವಚನವಿರುವುದರಿಂದ ಮುಕ್ತಿಯಲ್ಲಿಯೂ ಉಪಾಸನವು ಅನುಷ್ಠೇಯವೇ ಆಗಿದೆ.

ಹಾಗಾದರೆ ಮುಕ್ತಿಯಲ್ಲಿಯೂ ಉಪಾಸನಾವಿಧಿ ಇರುವುದಾದರೆ, ಮುಕ್ತರೂ ವಿಧಿಬದ್ಧರಾಗುವುದರಿಂದ ಮುಕ್ತಿಯು ಸಂಸಾರಸಮಾನಧರ್ಮವಾಗಬೇಕಾಗುತ್ತದೆ-ಯಲ್ಲ? ಎಂದು ಶಂಕಿಸುವುದು ಸರಿಯಲ್ಲ. ವಿಧಿ ಇಲ್ಲದಿದ್ದರೂ ಸ್ವೇಚ್ಛೆಯಿಂದಲೇ ಉಪಾಸನೆ ಮಾಡುತ್ತಾರೆ ಎಂದು ಅಂಗೀಕರಿಸಿದ್ದರಿಂದ.

ವಿಧಿವಿಹಿತವಾದ ಬ್ರಹ್ಮಯಜ್ಞ - ಸ್ವಾಧ್ಯಾಯಾನಂತರದಲ್ಲಿಯೂ ಸಹ

ಸ್ವೇಚ್ಛೆಯಿಂದಲೇ ಕೈಯಲ್ಲಿನ ದರ್ಭೆಗಳನ್ನು ಹಾಗೆಯೇ ಉಳಿಸಿಕೊಂಡು ಬ್ರಾಹ್ಮಣರು ಅಧ್ಯಯನಾದಿಗಳನ್ನು ಮಾಡಿದ್ದು ಕಂಡಿದೆ ಕೂಡ.

ಆದ್ದರಿಂದ ಸ್ವೇಚ್ಛೆಯಿಂದಲೇ ಮುಕ್ತಿಯಲ್ಲಿ ಉಪಾಸನವು ಕೂಡುವುದರಿಂದ ಉಪಾಸನೆಯಲ್ಲಿ ಆದರಾತಿಶಯವನ್ನು ಹೇಳಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 28

**ಸೂ.ರ.:– ननु मुक्तस्योपासनं न स्वेच्छया किन्तु मोक्षे तदा तदा प्राप्तानिष्टपरिहारार्थमेव । कस्यापि निष्फलप्रवृत्तेरदर्शनादित्याशङ्कां परिहरत्सूत्रं पठति ॥**

ಮುಕ್ತರಾದವರು ಮುಕ್ತಿಯಲ್ಲಿ ಉಪಾಸನೆ ಮಾಡುವುದು ಸ್ವೇಚ್ಛೆಯಿಂದ ಅಲ್ಲ. ಕಿಂತು ನಿಷ್ಫಲ ಪ್ರವೃತ್ತಿಯು ಯಾರಲ್ಲೂ ಕಾಣದ ಕಾರಣ ಮೋಕ್ಷದಲ್ಲಿ ಆಗಾಗ ಪ್ರಾಪ್ತವಾಗುವ ಅನಿಷ್ಟಪರಿಹಾರಕ್ಕಾಗಿ ಉಪಾಸನೆ ಮಾಡುವುದು ಎಂಬುದಾಗಿ ಆಶಂಕೆ ಬಂದರೆ, ಅದರ ಪರಿಹಾರಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ साम्पराये तर्त्तव्याभावात्तथा ह्यन्ये ॐ (३-३-२८)**

**ಸೂತ್ರಾರ್ಥ** :- **ಸಾಂಪರಾಯೇ** = ಮೋಕ್ಷದಲ್ಲಿ ಉಪಾಸನಂ ಸ್ವೇಚ್ಛಯೈವೇತ್ಯಂಗೀಕಾರ್ಯಂ ನ ತ್ವನಿಷ್ಟನಿವೃತ್ತ್ಯರ್ಥಂ = ಉಪಾಸನೆಯು ಸ್ವೇಚ್ಛೆಯಿಂದಲೇ ಎಂದೇ ಅಂಗೀಕರಿಸಬೇಕು. ಹೊರತು ಅನಿಷ್ಟನಿವೃತ್ತಿಗಾಗಿ ಅಲ್ಲ. ಕುತಃ = ಯಾಕೆ? **ತರ್ತವ್ಯಾಭಾವಾತ್** = ಮುಕ್ತರಿಂದ ಪರಿಹರ್ತವ್ಯವಾದ ಅನಿಷ್ಟವೇ ಇಲ್ಲವಾದ್ದರಿಂದ. ತದಪಿ ಕುತಃ = ಅದೂ ಏಕೆ? **ಹಿ** = ಯಾವ ಕಾರಣ **ಅನ್ಯೇ** = ಕೆಲವು ಶಾಖಿಗಳು **ತಥಾ** = 'ತೀರ್ಣೋ ಹಿ' (ಬೃ. 6-3-22) ಎಂದು ಶ್ರುತಿಯನ್ನು ಪಠಿಸುವರೋ ತಸ್ಮಾತ್ = ಆ ಕಾರಣ.

**ಸೂ.ರ.:– एवं च साम्पराये तर्तव्याभावात् । अपि च मुक्तैर्योगाद्यप्यनुष्ठीयते । किमुतोपासनम् । कृष्णो मुक्तैरिति भारतवचनात् । अतो मुक्तावप्युपासनानुवृत्तेर्निरुपाधिकं तत्संसारे कर्तव्यमिति सिद्धम् ॥**

ಮೋಕ್ಷದಲ್ಲಿ ತರ್ತವ್ಯವಾದ ಅನಿಷ್ಟವೇ ಇಲ್ಲವಾದ್ದರಿಂದ ''ಅನಿಷ್ಟನಿವೃತ್ತಿಗಾಗಿ ಉಪಾಸನೆ ಮಾಡುವುದು'' ಎಂದು ಹೇಳುವುದು ಸರಿಯಲ್ಲ. ''ಕೃಷ್ಣೋ ಮುಕ್ತೈರಿಜ್ಯತೇ ವೀತಮೋಹೈಃ ।'' ಎಂಬುದಾಗಿ ಭಾರತವಚನ ಇರುವುದರಿಂದ, ಮುಕ್ತರಿಂದ ಯೋಗಾದಿಗಳೂ ಅನುಷ್ಠಾನ ಮಾಡಲ್ಪಡುತ್ತದೆ ಎಂದಮೇಲೆ ಇನ್ನು ಉಪಾಸನೆ ಮಾಡಲ್ಪಡುತ್ತದೆ ಎಂದು ಏನು ಹೇಳುವುದು?

ಆದ್ದರಿಂದ ಮುಕ್ತಿಯಲ್ಲಿಯೂ ಉಪಾಸನೆಯು ಅನುವೃತ್ತವಾಗುವುದರಿಂದ ನಿರುಪಾಧಿಕವಾಗಿ ಅದು ಸಂಸಾರದಲ್ಲಿಯೂ ಕರ್ತವ್ಯವಾಗಿದೆ ಎಂದು ಸಿದ್ಧವಾಗುತ್ತದೆ.

ಹಾನ್ಯಧಿಕರಣವು ಮುಗಿಯಿತು.

ಅಧಿಕರಣ – 18

## ಛಂದಾಧಿಕರಣ

### ಸಂಗತಿ

**ಸೂ.ರ.:– अत्र मुक्तानां कर्मणि नियमाभावः समर्थ्यते ।**

ಮುಕ್ತರಿಗೆ ಕರ್ಮದಲ್ಲಿ ನಿಯಮಾಭಾವವನ್ನು ಸಮರ್ಥಿಸುತ್ತಾರೆ ಹದಿನೆಂಟನೇ ಈ ಛಂದಾಧಿಕರಣದಲ್ಲಿ.

### ಪೂರ್ವಪಕ್ಷ

**ಸೂ.ರ.:– ननु मुक्ता नियमेनानुष्ठानवन्तः । विष्णुपूजात्मकत्वात्कर्मणि शक्तत्वाच्च तेषाम् । अन्यथा नियमेनोपासनमपि न ते कुर्युः । अविशेषात् । अतो मुक्तानां कर्मोपासनयोः साम्यात्प्राक् न कर्मणोऽतिशयोपासनं कार्यमिति प्राप्ते सूत्रितम् ॥**

ಮುಕ್ತರು ನಿಯಮೇನ ಅನುಷ್ಠಾನವಂತರಾಗಿದ್ದಾರೆ. ಯಾಕೆ? ಕರ್ಮಗಳು ವಿಷ್ಣುಪೂಜಾತ್ಮಕವಾದ್ದರಿಂದ ಹಾಗೂ ಮುಕ್ತರು ಕರ್ಮ ಮಾಡುವುದರಲ್ಲಿ ಶಕ್ತ-ರಾದದ್ದರಿಂದ. ಅನ್ಯಥಾ ಕರ್ಮ–ಉಪಾಸನೆ ಎರಡೂ ಸಮಾನವಾದ್ದರಿಂದ ನಿಯಮೇನ ಉಪಾಸನೆಯನ್ನೂ ಅವರು ಮಾಡುವುದಿಲ್ಲ. ಆದ್ದರಿಂದ ಮುಕ್ತರಿಗೆ ಕರ್ಮ–ಉಪಾಸನೆಗಳೆರಡರಲ್ಲೂ ಸಾಮ್ಯ ಇರುವುದರಿಂದ ಸಂಸಾರದಲ್ಲಿ ಕರ್ಮ-ಕ್ಕಿಂತಲೂ ಉಪಾಸನೆಯನ್ನು ಅತಿಶಯವಾಗಿ ಮಾಡಬೇಕಿಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರ ಹೇಳುತ್ತಾರೆ –

### ॐ छन्दत उभयाविरोधात् ॐ (३-३-२९)

**ಸೂತ್ರಾರ್ಥ** :- ಮುಕ್ತಾಃ = ಮುಕ್ತರು **ಛಂದತಃ** = ಸ್ವೇಚ್ಛೆಯನ್ನು ಅನುಸರಿಸಿಯೇ ಕರ್ಮ ಕುರ್ವಂತಿ ನ ವಿಧಿತಃ = ಕರ್ಮ ಮಾಡುತ್ತಾರೆ ಹೊರತು ವಿಧಿಗೆ ಅನುಸಾರವಾಗಿ ಅಲ್ಲ. ಕುತಃ = ಯಾಕೆ? **ಉಭಯಾವಿರೋಧಾತ್** = ಕರ್ಮಕರಣ – ಅಕರಣಗಳಿಗೆ ವಿಧಿಬಂಧ – ಪ್ರತ್ಯವಾಯಗಳು ಇಲ್ಲವಾದ್ದರಿಂದ.

## ಸಿದ್ಧಾಂತ

**ಸೂ.ರ.:– एवं च न मुक्तानां कर्मणि नियमः । अपि तु स्वेच्छया कदाचित्कुर्वन्ति कदाचिन्न कुर्वन्ति । नियमेनानुष्ठानप्रयोजकयोर्विधिबन्धप्रत्यवाययोरभावात् । अतो मुक्तस्य कर्मनियमाभावात्संसारेऽप्युपासनमाधिक्येन कर्तव्यमिति सिद्धम् ॥**

ಮುಕ್ತರಿಗೆ ಕರ್ಮವಿಷಯದಲ್ಲಿ ನಿಯಮ ಇಲ್ಲ. ಕಿಂತು ಸ್ವೇಚ್ಛೆಯಿಂದ ಕದಾಚಿತ್ ಮಾಡುತ್ತಾರೆ, ಕದಾಚಿತ್ ಮಾಡುವುದಿಲ್ಲ, ನಿಯಮೇನ ಅನುಷ್ಠಾನ ಪ್ರಯೋಜಕವಾದ ವಿಧಿಬಂಧ-ಪ್ರತ್ಯವಾಯಗಳು ಇಲ್ಲವಾದ್ದರಿಂದ.

ಆದ್ದರಿಂದ ಮುಕ್ತರಿಗೆ ಕರ್ಮನಿಯಮ ಇಲ್ಲವಾದ್ದರಿಂದ ಸಂಸಾರದಲ್ಲಿಯೂ ಉಪಾಸನೆಯನ್ನು ಕರ್ಮಕ್ಕಿಂತಲೂ ಅತಿಶಯವಾಗಿ ಮಾಡಬೇಕು ಎಂದು ಸಿದ್ಧವಾಗುತ್ತದೆ.

## ಸೂತ್ರ - 30

**ಸೂ.ರ.:– ननु मुक्तानां विधिबन्धप्रत्यवायाभाव एव कुतो येन कर्मण्यनियम इत्यतः समादधत्सूत्रमाह ॥**

ಮುಕ್ತರಿಗೆ ವಿಧಿಬಂಧ-ಪ್ರತ್ಯವಾಯಗಳು ಇಲ್ಲ ಎನ್ನುವುದೇ ಹೇಗೆ ಸಿದ್ಧ-ವಾಗುತ್ತದೆ? ಒಂದುವೇಳೆ ಸಿದ್ಧವಾಗಿದ್ದರೆ ಕರ್ಮದಲ್ಲಿ ಅನಿಯಮ ಹೇಳಬಹುದಿತ್ತು ಎಂದು ಶಂಕೆ ಬಂದರೆ, ಅದಕ್ಕೆ ಸಮಾಧಾನ ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ-

**ॐ गतेरर्थवत्त्वमुभयथाऽन्यथा हि विरोधः ॐ (३-३-३०)**

**ಸೂತ್ರಾರ್ಥ :- ಉಭಯಥಾ ಹಿ** = ಬಂಧ-ಪ್ರತ್ಯವಾಯಗಳು ಇಲ್ಲವಾದ್ದ-ರಿಂದಲೇ **ಗತೇಃ** = ಮುಕ್ತಿಗೆ **ಅರ್ಥವತ್ತ್ವಂ** = ಪುರುಷಾರ್ಥತ್ವವು ಉಪಪನ್ನ-ವಾಗುತ್ತದೆ. **ಅನ್ಯಥಾ** = ಮುಕ್ತಿಯಲ್ಲಿ ಬಂಧ-ಪ್ರತ್ಯವಾಯಗಳು ಇರುವುದಾಗಿದ್ದರೆ **ವಿರೋಧಃ** = ಮುಕ್ತಿಯು ಸಂಸಾರಸಮವಾಗುವುದರಿಂದ ಅಪುರುಷಾರ್ಥತ್ವರೂಪ ವಿರೋಧವು ಬರುತ್ತದೆ.

**ಸೂ.ರ.:– एवं च मुक्तेः कर्मनियमाभावाङ्गीकार एव मुक्तेः पुरुषार्थत्वादन्यथा तन्न स्यात् । अतः संसारेऽप्युपासनमाधिक्येन कार्यमिति सिद्धम् ॥**

ಮುಕ್ತಿಯಲ್ಲಿ ಕರ್ಮನಿಯಮ ಇಲ್ಲ ಎಂದು ಅಂಗೀಕರಿಸಿದರೇನೇ ಮುಕ್ತಿಗೆ ಪುರುಷಾರ್ಥತ್ವವು ಉಪಪನ್ನವಾಗುತ್ತದೆ. ಅನ್ಯಥಾ ಪುರುಷಾರ್ಥತ್ವವು ಉಪಪನ್ನ-ವಾಗುವುದಿಲ್ಲ.

ಆದ್ದರಿಂದ ಸಂಸಾರದಲ್ಲಿಯೂ ಸಹ ಉಪಾಸನೆಯನ್ನು ಆಧಿಕ್ಯೇನ ಮಾಡಬೇಕು ಎಂದು ಸಿದ್ಧವಾಗುತ್ತದೆ.

## ಸೂತ್ರ - 31

**ಸೂ.ರ.:– ननु विध्याद्यभावो मुक्तानां कर्मानियमसम्भावनायैव भवति । न तूपपादनाय । ईश्वरकर्मणि व्यभिचारात् । अत उपपादका-भावादनुपपन्न एवासौ नियम इति प्राप्ते सूत्रमाह ॥**

ಮುಕ್ತರಿಗೆ ಕರ್ಮದ ವಿಷಯದಲ್ಲಿ ವಿಧಿ-ಪ್ರತ್ಯವಾಯಗಳ ಅಭಾವವು ಕರ್ಮ-ಅನಿಯಮಕ್ಕೆ ಸಂಭಾವಕವಾಗುತ್ತದೆಯೇ ಹೊರತು ಉಪಪಾದಕ (ಸಾಧಕ)-ವಾಗುವುದಿಲ್ಲ. ಒಂದುವೇಳೆ ವಿಧಿಪ್ರತ್ಯವಾಯಗಳ ಅಭಾವವು ಕರ್ಮಅನಿಯಮಕ್ಕೆ ಕಾರಣ ಎನ್ನುವುದಾದರೆ, ಈಶ್ವರ ಮಾಡುವ ಸೃಷ್ಟಿ ಮೊದಲಾದ ಕರ್ಮಗಳಲ್ಲಿ ವಿಧಿ -ಪ್ರತ್ಯವಾಯಗಳ ಅಭಾವ ಇದ್ದರೂ ಕರ್ಮಅನಿಯಮ ಇಲ್ಲವಾದ್ದರಿಂದ (ಕರ್ಮ-ನಿಯಮ ಇರುವುದರಿಂದ = ನಿಯಮೇನ ಕರ್ಮ ಮಾಡುವುದರಿಂದ) ವ್ಯಭಿಚಾರ ಬರಬೇಕಾಗುತ್ತದೆ.

ಆದ್ದರಿಂದ ಉಪಪಾದಕ (ಸಾಧಕ) ಯಾವುದೂ ಇಲ್ಲವಾದ್ದರಿಂದ ಮುಕ್ತರಿಗೆ ಕರ್ಮನಿಯಮವು ಉಪಪನ್ನವೇ ಆಗುತ್ತದೆ ಎಂಬುದಾಗಿ ಆಶಂಕೆ ಬಂದರೆ, ಅದನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ उपपन्नस्तल्लक्षणार्थोपलब्धेर्लोकवत् ॐ (३-३-३१)**

**ಸೂತ್ರಾರ್ಥ :- ಲೋಕವತ್** = ಯಾವ ರೀತಿಯಾಗಿ ಲೋಕದಲ್ಲಿ ಯಾಗಾಂಗ ವಿಷ್ಣುಕ್ರಮಣದ ಕ್ರಿಯಾನುಷ್ಠಾನನಿಯಮವು ಯಾಗಸಂಪೂರ್ತಿಯಾದ ಅನಂತರವೂ ಇರುವುದಿಲ್ಲ. ಕಿಂತು ಕೆಲವೊಮ್ಮೆ ಇರುತ್ತದೆ. ಕೆಲವೊಮ್ಮೆ ಇರುವುದಿಲ್ಲ. ಹೇಗೋ ಅದರಂತೆ ಮುಕ್ತಾನಾಂ ಏವಂಭಾವಃ = ಮುಕ್ತರು ಕೆಲವೊಮ್ಮೆ ಕರ್ಮ ಮಾಡುತ್ತಾರೆ, ಕೆಲವೊಮ್ಮೆ ಕರ್ಮ ಮಾಡುವುದಿಲ್ಲ, ಮುಕ್ತರ ಈ ವಿಧವಾದ ಕರ್ಮ ಅನಿಯಮವು **ಉಪಪನ್ನಃ** = ಯುಕ್ತವೇ ಆಗಿರುತ್ತದೆ.

ಇದು ಯಾಕೆ ? **ತಲ್ಲಕ್ಷಣಾರ್ಥೋಪಲಬ್ಧೇಃ** = ಪರಂಪರಯಾ ಕರ್ಮಸಾಧ್ಯ-ವಾದ ಮೋಕ್ಷಫಲವು ಪ್ರಾಪ್ತವಾದದ್ದರಿಂದ.

**ಸೂ.ರ.:– एवं चोपपन्न एव स्वेच्छया कदाचित्कर्म कुर्वन्ति कदाचिन्नेत्येवं भावः । तत्फलस्य मोक्षस्य प्राप्तत्वात् । तत्फलस्य च प्राप्त्यनन्तरमप्रवर्तकत्वात् । यथा लोके यागपूर्तिलक्षणफलस्य याग-पूर्त्यनन्तरं विष्णुक्रमणादौ न प्रवर्तकत्वं किन्त्विच्छयैव प्रवर्तकत्वम् । अत्र प्रयोगः । मुक्ता न कर्मानुष्ठाननियमवन्तः । विशेषहेत्वभावे सति प्राप्ततत्फलत्वात् । यजमानवदिति । अतो मुक्तस्य कर्मनियमाभावेन संसारेऽप्युपासनमाधिक्येन कार्यमिति सिद्धम् ॥**

ಮುಕ್ತರು ಸ್ವೇಚ್ಛೆಯಿಂದ ಕೆಲವೊಮ್ಮೆ ಕರ್ಮವನ್ನು ಮಾಡುತ್ತಾರೆ. ಕೆಲವೊಮ್ಮೆ ಕರ್ಮವನ್ನು ಮಾಡುವುದಿಲ್ಲ. ಮುಕ್ತರ ಈ ವಿಧವಾದ ಕರ್ಮಅನಿಯಮವು ಉಪಪನ್ನವೇ ಆಗಿದೆ. ಕಾರಣ - ಕರ್ಮನಿಯಮದ ಫಲವಾದ ಮೋಕ್ಷವು ಪ್ರಾಪ್ತ-(ಉಪಲಬ್ಧ)ವಾದದ್ದರಿಂದ. ಅದರ ಫಲವು ಸಿಕ್ಕ ನಂತರವೂ ಪ್ರವರ್ತಕವಾಗುವುದಿಲ್ಲ. ಉದಾಹರಣೆಗೆ - ಯಾವ ರೀತಿಯಾಗಿ ಲೋಕದಲ್ಲಿ ಯಾಗಪೂರ್ತಿರೂಪಫಲವು ಯಾಗಪೂರ್ತಿಯಾದ ನಂತರದಲ್ಲಿಯೂ ವಿಷ್ಣುಕ್ರಮಣಾದಿಗಳಿಗೆ ಪ್ರವರ್ತಕ-ವಾಗುವುದಿಲ್ಲ. ಕಿಂತು ಸ್ವೇಚ್ಛೆಯಿಂದಲೇ ಪ್ರವರ್ತಕವಾಗುತ್ತದೆ. ಆದರಂತೆ ಮೋಕ್ಷ-ರೂಪವಾದ ಫಲವು ಸಿಕ್ಕಿದ್ದರಿಂದ ಮುಕ್ತರ ಕರ್ಮನಿಯಮವು ಸ್ವೇಚ್ಛೆಯಿಂದಲೇ ಪ್ರವರ್ತಕವಾಗುತ್ತದೆ.

ಇಲ್ಲಿ ಇಷ್ಟು ಅನುಮಾನಪ್ರಯೋಗ ಮಾಡಿದಂತಾಗುತ್ತದೆ -

ಮುಕ್ತಾಃ, ನ ಕರ್ಮಾನುಷ್ಠಾನನಿಯಮವಂತಃ, ವಿಶೇಷಹೇತ್ವಭಾವೇ ಸತಿ ಪ್ರಾಪ್ತತತ್ಫಲತ್ವಾತ್ । ಯಜಮಾನವತ್ ।

ಆದ್ದರಿಂದ ಮುಕ್ತರಿಗೆ ಕರ್ಮನಿಯಮ ಇಲ್ಲವಾದ್ದರಿಂದ ಸಂಸಾರದಲ್ಲಿಯೂ ಸಹ ಉಪಾಸನೆಯನ್ನು ಅಧಿಕವಾಗಿ ಮಾಡಬೇಕು ಎಂದು ಸಿದ್ಧವಾಗುತ್ತದೆ.

ಛಂದಾಧಿಕರಣವು ಮುಗಿಯಿತು.

ಅಧಿಕರಣ - 19

# ಅನಿಯಮಾಧಿಕರಣ

## ಸಂಗತಿ

**ಸೂ.ರ.:- अत्रोपासनोत्पन्नब्रह्मज्ञानानां सर्वेषां मोक्षनैयत्यं साध्यते ।**

ಉಪಾಸನೋತ್ಪನ್ನ ಬ್ರಹ್ಮಜ್ಞಾನವನ್ನು ಸಂಪಾದಿಸಿದ ಎಲ್ಲ ಅಪರೋಕ್ಷಜ್ಞಾನಿಗಳಿಗೂ ಮೋಕ್ಷನೈಯತ್ಯವನ್ನು (ನಿಯಮೇನ ಮೋಕ್ಷವಾಗುತ್ತದೆ ಎಂಬುದನ್ನು) ಸಾಧಿಸುತ್ತಾರೆ ಹತ್ತೊಂಭತ್ತನೇ ಈ ಅನಿಯಮಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:- ननु न सर्वेषां ज्ञानिनां मोक्षः । केषाञ्चिज्ज्ञानिनां स्वोत्तमद्रोहशापाभ्यामयोग्यतोत्पादात् । न ह्ययोग्यानां तत्प्राप्तिः सम्भवति । तथा सत्ययोग्यानामपि सर्वगुणोपसंहारप्रसङ्गात् । अतः सर्वेषां ज्ञानिनां मोक्षाभावेन न निःशङ्कोपासनं कर्तव्यमिति प्राप्ते सूत्रितम् ॥**

ಅಪರೋಕ್ಷಜ್ಞಾನ ಸಂಪಾದಿಸಿದ ಎಲ್ಲ ಜ್ಞಾನಿಗಳಿಗೂ ಮೋಕ್ಷ ನಿಯತವಲ್ಲ. ಕಾರಣ - ಕೆಲವು ಜ್ಞಾನಿಗಳಿಗೆ ಸ್ವೋತ್ತಮದ್ರೋಹ - ಶಾಪಗಳಿಂದಾಗಿ ಮೋಕ್ಷ ಹೊಂದುವ ಅಯೋಗ್ಯತೆ (ಯೋಗ್ಯತಾಭಾವ) ಉತ್ಪನ್ನವಾಗುವುದರಿಂದ. ಯೋಗ್ಯತೆ ಇಲ್ಲದವರಿಗೆ ಮೋಕ್ಷಪ್ರಾಪ್ತಿಯು ಸಂಭಾವಿತವಾಗುವುದಿಲ್ಲ. ಹಾಗೆ ಯೋಗ್ಯತೆ ಇಲ್ಲದಿದ್ದರೂ ಮೋಕ್ಷಪ್ರಾಪ್ತಿ ಆಗುವುದಾದರೆ ಅಯೋಗ್ಯರೂ ಸಹ ಸರ್ವಗುಣೋಪ-ಸಂಹಾರ ಮಾಡಬೇಕಾದೀತು.

ಆದ್ದರಿಂದ ಎಲ್ಲ ಅಪರೋಕ್ಷಜ್ಞಾನಿಗಳಿಗೂ ನಿಯಮೇನ ಮೋಕ್ಷ ಆಗದ ಕಾರಣ ನಿಃಶಂಕವಾಗಿ ಉಪಾಸನೆಯು ಕರ್ತವ್ಯವಾಗಿಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡಲು ಸೂತ್ರವನ್ನು ಹೇಳುತ್ತಾರೆ -

**ॐ अनियमः सर्वेषामविरोधाच्छब्दानुमानाभ्याम् ॐ (३-३-३२)**

**ಸೂತ್ರಾರ್ಥ** :- **ಅನಿಯಮಃ** = ಅಪರೋಕ್ಷಜ್ಞಾನಿಗಳ ಮಧ್ಯದಲ್ಲಿ ಕೆಲವರಿಗೆ ಮೋಕ್ಷವಾಗುತ್ತದೆ, ಕೆಲವರಿಗೆ ಮೋಕ್ಷ ಆಗುವುದಿಲ್ಲ ಎಂಬ ವ್ಯವಸ್ಥಾ ಇಲ್ಲ ಎಂದು ತಿಳಿಯುತ್ತದೆ. ಕುತಃ = ಯಾಕೆ? **ಸರ್ವೇಷಾಂ** ಅಪಿ ಮೋಕ್ಷೇ **ಅವಿರೋಧಾತ್** = ಎಲ್ಲ ಜ್ಞಾನಿಗಳಿಗೂ ಮೋಕ್ಷವಿಚಾರದಲ್ಲಿ (ವಿರೋಧ ಇಲ್ಲವಾದ್ದರಿಂದ) ನಿಷೇಧಕ ಇಲ್ಲವಾದ್ದರಿಂದ. ಕಿಂಚ = ಮತ್ತು **ಶಬ್ದಾನುಮಾನಾಭ್ಯಾಂ** = "ನ ಕಶ್ಚಿತ್" ಎಂದು ಕೌಂಡಿನ್ಯಶ್ರುತಿ ಇರುವುದರಿಂದ, ಹಾಗೂ ತನ್ಮೂಲಕ ಅನುಮಾನವೂ ಇರುವುದರಿಂದ.

## ಸಿದ್ಧಾಂತ

**ಸೂ.ರ.:- एवं चात्स्येव सर्वेषां ज्ञानिनां मोक्षः । केषाञ्चिदेव मोक्षो न सर्वेषामिति वदन् प्रष्टव्यः । किं बाधकसद्भावान्न सर्वेषां मोक्ष उत साधकाभावात् । नाद्यः । तदभावात् । न चायोग्यतोत्पादको बाधकः । ये ज्ञानविषया इति वचनादयोग्यतोत्पादानङ्गीकारात् । न द्वितीयः । न कश्चिदिति श्रुतिविरोधापत्तेः । विप्रतिपन्ना ज्ञानिनो नियतमोक्षाः ज्ञानित्वात्सम्मतवदित्यनुमानाच्च । बाधकाभावेन श्रुति-मूलकत्वेन चोपसंहारानुमानाबाधात् । अतो ज्ञानिनां मोक्षस्य नियतत्वान्निःशङ्कमुपासनं कार्यमिति सिद्धम् ॥**

ಎಲ್ಲ ಅಪರೋಕ್ಷಜ್ಞಾನಿಗಳಿಗೂ ನಿಯಮೇನ ಮೋಕ್ಷವು ಇದ್ದೇ ಇದೆ.

ಕೆಲವು ಜ್ಞಾನಿಗಳಿಗೆ ಮಾತ್ರವೇ ಮೋಕ್ಷವಾಗುತ್ತದೆ ಹೊರತು ಎಲ್ಲ ಜ್ಞಾನಿಗಳಿಗೂ ಆಗುವುದಿಲ್ಲ ಎಂದು ಶಂಕಿಸುವವನನ್ನು ಕುರಿತು ಈ ರೀತಿ ಪ್ರಶ್ನಿಸುತ್ತೇವೆ -

ಬಾಧಕ ಇರುವುದರಿಂದ ಎಲ್ಲರಿಗೂ ಮೋಕ್ಷವಿಲ್ಲ ಎಂದು ಹೇಳುತ್ತೀಯೋ? ಅಥವಾ ಎಲ್ಲರಿಗೂ ಮೋಕ್ಷವಿದೆ ಎಂಬ ವಿಷಯದಲ್ಲಿ ಸಾಧಕಪ್ರಮಾಣ ಇಲ್ಲವಾದ್ದ-ರಿಂದ ಹಾಗೆ ಹೇಳುತ್ತೀಯೋ?

ಬಾಧಕ ಇರುವುದರಿಂದ ಎಲ್ಲರಿಗೂ ಮೋಕ್ಷವಿಲ್ಲ ಎಂದು ಹೇಳುವುದು ಸರಿಯಾಗುವುದಿಲ್ಲ, ಕಾರಣ ಎಲ್ಲರಿಗೂ ಮೋಕ್ಷ ಹೇಳಿದರೆ ಆ ವಿಧವಾದ ಯಾವ ಬಾಧಕವೂ ಇಲ್ಲವಾದ್ದರಿಂದ. ಹಾಗೇಕೆ ಹೇಳುತ್ತೀರಿ? ಅಯೋಗ್ಯತೆಗೆ ಉತ್ಪಾದಕವಾದ

ಸ್ತೋತ್ರಮದ್ರೋಹ-ಶಾಪಾದಿಗಳೇ ಬಾಧಕವಾಗಿ ಇವೆಯಲ್ಲ? ಎಂದರೆ, ಅದು ಸರಿಯಲ್ಲ. "ಯೇ ಜ್ಞಾನವಿಷಯಾಃ ಶಾಪಾಃ ..." ಎಂದು ವಚನವಿರುವುದರಿಂದ ಯಾವುದೇ ವಿಧವಾದ ಶಾಪಾದಿಗಳೂ ಅಯೋಗ್ಯತೆಗೆ ಉತ್ಪಾದಕ ಎಂದು ಅಂಗೀಕರಿಸಿಲ್ಲ.

ಇನ್ನು ಸಾಧಕವಿಲ್ಲವಾದ್ದರಿಂದ ಎಲ್ಲರಿಗೂ ಮೋಕ್ಷವಿಲ್ಲ ಎಂದು ಹೇಳುವುದೂ ಸರಿಯಲ್ಲ. ಕಾರಣ - "ನ ಕಶ್ಚಿತ್ ಬ್ರಹ್ಮವಿತ್ ಸ್ಮೃತಿಮನುಭವತಿ ಮುಕ್ತೋ ಹ್ಯೇವ ಭವತಿ ತಸ್ಮಾದಾಹುಃ ಸ್ಮೃತಿಹೇತಿ" ಎಂಬುದಾಗಿ ಕೌಂಡಿನ್ಯಶ್ರುತಿ ಇರುವುದರಿಂದ ಅದರ ವಿರೋಧ ಬರಬೇಕಾಗುತ್ತದೆ.

ಮತ್ತು "ವಿಪ್ರತಿಪನ್ನಾ ಜ್ಞಾನಿನಃ, ಮೋಕ್ಷವಂತಃ, ಜ್ಞಾನಿತ್ವಾತ್, ಸಮ್ಮತವತ್ ।" ಎಂಬುದಾಗಿ ಅನುಮಾನ ಪ್ರಮಾಣವೂ ಇದೆ. ಬಾಧಕವಿಲ್ಲದ ಕಾರಣ, ಶ್ರುತಿಮೂಲಕ-ವಾದ್ದರಿಂದ ಉಪಸಂಹಾರಾನುಮಾನವು ಅಬಾಧಿತವಾಗಿದೆ. ಆದ್ದರಿಂದ ಜ್ಞಾನಿ-ಗಳೆಲ್ಲರಿಗೂ ಮೋಕ್ಷವು ನಿಯತವಾದ್ದರಿಂದ ನಿಃಶಂಕವಾಗಿ ಉಪಾಸನೆಯು ಕರ್ತವ್ಯ-ವಾಗಿದೆ ಎಂದು ಸಿದ್ಧವಾಗುತ್ತದೆ.

ಅನಿಯಮಾಧಿಕರಣವು ಮುಗಿಯಿತು.

*ಅಧಿಕರಣ – 20*

# ಯಾವದಧಿಕರಣ

## ಸಂಗತಿ

**ಸೂ.ರ.:– अत्रोपासनेऽधिकारनियमः समर्थ्यते ।**

ಭಗವದ್‌ಜ್ಞಾನಸಾಧನವಾದ ಉಪಾಸನಾವಿಷಯದಲ್ಲಿ ಅಧಿಕಾರನಿಯಮವನ್ನು ಸಮರ್ಥಿಸುತ್ತಾರೆ ಇಪ್ಪತ್ತನೇ ಈ ಯಾವದಧಿಕರಣದಲ್ಲಿ.

ಉಪಾಸನಾವಂತರು ಉಪಾಸನಾಧಿಕಾರನಿಯತಿ ಉಳ್ಳವರೋ ? ಇಲ್ಲವೋ ? ಎಂದು ಸಂದೇಹ.

## ಪೂರ್ವಪಕ್ಷ

**ಸೂ.ರ.:– ननु नोपासनावन्तोऽधिकारनियमवन्तः । प्रमाणाभावात् । न च मुक्तावानन्दतारतम्यान्यथानुपपत्तिः प्रमाणम् । तारतम्यस्य प्रामाणिकत्वेऽप्युपासनाप्रयत्नतारतम्येनैवान्यथासिद्धेः । अत उपास्त्यधिकारनियमाभावेन प्राप्तेश्च समञ्जसमित्याद्ययुक्तमिति प्राप्ते सूत्रितम् ॥**

ಉಪಾಸನಾವಂತರು ಅಧಿಕಾರನಿಯಮ ಉಳ್ಳವರು ಅಲ್ಲ, ಕಾರಣ ಅವರ ಉಪಾಸನಾ ಅಧಿಕಾರನಿಯಮದಲ್ಲಿ ಪ್ರಮಾಣವಿಲ್ಲವಾದ್ದರಿಂದ.

ಪ್ರಮಾಣ ಇಲ್ಲ ಎಂದು ಏಕೆ ಹೇಳುತ್ತೀರಿ? ಮುಕ್ತಿಯಲ್ಲಿ ಇರುವ ಆನಂದ– ತಾರತಮ್ಯವೇ ಪ್ರಮಾಣವಾಗಿದೆಯಲ್ಲ? ಎಂದರೆ, ಅದು ಸರಿಯಲ್ಲ, ಉಪಾಸನಾದಿ ಪ್ರಯತ್ನತಾರತಮ್ಯದಿಂದಲೇ ಆನಂದತಾರತಮ್ಯವು ಉಪಪನ್ನವಾಗುವುದರಿಂದ ಅಧಿ ಕಾರನಿಯಮಕ್ಕೆ ಅಪ್ರಯೋಜಕವಾಗಿದೆ. ಆದ್ದರಿಂದ ಉಪಾಸನಾವಂತರಿಗೆ ಅಧಿ ಕಾರನಿಯಮವಿಲ್ಲವಾದ್ದರಿಂದ "ಪ್ರಾಪ್ತೇಶ್ಚ ಸಮಂಜಸಂ" ಎಂದು ಹೇಳಿದ್ದು ಯುಕ್ತವಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

## ॐ यावदधिकारमवस्थितिराधिकारिकाणाम् ॐ (३-३-३३)

**ಸೂತ್ರಾರ್ಥ** :- **ಆಧಿಕಾರಿಕಾಣಾಂ** = ಯೋಗ್ಯತಾನುಸಾರಿ ಉಪಾಸನಾಶೀಲರಾದ ಬ್ರಹ್ಮಾದಿಗಳಿಗೆ **ಯಾವದಧಿಕಾರಂ** = ಸ್ವಸ್ವ ಅಧಿಕಾರಾನುಸಾರವಾಗಿಯೇ ಮುಕ್ತೌ **ಅವಸ್ಥಿತಿಃ** = ಮುಕ್ತಿಯಲ್ಲಿ ಅವಸ್ಥಿತಿಯು ಉಂಟಾಗುತ್ತದೆ. ಅವಸ್ಥಿತಾನಾಂ ಉಪಾಸನಾವತ್ತಾರತಮ್ಯೇನೈವ ಮುಕ್ತೌ ತೇಷಾಂ ಫಲಂ = ಅವಸ್ಥಿತರಾದ ಅವರಿಗೆ ಉಪಾಸನಾತಾರತಮ್ಯಾನುಸಾರವಾಗಿಯೇ ಮುಕ್ತಿಯಲ್ಲಿ ಫಲವು ಉಂಟಾಗುತ್ತದೆ.

### ಸಿದ್ಧಾಂತ

**ಸೂ.ರ.:–** एवं चात्स्येव नियमः अयमेतद्गुणोपासने योग्योऽयं नेति । तेन विना श्रुत्युक्तानन्दतारतम्यकथनस्याप्ययोगात् । प्रयत्नतारतम्यस्यापि योग्यतातारतम्याधीनत्वात् । स्वाधिकाराधिको यत्न इति वचनात् । ततश्चोपासनाधिकारे नियमादुक्तं युक्तमिति सिद्धम् ॥

"ಇವನು ಈ ಗುಣೋಪಾಸನೆಯಲ್ಲಿ ಯೋಗ್ಯನಾಗಿದ್ದಾನೆ, ಇವನು ಯೋಗ್ಯನಲ್ಲ" ಎಂಬುದಾಗಿ ಅಧಿಕಾರನಿಯಮವು ಇದ್ದೇ ಇದೆ. ಈ ರೀತಿಯಾದ ನಿಯಮ ಇಲ್ಲದೇ ಹೋದರೆ ಶ್ರುತ್ಯುಕ್ತವಾದ ಆನಂದತಾರತಮ್ಯವನ್ನು ಹೇಳುವುದೂ ಅಯುಕ್ತವಾಗಬೇಕಾಗುತ್ತದೆ.

ಸ್ವಾಧಿಕಾರಾಧಿಕೋ ಯತ್ನಃ ಪ್ರಾಯಶೋ ನೋಪಪದ್ಯತೇ ।
ಕಥಂಚಿದಧಿಕೇ ಯತ್ನೇ ದೋಷಃ ಕಶ್ಚಿತ್ಸಮಾಪತೇತ್ ॥

ಎಂಬುದಾಗಿ ವಚನ ಇರುವುದರಿಂದ ಪ್ರಯತ್ನತಾರತಮ್ಯವೂ ಯೋಗ್ಯತಾತಾರತಮ್ಯಾಧೀನವಾಗಿದೆ.

ಆದ್ದರಿಂದ ಉಪಾಸನೆಯಲ್ಲಿ ಅಧಿಕಾರನಿಯಮ ಇರುವುದರಿಂದ "ಪ್ರಾಪ್ತೇಶ್ಚ ಸಮಂಜಸಂ" ಎಂದು ಹೇಳಿದ್ದು ಯುಕ್ತವಾಗಿದೆ ಎಂದು ಸಿದ್ಧವಾಗುತ್ತದೆ.

### ಸೂತ್ರ - 34

**ಸೂ.ರ.:–** ननु मुक्तावानन्दतारतम्यमेव नोपपद्यते । असमत्वे मुक्तानां परस्परविरोधप्राप्तेः । लोके तथा दर्शनात् । तारतम्यश्रुतीनां तु

संसारविषयत्वात् । तदङ्गीकारे मुक्तौ द्वेषेर्ष्यादिप्रसक्तेश्च इत्याशङ्क्य समादधत्सूत्रं पठति ।

ಮುಕ್ತಿಯಲ್ಲಿ ಆನಂದತಾರತಮ್ಯವೇ ಉಪಪನ್ನವಾಗುವುದಿಲ್ಲ, ಯಾಕೆಂದರೆ - ಹಾಗೆ ಆನಂದತಾರತಮ್ಯವನ್ನು ಹೇಳಿದರೆ ಅಸಮತ್ವವನ್ನು ಒಪ್ಪಿದಂತಾಗುತ್ತದೆ. ಮುಕ್ತರಲ್ಲಿ ಅಸಮತ್ವವನ್ನು ಅಂಗೀಕರಿಸಿದರೆ ಮುಕ್ತರಲ್ಲಿಯೇ ಪರಸ್ಪರವಿರೋಧ ಪ್ರಾಪ್ತವಾಗಬೇಕಾಗುತ್ತದೆ. ಲೋಕದಲ್ಲಿ ಹಾಗೆ ಕಂಡಿದ್ದರಿಂದ.

ಇನ್ನು ತಾರತಮ್ಯವನ್ನು ತಿಳಿಸುವ ಶ್ರುತಿಗಳಾದರೂ ಸಂಸಾರವಿಷಯಕವಾಗಿವೆ. ಮತ್ತು ಮುಕ್ತಿಯಲ್ಲಿ ಅಸಮತ್ವವನ್ನು ಅಂಗೀಕರಿಸಿದರೆ ಮುಕ್ತಿಯಲ್ಲಿ ದ್ವೇಷ-ಈರ್ಷ್ಯಾದಿಗಳು ಬರಬೇಕಾದ ಪ್ರಸಕ್ತಿ ಬರುತ್ತದೆ. ಆದ್ದರಿಂದ ಉಪಾಸನೆಯಲ್ಲಿ ಅಧಿಕಾರನಿಯಮ ಇಲ್ಲವಾದ್ದರಿಂದ "ಪ್ರಾಪ್ತೇಶ್ಚ ಸಮಂಜಸಂ" ಎಂದು ಹೇಳಿದ್ದು ಯುಕ್ತವಲ್ಲ ಎಂಬುದಾಗಿ ಆಕ್ಷೇಪ ಬಂದರೆ, ಸಮಾಧಾನಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ अक्षरधियां त्वविरोधः सामान्यतद्भावाभ्यामौपसदवत्तदुक्तम् ॐ (३-३-३४)**

**ಸೂತ್ರಾರ್ಥ** :- (ತು ಶಬ್ದವು ಅಪಿ ಎಂಬ ಅರ್ಥದಲ್ಲಿದೆ.) **ಅಕ್ಷರಧಿಯಾಂ** = ಬ್ರಹ್ಮಜ್ಞಾನಿಗಳಿಗೆ **ತು (ಅಪಿ)** ವಿಷಮತ್ವೇಽಪಿ = ವಿಷಮತ್ವ ಇದ್ದರೂ ಸಹ **ಅವಿರೋಧಃ** = ವಿರೋಧ ಇಲ್ಲ, ಕುತಃ = ಏಕೆ? ಬ್ರಹ್ಮಧೀತ್ವಾತ್ = ಬ್ರಹ್ಮಜ್ಞಾನಿಗಳಾದ್ದರಿಂದ. ಕಿಂ ಚ = ಮತ್ತು **ಸಾಮಾನ್ಯತದ್ಭಾವಾಭ್ಯಾಂ** = ಎಲ್ಲರಿಗೂ ದೋಷವಿಲ್ಲವಾದ್ದರಿಂದ, ಉತ್ತಮರಿಂದ ಅಧಮರಿಗೆ ಉಪಕಾರವೂ ಇಲ್ಲವಾದ್ದರಿಂದ. ಕಥಂ = ಹೇಗೆ? **ಔಪಸದವತ್** = ಸಚ್ಛಿಷ್ಯನಂತೆ. ಕಿಂ ಚ = ಮತ್ತು **ತದುಕ್ತಂ** = ತತ್ ಅಸಮತ್ವ ಇದ್ದರೂ ಸಹ ವಿರೋಧ ಇಲ್ಲ ಎನ್ನುವುದು "ನಾನಾ" ಎಂಬ ಶ್ರುತಿಯಲ್ಲಿ ಉಕ್ತಂ = ಹೇಳಲ್ಪಟ್ಟಿದೆ. ಆದ್ದರಿಂದಲೂ ಅವಿರೋಧಃ = ವಿರೋಧ ಇಲ್ಲ.

ಸೂ.ರ.:- एवं च विरोधाप्रसङ्गात् । विरोधे हि विषयलम्पटत्वं मात्सर्यादयोऽनुपकारित्वं च हेतवः । न चैतानि मुक्तेषु सम्भवन्ति । ब्रह्मधीत्वात् । निर्दोषत्वाच्च । अनुपकारित्वमपि नास्तीति प्रतियोगि-

सत्वस्य प्रमाणसिद्धत्वात् । तस्मादुपासनाधिकारे नियमादुक्तं युक्तमिति सिद्धम् ॥

ಮುಕ್ತರಲ್ಲಿ ವಿರೋಧದ ಪ್ರಸಕ್ತಿ ಬರುವುದಿಲ್ಲ. ಕಾರಣ - ವಿರೋಧ ಬರುವುದಕ್ಕೆ ವಿಷಯಲಂಪಟತ್ವ ಮಾತ್ಸರ್ಯಾದಿಗಳು ಹಾಗೂ ಅನುಪಕಾರಿತ್ವಗಳು ಹೇತು- ವಾಗಿವೆ. ಮುಕ್ತರಾದವರಲ್ಲಿ ಈ ದೋಷಗಳು ಸಂಭವಿಸುವುದಿಲ್ಲ. ಮುಕ್ತರು ಬ್ರಹ್ಮಜ್ಞಾನಿಗಳಾದ್ದರಿಂದ, ನಿರ್ದೋಷರಾದ್ದರಿಂದ. ಅನುಪಕಾರಿತ್ವವೂ ಅವರಲ್ಲಿ ಇಲ್ಲ. ಆದ್ದರಿಂದ ಉಪಾಸನಾಧಿಕಾರದಲ್ಲಿ ನಿಯಮ ಇರುವುದರಿಂದ "ಪ್ರಾಪ್ತೇಶ್ಚ ಸಮಂಜಸಂ" ಎಂದು ಹೇಳಿದ್ದು ಯುಕ್ತವಾಗಿದೆ ಎಂದು ಸಿದ್ಧವಾಗುತ್ತದೆ.

ಯಾವದಧಿಕರಣವು ಮುಗಿಯಿತು.

ಅಧಿಕರಣ – 21

# ಇಯದಾಮನನಾಧಿಕರಣ

## ಸಂಗತಿ

**ಸೂ.ರ.:– अत्रोपासनाधिकारिणां प्राणावसानत्वं समर्थ्यते ।**

ಉಪಾಸನಾಧಿಕಾರಿಗಳಿಗೆ ಪ್ರಾಣಾವಸಾನತ್ವವನ್ನು ಸಮರ್ಥಿಸುತ್ತಾರೆ ಇಪ್ಪತ್ತೊಂದನೇ ಈ ಇಯದಾಮನನಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु नाधिकारिणः प्राणावसानाः । प्राणः स्वोत्तमाधिकारिनियम्यः । अधिकारित्वात् । नामादिवत् इत्यनुमानविरोधात् । अतोऽधिकारिणां प्राणावसानत्वाभावेन हिरण्यगर्भ एव सर्वगुणोपास्तियोग्य इत्युक्तमयुक्तमिति प्राप्ते सूत्रितम् ॥**

ಅಧಿಕಾರಿಗಳು ಪ್ರಾಣಾವಸಾನರಾಗಿಲ್ಲ. (ಪ್ರಾಣದೇವರೇ ಕೊನೆಯಾಗಿ ಉಳ್ಳವರಾಗಿಲ್ಲ) ಯಾಕೆಂದರೆ –

ಪ್ರಾಣಃ ಸ್ವೋತ್ತಮಾಧಿಕಾರಿನಿಯಮ್ಯಃ ಅಧಿಕಾರಿತ್ವಾತ್ ನಾಮಾದಿವತ್ (ನಾಮಾದಿಗಳು ಅಧಿಕಾರಿಗಳಾದ್ದರಿಂದ ಅವರು ಹೇಗೆ ಸ್ವೋತ್ತಮಾಧಿಕಾರಿ–ನಿಯಮ್ಯರಾಗಿದ್ದಾರೋ ಅದರಂತೆ ಪ್ರಾಣದೇವರೂ ಅಧಿಕಾರಿಗಳೇ ಆದ್ದರಿಂದ ಸ್ವೋತ್ತಮಾಧಿಕಾರಿನಿಯಮ್ಯರಾಗಿದ್ದಾರೆ.)

ಎಂಬ ಅನುಮಾನದ ವಿರೋಧ ಬರುತ್ತದೆ. ಆದ್ದರಿಂದ ಅಧಿಕಾರಿಗಳು ಪ್ರಾಣಾವಸಾನರಾಗದ ಕಾರಣ ಹಿರಣ್ಯಗರ್ಭನೇ ಸರ್ವಗುಣೋಪಾಸ್ತಿಯೋಗ್ಯನು ಎಂದು ಹೇಳಿದ್ದು ಯುಕ್ತವಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರ ಹೇಳುತ್ತಾರೆ –

**ॐ इयदामननात् ॐ (३-३-३४)**

**ಸೂತ್ರಾರ್ಥ** :- ಅಧಿಕಾರಿತಾರತಮ್ಯಂ = ಅಧಿಕಾರಿಗಳ ತಾರತಮ್ಯವು **ಇಯತ್** ಏವ = ಪ್ರಾಣಾವಧಿಕವೇ ಆಗಿದೆ. ಕುತಃ = ಯಾಕೆ? **ಆಮನನಾತ್** = "ಪ್ರಾಣೋ ವಾವ" (ಕೌಂಠರವ್ಯ ಶ್ರುತಿ) ಎಂಬುದಾಗಿ ಶ್ರುತಿ ಇರುವುದರಿಂದ.

## ಸಿದ್ಧಾಂತ

**ಸೂ.ರ.:– एवं च प्राणावसानत्वमेवाधिकारिणः । निर्दिष्टश्रुतेः । अनुमानस्य च बाधितविषयत्वेन बाधाभावात् । ततश्चाधिकारिणां प्राणावसानत्वेन स एव सर्वगुणोपास्तियोग्य इति सिद्धम् ॥**

"ಪ್ರಾಣೋ ವಾವ ಸರ್ವೇಭ್ಯೋ ಭೂಯಾನ್ನ ಹಿ ಪ್ರಾಣಾದ್ಭೂಯಾನ್ಪ್ರಾಣೋ ಹ್ಯೇವ ಭೂಯಾಂಸ್ತಸ್ಮಾದ್ಭೂಯಾನ್ನಾಮ" (ಕೌಂಠರವ್ಯಶ್ರುತಿಃ)

ಎಂಬುದಾಗಿ ನಿರ್ದಿಷ್ಟಶ್ರುತಿ ಇರುವುದರಿಂದ ಅಧಿಕಾರಿಗಳು ಪ್ರಾಣಾವಸಾನರೇ ಆಗಿದ್ದಾರೆ. ಇನ್ನು ಅನುಮಾನವು ಬಾಧಿತವಿಷಯವಾಗುವುದರಿಂದ (ಶ್ರುತಿಯಿಂದ ಬಾಧಿತವಾಗುವುದರಿಂದ) ಅದೂ ಬಾಧಕವಾಗುವುದಿಲ್ಲ (ಅನುಮಾನದ ವಿರೋಧವೂ ಬರುವುದಿಲ್ಲ)

ಆದ್ದರಿಂದ ಅಧಿಕಾರಿಗಳು ಪ್ರಾಣಾವಸಾನರಾದ್ದರಿಂದ (ಪ್ರಾಣದೇವರೇ ಕೊನೆ-ಯಾಗಿ ಉಳ್ಳವರಾದ್ದರಿಂದ) ಪ್ರಾಣದೇವರೇ (ಹಿರಣ್ಯಗರ್ಭನೇ) ಸರ್ವಗುಣೋಪಾಸ್ತಿ ಯೋಗ್ಯರಾಗಿದ್ದಾರೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 36

**ಸೂ.ರ.:– उक्तमाक्षिप्य समादधत्सूत्रं पठति ॥**

ಹಿಂದೆ ಹೇಳಿದ ವಿಷಯದ ಮೇಲೆ ಆಕ್ಷೇಪ ಮಾಡಿಕೊಂಡು ಸಮಾಧಾನ ಹೇಳುವ ಸೂತ್ರವನ್ನು ಹೇಳುತ್ತಾರೆ –

**ॐ अन्तरा भूतग्रामवदिति चेत्तदुक्तम् ॐ (३-३-३६)**

**ಸೂತ್ರಾರ್ಥ** :- **ಭೂತಗ್ರಾಮವತ್** = ಯಾವ ರೀತಿಯಾಗಿ ನಾಮಾದಿ-ಪ್ರಾಣಸಮೂಹದಲ್ಲಿ ಒಬ್ಬರಿಗಿಂತ ಒಬ್ಬರು ಉತ್ತಮರಾಗಿರುವುದು ಕಂಡಿದೆಯೋ

ಅದೇ ರೀತಿಯಾಗಿ **ಅಂತರಾ** = ಪರಮಾತ್ಮನನ್ನು ಹಾಗೂ ಲಕ್ಷ್ಮೀದೇವಿಯನ್ನು ಬಿಟ್ಟು ಪ್ರಾಣದೇವರಿಗಿಂತ ಉತ್ತಮನು ಇರಲಿ **ಇತಿ ಚೇತ್** = ಎಂದು ಆಶಂಕೆ ಬಂದರೆ, ನ = ಅದು ಸರಿಯಲ್ಲ, ಯತಃ = ಯಾವ ಕಾರಣ **ತದುಕ್ತಂ** = ಪ್ರಾಣನಿಗಿಂತಲೂ ಉತ್ತಮರು ಇಲ್ಲ ಎಂಬ ವಿಷಯದಲ್ಲಿ "ನ ಹಿ..." (ಕೌಂಠರವ್ಯಶ್ರುತಿ) ಎಂಬ ಪ್ರಮಾಣವನ್ನು ಹೇಳಲಾಗಿದೆಯೋ ಅತಃ = ಆ ಕಾರಣ.

**ಸೂ.ರ.:– एवं चोक्तानुमानस्य प्राणो वावेति श्रुतिबाधितत्वेनाविरोधात् । अत उक्तं युक्तमिति सिद्धम् ॥**

ಹಿಂದೆ ಹೇಳಿದ ಅನುಮಾನವು "ಪ್ರಾಣೋ ವಾವ" ಎಂಬ ಶ್ರುತಿಯಿಂದ ಬಾಧಿತವಾಗುವುದರಿಂದ ಪ್ರಾಣನಿಗಿಂತ ಉತ್ತಮರು ಇಲ್ಲ ಎಂದು ಹೇಳಿದರೆ ಅನುಮಾನ-ವಿರೋಧ ಬರುವುದಿಲ್ಲ. ಆದ್ದರಿಂದ ಪ್ರಾಣನೇ ಸರ್ವಗುಣೋಪಾಸ್ತಿಯೋಗ್ಯ ಎಂದು ಹೇಳಿದ್ದು ಯುಕ್ತವಾಗಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 37

**ಸೂ.ರ.:– ननु प्राणो वावेति श्रुतिबलेन न प्राणस्य सर्वोत्तमत्वं वक्तुं शक्यम् । तथा सतीश्वरद्वयायोगेन प्राणपरमात्मनोरैक्यप्रसङ्गादिति प्राप्ते सूत्रमाह ॥**

"ಪ್ರಾಣೋ ವಾವ" ಎಂಬ ಶ್ರುತಿಬಲದಿಂದಾಗಿ ಪ್ರಾಣನಿಗೆ ಸರ್ವೋತ್ತಮತ್ವ-ವನ್ನು ಹೇಳುವುದು ಸಾಧ್ಯವಿಲ್ಲ. ಹಾಗೆ ಪ್ರಾಣನಿಗೆ ಸರ್ವೋತ್ತಮತ್ವವನ್ನು ಹೇಳಿದರೆ ಇಬ್ಬರು ಈಶ್ವರರು ಯುಕ್ತವಾಗುವುದಿಲ್ಲವಾದ್ದರಿಂದ ಪ್ರಾಣ-ಪರಮಾತ್ಮರಿಗೆ ಐಕ್ಯ ಬರಬೇಕಾದ ಅತಿಪ್ರಸಂಗ ಬರುತ್ತದೆ ಎಂಬುದಾಗಿ ಆಶಂಕೆ ಬಂದರೆ, ಸಮಾಧಾನ ಹೇಳಲು ಸೂತ್ರವನ್ನು ಹೇಳುತ್ತಾರೆ -

**ॐ अन्यथा भेदानुपपत्तिरिति चेन्नोपदेशवत् ॐ (३-३-३७)**

**ಸೂತ್ರಾರ್ಥ :- ಅನ್ಯಥಾ** = ಪರಮಾತ್ಮನಿಗೆ ಪ್ರಾಣನಿಗಿಂತಲೂ ಉತ್ತಮತ್ವವನ್ನು ಹೇಳದಿದ್ದರೆ ಪ್ರಾಣಪರಮಾತ್ಮನೋಃ **ಭೇದಾನುಪಪತ್ತಿಃ** = ಪ್ರಾಣ - ಪರಮಾತ್ಮರಲ್ಲಿ ಭೇದವು ಉಪಪನ್ನವಾಗುವುದಿಲ್ಲ **ಇತಿ ಚೇತ್** = ಎಂಬುದಾಗಿ ಆಶಂಕೆ ಬಂದರೆ ನ =

ಅದು ಸರಿಯಲ್ಲ. ಕುತಃ = ಯಾಕೆ? ಯತಃ = ಯಾವ ಕಾರಣ **ಉಪದೇಶವತ್** = ಯಾವ ರೀತಿಯಾಗಿ ಶ್ರುತಿಯಲ್ಲಿ ಹೇಳಲ್ಪಟ್ಟಿದೆಯೋ ಹಾಗೆ ಅಂಗೀಕರಿಸಲ್ಪಟ್ಟಿದೆಯೋ **ಅತೋ ನೋಕ್ತದೋಷಃ** = ಆ ಕಾರಣ ಪ್ರಾಣ - ಪರಮಾತ್ಮರಲ್ಲಿ ಭೇದಾನು-ಪಪತ್ತಿರೂಪ ದೋಷ ಇಲ್ಲ.

**ಸೂ.ರ.:- एवं च छन्दोगश्रुत्युक्तप्रकारेण सर्वशब्दस्य सङ्कोच-मङ्गीकृत्य प्राणस्य सर्वाधिकार्युत्तमत्वं ततो महालक्ष्म्यास्ततः परमात्मनः उत्तमत्वाङ्गीकारात् । अतोऽधिकारिणां प्राणावसानत्वेन स एव सर्वगुणोपास्तियोग्य इति सिद्धम् ॥**

ಛಂದೋಗಶ್ರುತ್ಯುಕ್ತಪ್ರಕಾರದಿಂದ ಸರ್ವಶಬ್ದಕ್ಕೆ ಸಂಕೋಚವನ್ನು ಅಂಗೀಕರಿಸಿ ಪ್ರಾಣನಿಗೆ ಸರ್ವಾಧಿಕಾರಿ ಉತ್ತಮತ್ವವನ್ನು ಆ ಪ್ರಾಣನಿಗಿಂತಲೂ ಮಹಾಲಕ್ಷ್ಮಿಗೆ ಉತ್ತಮತ್ವವನ್ನು ಆ ಮಹಾಲಕ್ಷ್ಮಿಗಿಂತಲೂ ಪರಮಾತ್ಮನಿಗೆ ಉತ್ತಮತ್ವವನ್ನು ಅಂಗೀ-ಕರಿಸಿದ್ದರಿಂದ.

ಆದ್ದರಿಂದ ಅಧಿಕಾರಿಗಳು ಪ್ರಾಣಾವಸಾನರಾದ್ದರಿಂದ ಆ ಪ್ರಾಣನೇ ಸರ್ವಗುಣೋಪಾಸ್ತಿಯೋಗ್ಯನಾಗಿದ್ದಾನೆ ಎಂದು ಹೇಳಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

**ಇಯದಾಮನನಾಧಿಕರಣವು ಮುಗಿಯಿತು.**

ಅಧಿಕರಣ – 22

# ವ್ಯತಿಹಾರಾಧಿಕರಣ

## ಸಂಗತಿ

ಸೂ.ರ.:– अत्रोपासनाधिकारिणः प्राणात्परमेश्वरस्योत्तमत्वं प्रसाध्यते ।

ಉಪಾಸನಾಧಿಕಾರಿಯಾದ ಪ್ರಾಣನಿಗಿಂತಲೂ ಪರಮೇಶ್ವರನಿಗೆ ಉತ್ತಮತ್ವ-ವನ್ನು ಸಾಧಿಸುತ್ತಾರೆ ಇಪ್ಪತ್ತೆರಡನೇ ಈ ವ್ಯತಿಹಾರಾಧಿಕರಣದಲ್ಲಿ.

## ಪೂರ್ವಪಕ್ಷ

ಸೂ.ರ.:– ननु न विष्णोः सर्वोत्तमत्वं युक्तम् । प्राणस्योत्तमत्व-मुक्त्वा तदुत्तमत्वानभिधानात् । न हि सत्यपि प्राणादुत्तमे तदनभिधाने कारणमस्ति । येनानुक्तिमगणय्य प्राणादुत्तमत्वं विष्णोः प्रतीमः । न च सत्यपदोदितस्य विष्णोः प्राणादुत्तमत्वं युक्तमिति वाच्यम् । प्रकरणभेदकाभावेन सत्यत्वस्य प्राणविशेषणत्वात् । ततश्च न विष्णोः सर्वोपास्यत्वमिति प्राप्ते सूत्रमाह ॥

ವಿಷ್ಣುವಿಗೆ ಸರ್ವೋತ್ತಮತ್ವವನ್ನು ಹೇಳುವುದು ಯುಕ್ತವಾಗುವುದಿಲ್ಲ. ಏಕೆಂದರೆ– ಪ್ರಾಣನಿಗೆ ಉತ್ತಮತ್ವವನ್ನು ಹೇಳಿ, ಅವನಿಗಿಂತಲೂ ಪರಮಾತ್ಮನಿಗೆ ಉತ್ತಮತ್ವವನ್ನು ಹೇಳಿಲ್ಲವಾದ್ದರಿಂದ. ಪ್ರಾಣನಿಗಿಂತಲೂ ಉತ್ತಮನಾದ ವ್ಯಕ್ತಿ ಇದ್ದಾಗಲೂ ಸಹ ಅದನ್ನು ಹೇಳದೇ ಇರುವುದಕ್ಕೆ ಕಾರಣವಿಲ್ಲ. ಒಂದುವೇಳೆ ಕಾರಣ ಇರುತ್ತಿದ್ದರೆ ಹೇಳದಿದ್ದದ್ದನ್ನು ಪರಿಗಣಿಸದೇ ಪ್ರಾಣನಿಗಿಂತಲೂ ಪರಮಾತ್ಮನಿಗೆ ಉತ್ತಮತ್ವವನ್ನು ತಿಳಿಯುತ್ತಿದ್ದೆವು.

ಸತ್ಯಪದವಾಚ್ಯನಾದ ವಿಷ್ಣುವಿಗೆ ಪ್ರಾಣನಿಗಿಂತಲೂ ಉತ್ತಮತ್ವವು ಯುಕ್ತ-ವಾಗಿದೆಯಲ್ಲ? ಎಂದು ಶಂಕಿಸುವುದು ಸರಿಯಲ್ಲ, ಕಾರಣ – ಪ್ರಕರಣಭೇದಕವಾದದ್ದು ಇಲ್ಲವಾದ್ದರಿಂದ ಸತ್ಯತ್ವವು ಪ್ರಾಣನಿಗೆ ವಿಶೇಷಣವಾಗಿದೆಯಾದ್ದರಿಂದ. ಆದ್ದರಿಂದ ವಿಷ್ಣುವಿಗೆ ಸರ್ವೋಪಾಸ್ಯತ್ವವು ಯುಕ್ತವಾಗುವುದಿಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

## ॐ व्यतिहारो विशिंषन्ति हीतरवत् ॐ (३-३-३८)

**ಸೂತ್ರಾರ್ಥ** :- **ವ್ಯತಿಹಾರಃ** = ಪ್ರಾಣಪ್ರಕರಣಾನಂತರ ವಿಷ್ಣುಪ್ರಕರಣಕ್ಕಿಂತಲೂ ಮೊದಲು ಪ್ರಶ್ನ-ಪ್ರತಿವಚನಗಳ ಅಧ್ಯಾಹಾರ ಕಾರ್ಯವಾಗಿದೆ. ಕುತಃ = ಯಾಕೆ? **ಹಿ** = ಯಾವ ಕಾರಣ **ಇತರವತ್** = ನಾಮಾದಿಗಳಿಂದ ವಾಗಾದಿಗಳಂತೆ ಪ್ರಾಣವಾದಿ-ಗಳಿಂದ ಸತ್ಯಾಖ್ಯವಿಷ್ಣುವಾದಿಗಳನ್ನು ಛಂದೋಗರು, "ಏಷ ತು ವಾ" (ಛಾಂ. 7-16) ಎಂಬುದಾಗಿ ತು ಶಬ್ದದಿಂದ **ವಿಶಿಂಷಂತಿ** = ವ್ಯಾವರ್ತನಗೊಳಿಸುವರೋ ತಸ್ಮಾತ್ = ಆ ಕಾರಣ.

### ಸಿದ್ಧಾಂತ

**ಸೂ.ರ.:- एवं च युक्तमेव विष्णोः सर्वोत्तमत्वम् । न च नामादाविव प्रश्नप्रतिवचनाभावात्प्राणादुत्तमाभावे तात्पर्यमिति वाच्यम् । प्रायपाठबलेन प्रश्नप्रतिवचनस्यानुमातुं शक्यत्वात् । न च प्रकरणभेदकाभावान्न प्रश्नप्रतिवचनाध्याहार इति वाच्यम् । तुशब्दस्य प्रकरणभेदकस्य सद्भावात् । ततश्च प्रश्नप्रतिवचनसन्धानपूर्वकं मन्त्रद्रष्ट्रा विष्णोः प्राणादुत्तमत्वस्योक्तत्वात्तस्य सर्वोपास्यत्वं युक्तमिति सिद्धम् ॥**

ವಿಷ್ಣುವಿಗೆ ಸರ್ವೋತ್ತಮತ್ವವು ಯುಕ್ತವೇ ಆಗಿದೆ.

ಹೌದು, ನಾಮಾದಿಗಳಲ್ಲಿ ಹೇಗೋ ಹಾಗೆ ಪ್ರಶ್ನಪ್ರತಿವಚನ ಇಲ್ಲವಾದ್ದರಿಂದ ಪ್ರಾಣನಿಗಿಂತಲೂ ಉತ್ತಮರಿಲ್ಲ ಎನ್ನುವುದರಲ್ಲಿಯೇ ತಾತ್ಪರ್ಯವಿದೆ ಎಂದು ಶಂಕಿಸುವುದು ಸರಿಯಲ್ಲ. ಪ್ರಾಯಪಾಠಬಲದಿಂದ ಪ್ರಶ್ನಪ್ರತಿವಚನವನ್ನು ಅನುಮಾನ ಮಾಡಲು ಶಕ್ಯವಿರುವುದರಿಂದ.

ಪ್ರಕರಣಭೇದಕವಾದದ್ದು ಯಾವುದೂ ಇಲ್ಲವಾದ್ದರಿಂದ ಪ್ರಶ್ನಪ್ರತಿವಚನಗಳ ಅಧ್ಯಾಹಾರ ಯುಕ್ತವಲ್ಲ ಎಂದು ಶಂಕಿಸುವುದೂ ಸರಿಯಲ್ಲ. ಪ್ರಕರಣಭೇದಕವಾದ ತುಶಬ್ದವು ಇರುವುದರಿಂದ.

ಆದ್ದರಿಂದ ಪ್ರಶ್ನಪ್ರತಿವಚನಸಂಧಾನ ಪೂರ್ವಕವಾಗಿ ಮಂತ್ರದ್ರಷ್ಟ್ರುವಾದವನು ವಿಷ್ಣುವಿಗೆ ಪ್ರಾಣನಿಗಿಂತಲೂ ಉತ್ತಮತ್ವವನ್ನು ಹೇಳಿದ್ದರಿಂದ, ವಿಷ್ಣುವಿಗೆ ಸರ್ವೋ-ಪಾಸ್ಯತ್ವವನ್ನು ಹೇಳಿದ್ದು ಯುಕ್ತವಾಗಿದೆ ಎಂದು ಸಿದ್ಧವಾಗುತ್ತದೆ.

**ವ್ಯತಿಹಾರಾಧಿಕರಣವು ಮುಗಿಯಿತು.**

ಅಧಿಕರಣ – 23

# ಸತ್ಯಾಧಿಕರಣ

## ಸಂಗತಿ

**ಸೂ.ರ.:– अत्र प्राणाद्विष्णोरेवोत्तमत्वं साध्यते ।**

ಪ್ರಾಣನಿಗಿಂತಲೂ ವಿಷ್ಣುವಿಗೆ ಮಾತ್ರ ಉತ್ತಮತ್ವ ಇದೆ ಎಂದು ಸಾಧಿಸುತ್ತಾರೆ ಇಪ್ಪತ್ತಮೂರನೇ ಈ ಸತ್ಯಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु न केवलं प्राणात्सत्यपदोक्तो विष्णुरेवोत्तमः । अपि तु बहवः । सत्यादप्युपरि विज्ञानमिति श्रद्धानिष्ठाकृतिसुख-भूमाहङ्कारात्मनामुक्तत्वात् । सत्यादीनामभेदे प्रमाणाभावात् । अतः प्राणादपि बहूनामुत्तमत्वात्तस्य विष्णुं विना सर्वोत्तमत्वं विष्णोर्निरुप-चरितसर्वोत्तमत्वं न युक्तमिति प्राप्ते सूत्रितम् ॥**

ಪ್ರಾಣನಿಗಿಂತಲೂ ಸತ್ಯಪದೋದಿತನಾದ ವಿಷ್ಣುವು ಒಬ್ಬನೇ ಉತ್ತಮ ಎಂದಲ್ಲ, ಕಿಂತು ಬಹಳಜನರು ಉತ್ತಮರಿದ್ದಾರೆ. ಕಾರಣ – ಸತ್ಯನಿಗಿಂತಲೂ ಮೇಲೆ 'ವಿಜ್ಞಾನಂ' ಎಂಬುದಾಗಿ ಶ್ರದ್ಧಾ-ನಿಷ್ಠಾ-ಆಕೃತಿ-ಸುಖ-ಭೂಮಾ-ಅಹಂಕಾರ-ಆತ್ಮರನ್ನು ಹೇಳಿದ್ದರಿಂದ.

ಆ ಎಲ್ಲ ಸತ್ಯಾದಿರೂಪಗಳು ಒಂದೇ 'ಅಭಿನ್ನವಾಗಿವೆ' ಎಂದು ಹೇಳುವುದು ಸರಿಯಲ್ಲ. ಆ ವಿಷಯದಲ್ಲಿ ಪ್ರಮಾಣವಿಲ್ಲವಾದ್ದರಿಂದ.

ಆದ್ದರಿಂದ ಪ್ರಾಣನಿಗಿಂತಲೂ ಬಹಳಜನ ಉತ್ತಮರು ಇರುವುದರಿಂದ ವಿಷ್ಣುವಿಗೆ ನಿರುಪಚರಿತ ಸರ್ವೋತ್ತಮತ್ವವು ಯುಕ್ತವಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ सैव हि सत्यादयः ॐ (३-३-३९)**

ಸೂತ್ರಾರ್ಥ :- ಹಿ = ಯಾವ ಕಾರಣ ಸತ್ಯಾದಯಃ = ಸತ್ಯ ಮೊದಲು-

ಗೊಂಡು ಆತ್ಮಾಂತವಾದ ಪದಾರ್ಥಗಳು ಸೈವ = ಈಶ್ವರಾಖ್ಯ ಪರದೇವತೆಯೇ ಆಗಿವೆಯೋ ತಸ್ಮಾತ್ = ಆ ಕಾರಣ ಪ್ರಾಣಾಧಿಕಾಃ ಬಹವಃ ನ = ಪ್ರಾಣನಿಗಿಂತಲೂ ಉತ್ತಮರಾದವರು ಬಹುಜನರಿಲ್ಲ. ಕಿಂತು ಶ್ರೀತದೀಶಾವೇವ = ಲಕ್ಷ್ಮೀ-ಲಕ್ಷ್ಮೀಪತಿ-ಯಾದ ಪರಮಾತ್ಮ ಇಬ್ಬರೇ ಉತ್ತಮರಾಗಿದ್ದಾರೆ.

## ಸಿದ್ಧಾಂತ

**ಸೂ.ರ.:- एवं च सत्यादीनां सर्वेषां परदेवतात्वात् । न चाभेदोक्त्यभावः । 'सत्यं भगवो विजिज्ञासे' (छां. ७-१६) इति सत्याख्यस्य भगवतो गुणजिज्ञासायां तद्गुणत्वेन तदविनाभूतज्ञान-स्योक्तत्वात् । तथोत्तरत्रापि विज्ञानगुणजिज्ञासायामविनाभूत-मत्यादीनामुक्तत्वादभेदसिद्धेः । 'स वा एष' (छां. ७-१५-४) इत्यादिनाऽहङ्कारात्मज्ञानान्मोक्षाभिधानात् । स एवाधस्तादिति पूर्णत्वाभिधानाच्च । किञ्च सर्वेषां सत्यादीनां श्रुत्यन्तरे सत्यं पूर्ण-मित्यादिना पूर्णत्वस्य भगवल्लक्षणत्वोक्त्या ततोऽपि सर्वेषां तदैक्यम् । अतः सत्यादीनामात्मान्तानां भगवत्स्वरूपत्वेन स एव प्राणादुत्तम इत्युक्तमुपपन्नमिति सिद्धम् ॥**

**ಅನುವಾದ :-** ಸತ್ಯಾದಿಗಳೆಲ್ಲರೂ ಪರದೇವತೆಯೇ ಆದ್ದರಿಂದ ಪ್ರಾಣನಿಗಿಂತ ಅಧಿಕರು ಬಹಳಜನ ಇಲ್ಲ.

ಸತ್ಯಾದಿ ಎಲ್ಲ ರೂಪಗಳಲ್ಲಿ ಅಭೇದವನ್ನು ಹೇಳಿಲ್ಲವಲ್ಲ? ಎಂಬ ಶಂಕೆ ಸರಿಯಲ್ಲ. ಕಾರಣ- 'ಸತ್ಯಂ ಭಗವೋ ವಿಜಿಜ್ಞಾಸೇ' (ಛಾಂ. 7-16) ಎಂಬುದಾಗಿ ಸತ್ಯನಾಮಕನಾದ ಭಗವಂತನ ಗುಣಗಳನ್ನು ತಿಳಿಯುವ ಇಚ್ಛೆ ಬಂದಾಗ 'ಯದಾ ವೈ ವಿಜಾನಾತ್ಯಥ ಸತ್ಯಂ ವದತಿ' ಎಂಬುದಾಗಿ ಸತ್ಯನಾಮಕ ಭಗವಂತನಿಂದ ಅಭಿನ್ನವಾದ ಜ್ಞಾನವನ್ನು ಹೇಳುತ್ತಾರೆ. ಮತ್ತು ಮುಂದೆಯೂ ಸಹ ವಿಜ್ಞಾನನಾಮಕ ಭಗವಂತನ ಗುಣಗಳನ್ನು ತಿಳಿಯುವ ಇಚ್ಛೆ ಬಂದಾಗ ತದಭಿನ್ನವಾದ ಮತ್ಯಾದಿ ಗುಣಗಳನ್ನು ಹೇಳುವುದರಿಂದ ಸತ್ಯಾದಿಗಳಲ್ಲಿ ಅಭೇದವು ಸಿದ್ಧವಾಗುತ್ತದೆ.

'ಸ ವಾ ಏಷ' (ಛಾಂ. 7-25-4) ಇತ್ಯಾದಿಯಾಗಿ ಅಹಂಕಾರಾತ್ಮಜ್ಞಾನದಿಂದ ಮೋಕ್ಷವನ್ನು ಹೇಳಿದ್ದರಿಂದ. 'ಸ ಏವಾಧಸ್ತಾತ್' ಎಂಬುದಾಗಿ ಪೂರ್ಣತ್ವವನ್ನು ಹೇಳಿದ್ದರಿಂದ. ಮತ್ತು ಎಲ್ಲ ಸತ್ಯಾದಿಗಳಿಗೆ ಶ್ರುತ್ಯಂತರದಲ್ಲಿ 'ಸತ್ಯಂ ಪೂರ್ಣಂ' ಇತ್ಯಾದಿಯಾಗಿ ಪೂರ್ಣತ್ವರೂಪವಾದ ಭಗವಂತನ ಲಕ್ಷಣವನ್ನು ಹೇಳಿದ್ದರಿಂದ, ಅದರಿಂದಲೂ ಸಹ ಎಲ್ಲ ಸತ್ಯಾದಿಗಳಲ್ಲಿ ಐಕ್ಯವು ಸಿದ್ಧವಾಗುತ್ತದೆ.

ಆದ್ದರಿಂದ ಸತ್ಯಾದಿ ಆತ್ಮಾಂತರಾದ ಎಲ್ಲರೂ ಭಗವಂತನ ಸ್ವರೂಪವೇ ಆಗಿದ್ದರಿಂದ ಭಗವಂತ ಒಬ್ಬನೇ ಪ್ರಾಣನಿಗಿಂತ ಉತ್ತಮನಾಗಿದ್ದಾನೆ ಎಂದು ಸಿದ್ಧವಾಗುವ ಕಾರಣ ವಿಷ್ಣುವಿಗೆ ನಿರುಪಚರಿತವಾದ ಸರ್ವೋತ್ತಮತ್ವವು ಸಿದ್ಧವಾಗುತ್ತದೆ.

ಸತ್ಯಾಧಿಕರಣವು ಮುಗಿಯಿತು.

ಅಧಿಕರಣ – 24

# ಕಾಮಾಧಿಕರಣ

## ಸಂಗತಿ

**ಸೂ.ರ.:– अत्र श्रिय उपासनानधिकारित्वं साध्यते ।**

ಲಕ್ಷ್ಮೀದೇವಿಗೆ ಉಪಾಸನಾ ಅನಧಿಕಾರಿತ್ವವನ್ನು ಸಾಧಿಸುತ್ತಾರೆ ಇಪ್ಪತ್ನಾಲ್ಕನೇ ಈ ಕಾಮಾಧಿಕರಣದಲ್ಲಿ.

ಪ್ರಾಣ–ಪರಮಾತ್ಮ ಪ್ರಸಂಗ ಸನ್ನಿಧಾಪಿತಳಾದ ಲಕ್ಷ್ಮೀದೇವಿಯು ಉಪಾಸನೆಗೆ ಅಧಿಕಾರಿಯಾಗಿದ್ದಾಳೋ ? ಇಲ್ಲವೋ ? ಎಂದು ಸಂದೇಹ.

## ಪೂರ್ವಪಕ್ಷ

**ಸೂ.ರ.:– ननु भवत्येव प्रकृतिरधिकारिणी । न च नामादिष्वपठितत्वादिति वाच्यम् । असिद्धेः । न च श्रवणप्रसङ्गः । अनुच्चारितमेव तद्वाक्यं ऋष्यभिप्रेतमस्तीत्यङ्गीकारात् । न च संसारित्वासिद्धिः । सीतारुग्मिण्यादेर्जननमरणादिदर्शनेन तत्सिद्धेः । ततश्च नाधिकारिणां प्राणावसानत्वमिति प्राप्ते सूत्रितम् ॥**

ಪ್ರಕೃತಿಃ, ಅಧಿಕಾರಿಣೀ ಭವತ್ಯೇವ, ಸಾಧುತ್ವೇ ಸತಿ ಸಂಸಾರಿತ್ವಾತ್ । ಪ್ರಕೃತಿಯು (ಲಕ್ಷ್ಮಿಯು) ಅಧಿಕಾರಿ ಆಗೇ ಆಗುತ್ತಾಳೆ. ಸಾಧುವಾಗಿ ಸಂಸಾರಿಯೂ ಆದ್ದರಿಂದ.

'ಪ್ರಕೃತಿಃ ಅಧಿಕಾರಿಣೀ ನ ಭವತಿ ನಾಮಾದಿಷು ಅಪಠಿತತ್ವಾತ್' 'ನಾಮಾದಿಗಳಲ್ಲಿ ಪಠಿತವಾಗಿಲ್ಲವಾದ್ದರಿಂದ ಪ್ರಕೃತಿಯು ಅಧಿಕಾರಿಯಾಗುವುದಿಲ್ಲ' ಎಂದು ಶಂಕಿಸುವುದು ಸರಿಯಲ್ಲ. ಕಾರಣ – ಪ್ರಕೃತಿಯು ನಾಮಾದಿಗಳಲ್ಲಿ ಪಠಿತಳೇ ಆಗಿದ್ದರಿಂದ ಅಸಿದ್ಧಿ ಬರುತ್ತದೆ. ಹಾಗಾದರೆ ಲಕ್ಷ್ಮಿಗೆ ಅಧಿಕಾರವನ್ನು ಅಂಗೀಕರಿಸಿದರೆ ಶ್ರವಣಪ್ರಸಂಗ ಬರುವುದಲ್ಲ? ಎಂದರೆ, ಅದು ಸರಿಯಲ್ಲ, ಅನುಚ್ಚರಿತವೇ ಆದ ಆ ವಾಕ್ಯವು ಋಷ್ಯಭಿಪ್ರೇತವಾಗಿ ಇದೆ ಎಂದು ಅಂಗೀಕರಿಸಿದ್ದರಿಂದ.

ಪಕ್ಷಳಾದ ಪ್ರಕೃತಿಯಲ್ಲಿ ಸಂಸಾರಿತ್ವ ಹೇತು (ಇಲ್ಲವಾದ್ದರಿಂದ) ಸಿದ್ಧವಾಗದ

ಕಾರಣ ಅಸಿದ್ಧಿ ಬರುತ್ತದೆ ಎಂದು ಶಂಕಿಸುವುದು ಸರಿಯಲ್ಲ. ಸೀತಾ-ರುಕ್ಮಿಣ್ಯಾದಿಗಳಿಗೆ ಜನನ-ಮರಣಾದಿಗಳು ಕಂಡಿದ್ದರಿಂದ ಸಂಸಾರಿತ್ವವು ಸಿದ್ಧವಾಗುತ್ತದೆ.

ಆದ್ದರಿಂದ ಲಕ್ಷ್ಮೀದೇವಿಯೂ ಅಧಿಕಾರಿಯಾಗುವುದರಿಂದ ಅಧಿಕಾರಿಗಳಿಗೆ ಪ್ರಾಣಾವಸಾನತ್ವವು ಸಿದ್ಧವಾಗುವುದಿಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ कामादितरत्र तत्र चायतनादिभ्यः ॐ (३-३-४०)**

**ಸೂತ್ರಾರ್ಥ** :- ಲಕ್ಷ್ಮೀಃ = ಲಕ್ಷ್ಮೀದೇವಿಯು **ತತ್ರ** = ಭಗವಂತನ ಸಮೀಪದಲ್ಲಿ ಇದ್ದವಳಾಗಿ **ಇತರತ್ರ ಚ** = ಭೂಮಿ ಮೊದಲಾದವುಗಳಲ್ಲಿಯೂ ಸಹ **ಕಾಮಾತ್** = ಈಶ್ವರೇಚ್ಛೆಯಿಂದಲೇ ಅವತಾರಾನ್ ಕರೋತಿ = ಅವತಾರಗಳನ್ನು ಮಾಡುತ್ತಾಳೆ. ಕುತಃ = ಯಾಕೆ? **ಆಯತನಾದಿಭ್ಯಃ** = ಸರ್ವಗತತ್ವ ಪ್ರತಿಪಾದಕವಾದ "ಸರ್ವಾಯ-ತನಾ" ಮೊದಲಾದ ಶ್ರುತ್ಯಾದಿಗಳಿರುವುದರಿಂದ.

## ಸಿದ್ಧಾಂತ

**ಸೂ.ರ.:- एवं च प्रकृतिर्नाधिकारिणी । अबद्धत्वात् । न च जननादिना तत्सिद्धिः । सीतारुग्मिण्यादेः प्रादुर्भूतत्वेनोत्पत्तेरभावात् । सर्वायतना सर्वकालेति वत्सश्रुतेः । अतः प्रकृतेरधिकारित्वाभावाद्युक्तं प्राणावसानत्वमिति सिद्धम् ॥**

'ಪ್ರಕೃತಿಃ ನ ಅಧಿಕಾರಿಣೀ ಅಬದ್ಧತ್ವಾತ್' ಪ್ರಕೃತಿಯು (ಲಕ್ಷ್ಮಿಯು) ಅಬದ್ಧ-ಳಾದ್ದರಿಂದ (ಬದ್ಧಳಾಗದ ಕಾರಣ) ಅಧಿಕಾರಿ ಅಲ್ಲ.

ಲಕ್ಷ್ಮೀದೇವಿಗೂ ಸಹ ಜನನಾದಿಗಳಿಂದ ಬಂಧ ಸಿದ್ಧವಾಗುವುದಲ್ಲ? ಎಂದು ಶಂಕಿಸುವುದು ಸರಿಯಲ್ಲ. ಸೀತಾ-ರುಕ್ಮಿಣೀ ಮೊದಲಾದ ಅವತಾರರೂಪಗಳು ಪ್ರಾದುರ್ಭೂತವಾದ್ದರಿಂದ ಅವುಗಳಿಗೆ ಉತ್ಪತ್ತಿ ಇಲ್ಲ. ಈ ವಿಷಯದಲ್ಲಿ

"ಸರ್ವಾಯತನಾ ಸರ್ವಕಾಲಾ ಸರ್ವೇಚ್ಛಾ ಸರ್ವಜ್ಞಾ ಸರ್ವಾವಸ್ಥಾ ನ ಬದ್ಧಾ ಬಂಧಿಕಾ ಸೈಷಾ ಪ್ರಕೃತಿರವಿಕೃತಿಃ"

ಎಂಬುದಾಗಿ ವತ್ಸಶ್ರುತಿಯು ಪ್ರಮಾಣವಾಗಿದೆ.

ಆದ್ದರಿಂದ ಪ್ರಕೃತಿಯು (ಲಕ್ಷ್ಮಿಯು) ಅಧಿಕಾರಿಯಾಗುವುದಿಲ್ಲವಾದ್ದರಿಂದ ಅಧಿಕಾರಿಗಳಿಗೆ ಪ್ರಾಣಾವಸಾನತ್ವವು ಯುಕ್ತ ಎಂದು ಸಿದ್ಧವಾಗುತ್ತದೆ.

## ಸೂತ್ರ - 41

**ಸೂ.ರ.:- ननु रमाया असंसारित्वे कृतकृत्यत्वेन भगवदुपासनाद्यभावः स्यात् । न चासौ युक्तः । यदर्चितं ब्रह्मेत्यादिप्रमाणविरुद्धत्वात् । अत्रार्चितमुपासितं पूजितं चेत्युक्तेरित्याशङ्कां परिहरत्सूत्रमुपन्यस्यति ॥**

ಲಕ್ಷ್ಮೀದೇವಿಯು ಸಂಸಾರಿ ಅಲ್ಲ ಎಂದಾದರೆ ಕೃತಕೃತ್ಯಳಾಗುವುದರಿಂದ ಅವಳು ಭಗವಂತನ ಉಪಾಸನೆಯನ್ನು ಮಾಡಬಾರದಾಗುತ್ತದೆ. ಲಕ್ಷ್ಮಿಯು ಭಗವಂತನ ಉಪಾಸನೆಯನ್ನು ಮಾಡುವುದೇ ಇಲ್ಲ ಎಂದು ಹೇಳುವುದು ಯುಕ್ತವಾಗುವುದಿಲ್ಲ, ಕಾರಣ - ಹಾಗೆ ಹೇಳುವುದು ''ಯದರ್ಚಿತಂ ಬ್ರಹ್ಮ'' ಇತ್ಯಾದಿ ಪ್ರಮಾಣವಿರುದ್ಧ-ವಾಗುತ್ತದೆ. ಅಲ್ಲಿ 'ಅರ್ಚಿತಂ' ಎಂದಿದ್ದಾರೆ, ಉಪಾಸನೆ ಹೇಳಿಲ್ಲವಲ್ಲ? ಎಂದು ಹೇಳುವಂತಿಲ್ಲ. ''ಅರ್ಚಿತಂ ಉಪಾಸಿತಂ ಪೂಜಿತಂ ಚ'' ಎಂದು ಹೇಳಿದ್ದರಿಂದ ಉಪಾಸನೆ ಹೇಳಲಾಗಿದೆ ಎಂಬುದಾಗಿ ಆಕ್ಷೇಪ ಬಂದರೆ, ಅದಕ್ಕೆ ಪರಿಹಾರ ಹೇಳು-ವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

### ॐ आदरादलोपः ॐ (३-३-४१)

**ಸೂತ್ರಾರ್ಥ :- ಆದರಾತ್** = ಭಗವಂತನಲ್ಲಿ ನಿರುಪಾಧಿಕ ಭಕ್ತ್ಯತಿಶಯ ಇರುವುದರಿಂದ **ಅಲೋಪಃ** = ಲಕ್ಷ್ಮೀದೇವಿಗೆ ಭಗವಂತನ ಉಪಾಸನಾಭಾವ ಇಲ್ಲ.

**ಸೂ.ರ.:- एवं च श्रीर्नित्यमुक्ताऽबद्धाऽपि निरुपाधिकसर्वातिशयितभक्तिवशान्नियमेन तस्या भगवदुपासनोपपत्तेः । यथा श्रीरिति (बृहत्तन्त्रे.) वचनात् । अत उक्तं युक्तमिति सिद्धम् ॥**

ಯಥಾ ಶ್ರೀರ್ನಿತ್ಯಮುಕ್ತಾಽಪಿ ಪ್ರಾಪ್ತಕಾಮಾಽಪಿ ಸರ್ವದಾ ।
ಉಪಾಸ್ತೇ ನಿತ್ಯಶೋ ವಿಷ್ಣುಮೇವಂ ಭಕ್ತೋ ಹರೇರ್ಭವೇತ್ ॥

ಎಂಬುದಾಗಿ ಬೃಹತ್ತಂತ್ರದ ವಚನ ಇರುವುದರಿಂದ ಲಕ್ಷ್ಮೀದೇವಿಯು

ನಿತ್ಯಮುಕ್ತಳಾಗಿ ಅಬದ್ಧಳಾಗಿದ್ದರೂ ಸಹ ನಿರುಪಾಧಿಕಸರ್ವಾತಿಶಯಿತ ಭಕ್ತಿವಶ-ದಿಂದಾಗಿ ನಿಯಮೇನ ಅವಳಿಗೆ ಭಗವಂತನ ಉಪಾಸನೆಯು ಉಪಪನ್ನವಾಗುತ್ತದೆ.

ಆದ್ದರಿಂದ ಅಧಿಕಾರಿಗಳಿಗೆ ಪ್ರಾಣಾವಸಾನತ್ವ ಹೇಳಿದ್ದು ಯುಕ್ತವಾಗಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 42

**ಸೂ.ರ.:– ननु न रमाया नित्यमुक्तत्वं युक्तम् । कारणाभावात् । न च स्वत एव तत् । तस्या अस्वातन्त्र्यादिति प्राप्ते परिहरत्सूत्र-मुपन्यस्यति ॥**

ಲಕ್ಷ್ಮೀದೇವಿಗೆ ನಿತ್ಯಮುಕ್ತತ್ವವನ್ನು ಹೇಳುವುದು ಯುಕ್ತವಾಗುವುದಿಲ್ಲ. ಏಕೆಂದರೆ ಲಕ್ಷ್ಮಿಗೆ ನಿತ್ಯಮುಕ್ತತ್ವವನ್ನು ಒಪ್ಪಲು ವಿಶೇಷವಾದ ಕಾರಣ ಯಾವುದೂ ಇಲ್ಲ-ವಾದ್ದರಿಂದ.

ಕಾರಣ ಏಕೆ ಬೇಕು? ಲಕ್ಷ್ಮಿಯು ಸ್ವತಃನೇ (ಸ್ವಾಭಾವಿಕವಾಗಿಯೇ) ನಿತ್ಯಮುಕ್ತ-ಳಾಗಿದ್ದಾಳೆ ಎನ್ನಬಹುದಲ್ಲ? ಎಂದರೆ, ಅದು ಸರಿಯಲ್ಲ. ಏಕೆಂದರೆ - ಲಕ್ಷ್ಮೀದೇವಿಯು ಅಸ್ವತಂತ್ರಳಾದ್ದರಿಂದ ಹಾಗೆ ಹೇಳಲು ಬರುವುದಿಲ್ಲ. ಆದ್ದರಿಂದ ಲಕ್ಷ್ಮೀದೇವಿಗೆ ನಿತ್ಯಮುಕ್ತತ್ವವನ್ನು ಹೇಳುವುದು ಸರಿಯಲ್ಲ ಎಂಬುದಾಗಿ ಆಕ್ಷೇಪ ಬಂದರೆ, ಅದಕ್ಕೆ ಪರಿಹಾರ ಹೇಳಲು ಸೂತ್ರವನ್ನು ಹೇಳುತ್ತಾರೆ -

### ॐ उपस्थितेस्तद्वचनात् ॐ (३-३-४२)

**ಸೂತ್ರಾರ್ಥ** :- ಶ್ರಿಯಃ ನಿತ್ಯಮುಕ್ತತ್ವಂ ಯುಜ್ಯತೇ = ಲಕ್ಷ್ಮೀದೇವಿಗೆ ನಿತ್ಯಮುಕ್ತತ್ವವು ಯುಕ್ತವಾಗುತ್ತದೆ. ಕುತಃ = ಯಾಕೆ? **ಉಪಸ್ಥಿತೇಃ** = ಹರಿಸಮೀಪ-ದಲ್ಲಿ ಯಾವಾಗಲೂ ಇರುವುದರಿಂದ. ಶ್ರಿಯಃ ನಿತ್ಯಸಮೀಪಸ್ಥತ್ವಂ ಚ **ತದ್ವಚನಾತ್** = ಲಕ್ಷ್ಮೀದೇವಿಗೆ ಭಗವಂತನ ಸಮೀಪದಲ್ಲಿ ನಿತ್ಯ ಇರುವಿಕೆಯೂ ಸಹ "ದ್ವಾವೇತೌ" ಎಂಬ (ಗೌಪವನಶ್ರುತಿ) ನಿತ್ಯಸಂಬಂಧಿತ್ವವಚನದಿಂದ ತಿಳಿಯಲ್ಪಡುತ್ತದೆ.

**ಸೂ.ರ.:– एवं च द्वाविति श्रुतिवचनाद्रमायाः समीपस्थितेः सिद्धत्वात् । अतिशयितभगवत्प्रसादाख्यकारणसद्भावात् । अतस्तस्या नित्यमुक्तत्वेनाधिकारिकत्वाभावाद्युक्तं प्राणावसानत्वमिति सिद्धम् ॥**

"ದ್ವಾವೇತಾವನಾದಿನಿತ್ಯಾವನಾದಿಯುಕ್ತೌ ನಿತ್ಯಮುಕ್ತಾವನಾದಿಕೃತೌ ..."

ಎಂಬ ಶ್ರುತಿವಚನದಿಂದಾಗಿ ಲಕ್ಷ್ಮೀದೇವಿಗೆ ಭಗವತ್ಸಮೀಪಸ್ಥಿತಿ ಸಿದ್ಧವಾಗು-ವುದರಿಂದ, ಆತಿಶಯಿತ ಭಗವತ್ಪ್ರಸಾದರೂಪವಾದ ಕಾರಣ ಇರುವುದರಿಂದ, ಲಕ್ಷ್ಮೀದೇವಿಗೆ ನಿತ್ಯಮುಕ್ತತ್ವವು ಸಿದ್ಧಿಸುವುದರಿಂದ (ನಿತ್ಯಮುಕ್ತಳಾದ್ದರಿಂದ) ಆಧಿ ಕಾರಿಕತ್ವವು ಇಲ್ಲದ ಕಾರಣ ಅಧಿಕಾರಿಗಳಿಗೆ ಪ್ರಾಣಾವಸಾನತ್ವವು ಯುಕ್ತವಾಗಿದೆ ಎಂದು ಸಿದ್ಧವಾಗುತ್ತದೆ.

**ಕಾಮಾಧಿಕರಣವು ಮುಗಿಯಿತು.**

ಅಧಿಕರಣ – 25

## ನಿರ್ಧಾರಣಾಧಿಕರಣ

### ಸಂಗತಿ

**ಸೂ.ರ.:– अत्र श्रवणमनननिदिध्यासनरूपस्य समस्तस्याप्युपासनस्य कर्तव्यत्वं समर्थ्यते ।**

ಶ್ರವಣ-ಮನನ-ನಿದಿಧ್ಯಾಸನರೂಪವಾದ ಸಮಗ್ರವಾದ ಉಪಾಸನೆಗೆ ಕರ್ತವ್ಯತ್ವವನ್ನು ಸಮರ್ಥಿಸುತ್ತಾರೆ ಇಪ್ಪತ್ತೈದನೇ ಈ ನಿರ್ಧಾರಣಾಧಿಕರಣದಲ್ಲಿ.

ಶ್ರವಣ-ಮನನ-ನಿದಿಧ್ಯಾಸನರೂಪವಾದ ಸಮಗ್ರವಾದ ಉಪಾಸನೆಯನ್ನು ಮಾಡಬೇಕೋ? ಅಥವಾ ನಿದಿಧ್ಯಾಸನವನ್ನು ಬಿಟ್ಟು ಕೇವಲ ಶ್ರವಣ-ಮನನಗಳನ್ನು ಮಾಡಬೇಕೋ? ಎಂದು ಸಂದೇಹ.

### ಪೂರ್ವಪಕ್ಷ

**ಸೂ.ರ.:– ननु श्रवणमनने एव कार्ये । ताभ्यामेवाज्ञानसंशयविपर्ययनिवृत्तौ स्वकारणादेव दर्शनसम्भवात् । अथोच्येत । अज्ञानप्रतिबन्धकानां दृढत्वात्ध्यानेनैव प्रतिबन्धकनिवृत्तिरिति । तर्हि ध्यानेनैव ज्ञानमस्तु । न ज्ञानार्थं श्रवणमनने । न च समुचितानां ज्ञानहेतुत्वे मानमस्ति । न च ज्ञानोत्पादे श्रवणमननयोरुपयोगोऽस्ति । अतः समस्तोपासनस्यावश्याकर्तव्यत्वेन तद्विधानवैयर्थ्यमिति प्राप्ते सूत्रमाह ॥**

ಶ್ರವಣ-ಮನನಗಳನ್ನು ಮಾತ್ರ ಮಾಡಬೇಕು. ಕಾರಣ ಆ ಶ್ರವಣ-ಮನನ-ಗಳಿಂದಲೇನೇ ಅಜ್ಞಾನ-ಸಂಶಯ-ವಿಪರ್ಯಯಗಳ ನಿವೃತ್ತಿಯಾಗಲು ನಂತರ ಸ್ವಕಾರಣದಿಂದಲೇ ದರ್ಶನವು ಸಂಭವಿಸುತ್ತದೆಯಾದ್ದರಿಂದ.

ಹಾಗಲ್ಲ, ಅಜ್ಞಾನಕ್ಕೆ ಪ್ರತಿಬಂಧಕವಾದವುಗಳು ದೃಢವಾದದ್ದರಿಂದ ಧ್ಯಾನ-ದಿಂದಲೇ ಪ್ರತಿಬಂಧಕನಿವೃತ್ತಿಯಾಗುತ್ತದೆ ಎಂದು ಹೇಳುವುದಾದರೆ, ಹಾಗಾದರೆ

ಧ್ಯಾನದಿಂದಲೇ ಜ್ಞಾನ ಆಗಲಿ. ಹೊರತು ಜ್ಞಾನಕ್ಕಾಗಿ ಶ್ರವಣ-ಮನನಗಳು ಆವಶ್ಯಕ-ವಲ್ಲ ಎಂದಾಗುತ್ತದೆ.

ಸಮುಚಿತವಾಗಿ ಎಲ್ಲವೂ ಜ್ಞಾನಕ್ಕೆ ಹೇತುವಾಗುತ್ತವೆ ಎಂದು ಹೇಳುವುದು ಯುಕ್ತವಲ್ಲ. ಕಾರಣ ಆ ವಿಷಯದಲ್ಲಿ ಪ್ರಮಾಣವಿಲ್ಲವಾದ್ದರಿಂದ. ಜ್ಞಾನೋತ್ಪಾದ-ವಿಷಯದಲ್ಲಿ ಶ್ರವಣ-ಮನನಗಳ ಉಪಯೋಗವಿಲ್ಲ.

ಆದ್ದರಿಂದ ಸಮಸ್ತವಾದ ಉಪಾಸನವೂ ಅವಶ್ಯ ಕರ್ತವ್ಯವಾಗಿಲ್ಲವಾದ್ದರಿಂದ ಅದನ್ನು ವಿಧಾನ ಮಾಡುವುದು ವ್ಯರ್ಥ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ तन्निर्धारणार्थनियमस्तद्दृष्टेः पृथग्घ्यप्रतिबन्धः फलम् ॐ**

**(३-३-४३)**

**ಸೂತ್ರಾರ್ಥ** :- ಯತಃ = ಯಾವ ಕಾರಣ **ತನ್ನಿರ್ಧಾರಣಾರ್ಥನಿಯಮಃ** = ವೇದಾರ್ಥನಿಶ್ಚಯ, ವೇದಾರ್ಥನಿಯಮ (ಎಂಬ) ಏತದ್ರೂಪವಾದ ಶ್ರವಣ-ಮನನಫಲವು, ಧ್ಯಾನಫಲಭೂತಾಯಾಃ **ತದ್ದೃಷ್ಟೇಃ** = ಧ್ಯಾನದ ಫಲವಾದ ಬ್ರಹ್ಮದರ್ಶನಕ್ಕಿಂತಲೂ ಪೃಥಗೇವ = ಭಿನ್ನವೇ ಆಗಿದೆಯೋ ಅತಃ = ಆ ಕಾರಣ ನ ಬ್ರಹ್ಮದೃಷ್ಟಿಃ ಶ್ರವಣಾದಿನಾ ಭವತಿ = ಬ್ರಹ್ಮದೃಷ್ಟಿಯು ಶ್ರವಣಾದಿಗಳಿಂದ ಆಗುವುದಿಲ್ಲ

ತಥಾಪಿ ನ ಶ್ರವಣಮನನವೈಯ್ಯರ್ಥ್ಯಂ = ಆದರೂ ಸಹ ಶ್ರವಣ-ಮನನ-ಗಳಿಗೆ ವೈಯರ್ಥ್ಯವಿಲ್ಲ. ಕುತಃ = ಯಾಕೆ? **ಹಿ** = ಯಾವ ಕಾರಣ **ಅಪ್ರತಿಬಂಧಃ** = ಬ್ರಹ್ಮದೃಷ್ಟಿಪ್ರತಿಬಂಧಕನಿವೃತ್ತಿಯು **ಫಲಂ** = ತನ್ನಿಶ್ಚಯ-ತನ್ನಿಯಮದ್ವಾರಾ ಶ್ರವಣ-ಮನನಗಳ ಫಲವಾಗಿದೆಯೋ ಅತಃ = ಆ ಕಾರಣ ಧ್ಯಾನಸಾಧ್ಯಾऽಪಿ ದೃಷ್ಟಿಃ = ಧ್ಯಾನಸಾಧ್ಯವಾಗಿದ್ದರೂ ಬ್ರಹ್ಮದರ್ಶನವು, ಪ್ರತಿಬಂಧಕನಿವೃತ್ತಿದ್ವಾರಾ ಶ್ರವಣಾದಿ-ಸಾಧ್ಯಾ ಭವತಿ = ಪ್ರತಿಬಂಧಕನಿವೃತ್ತಿದ್ವಾರಾ ಶ್ರವಣಾದಿಸಾಧ್ಯವಾಗುತ್ತದೆ. ತದರ್ಥಂ ಶ್ರವಣಾದಿಕಮಪಿ ಕಾರ್ಯಮೇವ = ಅದಕ್ಕಾಗಿ ಶ್ರವಣಾದಿಗಳನ್ನೂ ಮಾಡಲೇಬೇಕು. ಹಿ ಶಬ್ದದಿಂದ "ಆತ್ಮಾ ವಾऽರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ" (ಬೃ. 4-4-5) ಎಂಬ ಶ್ರುತಿಯು ಸೂಚಿತವಾಗುತ್ತಿದೆ.

## ಸಿದ್ಧಾಂತ

ಸೂ.ರ.:- एवं कर्तव्यमेव समस्तोपासनम् । न श्रवणमनन-

मात्रम् । तयोस्तत्त्वज्ञानवेदार्थनिर्णयरूपदर्शनातिरिक्तफलहेतुत्वेन दर्शनहेतुत्वाभावात् । ध्यानस्य च दर्शनहेतुत्वेनावश्यकत्वात् । न चैवं श्रवणमननाभावप्रसङ्गः । तयोः साक्षाद्दर्शनहेतुत्वाभावेऽपि प्रतिबन्धकीभूताज्ञानसंशयविपर्ययनिवृत्तिद्वारा दर्शनोपयोगित्वेनावश्यकत्वात् । न च तत्र प्रमाणाभावः । दर्शनार्थं श्रोतव्य इति विहितत्वात् । श्रुत्वा मत्वेति (ब्रह्मतर्के.) स्मृतेश्च । अतः समस्तोपासनस्य कर्तव्यत्वाद्युक्तं तद्विधानमिति सिद्धम् ॥

ಶ್ರವಣ-ಮನನ-ನಿದಿಧ್ಯಾಸನರೂಪವಾದ ಸಮಸ್ತಉಪಾಸನೆಯೂ ಕರ್ತವ್ಯವೇ ಆಗಿದೆ. ಹೊರತು ಕೇವಲ ಶ್ರವಣ-ಮನನಗಳಷ್ಟೇ ಅಲ್ಲ. ಕಾರಣ ಆ ಶ್ರವಣ-ಮನನಗಳು ತತ್ವಜ್ಞಾನ-ವೇದಾರ್ಥನಿರ್ಣಯರೂಪವಾದ ದರ್ಶನಾತಿರಿಕ್ತವಾದ ಫಲಕ್ಕೆ ಹೇತುವಾದ್ದರಿಂದ, ದರ್ಶನಹೇತುವಾಗದ ಕಾರಣ. ಇನ್ನು ಧ್ಯಾನವು ದರ್ಶನ-ಹೇತುವಾದ್ದರಿಂದ ಆವಶ್ಯಕವಾಗಿದೆ.

ಹಾಗಾದರೆ ಶ್ರವಣ-ಮನನ ಅಭಾವಪ್ರಸಂಗ ಬರುವುದಲ್ಲ? ಎಂದರೆ, ಅದು ಸರಿಯಲ್ಲ. ಶ್ರವಣ-ಮನನಗಳು ಸಾಕ್ಷಾತ್ತಾಗಿ ದರ್ಶನಹೇತುವಾಗದಿದ್ದರೂ ಸಹ ಪ್ರತಿಬಂಧಕವಾದ ಅಜ್ಞಾನ-ಸಂಶಯ-ವಿಪರ್ಯಯ ನಿವೃತ್ತಿದ್ವಾರಾ ದರ್ಶನಕ್ಕೆ ಉಪಯೋಗಿಯಾದ್ದರಿಂದ ಆವಶ್ಯಕವಾಗಿದೆ. ಆ ವಿಷಯದಲ್ಲಿ ಪ್ರಮಾಣವಿಲ್ಲ ಎನ್ನುವುದು ಸರಿಯಲ್ಲ. ದರ್ಶನಕ್ಕಾಗಿ 'ಶ್ರೋತವ್ಯಃ' ಎಂದು ವಿಧಾನ ಮಾಡಿದ್ದರಿಂದ.

ಶ್ರುತ್ವಾ ಮತ್ವಾ ತಥಾ ಧ್ಯಾತ್ವಾ ತದಜ್ಞಾನವಿಪರ್ಯಯೌ ।<br>
ಸಂಶಯಂ ಚ ಪರಾಣುದ್ಯ ಲಭತೇ ಬ್ರಹ್ಮದರ್ಶನಮ್ ॥

ಎಂದು ಸ್ಮೃತಿಯೂ ಇರುವುದರಿಂದ. ಆದ್ದರಿಂದ ಸಮಸ್ತೋಪಾಸನವೂ ಕರ್ತವ್ಯವೇ ಆದ್ದರಿಂದ ಅದನ್ನು ವಿಧಾನ ಮಾಡಿರುವುದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ನಿರ್ಧಾರಣಾಧಿಕರಣವು ಮುಗಿಯಿತು.

ಅಧಿಕರಣ - 26

## ಪ್ರದಾನಾಧಿಕರಣ

### ಸಂಗತಿ

**ಸೂ.ರ.:- अत्र भगवज्ज्ञानसाधनश्रवणाद्युपासनस्येतिकर्तव्यतात्वं साध्यते ।**

ಭಗವದ್‌ಜ್ಞಾನಸಾಧನವಾದ ಶ್ರವಣಾದ್ಯುಪಾಸನೆಗೆ ಇತಿಕರ್ತವ್ಯತ್ವವನ್ನು ಸಮರ್ಥಿಸುತ್ತಾರೆ ಇಷ್ಟುತ್ತಾರನೇ ಈ ಪ್ರದಾನಾಧಿಕರಣದಲ್ಲಿ.

### ಪೂರ್ವಪಕ್ಷ

**ಸೂ.ರ.:- ननु श्रवणादिकमेव ज्ञानसाधनम् । न गुरुप्रदान-पूर्वकम् । आत्मा वेति श्रुतौ श्रवणादीनामेव ज्ञानहेतुत्वाभिधानात् । न हि श्रवणादित्रयमुक्त्वा विशिष्यगुरुप्रदानस्यानुक्तौ कारणमस्ति । किञ्च गुरुप्रसादस्य श्रवणाद्यङ्गत्वेऽनुष्ठितश्रवणादेरपि गुरुकोपेन ज्ञानाभावः स्यात् । तथा च जातापरोक्षस्य मोक्षाभावः स्यादविशेषादिति प्राप्ते सूत्रितम् ॥**

ಕೇವಲ ಶ್ರವಣಾದಿಗಳು ಜ್ಞಾನಸಾಧನವಾಗಿವೆಯೇ ಹೊರತು ಗುರುಪ್ರಸಾದ-ಪ್ರದಾನಪೂರ್ವಕವಾಗಿ ಅಲ್ಲ. ಯಾಕೆ? "ಆತ್ಮಾ ವಾಽರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ" ಎಂಬ ಶ್ರುತಿಯಲ್ಲಿ ಶ್ರವಣಾದಿಗಳನ್ನು ಮಾತ್ರ ಜ್ಞಾನ-ಹೇತುವನ್ನಾಗಿ ಹೇಳಲಾಗಿದೆಯಾದ್ದರಿಂದ. ಶ್ರವಣ - ಮನನ - ನಿದಿಧ್ಯಾಸನಗಳನ್ನು ಜ್ಞಾನಸಾಧನವನ್ನಾಗಿ ಹೇಳಿ ವಿಶೇಷವಾಗಿ ಗುರುಪ್ರಸಾದಪ್ರದಾನವನ್ನು ಹೇಳದಿರು-ವುದಕ್ಕೆ ಪ್ರತ್ಯೇಕ ಕಾರಣ ಯಾವುದೂ ಇಲ್ಲ.

ಮತ್ತು ಗುರುಪ್ರಸಾದವು ಶ್ರವಣಾದಿಗಳಿಗೆ (ಅಂಗವಾಗಿದೆ ಎನ್ನುವುದಾದರೆ) ಅಂಗವಾಗುವುದಾದರೆ ಶ್ರವಣಾದಿಗಳ ಅನುಷ್ಠಾನ ಮಾಡಿದವನಿಗೂ ಸಹ ಗುರು-ಕೋಪದಿಂದ ಜ್ಞಾನ ಇಲ್ಲದೇ ಹೋಗಬೇಕಾದೀತು. ಹಾಗಾದರೆ ಅಪರೋಕ್ಷಜ್ಞಾನ ಸಂಪಾದಿಸಿದ ವ್ಯಕ್ತಿಗೆ ಮೋಕ್ಷ ಇಲ್ಲದೇ ಹೋಗಬೇಕಾಗುತ್ತದೆ ಎಂಬುದಾಗಿ

ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

## ॐ प्रदानवदेव हि तदुक्तम् ॐ (३-३-४४)

**ಸೂತ್ರಾರ್ಥ** :- ಪ್ರದಾನವತ್ ಏವ = ಪ್ರೀತಿಪೂರ್ವಕವಾಗಿ ಗುರೂಪದೇಶ-ಯುಕ್ತವಾದ ಶ್ರವಣಾದಿಗಳೇ ಜ್ಞಾನಸಾಧನವಾಗುತ್ತವೆ. ಹೊರತು ಕೇವಲ ಶ್ರವಣಾದಿ-ಗಳು ಅಲ್ಲ. ಕುತಃ = ಯಾಕೆ? ಹಿ = ಯಾವ ಕಾರಣ **ತದುಕ್ತಂ** = ಜ್ಞಾನಕ್ಕೆ ಗುರುಪ್ರಸಾದಾಧೀನತ್ವವು "ಆಚಾರ್ಯವಾನ್" (ಛಾಂ. 6-14-2) ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟದೆಯೋ ಅತಃ = ಆ ಕಾರಣ.

## ಸಿದ್ಧಾಂತ

**ಸೂ.ರ.:- एवं च गुरुप्रदानयुक्तमेव श्रवणादिकं मोक्षसाधनम् । आचार्यवान्पुरुषो वेदेति वचनात् । न चात्मा वेति श्रुतौ श्रवणादेरिव गुरुप्रदानस्याप्युक्तिप्रसङ्गः । गुरुप्रदानस्य श्रवणाद्यङ्गत्वेन तत्सम-कक्षित्वाभावात् । न चानुष्ठितश्रवणादेरपि ज्ञानाभावो ज्ञानिनोऽपि मोक्षाभावो गुरुकोपेन स्यादिति वाच्यम् । तज्ज्ञानमोक्षयोरीश्वरकल्पि-तत्वात् । न चैवं गुरुशापो विफलः । ज्ञानादिह्रासहेतुत्वात् । ज्ञानिनो गुरुशापोऽपीति ये ज्ञानविषया इति चोक्तेः । अतो गुरुप्रदानस्यावश्य-कत्वाद्युक्तमेव श्रवणादिकं कर्तव्यमिति सिद्धम् ॥**

"ಆಚಾರ್ಯವಾನ್ ಪುರುಷೋ ವೇದ" (ಛಾಂ.ಉ. 6-14-2)

ಎಂಬುದಾಗಿ ಶ್ರುತಿವಚನ ಇರುವುದರಿಂದ ಗುರುಪ್ರಸಾದಪ್ರದಾನಯುಕ್ತವಾದ ಶ್ರವಣಾದಿಗಳೇ ಮೋಕ್ಷಸಾಧನವಾಗಿವೆ. ಹಾಗಾದರೆ "ಆತ್ಮಾ ವಾಽರೇ ದ್ರಷ್ಟವ್ಯಃ" ಎಂಬ ಶ್ರುತಿಯಲ್ಲಿ ಶ್ರವಣಾದಿಗಳನ್ನು ಹೇಳಿದಂತೆ ಗುರುಪ್ರಸಾದಪ್ರದಾನವನ್ನೂ ಹೇಳಬೇಕಾಗಿತ್ತಲ್ಲ? ಎಂದರೆ, ಅಂತಹ ಪ್ರಸಂಗ ಇಲ್ಲ. ಕಾರಣ ಗುರುಪ್ರಸಾದ-ಪ್ರದಾನವು ಶ್ರವಣಾದಿಗಳಿಗೆ ಅಂಗವಾದ್ದರಿಂದ ಶ್ರವಣಾದಿಸಮಕಕ್ಷಿಯಾಗಿಲ್ಲ-ವಾದ್ದರಿಂದ.

ಹಾಗಾದರೆ ಶ್ರವಣಾದಿಗಳ ಅನುಷ್ಠಾನ ಮಾಡಿದ ವ್ಯಕ್ತಿಗೂ ಸಹ ಜ್ಞಾನ ಇಲ್ಲದೇ ಹೋಗಬೇಕಾಗುತ್ತದೆ, ಜ್ಞಾನಿಗೂ ಸಹ ಗುರುಕೋಪದಿಂದಾಗಿ ಮೋಕ್ಷ ಇಲ್ಲದೇ ಹೋಗಬೇಕಾಗುತ್ತದೆಯಲ್ಲ? ಎಂದರೆ, ಅದು ಸರಿಯಲ್ಲ. ಆ ಜ್ಞಾನ-ಮೋಕ್ಷಗಳು ಈಶ್ವರಕಲ್ಪಿತವಾದ್ದರಿಂದ. ಹಾಗಾದರೆ ಗುರುಶಾಪವು ವಿಫಲವಾಗುವುದಲ್ಲ? ಎಂದರೆ, ಅದು ಸರಿಯಲ್ಲ.

ಜ್ಞಾನಿನೋ ಗುರುಶಾಪೇಽಪಿ ನಾಮುಕ್ತಿಃ ಸಂಸೃತೇರ್ಭವೇತ್ ।
ಆನಂದಹ್ರಾಸದೋಷೇಣ ಸೈವ ಮುಕ್ತಿರ್ವಿದುಷ್ಯತಿ ॥

ಎಂದು ಹೇಳಿದ್ದರಿಂದ ಹಾಗೂ

ಯೇ ಜ್ಞಾನವಿಷಯಾಃ ಶಾಪಾ ಮುಕ್ತಿಗಾಶ್ಚಾಧಿಕಾರಿಣಾಮ್ ।
ಕಾದಾಚಿತ್ಕಾಸ್ತೇ ಭವಂತಿ ನೈವ ತೇ ಸಾರ್ವಕಾಲಿಕಾಃ ॥
ತೇಷಾಂ ಜ್ಞಾನಸ್ಯ ಮುಕ್ತೇಶ್ಚ ತಾರತಮ್ಯಸ್ಯ ಚೈವ ಹಿ ।
ಭಗವನ್ನಿಯತತ್ವಾತ್ತು ಶಾಪಾದಿರ್ನಾತ್ರ ಕಾರಣಮ್ ॥

ಎಂದು ಹೇಳಿದ್ದರಿಂದ ಗುರುಶಾಪವು ಜ್ಞಾನಾದಿಹ್ರಾಸಹೇತುವಾಗುತ್ತದೆ.

ಆದ್ದರಿಂದ ಗುರುಪ್ರಸಾದಪ್ರದಾನವು ಆವಶ್ಯಕವಾದ್ದರಿಂದ ಶ್ರವಣಾದಿಗಳು ಕರ್ತವ್ಯವಾಗಿವೆ ಎಂದು ಹೇಳಿದ್ದು ಯುಕ್ತವಾಗಿದೆ ಎಂದು ಸಿದ್ಧವಾಗುತ್ತದೆ.

**ಪ್ರದಾನಾಧಿಕರಣವು ಮುಗಿಯಿತು.**

ಅಧಿಕರಣ - 27

# ಲಿಂಗಭೂಯಸ್ತ್ವಾಧಿಕರಣ

## ಸಂಗತಿ

**ಸೂ.ರ.:– अत्रेतिकर्तव्यतारूपगुरुप्रसादस्य बलीयस्त्वं समर्थ्यते ।**

ಇತಿಕರ್ತವ್ಯತಾರೂಪವಾದ ಗುರುಪ್ರಸಾದಕ್ಕೆ ಬಲೀಯಸ್ತ್ವವನ್ನು ಸಮರ್ಥಿಸು-ತ್ತಾರೆ ಇಪ್ಪತ್ತೇಳನೇ ಈ ಲಿಂಗಭೂಯಸ್ತ್ವಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु विशिष्टशिष्यप्रयत्न एव बलवान् । प्रधानत्वात् । न गुरुप्रसादः । इतिकर्तव्यतारूपत्वात् । माभूद्वाऽऽधिक्यं साम्यं तु स्यात् । न शिष्यप्रयत्नस्य दौर्बल्यम् । गुरुशिष्ययोः पुरुषत्वसाम्यात् । अतो गुरुप्रसादस्याप्राबल्यान्नावश्यकत्वमिति प्राप्ते सूत्रमाह ॥**

ಶ್ರವಣಾದಿರೂಪವಾದ ವಿಶಿಷ್ಟ ಶಿಷ್ಯಪ್ರಯತ್ನವು ಪ್ರಧಾನವಾದ್ದರಿಂದ ಅದೇ ಬಲೀಯವಾಗಿದೆ. ಹೊರತು ಗುರುಪ್ರಸಾದ ಬಲೀಯವಲ್ಲ. ಗುರುಪ್ರಸಾದವು ಇತಿಕರ್ತವ್ಯತಾರೂಪವಾದ್ದರಿಂದ ಬಲೀಯವಲ್ಲ.

ಅಥವಾ ಆಧಿಕ್ಯ ಬರುವುದು ಬೇಡವಾದರೂ ಸಾಮ್ಯವಂತೂ ಬಂದೇ ಬರುತ್ತದೆ. ಹೊರತು ಶ್ರವಣಾದಿರೂಪವಾದ ಶಿಷ್ಯಪ್ರಯತ್ನಕ್ಕೆ ದೌರ್ಬಲ್ಯ ಬರುವುದಿಲ್ಲ. ಗುರು-ಶಿಷ್ಯರಲ್ಲಿ ಪುರುಷತ್ವಸಾಮ್ಯ ಇರುವುದರಿಂದ. ಆದ್ದರಿಂದ ಗುರುಪ್ರಸಾದಕ್ಕೆ ಪ್ರಾಬಲ್ಯ ಇಲ್ಲವಾದ್ದರಿಂದ ಗುರುಪ್ರಸಾದವು ಆವಶ್ಯಕವಲ್ಲ ಎಂಬದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ लिंगभूयस्त्वाद्धि बलीयस्तदपि ॐ (३-३-४९)**

ಸೂತ್ರಾರ್ಥ :- ತತ್ = ಗುರುಪ್ರಸಾದಪೂರ್ವಕಪ್ರದಾನ ಮಾತ್ರವೇ ಬಲೀಯಃ = ಅತಿಶಯವಾಗಿ ಪ್ರಬಲವಾಗಿದೆ. ಕುತಃ = ಏಕೆ? **ಲಿಂಗಭೂಯಸ್ತ್ವಾತ್** = ವೃಷಭ - ಹಂಸ - ಜಲ - ವಾಯಸ ರೂಪದಲ್ಲಿರುವ ವಾಯು - ಅಗ್ನಿ -

ವರುಣರಿಂದ ವಿದ್ಯಾಶ್ರವಣ ಮಾಡಿದ ಸತ್ಯಕಾಮನಿಂದ ಗುರುಪ್ರದಾನಾದಿ (ಅನುಗ್ರಹ ಮಾಡಬೇಕೆಂದು ಗುರುಗಳಲ್ಲಿ ಪ್ರಾರ್ಥಿಸುವುದೇ ಮೊದಲಾದ) ರೂಪಲಿಂಗ-ಬಾಹುಲ್ಯ ಕಂಡಿದ್ದರಿಂದ. ತಥಾಪಿ = ಆದರೂ **ತದಪಿ** = (ಶ್ರವಣಾದಿಕಮಪಿ ಕಾರ್ಯಂ) ಶ್ರವಣಾದಿಗಳೂ ಕಾರ್ಯವಾಗಿವೆ. ಕುತಃ = ಏಕೆ? 'ಶ್ರೋತವ್ಯಃ' (ಬೃ. 4-4-5) ಎಂದು ಶ್ರುತಿ ಇರುವುದರಿಂದ. ಹಿ ಶಬ್ದವು ಶ್ರುತಿಸೂಚಕವಾಗಿದೆ.

## ಸಿದ್ಧಾಂತ

**ಸೂ.ರ.:- एवं च गुरुप्रसादो बलवानेव न दुर्बलः । नापि समः । लिङ्गभूयस्त्वात् । दौर्बल्यमनुमातुं न शक्यम् । न च गुरुप्रसादस्य प्राबल्याभावे तद्युज्यते । न चेतिकर्तव्यतात्वाद्दौर्बल्यमनुमातुं शक्यम् । लिङ्गभूयस्त्वेन बाधितविषयत्वात् । तथोपकोसलोऽप्यग्न्यादिभ्यो विद्यां श्रुत्वाऽपि गुरुं प्रार्थयते । तथा ऋषभादिभ्यो विद्यां श्रुत्वाऽपि सत्यकामो गुरुं प्रार्थयते । न च तावताऽलमिति मन्तव्यम् । श्रोतव्यो मन्तव्य इति वचनेन तस्यानुष्ठेयत्वात् । अतो गुरुप्रसादपूर्वकं प्रदानस्य प्राबल्यात्तदपेक्षितमिति सिद्धम् ॥**

ಗುರುಪ್ರಸಾದವು ಬಲೀಯವೇ ಆಗಿದೆ. ಹೊರತು ದುರ್ಬಲವಾಗಿಲ್ಲ. ಮತ್ತು ಗುರುಪ್ರಸಾದವು ಶ್ರವಣಾದಿರೂಪವಾದ ಶಿಷ್ಯಪ್ರಯತ್ನದಿಂದ ಸಮವೂ ಅಲ್ಲ. ಲಿಂಗಭೂಯಸ್ತ್ವ ಇರುವುದರಿಂದ.

ಗುರುಪ್ರಸಾದಕ್ಕೆ ದೌರ್ಬಲ್ಯವನ್ನು ಅನುಮಾನದಿಂದ ಸಾಧಿಸುತ್ತಿವೆ ಎಂದರೆ, ಹಾಗೆ ಅನುಮಾನ ಮಾಡಲು ಶಕ್ಯವಿಲ್ಲ. ಶಕ್ಯವಿಲ್ಲ ಎಂದೇಕೆ ಹೇಳುತ್ತೀರಿ ?

'ಗುರುಪ್ರಸಾದಃ ದುರ್ಬಲಃ ಇತಿಕರ್ತವ್ಯತಾತ್ವಾತ್' ।

ಎಂಬುದಾಗಿ ಅನುಮಾನ ಮಾಡಬಹುದಲ್ಲ? ಎಂದರೆ, ಅದು ಸರಿಯಲ್ಲ. ಕಾರಣ ಲಿಂಗಭೂಯಸ್ತ್ವದಿಂದಾಗಿ ಅನುಮಾನವು ಬಾಧಿತವಿಷಯವಾಗುತ್ತದೆ.

ಮತ್ತು ಉಪಕೋಸಲನು ಅಗ್ನ್ಯಾದಿಗಳಿಂದ ವಿದ್ಯೆಯನ್ನು ಶ್ರವಣ ಮಾಡಿದ್ದರೂ ಸಹ ಅನುಗ್ರಹ ಮಾಡಬೇಕೆಂದು ಗುರುಗಳನ್ನು ಪ್ರಾರ್ಥಿಸುತ್ತಾನೆ. ಹಾಗೆಯೇ

ಸತ್ಯಕಾಮನು ಋಷಭಾದಿಗಳಿಂದ ವಿದ್ಯೆಯನ್ನು ಶ್ರವಣ ಮಾಡಿದ್ದರೂ ಸಹ ಅನುಗ್ರಹ ಮಾಡಬೇಕೆಂದು ಗುರುಗಳನ್ನು ಪ್ರಾರ್ಥಿಸುತ್ತಾನೆ. ಆದ್ದರಿಂದಲೂ ಗುರುಪ್ರಸಾದ ಅತ್ಯಾವಶ್ಯಕ ಎಂದು ತಿಳಿಯುತ್ತದೆ.

ಹಾಗಾದರೆ ಗುರುಪ್ರಸಾದ ಒಂದೇ ಸಾಕು, ಶ್ರವಣಾದಿಗಳು ಬೇಡ ಎಂದು ಶಂಕಿಸುವುದು ಸರಿಯಲ್ಲ. ಕಾರಣ - ''ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ'' ಎಂಬುದಾಗಿ ಶ್ರುತಿವಚನ ಇರುವುದರಿಂದ ಶ್ರವಣಾದಿಗಳೂ ಅನುಷ್ಠೇಯವಾಗಿವೆ.

ಆದ್ದರಿಂದ ಗುರುಪ್ರಸಾದಪೂರ್ವಕಪ್ರದಾನವು ಪ್ರಬಲವಾದ್ದರಿಂದ ಗುರು-ಪ್ರಸಾದವು ಅಪೇಕ್ಷಿತವೇ ಎಂದು ಸಿದ್ಧವಾಗುತ್ತದೆ.

**ಲಿಂಗಭೂಯಸ್ತ್ವಾಧಿಕರಣ ಮುಗಿಯಿತು.**

ಅಧಿಕರಣ – 28

# ವಿಕಲ್ಪಾಧಿಕರಣ

## ಸಂಗತಿ

**ಸೂ.ರ.:– अत्र पूर्वप्राप्तादन्योऽपि गुरुः स्वीकार्य एवेति समर्थ्यते ।**

ಪೂರ್ವಪ್ರಾಪ್ತರಾದ ಗುರುಗಳಿಂದ ಭಿನ್ನರಾದ ಬೇರೊಬ್ಬ ಗುರುಗಳೂ ಸ್ವೀಕಾರ್ಯರೇ ಆಗಿದ್ದಾರೆ ಎಂದು ಸಮರ್ಥಿಸುತ್ತಾರೆ ಇಷ್ಟರ್ತೆಂಟನೇ ಈ ವಿಕಲ್ಪಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु प्रथमप्राप्त एव गुरुः स्वीकार्यो न तु तत्परित्यागेनान्यः । परित्यागकारणीभूतपातित्यादिदोषाभावात् । न च प्रथमप्राप्तगुर्वसाध्यफललाभायान्यः स्वीकार्य इति वाच्यम् । गुरुस्वीकारेणैव तदुपपत्तेः । न हि गुरुस्वीकारस्यासाध्यं नामास्ति येनान्यः स्वीकार्यः स्यात् । अन्यथैकलव्यस्य विद्याप्राप्तिर्न स्यात् । पातित्यादिदोषं विनापि गुरुपरित्यागे च दोषप्राप्तेश्च । अतः पूर्वप्राप्त एव गुरुरिति नियमात्कचित्सर्वज्ञगुरोः प्रथमप्राप्तत्वाभावे प्रागुक्तं न युज्यत इति प्राप्ते सूत्रितम् ॥**

ಪ್ರಥಮಪ್ರಾಪ್ತರಾದ ಗುರುಗಳು ಮಾತ್ರ ಸ್ವೀಕಾರ್ಯರಾಗಿದ್ದಾರೆ. ಹೊರತು ಪ್ರಥಮಪ್ರಾಪ್ತರಾದ ಗುರುಗಳನ್ನು ಪರಿತ್ಯಾಗ ಮಾಡಿ ಅನ್ಯಗುರುಗಳು ಸ್ವೀಕಾರ್ಯ-ರಲ್ಲ. ಕಾರಣ- ಪರಿತ್ಯಾಗಕಾರಣೀಭೂತವಾದ ಪಾತಿತ್ಯಾದಿದೋಷಗಳು ಇಲ್ಲವಾದ್ದರಿಂದ.

ಹಾಗಲ್ಲ, ಪ್ರಥಮಪ್ರಾಪ್ತರಾದ ಗುರುಗಳಿಂದ ಅಸಾಧ್ಯವಾದ ಫಲದ ಲಾಭಕ್ಕಾಗಿ ಅನ್ಯಗುರುಗಳು ಸ್ವೀಕಾರ್ಯರಾಗಿದ್ದಾರೆ ಎಂದು ಶಂಕಿಸುವುದು ಸರಿಯಲ್ಲ. ಗುರು-ಸ್ವೀಕಾರದಿಂದಲೇ ಆ ಅಸಾಧ್ಯಫಲವು ಉಪಪನ್ನವಾಗುತ್ತದೆ. ಕಾರಣ ಗುರುಸ್ವೀಕಾರಕ್ಕೆ ಅಸಾಧ್ಯವಾದ ಫಲ ಯಾವುದೂ ಇಲ್ಲ. ಒಂದುವೇಳೆ ಇರುತ್ತಿದ್ದರೆ ಸ್ವೀಕಾರ್ಯ-

ರಾಗುತ್ತಿದ್ದರು. ಅನ್ಯಥಾ ಏಕಲವ್ಯನಿಗೆ ಫಲಪ್ರಾಪ್ತಿ ಆಗಬಾರದಿತ್ತು. ಮತ್ತು ಪಾತಿತ್ಯಾದಿ ದೋಷ ಇಲ್ಲದಿದ್ದರೂ ಗುರುಪರಿತ್ಯಾಗ ಮಾಡಿದರೆ ದೋಷಪ್ರಾಪ್ತಿಯೂ ಆಗುತ್ತದೆ.

ಆದ್ದರಿಂದ ಪೂರ್ವಪ್ರಾಪ್ತರಾದವರೇ ಗುರುಗಳು ಎಂದು ನಿಯಮವಿಲ್ಲ-ವಾದ್ದರಿಂದ ಕೆಲವೊಮ್ಮೆ ಸರ್ವಜ್ಞಗುರುಗಳು ಪ್ರಥಮಪ್ರಾಪ್ತರಾಗದಿದ್ದರೆ ಹಿಂದೆ ಹೇಳಿದ್ದು ಯುಕ್ತವಾಗುವುದಿಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ पूर्वविकल्पः प्रकरणात्स्यात्क्रियामानसवत् ॐ (३-३-४६)**

**ಸೂತ್ರಾರ್ಥ** :- **ಕ್ರಿಯಾಮಾನಸವತ್** = ಮಾನಸಕ್ರಿಯಾರೂಪವಾದ ಧ್ಯಾನದಲ್ಲಿ ವಿಕಲ್ಪ ಹೇಗೋ ತಥಾ = ಅದರಂತೆ **ಪೂರ್ವವಿಕಲ್ಪಃ** = ಪೂರ್ವಪ್ರಾಪ್ತ-ರಾದ ಗುರುಗಳಿಂದ ಸಮರಾದ ಪಶ್ಚಾತ್ ಪ್ರಾಪ್ತರಾಗುವ ಗುರುವಿನ ವಿಷಯ-ದಲ್ಲಿಯೂ ವಿಕಲ್ಪವು = ಗ್ರಾಹ್ಯರೋ? ಅಲ್ಲವೋ? ಎಂಬುದಾಗಿ ವಿಕಲ್ಪವು **ಸ್ಯಾತ್** = ಆಗುತ್ತದೆ. ನ ತು ಸ್ವೀಕಾರ್ಯ ಏವೇತಿ ವಿಧಿಃ = ಹೊರತು ಸ್ವೀಕಾರ್ಯರೇ ಆಗಿದ್ದಾರೆ ಎಂದು ವಿಧಿ ಅಲ್ಲ. ಕುತಃ = ಏಕೆ? **ಪ್ರಕರಣಾತ್** = ಪ್ರಕೃಷ್ಟ ಅನುಗ್ರಹ-ವನ್ನು ಅಪೇಕ್ಷಿಸಿ ಗುರುಗಳು ಸ್ವೀಕಾರ್ಯರಾದ್ದರಿಂದ.

## ಸಿದ್ಧಾಂತ

**ಸೂ.ರ.:– एवं च न पूर्वप्राप्त एव गुरुरिति नियमः । पश्चात्तनः समग्रानुग्रहं करोति चेत्सोऽपि ग्राह्यः । गुरुपरिग्रहस्य समग्रानु-ग्रहार्थत्वात् । गुरुप्रसादमन्तरा गुरुस्वीकारादिमात्रेण मोक्षादिलक्षण-महाफलाभावात् । समग्रानुग्रहकर्ता पूर्वस्मादुत्तमश्चेत्पूर्वानुज्ञां विना निःसंशयं स्वीकार्य एव । समश्चेत्पूर्वानुज्ञया स्वीकार्यः । नो चेन्न स्वीकार्यः इति विकल्पः स्यात् । मानसक्रियावत् । अधमश्चेन्न स्वीकार्य एव । पूर्वस्मादुत्तम इति (बृहत्तन्त्रे.) श्रुतेः । अतः सर्वज्ञ-गुरुस्वीकारस्योपपन्नत्वेन तदुक्तप्रकारेणोपासनं कर्तव्यमिति सिद्धम् ॥**

ಪೂರ್ವಪ್ರಾಪ್ತರಾದವರೇ ಗುರುಗಳು ಎಂದು ನಿಯಮ ಇಲ್ಲ. ಪಶ್ಚಾತ್

ಪ್ರಾಪ್ತರಾಗುವ ಗುರುಗಳ ಸಮಾನುಗ್ರಹವನ್ನು ಮಾಡುವರಾದರೆ ಅವರೂ ಗ್ರಾಹ್ಯರೇ ಆಗಿದ್ದಾರೆ. ಗುರುಪರಿಗ್ರಹವು ಸಮಗ್ರಾನುಗ್ರಹಾರ್ಥವಾದ್ದರಿಂದ. ಗುರುಪ್ರಸಾದ ಇಲ್ಲದೇ ಗುರುಸ್ವೀಕಾರಾದಿ ಮಾತ್ರದಿಂದ ಮೋಕ್ಷಾದಿರೂಪವಾದ ಮಹಾಫಲ ಸಿಗುವುದಿಲ್ಲವಾದ್ದರಿಂದ.

ಸಮಗ್ರಾನುಗ್ರಹವನ್ನು ಮಾಡುವವರು ಪೂರ್ವಗುರುಗಳಿಗಿಂತ ಉತ್ತಮ-ರಾಗಿದ್ದರೆ ಪೂರ್ವಗುರುಗಳ ಅನುಜ್ಞೆಯಿಲ್ಲದಿದ್ದರೂ ನಿಃಸಂಶಯವಾಗಿ ಸ್ವೀಕಾರ್ಯರೇ ಆಗಿದ್ದಾರೆ. ಪೂರ್ವಗುರುಗಳಿಗೆ ಸಮರಾಗಿದ್ದರೆ ಪೂರ್ವಗುರುಗಳ ಅನುಜ್ಞೆಯಿಂದ ಸ್ವೀಕಾರ್ಯರಾಗಿದ್ದಾರೆ. ಇನ್ನು ಪೂರ್ವಗುರುಗಳಿಗೆ ಸಮರೂ ಆಗಿಲ್ಲ - ವಾದರೆ ಸ್ವೀಕಾರ್ಯರು ಅಲ್ಲ ಎಂಬುದಾಗಿ ವಿಕಲ್ಪ ಇರುತ್ತದೆ ಮಾನಸಕ್ರಿಯೆಯಂತೆ.

ಇನ್ನು ಪೂರ್ವಗುರುಗಳಿಗಿಂತ ಅಧಮರಾಗಿದ್ದ ಪಕ್ಷದಲ್ಲಿ ಸ್ವೀಕಾರ್ಯರೇ ಅಲ್ಲ.

ಪೂರ್ವಸ್ಮಾದುತ್ತಮೋ ಲಬ್ಧಃ ಸ್ವಯಮೇವ ಗುರುರ್ಯದಿ ।<br>
ಗೃಹ್ಣೀಯಾದವಿಚಾರೇಣ ವಿಕಲ್ಪಃ ಸಮಯೋರ್ಭವೇತ್ ॥<br>
ಸಮಗ್ರಾನುಗ್ರಹಾಭಾವಾತ್ ಸತ್ಯಕಾಮಃ ಸ್ವಕಂ ಗುರುಮ್ ।<br>
ಋಷಭಾದ್ಯನುಜ್ಞಯಾ ಚೈವ ಪ್ರಾಪ ತಸ್ಮಾದ್ಧಿ ಯುಜ್ಯತೇ ॥

ಎಂಬುದಾಗಿ ಬ್ರಹ್ಮತಂತ್ರವಚನ ಇರುವುದರಿಂದ. ಆದ್ದರಿಂದ ಸರ್ವಜ್ಞ-ಗುರುಸ್ವೀಕಾರವು ಉಪಪನ್ನವಾಗುವುದರಿಂದ ತದುಕ್ತಪ್ರಕಾರದಿಂದ ಉಪಾಸನವು ಕರ್ತವ್ಯವಾಗಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 47

**ಸೂ.ರ.:- हेत्वन्तरेण समोत्तमगुरुस्वीकारं समर्थयत्सूत्रमाह ॥**

ಮತ್ತೊಂದು ಹೇತುವಿನಿಂದಲೂ ಸಮ - ಉತ್ತಮ ಗುರುಸ್ವೀಕಾರವನ್ನು ಸಮರ್ಥಿಸುವ ಸೂತ್ರವನ್ನು ಹೇಳುತ್ತಾರೆ -

### ॐ अतिदेशाच्च ॐ (३-३-४७)

**ಸೂತ್ರಾರ್ಥ :- ಅತಿದೇಶಾಚ್ಚ** = ತಮಗೆ ಸಮರಾದ ಉತ್ತಮರಾದ ಗುರುಗಳ ಸ್ವೀಕಾರಕ್ಕಾಗಿ ಪೂರ್ವಗುರುಗಳಿಂದಲೇ ಅತಿದೇಶ ಮಾಡಿದ್ದರಿಂದ, "ಯಥಾ ..." ಎಂಬುದಾಗಿ ಪೌಷ್ಯಾಯಣಶ್ರುತಿಯಲ್ಲಿ ಅತಿದಿಶ್ಯಮಾನವಾದ್ದರಿಂದ ಪಶ್ಚಾತ್ತನ-ಸ್ವೀಕಾರವು ಯುಕ್ತವೇ ಆಗಿದೆ.

ಸೂ.ರ.:- एवं चाचार्योपासनं नाम सविनयमन्ते स्थितिः । तस्योपचारो नामाभीष्टकरणादिरित्यर्थकत्वात् । ब्रह्मोपास्व ब्रह्मोपचरस्वेति पौष्यायणश्रुतावतिदेशात् । अतः सर्वज्ञगुरुस्वीकारस्योपपन्नत्वेन तदुक्तप्रकारेणोपासनं कार्यमिति सिद्धम् ॥

ಆಚಾರ್ಯೋಪಾಸನ ಎಂದರೆ ವಿನಯಪೂರ್ವಕವಾಗಿ ಅಂತೇಸ್ಥಿತಿ. ಆಚಾರ್ಯರನ್ನು ಉಪಚರಿಸುವುದು ಎಂದರೆ ಅಭೀಷ್ಟಕರಣಾದಿಗಳು ಎಂದು ಅರ್ಥವಿದ್ದದ್ದರಿಂದ,

"ಬ್ರಹ್ಮೋಪಾಸ್ವ ಬ್ರಹ್ಮೋಪಚರಸ್ವ ತಚ್ಛೃಣು ಹಿ ತತ್ತ್ವಾಮವತು । ಯಥಾ ಬ್ರಹ್ಮೋಪಚರೇರ್ಯಥಾ ಮಾಮುಪಚರೇರ್ಯೇ ಚಾನ್ಯೇಽಸ್ಮದ್ವಿಧಾಃ ಶ್ರೇಯಸಶ್ಚ ತಾನುಪಾಸ್ವ ತಾನುಪಚರಸ್ವ ತೇಭ್ಯಃ ಶೃಣುಹಿ ತೇ ತ್ವಾಮವಂತು"

ಎಂಬುದಾಗಿ ಪೌಷ್ಯಾಯಣಶ್ರುತಿಯಲ್ಲಿ ಅತಿದೇಶ ಮಾಡಿದ್ದರಿಂದ, ಪಶ್ಚಾತ್ ಪ್ರಾಪ್ತರಾಗುವ ಸಮೋತ್ತಮಗುರುಸ್ವೀಕಾರವು ಯುಕ್ತವೇ ಆಗಿದೆ. ಆದ್ದರಿಂದ ಸರ್ವಜ್ಞಗುರುಸ್ವಿಕಾರವು ಉಪಪನ್ನವಾಗುವುದರಿಂದ ತದುಕ್ತಪ್ರಕಾರದಿಂದ ಉಪಾಸನವು ಕಾರ್ಯವಾಗಿದೆ ಎಂದು ಸಿದ್ಧವಾಗುತ್ತದೆ.

ವಿಕಲ್ಪಾಧಿಕರಣವು ಮುಗಿಯಿತು.

*ಅಧಿಕರಣ – 29*

# ವಿದ್ಯಾಧಿಕರಣ

## ಸಂಗತಿ

**ಸೂ.ರ.:– अत्रोपासनस्य कर्तव्यतासमर्थनाय ज्ञानमेव मुक्ति-हेतुरिति समर्थ्यते ।**

ಉಪಾಸನೆಗೆ ಕರ್ತವ್ಯತ್ವವನ್ನು ಸಮರ್ಥಿಸುವುದಕ್ಕಾಗಿ ಜ್ಞಾನವೇ ಮೋಕ್ಷಹೇತು-ವಾಗಿದೆ ಎಂದು ಸಮರ್ಥಿಸುತ್ತಾರೆ ಇಪ್ಪತ್ತೊಂಭತ್ತನೇ ಈ ವಿದ್ಯಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु न भगवत उपासनं कार्यम् । व्यर्थत्वात् । न च ज्ञानार्थमुपासनम् । तस्यापि व्यर्थत्वात् । न च मोक्षार्थं ज्ञानम् । ज्ञानस्य मोक्षसाधनत्वानिश्चयात् । यथा ज्ञानस्य मोक्षसाधनत्वं श्रूयते तथा कर्मणोऽपि 'कर्मणैव ही'(गी.३-२०)त्यादिना मोक्षसाधनत्वं स्मर्यते । न च पुरुषार्थसाधनत्वसन्देहेऽपि कृष्यादाविव ज्ञानोपासनादौ प्रवृत्तिः सम्भवतीति वाच्यम् । ततो ज्ञानस्य मोक्षसाधनत्वानिर्णयान्न ज्ञानोपासनं कार्यमिति प्राप्ते सूत्रितम् ॥**

ಭಗವಂತನ ಉಪಾಸನೆ ಕಾರ್ಯವಲ್ಲ. ಕಾರಣ ವ್ಯರ್ಥವಾದ್ದರಿಂದ. ವ್ಯರ್ಥ ಎಂದು ಏಕೆ ಹೇಳುತ್ತೀರಿ? ಜ್ಞಾನಕ್ಕಾಗಿ ಉಪಾಸನೆ ಎನ್ನಬಹುದಲ್ಲ ಎಂದರೆ ಅದೂ ಸರಿಯಲ್ಲ. ಏಕೆಂದರೆ ಜ್ಞಾನವೂ ವ್ಯರ್ಥವಾದ್ದರಿಂದ. ಜ್ಞಾನ ಏಕೆ ವ್ಯರ್ಥ? ಮೋಕ್ಷ-ಕ್ಕಾಗಿ ಜ್ಞಾನ ಎಂದರೆ, ಅದೂ ಸರಿಯಲ್ಲ. ಕಾರಣ – ಜ್ಞಾನಕ್ಕೆ ಮೋಕ್ಷಸಾಧನತ್ವವು ನಿಶ್ಚಿತವಾಗಿಲ್ಲವಾದ್ದರಿಂದ.

ಜ್ಞಾನಕ್ಕೆ ಮೋಕ್ಷಸಾಧನತ್ವವು ಹೇಗೆ ಶ್ರುತವಾಗುತ್ತದೆಯೋ ಅದರಂತೆ "ಕರ್ಮಣೈವ ಹಿ" (ಗೀ.3–20) ಎಂಬುದಾಗಿ ಕರ್ಮಕ್ಕೂ ಮೋಕ್ಷಸಾಧನತ್ವವು ಸ್ಮೃತವಾಗುತ್ತಿದೆ.

ಜ್ಞಾನಕ್ಕೆ ಪುರುಷಾರ್ಥಸಾಧನತ್ವ ಸಂದೇಹ ಇದ್ದರೂ ಸಹ, ಸಂದೇಹವಿದ್ದರೂ ಕೃಷ್ಯಾದಿಗಳಲ್ಲಿ ಪ್ರವೃತ್ತಿಯು ಕೂಡುವಂತೆ, ಜ್ಞಾನೋಪಾಸನಾದಿಗಳಲ್ಲಿಯೂ ಪ್ರವೃತ್ತಿಯು ಸಂಭವಿಸುತ್ತದೆ ಎಂದು ಶಂಕಿಸುವುದು ಸರಿಯಲ್ಲ. ಏಕೆಂದರೆ - ಅಲ್ಪವಿತ್ತವ್ಯಯ ಅಲ್ಪಾಯಾಸಸಾಧ್ಯವಾದ ಕೃಷ್ಯಾದಿಗಳಲ್ಲಿ ಹಾಗೆ ಸಂದೇಹವಿದ್ದಾಗಲೂ ಪ್ರವೃತ್ತಿಯು ಸಂಭವಿಸಿದರೂ ಸಹ, ಬಹುವಿತ್ತವ್ಯಯ ಬಹ್ವಾಯಾಸಸಾಧ್ಯವಾದ ಪಾರತ್ರಿಕಪ್ರವೃತ್ತಿಯು ಸಂದೇಹಮಾತ್ರದಿಂದ ಉಪಪನ್ನವಾಗುವುದಿಲ್ಲ.

ಆದ್ದರಿಂದ ಜ್ಞಾನಕ್ಕೆ ಮೋಕ್ಷಸಾಧನತ್ವವು ನಿಶ್ಚಯವಾಗದ ಕಾರಣ ಜ್ಞಾನೋ-ಪಾಸನವು ಕಾರ್ಯವಾಗಿಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

## ॐ विद्यैव तु निर्धारणात् ॐ (३-३-४८)

**ಸೂತ್ರಾರ್ಥ** :- "ನಾನ್ಯಃ ಪಂಥಾಃ" (ಶ್ವೇ. 3-8) ಇತಿ **ನಿರ್ಧಾರಣಾತ್** = ಅನ್ಯನಿಷೇಧ ಮಾಡುವ ಮೂಲಕವಾಗಿ ಜ್ಞಾನಕ್ಕೇನೇ ಮೋಕ್ಷಸಾಧನತ್ವನಿಶ್ಚಯ ಹೇಳಿದ್ದರಿಂದ **ವಿದ್ಯೈವ** = ಜ್ಞಾನವೇ ಮೋಕ್ಷಸಾಧನಂ = ಮೋಕ್ಷಸಾಧನವಾಗಿದೆ. ನ ಕರ್ಮಾದಿಕಂ = ಹೊರತು ಕರ್ಮಾದಿಗಳು ಮೋಕ್ಷಸಾಧನವಾಗಿಲ್ಲ. **ತು** ಶಬ್ದವು ಶ್ರುತಿಗೆ ಪ್ರಾಬಲ್ಯದ್ಯೋತಕವಾಗಿದೆ.

### ಸಿದ್ಧಾಂತ

**ಸೂ.ರ.:- एवं च कार्यमेव ज्ञानार्थमुपासनम् । तमेवं विदित्वेति श्रुतेः । कर्मवचनादपि प्राबल्येन विद्यैव मोक्षसाधनं इत्यवधारण-सम्भवात् । अतो ज्ञानस्य मुक्तिसाधनत्वात्तदर्थमुपासनं कर्तव्यमिति सिद्धम् ॥**

"ತಮೇವಂ ವಿದಿತ್ವಾಽತಿಮೃತ್ಯುಮೇತಿ" ಎಂಬುದಾಗಿ ಶ್ರುತಿ ಇರುವುದರಿಂದ ಜ್ಞಾನಕ್ಕಾಗಿ ಉಪಾಸನೆಯು ಕಾರ್ಯವೇ ಆಗಿದೆ.

ಕರ್ಮಾಚರಣೆಯಿಂದಲೂ ಮೋಕ್ಷವಾಗುತ್ತದೆ ಎಂದು ಹೇಳುವ ಶ್ರುತಿ ಇರುವುದಲ್ಲ? ಎಂದರೆ, ಜ್ಞಾನಶ್ರುತಿಯು ಕರ್ಮವಚನಕ್ಕಿಂತಲೂ ಪ್ರಬಲವಾಗುವು-ದರಿಂದ ಜ್ಞಾನದಿಂದಲೇ ಮೋಕ್ಷ ಎಂದು ನಿರ್ಧಾರವು ಸಂಭಾವಿತವಾಗುತ್ತದೆ.

ಆದ್ದರಿಂದ ಜ್ಞಾನವು ಮೋಕ್ಷಸಾಧನವಾದ್ದರಿಂದ ಜ್ಞಾನಕ್ಕಾಗಿ ಉಪಾಸನೆಯು ಕರ್ತವ್ಯವಾಗಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 49

**ಸೂ.ರ.:– नन्वेवं तर्हि ध्यानवैयर्थ्यं भवेत् । श्रवणेनैव मननरूपविचारसम्भवात् । तन्मात्रेण मोक्षसम्भवादित्याशङ्कां परिहरत्सूत्रमुपन्यस्यति ॥**

ಹೀಗಾಗುವುದಾದರೆ ಧ್ಯಾನವು ವ್ಯರ್ಥವಾಗಬೇಕಾಗುತ್ತದೆ. ಕಾರಣ – ಶ್ರವಣದಿಂದಲೇ ಮನನರೂಪವಿಚಾರ ಸಂಭವಿಸುವುದರಿಂದ ತನ್ಮಾತ್ರದಿಂದಲೇ ಮೋಕ್ಷವು ಸಂಭವಿಸುವುದರಿಂದ ಎಂದು ಶಂಕೆ ಬಂದರೆ, ಸಮಾಧಾನ ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

### ॐ दर्शनाच्च ॐ (३-३-४९)

**ಸೂತ್ರಾರ್ಥ** :- ನ ಕೇವಲಂ ಪರೋಕ್ಷಜ್ಞಪ್ತಿರೂಪವಿದ್ಯಯೈವ ಮೋಕ್ಷಃ = ಕೇವಲ ಪರೋಕ್ಷಜ್ಞಪ್ತಿರೂಪವಿದ್ಯೆಯಿಂದಲೇ ಮೋಕ್ಷವಲ್ಲ. ಕಿಂತು **ದರ್ಶನಾಚ್ಚ** = ಬ್ರಹ್ಮಸಾಕ್ಷಾತ್ಕಾರದಿಂದಲೂ ಸಹ ಮೋಕ್ಷವಾಗುತ್ತದೆ. ಅತೋ ನ ಧ್ಯಾನವೈಯ್ಯರ್ಥ್ಯಂ = ಆದ್ದರಿಂದ ಧ್ಯಾನಕ್ಕೆ ವೈಯ್ಯರ್ಥ್ಯ ಇಲ್ಲ.

**ಸೂ.ಟ.:– एवं च परोक्षज्ञानेन मोक्षानुक्तेर्येन मननेनैव कृतत्वात् ध्यानवैयर्थ्यं स्यात् । किं नामोपासनाजनितेनापरोक्षज्ञानेनेत्यभ्युपगमात् । न च तमेवं विदित्वेति सामान्यश्रुतिसद्भावेन ज्ञानमेव मोक्षसाधनं तत्त्वपरोक्षज्ञानमेवेति न नियमो नियामकाभावादिति वाच्यम् । दृष्ट्वैवेति (कौशिक.) श्रुतिबलेन साधारणश्रुतेरप्यपरोक्षज्ञानपरतया व्याख्येयत्वात् । अतो ज्ञानस्य मोक्षसाधनत्वेन तदर्थमुपासनं कर्तव्यमिति सिद्धम् ॥**

ಪರೋಕ್ಷಜ್ಞಾನದಿಂದ ಮೋಕ್ಷ ಹೇಳಿಲ್ಲವಾದ್ದರಿಂದ, ಒಂದುವೇಳೆ ಹೇಳಿದ್ದರೆ

ಮನನದಿಂದಲೇ ಸಿಗುವುದರಿಂದ ಧ್ಯಾನಕ್ಕೆ ವೈಯರ್ಥ್ಯ ಬರುತ್ತಿತ್ತು. ಕಿಂ ನಾಮ ಉಪಾಸನಾಜನಿತವಾದ ಅಪರೋಕ್ಷಜ್ಞಾನದಿಂದ ಮೋಕ್ಷ ಹೇಳಲಾಗಿದೆ.

ಹೌದು, ''ತಮೇವಂ ವಿದಿತ್ವಾ ಅತಿಮೃತ್ಯುಮೇತಿ'' ಎಂಬುದಾಗಿ ಸಾಮಾನ್ಯ-ಶ್ರುತಿ ಇರುವುದರಿಂದ ಜ್ಞಾನವೇ ಮೋಕ್ಷಸಾಧನ ಎಂದು ಹೇಳಬೇಕೇ ಹೊರತು ಆ ಜ್ಞಾನವು ಅಪರೋಕ್ಷಜ್ಞಾನವೇ ಎಂದು ನಿಯಮವಿಲ್ಲ, ಕಾರಣ ನಿಯಾಮಕವಾದದ್ದು ಯಾವುದೂ ಇಲ್ಲವಾದ್ದರಿಂದ ಎಂಬುದಾಗಿ ಶಂಕಿಸುವುದು ಸರಿಯಲ್ಲ. ''ದೃಷ್ಟ್ವೈವ ತಂ ಮುಚ್ಯತೇ ನಾಪರೇಣ'' ಎಂಬ (ಕೌಶಿಕಶ್ರುತಿ) ಶ್ರುತಿಬಲದಿಂದಾಗಿ ಸಾಧಾರಣ-ಶ್ರುತಿಯೂ ಅಪರೋಕ್ಷಜ್ಞಾನಪರವಾಗಿ ವ್ಯಾಖ್ಯೇಯವಾಗಿದೆ.

ಆದ್ದರಿಂದ ಜ್ಞಾನವು ಮೋಕ್ಷಸಾಧನವಾದ್ದರಿಂದ ಜ್ಞಾನಕ್ಕಾಗಿ ಉಪಾಸನೆಯು ಕರ್ತವ್ಯವಾಗಿದೆ ಎಂದು ಸಿದ್ಧವಾಗುತ್ತದೆ.

ವಿದ್ಯಾಧಿಕರಣವು ಮುಗಿಯಿತು.

ಅಧಿಕರಣ - 30

# ಶ್ರುತ್ಯಧಿಕರಣ

## ಸಂಗತಿ

**ಸೂ.ರ.:- अत्र यत्साधनं भगवदुपास्तिः तस्य ज्ञानस्य मोक्ष-साधनत्वं समर्थ्यते ।**

ಭಗವಂತನ ಉಪಾಸನೆಯು ಯಾವ ಜ್ಞಾನಕ್ಕೆ ಸಾಧನವಾಗಿದೆಯೋ ಆ ಜ್ಞಾನಕ್ಕೆ ಮೋಕ್ಷಸಾಧನತ್ವವನ್ನು ಸಮರ್ಥಿಸುತ್ತಾರೆ ಮೂವತ್ತನೇ ಈ ಶ್ರುತ್ಯಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:- ननु कर्मसाध्य एव मोक्षः । कर्मणैव हि संसिद्धिमिति वचनात् । श्रुतिस्मृत्योः सावधारणत्वेऽपि भगवद्वाक्यत्वेन स्मृतेरेव बलवत्त्वात् । ततः श्रुतेः स्मृतिबाधितत्वेन ज्ञानस्य मोक्षसाधनत्वा-भावेन न तदर्थमुपासनं कार्यमिति प्राप्ते सूत्रितम् ॥**

"ಕರ್ಮಣೈವ ಹಿ ಸಂಸಿದ್ಧಿಂ" ಎಂದು ವಚನವಿರುವುದರಿಂದ ಮೋಕ್ಷವು ಕರ್ಮಸಾಧ್ಯವೇ ಆಗಿದೆ.

ಶ್ರುತಿ-ಸ್ಮೃತಿ ಎರಡೂ ಸಾವಧಾರಣವೇ ಆದರೂ ಸಹ ಸ್ಮೃತಿಯು ಭಗವಂತನ ವಾಕ್ಯವಾದ್ದರಿಂದ ಸ್ಮೃತಿಯೇ ಪ್ರಬಲವಾಗಿದೆ. ಹೀಗಾಗಿ ಶ್ರುತಿಯು ಪ್ರಬಲವಾದ ಸ್ಮೃತಿಯಿಂದ ಬಾಧಿತವಾಗುವುದರಿಂದ, ಜ್ಞಾನಕ್ಕೆ ಮೋಕ್ಷಸಾಧನತ್ವವು ಇಲ್ಲದ ಕಾರಣ ಜ್ಞಾನಕ್ಕಾಗಿ ಉಪಾಸನೆಯು ಕಾರ್ಯವಾಗಿಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ श्रुत्यादिबलीयस्त्वाच्च न बाधः ॐ (३-३-५०)**

**ಸೂತ್ರಾರ್ಥ** :- ಮೋಕ್ಷಸ್ಯ ಜ್ಞಾನಸಾಧ್ಯತ್ವೇ = ಮೋಕ್ಷವು ಜ್ಞಾನಸಾಧ್ಯವಾಗಿದೆ ಎಂದು ಅಂಗೀಕರಿಸುವುದಾದರೆ ನ ಬಾಧಃ = 'ಕರ್ಮಣೈವ' ಎಂಬ ಸ್ಮೃತಿವಿರೋಧ

ಬರುವುದಿಲ್ಲ. ಕುತಃ = ಏಕೆ? **ಶ್ರುತ್ಯಾದಿಬಲೀಯಸ್ತ್ವಾತ್** = ಜ್ಞಾನಕ್ಕೆ ಮೋಕ್ಷ-ಸಾಧನತ್ವವನ್ನು ಉಪಪಾದಿಸುವ, 'ತಮೇವಂ ವಿದಿತ್ವಾ' ಇತ್ಯಾದಿ ಶ್ರುತಿ-ಲಿಂಗಾದಿಗಳು ಪ್ರಬಲವಾದ್ದರಿಂದ, ಸ್ಮೃತಿಗತವಾದ ಏವ ಶಬ್ದಕ್ಕೆ ಅಯೋಗ-ವ್ಯವಚ್ಛೇದಾರ್ಥತ್ವವು ಉಪಪನ್ನವಾಗುವುದರಿಂದ. ಇದನ್ನು ಸೂಚಿಸುವುದಕ್ಕಾಗಿಯೇ ಸೂತ್ರದಲ್ಲಿ ಚ ಶಬ್ದವು ಪ್ರಯೋಗಿಸಲ್ಪಟ್ಟಿದೆ.

## ಸಿದ್ಧಾಂತ

**ಸೂ.ರ.:– एवं च विद्ययैव मोक्षः । तमेवं विदित्वेति (श्वे.३-८) नान्यः पन्था इति (श्वे.३-८) निर्धारणात् । तमेवं विदित्वेति वचनात्परोक्षज्ञानेनैव मोक्ष इति न मन्तव्यम् । दृष्ट्वैव तं मुच्यत इति वचनाद्विदित्वेति श्रुतेरप्यपरोक्षज्ञानपरताया एव ग्राह्यत्वात् । न च कर्मणैवेति सावधारणया ईश्वरवचनत्वेन बलवत्या स्मृत्या बाधः । तमेवं विदित्वेति श्रुतेर्न कर्मभिरिति तत्त्वज्ञानप्रार्थनलिङ्गस्य कर्मणा बध्यत इति युक्तिमद्भगवद्वचनस्य च ततो बलवत्त्वात् । न च कर्मणैवेति स्मृत्यप्रामाण्यम् । अवधारणस्य कर्मयोगाव्यवच्छेदार्थ-कत्वात् । अतो ज्ञानस्यैव मोक्षहेतुत्वेन कर्तव्यैवोपासनेति सिद्धम् ॥**

'ತಮೇವಂ ವಿದಿತ್ವಾ' (ಶ್ವೇ. 3-8) 'ನಾನ್ಯಃ ಪಂಥಾಃ' (ಶ್ವೇ. 3-8) ಎಂಬು-ದಾಗಿ ನಿರ್ಧಾರಣ ಹೇಳಿದ್ದರಿಂದ ಜ್ಞಾನದಿಂದಲೇ ಮೋಕ್ಷ ಲಭ್ಯ.

'ತಮೇವಂ ವಿದಿತ್ವಾ' (ಭಗವಂತನನ್ನು ತಿಳಿದು) ಎಂಬುದಾಗಿ ಹೇಳಿದ್ದರಿಂದ ಪರೋಕ್ಷಜ್ಞಾನದಿಂದಲೇ ಮೋಕ್ಷ ಎಂದು ತಿಳಿಯಬಾರದು. ಕಾರಣ 'ದೃಷ್ಟ್ವೈವ ತಂ ಮುಚ್ಯತೇ' ಎಂದು ವಚನವಿರುವುದರಿಂದ 'ವಿದಿತ್ವಾ' ಎಂಬ ಶ್ರುತಿಯೂ ಸಹ ಅಪರೋಕ್ಷಜ್ಞಾನಪರವಾಗಿಯೇ ಗ್ರಾಹ್ಯವಾಗಿದೆ.

ಹಾಗಾದರೆ 'ಕರ್ಮಣೈವ' ಎಂಬ ಸಾವಧಾರಣವಾದ, ಈಶ್ವರವಚನರೂಪ-ವಾದ್ದರಿಂದ ಪ್ರಬಲವಾದ ಸ್ಮೃತಿಯಿಂದ ಬಾಧ ಬರುತ್ತದೆಯಲ್ಲ? ಎಂದು ಶಂಕಿಸು-ವುದು ಸರಿಯಲ್ಲ. ಕಾರಣ 'ಕರ್ಮಣೈವ' ಎಂಬ ಸ್ಮೃತಿಗಿಂತಲೂ

1. 'ತಮೇವಂ ವಿದಿತ್ವಾ' ಎಂಬ ಶ್ರುತಿಯು
2. 'ನ ಕರ್ಮಭಿಃ' ಎಂದು ತತ್ವಜ್ಞಾನಪ್ರಾರ್ಥನರೂಪವಾದ ಲಿಂಗವು
3. 'ಕರ್ಮಣಾ ಬಧ್ಯತೇ' ಎಂಬ ಯುಕ್ತಿಸಹಿತವಾದ ಭಗವದ್ವಚನವು ಪ್ರಬಲವಾಗಿದೆಯಾದ್ದರಿಂದ.

ಹಾಗಾದರೆ 'ಕರ್ಮಣೈವ ಹಿ ಸಂಸಿದ್ಧಿಂ' ಎಂಬ ಸ್ಮೃತಿಗೆ ಅಪ್ರಾಮಾಣ್ಯ ಬಂತು ಎಂದು ಶಂಕಿಸುವುದು ಸರಿಯಲ್ಲ. 'ಕರ್ಮಣೈವ' ಎನ್ನುವಲ್ಲಿಯ ಅವಧಾರಣವು ಕರ್ಮಯೋಗ ಅವ್ಯವಚ್ಛೇದಾರ್ಥಕವಾದ್ದರಿಂದ.

ಆದ್ದರಿಂದ ಜ್ಞಾನವೇ ಮೋಕ್ಷಹೇತುವಾದ್ದರಿಂದ ಉಪಾಸನೆಯು ಕರ್ತವ್ಯವೇ ಆಗಿದೆ ಎಂದು ಸಿದ್ಧವಾಗುತ್ತದೆ.

**ಶ್ರುತ್ಯಧಿಕರಣವು ಮುಗಿಯಿತು.**

ಅಧಿಕರಣ – 31

# ಅನುಬಂಧಾಧಿಕರಣ

## ಸಂಗತಿ

ಸೂ.ರ.:– अत्र ब्रह्मज्ञानसाधनोपासनस्य भक्तिपूर्वकत्वं समर्थ्यते ।

ಬ್ರಹ್ಮಜ್ಞಾನಸಾಧನವಾದ ಉಪಾಸನೆಗೆ ಭಕ್ತಿಪೂರ್ವಕತ್ವವನ್ನು ಸಮರ್ಥಿಸುತ್ತಾರೆ ಮೂವತ್ತೊಂದನೇ ಈ ಅನುಬಂಧಾಧಿಕರಣದಲ್ಲಿ.

## ಪೂರ್ವಪಕ್ಷ

ಸೂ.ರ.:– ननु न ज्ञानार्थं भक्तिरपेक्षिता । प्रसादस्य ज्ञानहेतुत्वे सहायानपेक्षत्वात् । सर्वलक्षणसम्पन्न इति (नारायणतन्त्रे.) वचनात् । न चैवमुपासनाभावः ज्ञानस्योपासनाऽन्वयव्यतिरेकदर्शनात् । न चोपासना भक्तिमन्तरेण न सम्भवतीति वाच्यम् । द्वेषेणापि ध्यानसम्भवात् । द्वेषाच्चैद्यादय इति वचनात् । अतो द्वेषेण वा भक्त्या वोत्पन्नेनोपासनेन गुरुप्रसादलक्षणसहकारिवशात्ज्ञानसम्भवेन न तदर्थं भक्त्यादिकमावश्यकमिति प्राप्ते सूत्रितम् ॥

ಜ್ಞಾನಕ್ಕಾಗಿ ಭಕ್ತಿಯು ಅಪೇಕ್ಷಿತವಾಗಿಲ್ಲ, ಕಾರಣ ಪ್ರಸಾದವು ಜ್ಞಾನಹೇತು-ವಾದಾಗ ಭಕ್ತಿಯ ಸಹಾಯವು ಅನಪೇಕ್ಷವಾದ್ದರಿಂದ. ಮತ್ತು

ಸರ್ವಲಕ್ಷಣಸಂಪನ್ನಃ ಸರ್ವಜ್ಞೋ ವಿಷ್ಣುತತ್ಪರಃ ।
ಯದ್ಗುರುಃ ಸುಪ್ರಸನ್ನಃ ಸನ್ ದದ್ಯಾತ್ತನ್ನಾನ್ಯಥಾ ಭವೇತ್ ॥

ಎಂಬುದಾಗಿ ನಾರಾಯಣತಂತ್ರವಚನ ಇರುವುದರಿಂದ. (ಗುರುಪ್ರಸಾದದಿಂದ ಅಸಾಧ್ಯವಾದದ್ದೇ ಯಾವುದೂ ಇಲ್ಲವಾದ್ದರಿಂದ ಜ್ಞಾನಕ್ಕಾಗಿ ಭಕ್ತಿಯು ಅನಪೇಕ್ಷಿತ ಎಂದು ಭಾವ)

ಹಾಗಾದರೆ ಉಪಾಸನೆಯೂ ಇಲ್ಲದೇ ಹೋಗಬೇಕಾದ ಅತಿಪ್ರಸಂಗ ಬರುವುದಿಲ್ಲ, ಜ್ಞಾನಕ್ಕೆ ಉಪಾಸನೆಯಿಂದ ಅನ್ವಯ-ವ್ಯತಿರೇಕಗಳು ಕಂಡಿದ್ದರಿಂದ.

ಹೌದು, ಭಕ್ತಿ ಇಲ್ಲದೇ ಹೋದರೆ ಉಪಾಸನೆಯು ಸಂಭವಿಸುವುದಿಲ್ಲವಲ್ಲ? ಎಂದು ಶಂಕಿಸುವುದು ಸರಿಯಲ್ಲ, ಕಾರಣ ದ್ವೇಷದಿಂದಲೂ ಧ್ಯಾನವು ಸಂಭವಿಸು-ವುದರಿಂದ. "ದ್ವೇಷಾಚ್ಚೈದ್ಯಾದಯೋ ನೃಪಾಃ" ಎಂದು ವಚನ ಇರುವುದರಿಂದ.

ಆದ್ದರಿಂದ ದ್ವೇಷದಿಂದಾಗಲೀ ಭಕ್ತಿಯಿಂದಾಗಲೀ ಉತ್ಪನ್ನವಾದ ಉಪಾಸನೆ-ಯಿಂದ ಗುರುಪ್ರಸಾದರೂಪಸಹಕಾರಿವಶಾತ್ ಜ್ಞಾನವು ಸಂಭವಿಸುವುದರಿಂದ ಜ್ಞಾನಕ್ಕಾಗಿ ಭಕ್ತ್ಯಾದಿಗಳು ಆವಶ್ಯಕವಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

## ॐ अनुबन्धादिभ्यश्च ॐ (३-३-५१)

**ಸೂತ್ರಾರ್ಥ** :- ನ ಕೇವಲಂ ಶ್ರವಣಾದಿನಾ = ಕೇವಲ ಶ್ರವಣಾದಿಗಳಿಂದ ಮಾತ್ರವಲ್ಲ, ನಾಪಿ ಪ್ರಬಲಗುರುಪ್ರಸಾದೇನ ಬ್ರಹ್ಮದರ್ಶನಂ ಭವತಿ = ಮತ್ತು ಪ್ರಬಲವಾದ ಗುರುಪ್ರಸಾದದಿಂದಾಗಲೀ ಬ್ರಹ್ಮದರ್ಶನ (ಅಪರೋಕ್ಷಜ್ಞಾನ) ಆಗುವುದಿಲ್ಲ. ಕಿಂತು **ಅನುಬಂಧಾದಿಭ್ಯಶ್ಚ** = ಅನುಬಂಧಶಬ್ದವಾಚ್ಯವಾದ ಹರಿ-ಗುರುಭಕ್ತಿ, ಶಮಾದಿಗಳಿಂದಲೂ ಬ್ರಹ್ಮದರ್ಶನ ಆಗುತ್ತದೆ.

## ಸಿದ್ಧಾಂತ

**ಸೂ.ರ.:- एवं च न केवलं ज्ञानार्थं श्रवणादिकं गुरुप्रसादश्चापेक्षितः । किन्तु भक्त्यादिकमपि प्रसादार्थं ज्ञानार्थं चापेक्षितम् । सर्वलक्षणसम्पन्न इति वचनात् । अतो भक्त्यादेर्ज्ञानार्थमपेक्षितत्वादुक्तं युक्तमिति सिद्धम् ॥**

ಜ್ಞಾನಕ್ಕಾಗಿ ಕೇವಲ ಶ್ರವಣಾದಿಗಳಾಗಲೀ ಗುರುಪ್ರಸಾದವಾಗಲೀ ಅಪೇಕ್ಷಿತ ಎಂದಷ್ಟೇ ಅಲ್ಲ, ಕಿಂತು ಭಕ್ತ್ಯಾದಿಗಳೂ ಸಹ ಪ್ರಸಾದಕ್ಕಾಗಿ ಹಾಗೂ ಜ್ಞಾನಕ್ಕಾಗಿ ಅಪೇಕ್ಷಿತವಾಗಿದೆ.

> ಸರ್ವಲಕ್ಷಣಸಂಪನ್ನಃ ಸರ್ವಜ್ಞೋ ವಿಷ್ಣುತತ್ಪರಃ ।
> ಯದ್ಗುರುಃ ಸುಪ್ರಸನ್ನಃ ಸನ್ ದದ್ಯಾತ್ತನ್ನಾನ್ಯಥಾ ಭವೇತ್ ॥
> ತಥಾಪ್ಯನಾದಿಸಂಸಿದ್ಧೋ ಭಕ್ತ್ಯಾದಿಗುಣಪೂಗತಃ ।
> ಲಭೇದ್ಗುರುಪ್ರಸಾದಂ ಚ ತಸ್ಮಾದೇವ ಚ ತದ್ಭವೇತ್ ॥

ಎಂಬುದಾಗಿ ಹಾಗೂ

ಭಕ್ತಿರ್ವಿಷ್ಣೌ ಗುರೌ ಚೈವ ಗುರೋರ್ನಿತ್ಯಪ್ರಸನ್ನತಾಮ್ ।
ದದ್ಯಾಚ್ಛಮದಮಾದೀಂಶ್ಚ ತೇನ ಚೈತೇ ಗುಣಾ ಪುನಃ ॥
ತೈಸ್ಸರ್ವೈರ್ದರ್ಶನಂ ವಿಷ್ಣೋಃ ಶ್ರವಣಾದಿಕೃತಂ ಭವೇತ್ ।

ಎಂಬುದಾಗಿ ನಾರಾಯಣತಂತ್ರವಚನ ಇರುವುದರಿಂದ.

ಆದ್ದರಿಂದ ಜ್ಞಾನಕ್ಕಾಗಿ ಭಕ್ತ್ಯಾದಿಗಳು ಅಪೇಕ್ಷಿತವಾದ್ದರಿಂದ ಹೇಳಿದ್ದು ಯುಕ್ತವಾಗಿದೆ ಎಂದು ಸಿದ್ಧವಾಗುತ್ತದೆ.

**ಅನುಬಂಧಾಧಿಕರಣವು ಮುಗಿಯಿತು.**

ಅಧಿಕರಣ – 32

# ಪ್ರಜ್ಞಾಂತರಾಧಿಕರಣ

## ಸಂಗತಿ

**ಸೂ.ರ.:– अत्रोपासनासाध्यज्ञाने विशेषतारतम्यं समर्थ्यते ।**

ಉಪಾಸನಾಸಾಧ್ಯವಾದ ಜ್ಞಾನದಲ್ಲಿ ವಿಶೇಷತಾರತಮ್ಯವನ್ನು ಸಮರ್ಥಿಸುತ್ತಾರೆ ಮೂವತ್ತೆರಡನೇ ಈ ಪ್ರಜ್ಞಾಂತರಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु सर्वेषामेकप्रकारमेवापरोक्षज्ञानम् । भक्त्या मामभिजानातीत्यनेन सर्वेषां पूर्णज्ञानस्य सम्पूर्णज्ञानेन मोक्षस्य चाभिधानात् । अतः सर्वेषां दर्शनसाम्यादुक्तं मुक्ततारतम्यमयुक्तमिति प्राप्ते सूत्रमाह ॥**

ಎಲ್ಲ ಅಧಿಕಾರಿಗಳಿಗೂ ಸಹ ಅಪರೋಕ್ಷಜ್ಞಾನವು ಏಕಪ್ರಕಾರವೇ ಆಗಿದೆ. ಕಾರಣ – 'ಭಕ್ತ್ಯಾ ಮಾಮಭಿಜಾನಾತಿ' ಎಂಬುದಾಗಿ ಎಲ್ಲರಿಗೂ ಪೂರ್ಣಜ್ಞಾನವನ್ನು ಹೇಳಿದ್ದ-ರಿಂದ ಮತ್ತು ಸಂಪೂರ್ಣಜ್ಞಾನದಿಂದ ಮೋಕ್ಷವನ್ನು ಹೇಳಿದ್ದರಿಂದ.

ಆದ್ದರಿಂದ ಎಲ್ಲರಿಗೂ ದರ್ಶನದಲ್ಲಿ ಸಾಮ್ಯ ಇರುವುದರಿಂದ ಮುಕ್ತರಲ್ಲಿ ತಾರತಮ್ಯವನ್ನು ಹೇಳಿದ್ದು ಯುಕ್ತವಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ प्रज्ञान्तरपृथक्त्ववद्दृष्टिश्च तदुक्तम् ॐ (३-३-५२)**

**ಸೂತ್ರಾರ್ಥ** :- ಪ್ರಜ್ಞಾಂತರಂ ಪ್ರಜ್ಞಾವಿಶೇಷಃ, ಧ್ಯಾನಮಿತಿ ಯಾವತ್ । ಪ್ರಜ್ಞಾಂತರ ಎಂದರೆ ಪ್ರಜ್ಞಾವಿಶೇಷ, ಧ್ಯಾನ ಎಂದು ಅರ್ಥ.

**ಪ್ರಜ್ಞಾಂತರಪೃಥಕ್ತ್ವವತ್** = ಧ್ಯಾನವು ಅನೇಕ ಪ್ರಕಾರವಾಗಿರುವಂತೆ ಅದಕ್ಕನು-ಸಾರವಾಗಿ **ದೃಷ್ಟಿಶ್ಚ** = ಬ್ರಹ್ಮದರ್ಶನವೂ ಸಹ ಅನೇಕಪ್ರಕಾರವಾಗಿದೆ. ಎಲ್ಲ ಅಧಿ ಕಾರಿಗಳಿಗೂ ಏಕವಿಧವಾಗಿ ಇಲ್ಲ. **ತದುಕ್ತಂ** = ದೃಷ್ಟಿಗೆ ಅನೇಕವಿಧತ್ವವು "ಅಂತರ್ದೃಷ್ಟಯಃ ..." ಎಂಬ ಕಮಠಶ್ರುತಿಯಲ್ಲಿ ಉಕ್ತವಾಗಿದೆ ಕೂಡ.

## ಸಿದ್ಧಾಂತ

ಸೂ.ರ.:- एवं चानेकप्रकारमेवाधिकारिणां भगवद्दर्शनम् । तत्साधनस्योपासनस्यानेकप्रकारत्वात् । फलस्य च साधनानुसारित्वात् । न चैवं सम्पूर्णदर्शनाभावाद्विरिञ्चेतरेषां मोक्षाभावः । यथायोग्यदृष्टेरेव मोक्षहेतुत्वेन स्वयोग्यदर्शनेन सर्वेषां मोक्षसम्भवात् । अतो ज्ञानविशेषसद्भावाद्युक्तं मोक्षतारतम्यमिति सिद्धम् ॥

ಅಧಿಕಾರಿಗಳಿಗೆ ಭಗವದ್ದರ್ಶನವು ಅನೇಕ ಪ್ರಕಾರವೇ ಆಗಿದೆ. ಕಾರಣ - ದರ್ಶನಕ್ಕೆ ಸಾಧನವಾದ ಉಪಾಸನವು ಅನೇಕಪ್ರಕಾರವಾದ್ದರಿಂದ. ಫಲವು ಯಾವಾಗಲೂ ಸಾಧನಾನುಸಾರಿಯಾಗಿರುತ್ತದೆ.

ಹಾಗಾದರೆ ವಿರಿಂಚನಿಂದ ಇತರರಾದ ಅಧಿಕಾರಿಗಳಿಗೆ ಸಂಪೂರ್ಣದರ್ಶನ ಇಲ್ಲದ ಕಾರಣ ಮೋಕ್ಷಾಭಾವಪ್ರಸಕ್ತಿ ಬರುವುದಲ್ಲ? ಎಂದು ಶಂಕಿಸುವುದು ಸರಿಯಲ್ಲ. ಯಥಾಯೋಗ್ಯದೃಷ್ಟಿಯೇ ಮೋಕ್ಷಹೇತುವಾದ್ದರಿಂದ ಸ್ವಯೋಗ್ಯದರ್ಶನದಿಂದ ಎಲ್ಲರಿಗೂ ಮೋಕ್ಷವು ಸಂಭವಿಸುವುದರಿಂದ.

ಆದ್ದರಿಂದ ಜ್ಞಾನವಿಶೇಷ ಇರುವುದರಿಂದ ಮುಕ್ತತಾರತಮ್ಯವನ್ನು ಹೇಳಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಪ್ರಜ್ಞಾಂತರಾಧಿಕರಣವು ಮುಗಿಯಿತು.

*ಅಧಿಕರಣ – 32*

# ಪ್ರಜ್ಞಾಂತರಾಧಿಕರಣ

## ಸಂಗತಿ

**ಸೂ.ರ.:– अत्रोपासनासाध्यज्ञाने विशेषतारतम्यं समर्थ्यते ।**

ಉಪಾಸನಾಸಾಧ್ಯವಾದ ಜ್ಞಾನದಲ್ಲಿ ವಿಶೇಷತಾರತಮ್ಯವನ್ನು ಸಮರ್ಥಿಸುತ್ತಾರೆ ಮೂವತ್ತೆರಡನೇ ಈ ಪ್ರಜ್ಞಾಂತರಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु सर्वेषामेकप्रकारमेवापरोक्षज्ञानम् । भक्त्या मामभिजानातीत्यनेन सर्वेषां पूर्णज्ञानस्य सम्पूर्णज्ञानेन मोक्षस्य चाभिधानात् । अतः सर्वेषां दर्शनसाम्यादुक्तं मुक्ततारतम्यमयुक्तमिति प्राप्ते सूत्रमाह ॥**

ಎಲ್ಲ ಅಧಿಕಾರಿಗಳಿಗೂ ಸಹ ಅಪರೋಕ್ಷಜ್ಞಾನವು ಏಕಪ್ರಕಾರವೇ ಆಗಿದೆ. ಕಾರಣ – 'ಭಕ್ತ್ಯಾ ಮಾಮಭಿಜಾನಾತಿ' ಎಂಬುದಾಗಿ ಎಲ್ಲರಿಗೂ ಪೂರ್ಣಜ್ಞಾನವನ್ನು ಹೇಳಿದ್ದ-ರಿಂದ ಮತ್ತು ಸಂಪೂರ್ಣಜ್ಞಾನದಿಂದ ಮೋಕ್ಷವನ್ನು ಹೇಳಿದ್ದರಿಂದ.

ಆದ್ದರಿಂದ ಎಲ್ಲರಿಗೂ ದರ್ಶನದಲ್ಲಿ ಸಾಮ್ಯ ಇರುವುದರಿಂದ ಮುಕ್ತರಲ್ಲಿ ತಾರತಮ್ಯವನ್ನು ಹೇಳಿದ್ದು ಯುಕ್ತವಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ प्रज्ञान्तरपृथक्त्ववद्दृष्टिश्च तदुक्तम् ॐ (३-३-५२)**

**ಸೂತ್ರಾರ್ಥ** :- ಪ್ರಜ್ಞಾಂತರಂ ಪ್ರಜ್ಞಾವಿಶೇಷಃ, ಧ್ಯಾನಮಿತಿ ಯಾವತ್ । ಪ್ರಜ್ಞಾಂತರ ಎಂದರೆ ಪ್ರಜ್ಞಾವಿಶೇಷ, ಧ್ಯಾನ ಎಂದು ಅರ್ಥ.

**ಪ್ರಜ್ಞಾಂತರಪೃಥಕ್ತ್ವವತ್** = ಧ್ಯಾನವು ಅನೇಕ ಪ್ರಕಾರವಾಗಿರುವಂತೆ ಅದಕ್ಕನು-ಸಾರವಾಗಿ **ದೃಷ್ಟಿಶ್ಚ** = ಬ್ರಹ್ಮದರ್ಶನವೂ ಸಹ ಅನೇಕಪ್ರಕಾರವಾಗಿದೆ. ಎಲ್ಲ ಅಧಿ ಕಾರಿಗಳಿಗೂ ಏಕವಿಧವಾಗಿ ಇಲ್ಲ. **ತದುಕ್ತಂ** = ದೃಷ್ಟಿಗೆ ಅನೇಕವಿಧತ್ವವು "ಅಂತರ್ದೃಷ್ಟಯಃ ..." ಎಂಬ ಕಮಠಶ್ರುತಿಯಲ್ಲಿ ಉಕ್ತವಾಗಿದೆ ಕೂಡ.

## ಸಿದ್ಧಾಂತ

ಸೂ.ರ.:- एवं चानेकप्रकारमेवाधिकारिणां भगवद्दर्शनम् । तत्साधनस्योपासनस्यानेकप्रकारत्वात् । फलस्य च साधनानुसारित्वात्। न चैवं सम्पूर्णदर्शनाभावाद्विरिञ्चेतरेषां मोक्षाभावः । यथायोग्यदृष्टेरेव मोक्षहेतुत्वेन स्वयोग्यदर्शनेन सर्वेषां मोक्षसम्भवात् । अतो ज्ञानविशेषसद्भावाद्युक्तं मोक्षतारतम्यमिति सिद्धम् ॥

ಅಧಿಕಾರಿಗಳಿಗೆ ಭಗವದ್ದರ್ಶನವು ಅನೇಕ ಪ್ರಕಾರವೇ ಆಗಿದೆ. ಕಾರಣ - ದರ್ಶನಕ್ಕೆ ಸಾಧನವಾದ ಉಪಾಸನವು ಅನೇಕಪ್ರಕಾರವಾದ್ದರಿಂದ. ಫಲವು ಯಾವಾಗಲೂ ಸಾಧನಾನುಸಾರಿಯಾಗಿರುತ್ತದೆ.

ಹಾಗಾದರೆ ವಿರಿಂಚನಿಂದ ಇತರರಾದ ಅಧಿಕಾರಿಗಳಿಗೆ ಸಂಪೂರ್ಣದರ್ಶನ ಇಲ್ಲದ ಕಾರಣ ಮೋಕ್ಷಾಭಾವಪ್ರಸಕ್ತಿ ಬರುವುದಲ್ಲ? ಎಂದು ಶಂಕಿಸುವುದು ಸರಿಯಲ್ಲ. ಯಥಾಯೋಗ್ಯದೃಷ್ಟಿಯೇ ಮೋಕ್ಷಹೇತುವಾದ್ದರಿಂದ ಸ್ವಯೋಗ್ಯದರ್ಶನದಿಂದ ಎಲ್ಲರಿಗೂ ಮೋಕ್ಷವು ಸಂಭವಿಸುವುದರಿಂದ.

ಆದ್ದರಿಂದ ಜ್ಞಾನವಿಶೇಷ ಇರುವುದರಿಂದ ಮುಕ್ತತಾರತಮ್ಯವನ್ನು ಹೇಳಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಪ್ರಜ್ಞಾಂತರಾಧಿಕರಣವು ಮುಗಿಯಿತು.

ಅಧಿಕರಣ – 33

# ನ ಸಾಮಾನ್ಯಾಧಿಕರಣ

## ಸಂಗತಿ

**ಸೂ.ರ.:– अत्रोपासनस्य बिम्बशब्दितयोग्यात्मरूपविषयकस्यैव मुक्तिसाधनत्वं समर्थ्यते ।**

ಉಪಾಸನಾಸಾಧ್ಯವಾದ, ಬಿಂಬಶಬ್ದವಾಚ್ಯಯೋಗ್ಯಾತ್ಮರೂಪವಿಷಯಕವಾದ ಜ್ಞಾನಕ್ಕೆ ಮುಕ್ತಿಸಾಧನತ್ವವನ್ನು ಸಮರ್ಥಿಸುತ್ತಾರೆ ಮೂವತ್ತಮೂರನೇ ಈ ನ ಸಾಮಾನ್ಯಾಧಿಕರಣದಲ್ಲಿ.

ಬಿಂಬರೂಪವಿಷಯಕವಾದ (ಯೋಗ್ಯಾತ್ಮರೂಪವಿಷಯಕವಾದ) ಭಗವದ್ದರ್ಶನವು ಮುಕ್ತಿಸಾಧನವೋ? ಅಥವಾ ಯತ್‌ಕಿಂಚಿತ್‌ರೂಪವಿಷಯಕವಾದ ಭಗವದ್ದರ್ಶನವು ಮುಕ್ತಿಸಾಧನವೋ? ಎಂದು ಸಂದೇಹ.

## ಪೂರ್ವಪಕ್ಷ

**ಸೂ.ರ.:– ननु यत्किञ्चिद्रूपदर्शनमेव मोक्षसाधनम् । भगवतः सर्वरूपेष्वपि साम्यात् । अतो यत्किञ्चिद्रूपदर्शनस्य मोक्षसाधनत्वान्न बिम्बोपासनानियतिरपेक्षिता सिध्यतीति प्राप्ते पराकुर्वत्सूत्रमाह ॥**

ಯತ್‌ಕಿಂಚಿತ್‌ರೂಪವಿಷಯಕವಾದ ಭಗವದ್ದರ್ಶನವೇ ಮೋಕ್ಷಸಾಧನವಾಗಿದೆ. ಕಾರಣ ಭಗವಂತನ ಎಲ್ಲ ರೂಪಗಳಲ್ಲಿಯೂ ಸಾಮ್ಯ ಇರುವುದರಿಂದ.

ಆದ್ದರಿಂದ ಯತ್‌ಕಿಂಚಿತ್‌ರೂಪವಿಷಯಕವಾದ ಭಗವದ್ದರ್ಶನವು ಮೋಕ್ಷ-ಸಾಧನವಾದ್ದರಿಂದ ಬಿಂಬೋಪಾಸನಾ (ಯೋಗ್ಯಾತ್ಮೋಪಾಸನಾ) ನಿಯತಿಯು ಅಪೇಕ್ಷಿತವಾಗಿಲ್ಲ ಎಂದು ಸಿದ್ಧವಾಗುತ್ತದೆ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ न सामान्यादप्युपलब्धेर्मृत्युवन्न हि लोकापत्तिः ॐ (३-३-५३)**

**ಸೂತ್ರಾರ್ಥ :–** ಮೃತ್ಯುವತ್ = ಯಾವ ರೀತಿಯಾಗಿ ಕೇವಲ ಮೃತ್ಯುಮಾತ್ರಾ-

ನಂತರದಲ್ಲಿ ಮುಕ್ತಿ ಆಗುವುದಿಲ್ಲವೋ ಕಿಂತು ಚರಮಮೃತಿವಿಶೇಷಾನಂತರಮೇವ = ಕಿಂತು ಚರಮಮೃತ್ಯುವಿಶೇಷಾನಂತರವೇ ಮುಕ್ತಿ ಆಗುವುದೋ ತದ್ವತ್ ಅತ್ರಾಪಿ = ಅದರಂತೆ ಇಲ್ಲಿಯೂ ಸಹ ಭಗವದ್ರೂಪಾಣಾಂ ಸಾಮ್ಯೇಽಪಿ = ಭಗವದ್ರೂಪಗಳಲ್ಲಿ ಸಾಮ್ಯ ಇದ್ದರೂ ಸಹ **ಸಾಮಾನ್ಯಾತ್ ಅಪಿ ಉಪಲಬ್ಧೇಃ** = ಸಾಧಾರಣರೂಪದ (ಯತ್‌ಕಿಂಚಿತ್‌ರೂಪದ) ಅಪರೋಕ್ಷಜ್ಞಾನದಿಂದ ನ ಸರ್ವೇಷಾಂ ಮುಕ್ತಿಃ = ಎಲ್ಲರಿಗೂ ಮೋಕ್ಷವಾಗುವುದಿಲ್ಲ

ಕಿಂತು ಸ್ವಸ್ವಬಿಂಬದರ್ಶನಾದೇವ = ಕಿಂತು ತಮ್ಮ ತಮ್ಮ ಬಿಂಬದರ್ಶನ-ದಿಂದಲೇ (ತಮಗೆ ತಮಗೆ ಯೋಗ್ಯವಾದ ರೂಪದ ಸಾಕ್ಷಾತ್ಕಾರದಿಂದಲೇ) ಮುಕ್ತಿ ಆಗುವುದು. ನ ಚೈವಂ ಸಾಮಾನ್ಯದರ್ಶನಸ್ಯ ವೈಫಲ್ಯಂ = ಹಾಗಾದರೆ ಸಾಮಾನ್ಯ-ದರ್ಶನಕ್ಕೆ ವೈಫಲ್ಯ ಬರುವುದಲ್ಲ ? ಎಂಬ ಶಂಕೆ ಸರಿಯಲ್ಲ, ಕಾರಣ ತಸ್ಯ ಮಹರಾದಿಲೋಕಪ್ರಾಪ್ತಿಸಾಧನತ್ವಾತ್ = ಆ ಸಾಮಾನ್ಯದರ್ಶನವು ಮಹರಾದಿ-ಲೋಕಪ್ರಾಪ್ತಿಗೆ ಸಾಧನವಾಗಿರುವುದರಿಂದ.

ನ ಚೈತಾವತಾ ತಸ್ಯ ಮೋಕ್ಷಹೇತುತ್ವಂ ಪ್ರಾಪ್ನೋತಿ = ಇಷ್ಟುಮಾತ್ರಕ್ಕೆ ಅದು (ಸಾಮಾನ್ಯದರ್ಶನವು) ಮೋಕ್ಷಹೇತುವಾಗುವುದಿಲ್ಲ. ಕಾರಣ **ಹಿ** = ಯಾವ ಕಾರಣ **ಲೋಕಾಪತ್ತಿಃ** = ಲೋಕಾಪತ್ತಿಮಾತ್ರವು ನ ಮುಕ್ತಿಃ = ಮುಕ್ತಿ ಅಲ್ಲವೋ ತಸ್ಮಾತ್ = ಆ ಕಾರಣ. **ಹಿ** ಎಂಬ ಶಬ್ದದಿಂದ 'ಸಾಮಾನ್ಯದರ್ಶನಾಲ್ಲೋಕಾಃ' ಇತ್ಯಾದಿ ಪ್ರಮಾಣ-ಪ್ರಸಿದ್ಧಿಯನ್ನು ಸೂಚಿಸುತ್ತಿದ್ದಾರೆ.

## ಸಿದ್ಧಾಂತ

**ಸೂ.ರ.:– एवं च भगवद्रूपाणां साम्येन सामान्यतो दर्शनेन न सर्वेषां मुक्तिः । किं नाम स्वबिम्बदर्शनादेव । दर्शनेनात्मयोग्येनेति (अध्यात्मे.) वचनात् । न च दर्शनान्तरवैयर्थ्यम् । सामान्यदर्शनादिति वचनबलेन तेषां महरादिलोकप्राप्तिहेतुत्वात् । स्वयोग्यज्ञानस्यैव मोक्षहेतुत्वात् । मृत्युत्वसाम्येऽपि लिङ्गभङ्गस्यैवानन्दाविर्भावहेतुत्वात् । न च लोकप्राप्तिरेव मोक्षः । महरादिलोकं गतानां प्रलयानन्तरं मोक्षश्रवणात् । अतो बिम्बदर्शनस्यैव मोक्षसाधनत्वात्तद्देवोपास्यमिति सिद्धम् ॥**

ಭಗವದ್ರೂಪಗಳಲ್ಲಿ ಸಾಮ್ಯವಿರುವ ಕಾರಣ ಸಾಮಾನ್ಯರೂಪದರ್ಶನದಿಂದ ಎಲ್ಲರಿಗೂ ಮುಕ್ತಿ ಆಗುವುದಿಲ್ಲ, ಕಿಂ ನಾಮ ಸ್ವಬಿಂಬ (ಯೋಗ್ಯಾತ್ಮ) ದರ್ಶನ-ದಿಂದಲೇ ಎಲ್ಲರಿಗೂ ಮುಕ್ತಿ ಆಗುವುದು. "ದರ್ಶನೇನಾತ್ಮಯೋಗ್ಯೇನ ಮುಕ್ತಿ-ರ್ನಾನ್ಯೇನ ಕೇನಚಿತ್ ।" ಎಂಬುದಾಗಿ ಅಧ್ಯಾತ್ಮವಚನ ಇರುವುದರಿಂದ. ಹಾಗೆಂದು ಸಾಮಾನ್ಯರೂಪದರ್ಶನಕ್ಕೆ ವೈಯರ್ಥ್ಯ ಶಂಕಿಸುವುದು ಸರಿಯಲ್ಲ, ಕಾರಣ - "ಸಾಮಾನ್ಯದರ್ಶನಾಲ್ಲೋಕಾಃ" ಎಂಬ ವಚನವಿರುವುದರಿಂದ ಆ ಸಾಮಾನ್ಯ-ರೂಪದರ್ಶನವು ಮಹರಾದಿ ಲೋಕಪ್ರಾಪ್ತಿಹೇತುವಾಗಿದೆ.

ಎಲ್ಲ ಮೃತ್ಯುಗಳಲ್ಲಿಯೂ ಮೃತ್ಯುತ್ವ ಸಮಾನವಾಗಿದ್ದರೂ ಸಹ ಲಿಂಗಭಂಗವೇ ಆನಂದಾವಿರ್ಭಾವಹೇತುವಾಗುವಂತೆ, ಎಲ್ಲ ರೂಪಗಳಲ್ಲಿ ಸಾಮ್ಯವಿದ್ದರೂ ಸಹ ಸ್ವಯೋಗ್ಯರೂಪಸಾಕ್ಷಾತ್ಕಾರವೇ ಮೋಕ್ಷಹೇತುವಾಗುತ್ತದೆ. ಮತ್ತು ಕೇವಲ ಲೋಕಪ್ರಾಪ್ತಿಯೇ ಮೋಕ್ಷವಲ್ಲ, ಕಾರಣ ಮಹರಾದಿಲೋಕಗಳನ್ನು ಹೊಂದಿದವರಿಗೆ ಪ್ರಲಯಾನಂತರದಲ್ಲಿ ಮೋಕ್ಷವು ಶ್ರುತವಾಗುತ್ತಿರುವುದರಿಂದ. ಆದ್ದರಿಂದ ಬಿಂಬ-ದರ್ಶನವೇ (ಯೋಗ್ಯಾತ್ಮಸಾಕ್ಷಾತ್ಕಾರವೇ) ಮೋಕ್ಷಸಾಧನವಾದ್ದರಿಂದ ಅಂತಹ ಯೋಗ್ಯಾತ್ಮವೇ ಉಪಾಸ್ಯವಾಗಿದೆ ಎಂದು ಸಿದ್ಧವಾಗುತ್ತದೆ.

ನ ಸಾಮಾನ್ಯಾಧಿಕರಣವು ಮುಗಿಯಿತು.

*ಅಧಿಕರಣ – 34*

# ಪರೇಣಾಧಿಕರಣ

## ಸಂಗತಿ

**ಸೂ.ರ.:– अत्रानुबन्धादिभ्य इत्यत्र दर्शनसाधनतयोपासना-साहित्येनोक्तभक्तेः स्वातन्त्र्यं निरस्यते ।**

'ಅನುಬಂಧಾದಿಭ್ಯಃ' ಎಂಬ ಸೂತ್ರದಲ್ಲಿ ದರ್ಶನಸಾಧನವಾಗಿ ಉಪಾಸನಾ ಸಹಿತವಾಗಿ ಹೇಳಲ್ಪಟ್ಟ ಭಕ್ತಿಗೆ ಸ್ವಾತಂತ್ರ್ಯವನ್ನು ನಿರಾಸ ಮಾಡುತ್ತಾರೆ ಮೂವತ್ನಾಲ್ಕನೇ ಈ ಪರೇಣಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु भक्त्यैवापरोक्षज्ञानम् । न परमात्मप्रसादेन । भक्तिरेवैनं दर्शयतीति (माठर.) श्रुतेः । ततः साधनसामर्थ्येनैव दर्शन-सम्भवान्न तस्याव्यक्तत्वमिति प्राप्ते सूत्रमाह ॥**

"ಭಕ್ತಿರೇವೈನಂ ಮೋಚಯತಿ" ಎಂಬುದಾಗಿ ಮಾಠರಶ್ರುತಿ ಇರುವುದರಿಂದ ಭಕ್ತಿಯಿಂದಲೇ ಅಪರೋಕ್ಷಜ್ಞಾನವಾಗುತ್ತದೆ. ಹೊರತು ಪರಮಾತ್ಮಪ್ರಸಾದದಿಂದ ಅಲ್ಲ. ಆದ್ದರಿಂದ ಸಾಧನಸಾಮರ್ಥ್ಯದಿಂದಲೇನೇ ದರ್ಶನವು ಸಂಭವಿಸುವುದರಿಂದ ಪರಮಾತ್ಮನಿಗೆ ಅವ್ಯಕ್ತತ್ವವನ್ನು ಹೇಳುವುದು ಸರಿಯಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ परेण च शब्दस्य ताद्विध्यं भूयस्त्वात्त्वनुबन्धः ॐ (३-३-५४)**

**ಸೂತ್ರಾರ್ಥ :- ತು** = ಅಪಿ ಯದ್ಯಪಿ, **ಪರೇಣ ಚ (ಏವ)** = ಪರಮಾತ್ಮ-ನಿಂದಲೇನೇ ಬ್ರಹ್ಮದರ್ಶನಂ = ಬ್ರಹ್ಮದರ್ಶನವಾಗುತ್ತದೆ, ತಥಾಪಿ = ಆದರೂ **ಶಬ್ದಸ್ಯ** = 'ಭಕ್ತಿರೇವೈನಂ' ಎಂಬ ಶ್ರುತಿಗೆ **ತಾದ್ವಿಧ್ಯಂ** = ಪರಮಾತ್ಮನಂತೆ ಭಕ್ತಿಗೆ ಸ್ವಾತಂತ್ರ್ಯೇಣ ಬ್ರಹ್ಮದರ್ಶನಹೇತುತ್ವವಾಚಿತ್ವವು ಯುಕ್ತವಾಗುತ್ತದೆ. ಕುತಃ = ಏಕೆ? 'ದರ್ಶನಾದೌ ಕರಣತ್ವಾತ್' ಎಂಬುದಾಗಿ ಹೇತುವನ್ನು ಹಚ್ಚಿಕೊಳ್ಳಬೇಕು,

ತರ್ಕ = ಹಾಗಾದರೆ ಕಥಂ ಭಕ್ತಿರಿತಿ ವಾಕ್ಯೇನ ಸತ್ಸ್ವಪಿ ಅನ್ಯಸಾಧನೇಷು **ಅನುಬಂಧಃ** ಭಕ್ತಿಃ ವಿಶಿಷ್ಯೋಚ್ಯತೇ? ಇತಿ ಅತಃ ಉಕ್ತಂ **ಭೂಯಸ್ತ್ವಾತ್** = 'ಭಕ್ತಿಃ' ಎಂಬ ವಾಕ್ಯದಿಂದ ಅನ್ಯಸಾಧನಗಳು ಇದ್ದರೂ ಭಕ್ತಿಯು ವಿಶಿಷ್ಯ (ಪ್ರತ್ಯೇಕವಾಗಿ) ಹೇಗೆ ಹೇಳಲ್ಪಟ್ಟಿದೆ? ಎಂದು ಶಂಕೆ ಬಂದರೆ, ಅದಕ್ಕೆ ಹೇಳುತ್ತಾರೆ 'ಭೂಯಸ್ತ್ವಾತ್' ಎಂದು. **ಭೂಯಸ್ತ್ವಾತ್** = ಸಾಧನಗಳಲ್ಲಿ ಭಕ್ತಿಗೆ ಪ್ರಾಧಾನ್ಯ ಇರುವುದರಿಂದ, ಆ ಅಭಿಪ್ರಾಯದಿಂದ ಅನುಬಂಧವು (ಭಕ್ತಿಯು) ವಿಶಿಷ್ಯ (ಪ್ರತ್ಯೇಕವಾಗಿ) ಹೇಳಲ್ಪಟ್ಟಿದೆ.

## ಸಿದ್ಧಾಂತ

**ಸೂ.ರ.:- एवं च भक्त्या प्रसन्नपरमात्मनैवापरोक्षज्ञानम् । एतैरुपायैरिति श्रुत्या स्वेच्छयैव भक्तापरोक्षसिध्यर्थं ब्रह्मधामशब्दवाच्यवायुप्रवेशोक्तेः । न च पूर्वश्रुतिविरोधः । भगवत्प्रसादसाधनेषु भक्तेः प्राधान्याभिप्रायेण भक्तिरेवैनं मोचयतीत्यभिधानात् । अतो दर्शनादेः पुरुषसाध्यत्वाभावाद्युक्तमव्यक्तत्वं ब्रह्मण इति सिद्धम् ॥**

ಭಕ್ತಿಯಿಂದ ಪ್ರಸನ್ನನಾದ ಪರಮಾತ್ಮನಿಂದಲೇನೇ ಅಪರೋಕ್ಷಜ್ಞಾನ ಉಂಟಾಗುತ್ತದೆ. ಯಾಕೆ ?

ಏತೈರುಪಾಯೈರ್ಯತತೇ ಯಸ್ತು ವಿದ್ವಾನ್
ತಸ್ಯೈಷ ಆತ್ಮಾ ವಿಶತೇ ಬ್ರಹ್ಮಧಾಮ ॥

ಎಂಬುದಾಗಿ ಶ್ರುತಿಯಲ್ಲಿ ಬ್ರಹ್ಮನು ಸ್ವೇಚ್ಛೆಯಿಂದಲೇ ಭಕ್ತರಿಗೆ ಅಪರೋಕ್ಷವಾಗುವುದಕ್ಕಾಗಿ 'ಧಾಮ' ಶಬ್ದವಾಚ್ಯರಾದ ವಾಯುದೇವರಲ್ಲಿ ಪ್ರವೇಶ ಮಾಡುತ್ತಾನೆಂದು ಹೇಳಿದ್ದರಿಂದ.

ಹಾಗಾದರೆ 'ಭಕ್ತಿರೇವೈನಂ ಮೋಚಯತಿ' ಎಂಬ ಪೂರ್ವಶ್ರುತಿಯ ವಿರೋಧ ಬರುವುದಲ್ಲ? ಎಂದು ಶಂಕಿಸುವುದು ಸರಿಯಲ್ಲ. ಕಾರಣ - ಭಗವತ್ಪ್ರಸಾದಸಾಧನವಾದವುಗಳಲ್ಲಿ ಭಕ್ತಿಗೆ ಪ್ರಾಧಾನ್ಯವಿದೆ ಎಂಬ ಅಭಿಪ್ರಾಯದಿಂದ 'ಭಕ್ತಿರೇವೈನಂ ಮೋಚಯತಿ' ಎಂದು ಹೇಳಲಾಗಿದೆ.

ಆದ್ದರಿಂದ ದರ್ಶನಾದಿಗಳು ಪುರುಷಸಾಧ್ಯವಾಗದ ಕಾರಣ ಬ್ರಹ್ಮನಿಗೆ ಅವ್ಯಕ್ತತ್ವವನ್ನು ಹೇಳಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಪರೇಣಾಧಿಕರಣವು ಮುಗಿಯಿತು.

ಅಧಿಕರಣ – 35

# ಏಕಾಧಿಕರಣ

## ಸಂಗತಿ

**ಸೂ.ರ.:– अत्रोपासनस्यानादियोग्यतासापेक्षत्वं समर्थ्यते ।**

ಉಪಾಸನೆಗೆ ಅನಾದಿಯೋಗ್ಯತಾಸಾಪೇಕ್ಷತ್ವವನ್ನು ಸಮರ್ಥಿಸುತ್ತಾರೆ ಮೂವತ್ತೈದನೇ ಈ ಏಕಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु नोपासनाऽनादियोग्यतासापेक्षा । इन्द्राद्यंश-जीवानामुत्पत्तिमत्त्वेन तद्योग्यताया अनादिनित्यत्वाभावात् । न चेन्द्रादियोग्यतैवार्जुनादीनां योग्यता । अंशस्यांशिमार्गवृत्तित्वाभावात् । ज्ञानादिभेदेन तयोर्भिन्नत्वात् । ततश्चोपासनस्यानादियोग्यतान-पेक्षत्वात्तदव्यवस्थितमिति प्राप्ते सूत्रमाह ॥**

ಉಪಾಸನೆಯು ಅನಾದಿಯೋಗ್ಯತಾಸಾಪೇಕ್ಷವಾಗಿಲ್ಲ. ಕಾರಣ – ಇಂದ್ರಾದಿಗಳ ಅಂಶರಾದ ಜೀವರು (ಅರ್ಜುನಾದಿಗಳು) ಉತ್ಪತ್ತಿಯುಳ್ಳವರಾದ್ದರಿಂದ ಅವರ ಯೋಗ್ಯತೆಯು ಅನಾದಿನಿತ್ಯವಾಗಿಲ್ಲವಾದ್ದರಿಂದ.

ಹಾಗಲ್ಲ, ಇಂದ್ರಾದಿಗಳ ಯೋಗ್ಯತೆಯೇ ಅರ್ಜುನಾದಿಗಳ ಯೋಗ್ಯತೆಯಾಗಿದೆ, ಹಾಗಾಗಿ ಅನಾದಿನಿತ್ಯವಾಗಿದೆ ಎಂದು ಹೇಳಬಹುದಲ್ಲ? ಎಂದರೆ, ಅದು ಸರಿಯಲ್ಲ. ಏಕೆಂದರೆ – ಅಂಶ – ಅಂಶಿಗಳು ಭಿನ್ನರಾಗಿದ್ದಾರೆ. ಅಂಶಿಯು ಜ್ಞಾನಿಯಾಗಿದ್ದರೆ, ಸುಖಿಯಾಗಿದ್ದರೆ, ದುಃಖಿಯಾಗಿದ್ದರೆ ಅಂಶದಲ್ಲಿ ಮಾತ್ರ ಜ್ಞಾನ-ಸುಖ-ದುಃಖಗಳು ಕಾಣುವುದಿಲ್ಲವಾದ್ದರಿಂದ ಅಂಶವು ಅಂಶಿವರ್ತ್ಮನಾಗಂತೃವಾದ್ದರಿಂದ.

ಆದ್ದರಿಂದ ಉಪಾಸನೆಯು ಅನಾದಿಯೋಗ್ಯತಾಸಾಪೇಕ್ಷವಾಗದ ಕಾರಣ ಅದು ಅವ್ಯವಸ್ಥಿತವಾಗುತ್ತದೆ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

## ॐ एक आत्मनः शरीरे भावात् ॐ (३-३-५५)

**ಸೂತ್ರಾರ್ಥ** :- ಅಂಶಃ - ಅಂಶೀ ಇತಿ ಪದಯೋಃ ಅರ್ಥಃ **ಏಕಃ** ಏವ = ಅಂಶ - ಅಂಶಿ ಎಂಬ ಪದಗಳ ಅರ್ಥವು ಒಂದೇ ಆಗಿರುತ್ತದೆ. ಅರ್ಥಾತ್ ಅಂಶಾಂಶಿನೋರೈಕ್ಯಮೇವ = ಅಂಶ - ಅಂಶಿಗಳಲ್ಲಿ ಐಕ್ಯವೇ ಇರುತ್ತದೆ. ಕುತಃ = ಏಕೆ? **ಆತ್ಮನಃ** = ಅಂಶಿಯ **ಶರೀರೇ** = ಇಂದ್ರಾದಿ ಶರೀರದಲ್ಲಿ ಕರ್ಮನಿರ್ಮಿತ ಶರೀರದಲ್ಲಿ ಅಂಶಸ್ಯ ಅರ್ಜುನಾದೇಃ = ಅಂಶರಾದ ಅರ್ಜುನಾದಿಗಳು **ಭಾವಾತ್** = ತದಭಿಮಾನಿಯಾಗಿ ಇರುವುದರಿಂದ.

### ಸಿದ್ಧಾಂತ

ಸೂ.ರ.:- **एवं चात्स्येव सर्वेषामुपासनादावनादियोग्यतापेक्षा । न चार्जुनादीनामुत्पत्तिमत्त्वेनानादियोग्यताभावः । तेषामंश्यभिन्नत्वेन तद्योग्यताया एव तद्योग्यतात्वात् । तदैक्यं चांशोंऽश्यभिन्नः । तत्कर्म-निर्मितशरीरवृत्तित्वादित्यनुमानसिद्धम् ॥ अतः सर्वेषामुपासना-दावनादियोग्यताऽपेक्षितेति युक्ता तद्व्यवस्थेति सिद्धम् ॥**

ಎಲ್ಲರ ಉಪಾಸನಾದಿಗಳಲ್ಲಿಯೂ ಅನಾದಿಯೋಗ್ಯತೆಸಾಪೇಕ್ಷತ್ವವು ಇದ್ದೇ ಇದೆ. ಹಾಗಾದರೆ ಅಂಶರಾದ ಅರ್ಜುನಾದಿಗಳು ಉತ್ಪತ್ತಿ ಉಳ್ಳವರಾದ್ದರಿಂದ ಅವರ ಯೋಗ್ಯತೆಯಲ್ಲಿ ಅನಾದಿನಿತ್ಯತ್ವ ಇಲ್ಲವಲ್ಲ? ಎಂದು ಶಂಕಿಸುವುದು ಸರಿಯಲ್ಲ. ಕಾರಣ ಅಂಶರಾದ ಅರ್ಜುನಾದಿಗಳು ಅಂಶಿಗಳಾದ ಇಂದ್ರಾದಿಗಳಿಂದ ಅಭಿನ್ನರಾದ್ದ-ರಿಂದ, ಇಂದ್ರಾದಿಗಳ ಯೋಗ್ಯತೆಯೇ ಅರ್ಜುನಾದಿಗಳ ಯೋಗ್ಯತೆ ಆಗಿರುವುದರಿಂದ.

ಅಂಶ - ಅಂಶಿಗಳಲ್ಲಿ ಐಕ್ಯವು "ಅಂಶಃ ಅಂಶ್ಯಭಿನ್ನಃ ತತ್ಕರ್ಮನಿರ್ಮಿತ-ಶರೀರವೃತ್ತಿತ್ವಾತ್" ಎಂಬ ಅನುಮಾನದಿಂದ ಸಿದ್ಧವಾಗುತ್ತದೆ.

ಆದ್ದರಿಂದ ಎಲ್ಲರ ಉಪಾಸನಾದಿಗಳಲ್ಲಿಯೂ ಅನಾದಿಯೋಗ್ಯತೆಯು ಅಪೇಕ್ಷಿತವೇ ಆಗಿದೆಯಾದ್ದರಿಂದ ಅದರ ವ್ಯವಸ್ಥೆ ಮಾಡಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

### ಸೂತ್ರ - 56

ಸೂ.ರ.:- ननु ज्ञानादिभेदादंशांशिनोर्भेद एव युक्तो नाभेद इत्याशङ्कां परिहर्तुं सूत्रमुपन्यस्यति ॥

ಜ್ಞಾನಾದಿಭೇದದಿಂದಾಗಿ ಅಂಶ - ಅಂಶಿಗಳಲ್ಲಿ ಭೇದವನ್ನು ಅಂಗೀಕಾರ ಮಾಡುವುದೇ ಯೋಗ್ಯ, ಹೊರತು ಅಭೇದವನ್ನು ಅಂಗೀಕರಿಸುವುದು ಉಚಿತವಲ್ಲ ಎಂಬುದಾಗಿ ಶಂಕೆ ಬಂದರೆ, ಅದನ್ನು ಪರಿಹರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ-

**ॐ व्यतिरेकस्तद्भावभावित्वान्न तूपलब्धिवत् ॐ (३-३-५६)**

**ಸೂತ್ರಾರ್ಥ :- ಉಪಲಬ್ಧಿವತ್** = ಜ್ಞಾನಸುಖಾದಿಗಳಲ್ಲಿ ಪರಸ್ಪರ ಭೇದ ಇರುವಂತೆ ಅಂಶಾಂಶಿನೋರಪಿ = ಅಂಶ - ಅಂಶಿಗಳಲ್ಲಿಯೂ **ವ್ಯತಿರೇಕಃ** = ಭೇದವೇ ಇದೆ ಇತಿ **ತು** ನ = ಎಂದು ಶಂಕಿಸುವುದು ಸರಿಯಲ್ಲ. ಕುತಃ = ಏಕೆ? **ತದ್ಭಾವಭಾವಿತ್ವಾತ್** = ಅಂಶನು ಅಂಶಿಕೃತ ಭಾವಶಬ್ದವಾಚ್ಯವಾದ ಉಪಾಸನೆಯಿಂದ ಜನ್ಯವಾದ ಫಲಾನುಭವಿಯಾದ್ದರಿಂದ. ಅನ್ಯಥಾ = ಅಂಶ - ಅಂಶಿಗಳಲ್ಲಿ ಭೇದವೇ ಇರುವುದಾಗಿದ್ದರೆ ತನ್ನ ಸ್ಯಾತ್ = ಅಂಶನು. ಅಂಶಿಕೃತ ಉಪಾಸನಾಜನ್ಯ-ಫಲಾನುಭವಿಯಾಗುವುದು ಉಪಪನ್ನವಾಗುವುದಿಲ್ಲ.

**ಸೂ.ರ.:- एवं चांशिनि सुखिनि दुःखिन्यंशस्य तदनुसन्धाना-भावाद्भेद इति शङ्काया अनुदयात् । अन्यथाऽसिद्धेः । अंशिन्यंशगत-सर्वानुसन्धानभावात् । अंशस्याचिन्त्येश्वरशक्तिवशात्सर्वानुसन्धाना-भावेऽपि प्रधानसाधनोपासनादिफलानुसन्धानात् । अतः सर्वेषा-मुपासनादावनादियोग्यताऽपेक्षितेति सिद्धम् ॥**

ಅಂಶಿಯು ಸುಖಿಯಾಗಿದ್ದರೆ, ದುಃಖಿಯಾಗಿದ್ದರೆ ಅಂಶಕ್ಕೆ ಅವುಗಳ ಅನುಸಂಧಾನ ಬಾರದ ಕಾರಣ 'ಅಂಶ - ಅಂಶಿಗಳಲ್ಲಿ ಭೇದವಿದೆ' ಎಂಬ ಶಂಕೆಯೇ ಹುಟ್ಟುವುದಿಲ್ಲ. ಕಾರಣ ಅಂಶಿಗೆ ಅಂಶಗತವಾದ ಎಲ್ಲ ಸುಖ - ದುಃಖಗಳ ಅನುಸಂಧಾನ ಬರುವುದರಿಂದ, ಇನ್ನು ಅಂಶಕ್ಕೆ ಸರ್ವಅನುಸಂಧಾನ ಬರದಿದ್ದರೂ ಸಹ ಅಚಿಂತ್ಯ ಈಶ್ವರಶಕ್ತಿವಶದಿಂದಾಗಿ ಪ್ರಧಾನಸಾಧನ ಉಪಾಸನಾದಿ ಫಲಾನು-ಸಂಧಾನ ಬರುತ್ತದೆ.

ಆದ್ದರಿಂದ ಎಲ್ಲರ ಉಪಾಸನಾದಿಗಳಲ್ಲಿ ಅನಾದಿಯೋಗ್ಯತೆಯು ಸಾಪೇಕ್ಷಿತ-ವಾಗಿದೆ ಎಂದು ಸಿದ್ಧವಾಗುತ್ತದೆ.

ಏಕಾಧಿಕರಣವು ಮುಗಿಯಿತು.

*ಅಧಿಕರಣ – 36*

# ಅಂಗಾವಬದ್ಧಾಧಿಕರಣ

## ಸಂಗತಿ

**ಸೂ.ರ.:– अत्र भगवदुपास्तेर्यथायोग्यं ब्रह्माद्यङ्गदेवतोपास्तेर्युक्तत्वेन कर्तव्यता प्रतिपाद्यते ।**

ಭಗವಂತನ ಉಪಾಸನೆಗೆ ಯಥಾಯೋಗ್ಯವಾಗಿ ಬ್ರಹ್ಮಾದಿ ಅಂಗದೇವತೋಪಾಸನಾಯುಕ್ತವಾಗಿ ಕರ್ತವ್ಯತ್ವವನ್ನು ಪ್ರತಿಪಾದಿಸುತ್ತಾರೆ ಮೂವತ್ತಾರನೇ ಈ ಅಂಗಾವಬದ್ಧಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु केवलमेव ब्रह्मोपासनं कार्यम् । तमेवैकं जानथेति (मुं.२-२-५) वचनात् । ततश्चान्यदेवानामनुपास्यत्वात् । तदभिधायकवेदवैयर्थ्यमिति ।। यद्वा ।। कार्यैवाङ्गदेवतोपासना । परन्तु ब्रह्मादिषु ये गुणास्ते सर्वदेवेषूपसंहर्तव्याः । ये चाग्न्यादिषु प्रतीता गुणास्तेऽपि सर्वेषु देवेषूपसंहर्तव्याः । ततश्च तारतम्याभाव इति प्राप्ते सूत्रितम् ।।**

ಕೇವಲ ಬ್ರಹ್ಮೋಪಾಸನವು ಕಾರ್ಯವಾಗಿದೆ. ''ತಮೇವೈಕಂ ಜಾನಥ'' (ಮುಂ. 2–2–5) ಎಂಬುದಾಗಿ ವಚನ ಇರುವುದರಿಂದ. ಆದ್ದರಿಂದ ಅನ್ಯದೇವತೆಗಳು ಉಪಾಸ್ಯರಲ್ಲದ ಕಾರಣ ತದಭಿಧಾಯಕವೇದಗಳಿಗೆ ವೈಯರ್ಥ್ಯ ಎಂಬುದಾಗಿ ಒಂದು ಪೂರ್ವಪಕ್ಷ.

ಅಥವಾ ಅಂಗದೇವತೋಪಾಸನೆಯು ಕಾರ್ಯವೇ ಆಗಿದೆ. ಪರಂತು ಬ್ರಹ್ಮಾದಿಗಳಲ್ಲಿ ಯಾವ ಗುಣಗಳಿವೆಯೋ ಅವುಗಳು ಎಲ್ಲ ದೇವತೆಗಳಲ್ಲಿ ಉಪಸಂಹರ್ತವ್ಯವಾಗಿವೆ. ಮತ್ತು ಅಗ್ನ್ಯಾದಿಗಳಲ್ಲಿ ಪ್ರತೀತವಾದ ಯಾವ ಗುಣಗಳಿವೆಯೋ ಅವುಗಳೂ ಸಹ ಎಲ್ಲ ದೇವತೆಗಳಲ್ಲಿ ಉಪಸಂಹರ್ತವ್ಯವಾಗಿವೆ.

ಆದ್ದರಿಂದ ತಾರತಮ್ಯ ಇಲ್ಲ ಎಂಬುದಾಗಿ ಪೂರ್ವಪಕ್ಷಗಳೆರಡು ಪ್ರಾಪ್ತವಾದರೆ, ಅವುಗಳನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ अङ्गावबद्धास्तु न शाखासु हि प्रतिवेदम् ॐ (३-३-५७)**

**ಸೂತ್ರಾರ್ಥ** :- ತು ಶಬ್ದವು ವಿಶೇಷಸೂಚಕವಾಗಿದೆ. **ಅಂಗಾವಬದ್ಧಾಃ** = ಪರಮಾತ್ಮನ ಅಂಗಗಳಲ್ಲಿ ಆಶ್ರಿತರಾದ ದೇವಾ ಅಪಿ = ದೇವತೆಗಳೂ ಸಹ ತತ್ಪರಿವಾರತ್ವೇನ ದೇವೈರುಪಾಸ್ಯಾಃ = ಭಗವಂತನ ಪರಿವಾರತ್ವೇನ ದೇವತೆಗಳಿಂದ ಉಪಾಸ್ಯರಾಗಿದ್ದಾರೆ,

ತದುಪಸಂಹಾರೇ = ಆ ಉಪಸಂಹಾರದಲ್ಲಿ **ತು** = ಒಂದು ವಿಶೇಷವಿದೆ. ಕಃ = ಏನದು ವಿಶೇಷ? ದೇವಾನಾಂ = ದೇವತೆಗಳಿಗೆ **ಪ್ರತಿವೇದಂ** = ಸರ್ವವೇದಗತವಾದ **ಶಾಖಾಸು** = ಶಾಖೆಗಳಲ್ಲಿ ಉಕ್ತಂ = ಹೇಳಲ್ಪಟ್ಟ ಯತ್ ಬ್ರಹ್ಮಾದ್ಯಂಗದೇವತಾವ-ಬದ್ಧಗುಣಜಾತಂ = ಯಾವ ಬ್ರಹ್ಮಾದಿ ಅಂಗದೇವತೆಗಳಲ್ಲಿ ಆಶ್ರಿತವಾದ ಗುಣ-ಸಮೂಹವಿದೆಯೋ ತತ್ಸರ್ವಂ = ಅವುಗಳೆಲ್ಲವೂ ರುದ್ರಾದಿಷು ನೋಪಸಂಹರ್ತವ್ಯಂ = ರುದ್ರಾದಿಗಳಲ್ಲಿ ಉಪಸಂಹರ್ತವ್ಯವಾಗಿಲ್ಲ. ಕಿಂತು ಯೋಗ್ಯಮೇವ = ಕಿಂತು ಯೋಗ್ಯವಾದ ಗುಣಗಳು ಮಾತ್ರ ಉಪಸಂಹರ್ತವ್ಯವಾಗಿವೆ. ಇತ್ಯೇವಂರೂಪಃ = ಈ ರೀತಿಯಾದ ವಿಶೇಷ ಎಂದರ್ಥ. **ಹಿ** = ಎನ್ನುವುದರಿಂದ "ಸಮತ್ವಾದ್ವಾ" ಎಂಬ ಬ್ರಹ್ಮತರ್ಕಸ್ಮೃತಿಪ್ರಸಿದ್ಧಿಯನ್ನು ಸೂಚಿಸುತ್ತಿದ್ದಾರೆ.

## ಸಿದ್ಧಾಂತ

**ಸೂ.ರ.:- एवं च कार्यमेवाङ्गदेवतोपासनम् । न च श्रुत्यादिविरोधः । प्राधान्ये तदुपासनस्य निषिद्धत्वात् । ततश्च न तद्विधायकवेदवैयर्थ्यम् । अपि च । कार्यैवाङ्गदेवतोपासना । परन्तु ब्रह्माद्युत्तमेषु प्रतीता गुणा नाधमेषूपसंहर्तव्याः । अयोग्यत्वात् । ततश्च न तारतम्यहानिरिति सिद्धम् ॥**

ಅಂಗದೇವತೋಪಾಸನೆಯು ಕಾರ್ಯವೇ ಆಗಿದೆ. ಹಾಗಾದರೆ ಶ್ರುತ್ಯಾದಿ-ವಿರೋಧ ಬರುವುದಲ್ಲ? ಎಂದರೆ, ಬರುವುದಿಲ್ಲ. ಕಾರಣ - ಆ ಶ್ರುತಿಯಲ್ಲಿ ಪ್ರಾಧಾನ್ಯೇನ ದೇವತೆಗಳ ಉಪಾಸನೆಯನ್ನು ನಿಷೇಧಿಸಿದ್ದರಿಂದ. ಆದ್ದರಿಂದಾಗಿ ಅದನ್ನು ವಿಧಾನ ಮಾಡುವ ವೇದಗಳಿಗೆ ವೈಯರ್ಥ್ಯ ಇಲ್ಲ.

ಮತ್ತು ಅಂಗದೇವತೋಪಾಸನೆಯು ಕಾರ್ಯವೇ ಆಗಿದೆ. ಪರಂತು (ಆದರೆ) ಬ್ರಹ್ಮಾದಿ ಉತ್ತಮದೇವತೆಗಳಲ್ಲಿ ಪ್ರತೀತವಾದ ಗುಣಗಳು ಅಧಮದೇವತೆಗಳಲ್ಲಿ ಉಪಸಂಹರ್ತವ್ಯವಾಗಿಲ್ಲ. ಉಪಸಂಹಾರಕ್ಕೆ ಯೋಗ್ಯವಲ್ಲದ್ದರಿಂದ. ಆದ್ದರಿಂದ ತಾರತಮ್ಯಕ್ಕೆ ಹಾನಿ ಇಲ್ಲ ಎಂದು ಸಿದ್ಧವಾಗುತ್ತದೆ.

## ಸೂತ್ರ - 58

**ಸೂ.ರ.:- एवमेकत्र प्रतीतानां सर्वगुणानामन्यत्रोपसंहाराभाव उक्तः । इदानीमुपसंहाराभ्युपगमेऽपि न विरोध इत्याह सूत्रकृत् ॥**

ಈ ರೀತಿಯಾಗಿ ಏಕತ್ರ ಪ್ರತೀತವಾದ ಸರ್ವಗುಣಗಳನ್ನು ಅನ್ಯತ್ರ ಉಪಸಂಹಾರ ಮಾಡಬಾರದು ಎಂದು ಹೇಳಿಯಾಯಿತು. ಈಗ ಉಪಸಂಹಾರವನ್ನು ಅಂಗೀಕರಿಸಿ-ದರೂ ಸಹ ವಿರೋಧವಿಲ್ಲ ಎಂದು ಸೂತ್ರಕಾರರು ಹೇಳುತ್ತಾರೆ-

**ॐ मंत्रादिवद्वाऽविरोधः ॐ (३-३-५८)**

**ಸೂತ್ರಾರ್ಥ :- ಮಂತ್ರಾದಿವತ್** = ಯಾವ ರೀತಿಯಾಗಿ ಅಗ್ನ್ಯಾದಿ ಅಧಮ-ದೇವತಾವಾಚಿಯಾದ ಮಂತ್ರವಿದ್ಯೆಗಳಿಗೆ ಬ್ರಹ್ಮಾದಿ ಉತ್ತಮದೇವತಾವಾಚಿತ್ವವು ಇದೆಯೋ ಅದೇ ರೀತಿಯಾಗಿ **ಅವಿರೋಧಃ** = ಅಧಮರ ಗುಣಗಳನ್ನು ಉತ್ತಮರಲ್ಲಿ ಉಪಸಂಹಾರ ಮಾಡಿದರೂ ಸಹ ವಿರೋಧವಿಲ್ಲ, ವಾ = ಎಂಬುದಾಗಿ ಆದರೂ ಅಂಗೀಕರಿಸಲ್ಪಡುತ್ತದೆ.

**ಸೂ.ರ.:- एवं च कार्यमेवाङ्गदेवतोपासनम् । अधमगुणानामुत्तमेषु सद्भावेऽप्युत्तमगुणानामधमेष्वभावात् । अतो यथायोग्यमङ्गदेवतानामुपास्यत्वात्सर्वं युक्तमिति सिद्धम् ॥**

ಅಂಗದೇವತೋಪಾಸನೆಯು ಕಾರ್ಯವೇ ಆಗಿದೆ. ಅಧಮರ ಗುಣಗಳು ಉತ್ತಮರಲ್ಲಿ ಇದ್ದರೂ ಸಹ ಉತ್ತಮರ ಗುಣಗಳು ಅಧಮರಲ್ಲಿ ಇಲ್ಲವಾದ್ದರಿಂದ.

ಆದ್ದರಿಂದ ಯಥಾಯೋಗ್ಯವಾಗಿ ಅಂಗದೇವತೆಗಳು ಉಪಾಸ್ಯರಾದ್ದರಿಂದ ಎಲ್ಲವೂ ಯುಕ್ತವಾಗಿದೆ ಎಂದು ಸಿದ್ಧವಾಗುತ್ತದೆ.

**ಅಂಗಾವಬದ್ಧಾಧಿಕರಣವು ಮುಗಿಯಿತು**

ಅಧಿಕರಣ – 37

# ಭೂಮಾಧಿಕರಣ

## ಸಂಗತಿ

**ಸೂ.ರ.:– अत्र भूमगुणस्य सर्वोपासकसाधारणत्वं समर्थ्यते ।**

ಪೂರ್ಣತ್ವ ರೂಪವಾದ ಭೂಮಗುಣದ ಉಪಾಸನೆಯನ್ನು ಎಲ್ಲ ಉಪಾಸಕರೂ ಮಾಡಬೇಕು ಎಂದು ಸಮರ್ಥಿಸುತ್ತಾರೆ ಮೂವತ್ತೇಳನೇ ಈ ಭೂಮಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु न भूमगुणः सर्वोपास्यः । वैयर्थ्यात् । न हि कस्यापि निरतिशयत्वापरपर्यायं भूमत्वमिष्ठम् । येन तदुपासनं सार्थकं स्यात् । न च भूमत्वस्यानन्दादिविशेषणत्वात् सर्वोपास्यत्वम् । विशेषणत्वेऽपि प्रियशिरस्त्वादीनामिव फलानुपयोगित्वेनानुपास्यत्वात् । अतो भूमत्वस्य सर्वोपास्यत्वाभावान्नालौकिकतयोपासनमिति प्राप्ते सूत्रमाह ॥**

ಭೂಮಗುಣವು ಎಲ್ಲರಿಂದಲೂ ಉಪಾಸ್ಯವಾಗಿಲ್ಲ. ಕಾರಣ ವ್ಯರ್ಥವಾದ್ದರಿಂದ ನಿರತಿಶಯತ್ವ ರೂಪವಾದ ಭೂಮಗುಣವು ಯಾರಿಗೂ ಇಷ್ಟವಾಗಿಲ್ಲ. ಒಂದುವೇಳೆ ಇಷ್ಟವಾಗಿದ್ದರೆ ಭೂಮಗುಣದ ಉಪಾಸನೆಯು ಸಾರ್ಥಕವಾಗುತ್ತಿತ್ತು.

ಭೂಮಗುಣವು ಆನಂದಾದಿಗುಣಗಳಿಗೆ ವಿಶೇಷಣವಾಗಿ ಎಲ್ಲರಿಂದ ಉಪಾಸ್ಯ-ವಾಗಬಹುದಲ್ಲ ? ಎಂದು ಹೇಳುವುದು ಸರಿಯಲ್ಲ. ಕಾರಣ ವಿಶೇಷಣವಾಗಿ ಉಪಾಸನೆ ಮಾಡಬೇಕಾದರೂ ಏನಾದರೂ ಫಲವಿರಬೇಕು. ಆದರೆ ಪ್ರಿಯ-ಶಿರಸ್ತ್ವಾದಿ ಗುಣಗಳಂತೆ ಯಾವ ಪ್ರಯೋಜನವೂ ಇಲ್ಲದ ಕಾರಣ ಭೂಮಗುಣವು ಆನಂದಾದಿಗಳಿಗೆ ವಿಶೇಷಣವಾಗಿಯೂ ಸರ್ವೋಪಾಸ್ಯವಾಗಿಲ್ಲ. ಆದ್ದರಿಂದ ಭೂಮ-ಗುಣವು ಸರ್ವೋಪಾಸ್ಯವಾಗಿಲ್ಲವಾದ್ದರಿಂದ ಅಲೌಕಿಕವಾದ ಪೂರ್ಣಾನಂದಾದಿಗಳನ್ನೇ ಉಪಾಸನೆ ಮಾಡಬೇಕು ಎನ್ನುವುದು ಸರಿಯಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

## ॐ भूम्नः क्रतुवज्ज्यायस्त्वं तथा च दर्शयति ॐ (३-३-५९)

**ಸೂತ್ರಾರ್ಥ** :- **ಕ್ರತುವತ್** = ಯಾವ ರೀತಿಯಾಗಿ ಕ್ರತುಶಬ್ದವಾಚ್ಯವಾದ ಪ್ರಾಯಣೀಯಾದಿ ಯಾಗಗಳಿಗೆ ವಿಕೃತಿಯಾಗಗಳಲ್ಲಿ ಅನುವೃತ್ತಿ ಹಾಗೂ ಅನುಷ್ಠೇಯತ್ವ ಇದೆಯೋ ಅದೇ ರೀತಿಯಾಗಿ **ಭೂಮ್ನಃ** = ಪೂರ್ಣತ್ವ ಗುಣಕ್ಕೆ **ಜ್ಯಾಯಸ್ತ್ವಂ** = ಇತರ ಗುಣಗಳಿಗಿಂತಲೂ ವಿಶಿಷ್ಟತ್ವವು, ಆನಂದಾದಿಗುಣಗಳಲ್ಲಿ ಅನುವೃತ್ತವಾಗುವುದರಿಂದ ಭೂಮಗುಣೋಪಾಸನೆಗೆ ಸಫಲತ್ವ ಹಾಗೂ ಸರ್ವೋ-ಪಾಸ್ಯತ್ವ ಕೂಡುತ್ತದೆ. ಕುತ ಏತತ್ ? = ಅದು ಯಾಕೆ ? ಹಿ = ಯಾವ ಕಾರಣ "ಭೂಮ್ನೈವ ದೇವಃ" ಎಂಬ ಗೌಪವನಶ್ರುತಿಯು **ತಥಾ ದರ್ಶಯತಿ** = ಹಾಗೆ ಪ್ರತಿಪಾದಿಸುತ್ತದೆಯೋ ಆ ಕಾರಣ ಎಂದರ್ಥ.

### ಸಿದ್ಧಾಂತ

**ಸೂ.ರ.:– एवं च सर्वैरप्युपास्यो भूमगुणः । यथा खलु दीक्षा-प्रायणीयोदयनीयसवनत्रयावभृथात्मकस्य क्रतोः सर्वयागेष्वनुवर्तन एव साफल्यात् । अन्यथा वैफल्यात् ज्यायस्त्वम् । तथा भूमत्वस्य सर्वत्रानन्दादिषु सहभावेनोपासन एवेष्टफलसिद्धेर्ज्यायस्त्वात् । अतः सर्वैरानन्दाद्याः पूर्णगुणत्वेनोपास्या इति न लौकिकतयोपासनमिति सिद्धम् ॥**

ಭೂಮ (ಪೂರ್ಣತ್ವ) ಎಂಬ ಗುಣವು ಎಲ್ಲರಿಂದಲೂ ಉಪಾಸ್ಯವೇ ಆಗಿದೆ. ಯಾಕೆ ? ಯಾವ ರೀತಿಯಾಗಿ ದೀಕ್ಷಾಪ್ರಾಯಣೀಯ ಉದಯನೀಯ ಸವನತ್ರಯ ಅವಭೃಥ ರೂಪವಾದ ಯಾಗವು ಇತರ ಯಾಗಗಳಲ್ಲಿ ಮಾಡಿದಾಗಲೇ ಇತರ ಯಾಗಗಳು ಸಫಲವಾಗುತ್ತವೆ, ಮಾಡದಿದ್ದರೆ ವ್ಯರ್ಥವಾಗುತ್ತವೆ, ಆದ್ದರಿಂದ ದೀಕ್ಷಾ-ಪ್ರಾಯಣೀಯಾದಿಗಳಿಗೆ ಇತರ ಯಾಗಗಳಿಗಿಂತ ಜ್ಯಾಯಸ್ತ್ವ = ಶ್ರೇಷ್ಠತ್ವ ಹಾಗೂ ಕರ್ತವ್ಯತ್ವ ಇದೆಯೋ ಅದರಂತೆ ಭೂಮಗುಣವೂ ಆನಂದಾದಿಗಳಲ್ಲಿ ಸೇರಿಸಿ ಉಪಾಸನೆ ಮಾಡಿದಾಗಲೇ ಆನಂದಾದಿಗುಣೋಪಾಸನೆ ಸಫಲವಾಗುವುದರಿಂದ ಭೂಮಗುಣವು ಇತರ ಆನಂದಾದಿಗುಣಗಳಿಗಿಂತಲೂ ಶ್ರೇಷ್ಠವಾಗಿದೆ ಹಾಗೂ ಉಪಾಸ್ಯವಾಗಿದೆ.

ಆದ್ದರಿಂದ ಆನಂದಾದಿಗುಣಗಳ ಉಪಾಸನೆ ಮಾಡುವಾಗ ಪೂರ್ಣತ್ವ-(ಭೂಮಗುಣ)ವನ್ನು ಸೇರಿಸಿಕೊಂಡೇ (ಪೂರ್ಣವಾದ ಆನಂದ ಉಳ್ಳವನು ಇತ್ಯಾದಿಯಾಗಿ) ಎಲ್ಲರೂ ಉಪಾಸನೆ ಮಾಡಬೇಕು. ಹೀಗೆ ಮಾಡಿದಾಗ ಆನಂದಾದಿಗುಣಗಳಿಗೆ ಅಲೌಕಿಕತ್ವ ಬಂದು ಲೌಕಿಕ ಉಪಾಸನೆ ಎಂದಾಗುವುದಿಲ್ಲ ಎಂಬುದಾಗಿ ಸಿದ್ಧವಾಗುತ್ತದೆ.

**ಭೂಮಾಧಿಕರಣವು ಮುಗಿಯಿತು.**

ಅಧಿಕರಣ – 38

# ನಾನಾಶಬ್ದಾಧಿಕರಣ

## ಸಂಗತಿ

**ಸೂ.ರ.:– अत्राधिकारिणां भूमगुणस्य नानाप्रकारेण प्रतीतिः समर्थ्यते ।**

ಅಧಿಕಾರಿಗಳಿಗೆ ಭೂಮಗುಣದ ನಾನಾಪ್ರಕಾರೇಣ ಪ್ರತೀತಿಯನ್ನು ಸಮರ್ಥಿಸುತ್ತಾರೆ ಮೂವತ್ತೆಂಟನೇ ಈ ನಾನಾಶಬ್ದಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु सर्वेषां भूमत्वमेकप्रकारेणैव प्रतीयते । भूमत्वे विशेषाभावात् । विशेषाभावेऽपि तारतम्येन प्रतीत्यङ्गीकारे मिथ्योपासनप्रसङ्ग इत्येकप्रकारेणोपास्यत्वान्नोक्ततारतम्यमिति प्राप्ते सूत्रमाह ॥**

ಎಲ್ಲ ಅಧಿಕಾರಿಗಳಿಗೂ ಭೂಮತ್ವವು ಏಕಪ್ರಕಾರವಾಗಿಯೇ ಪ್ರತೀತವಾಗುತ್ತದೆ. ಭೂಮತ್ವದಲ್ಲಿ ವಿಶೇಷ ಇಲ್ಲವಾದ್ದರಿಂದ. ಹಾಗೆ ವಿಶೇಷ ಇಲ್ಲದಿದ್ದರೂ ಸಹ ತಾರತಮ್ಯದಿಂದ ಪ್ರತೀತಿಯನ್ನು ಅಂಗೀಕರಿಸಿದರೆ ಮಿಥ್ಯೋಪಾಸನಪ್ರಸಂಗ ಬರುತ್ತದೆ. ಆದ್ದರಿಂದ ಭೂಮತ್ವವು ಏಕಪ್ರಕಾರದಿಂದ ಉಪಾಸ್ಯವಾದ್ದರಿಂದ ಹೇಳಿದ ತಾರತಮ್ಯ ಯುಕ್ತವಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

### ॐ नाना शब्दादिभेदात् ॐ (३-३-६०)

**ಸೂತ್ರಾರ್ಥ** :- ಭೂಮಗುಣಃ = ಭೂಮಗುಣವು ಸರ್ವೈಃ = ಎಲ್ಲ ಅಧಿಕಾರಿಗಳಿಂದ ಯಥಾಯೋಗ್ಯಂ = ಯೋಗ್ಯತಾನುಸಾರವಾಗಿ ನಾನಾ = ನಾನಾ ಪ್ರಕಾರದಿಂದ ಉಪಾಸ್ಯಃ = ಉಪಾಸ್ಯವಾಗಿದೆ. ನ ತ್ವೇಕಪ್ರಕಾರೇಣ = ಹೊರತು ಏಕಪ್ರಕಾರವಾಗಿ ಅಲ್ಲ, ಕುತಃ = ಏಕೆ? **ಶಬ್ದಾದಿಭೇದಾತ್** = ಶಬ್ದಾದಿ ಪ್ರಮಾಣ–

ಗಳಿಂದ ಅಧಿಕಾರಿಭೇದದಿಂದ ಭೂಮಗುಣವು ನಾನಾಪ್ರಕಾರವಾಗಿ ಪ್ರತೀತ-ವಾಗುವುದರಿಂದ.

## ಸಿದ್ಧಾಂತ

**ಸೂ.ರ.:– एवं च नानाप्रकारेणैव भूमत्वस्य प्रतीतेः । शब्दादिभिः प्रमाणैस्तत्प्रतीतेरेवेष्टव्यत्वात् । शब्दादीनां च तत्तद्योग्यतानुसारेणार्थप्रत्यायकत्वात् । न च भूमत्वे विशेषानुपपत्तिः । आनन्त्ये तारतम्यवद्भूमत्वे तारतम्योपपत्तेः । अतो भूमत्वदृष्टावधिकारिणां विशेषसद्भावाद्युक्तं तारतम्यमिति सिद्धम् ॥**

ನಾನಾಪ್ರಕಾರವಾಗಿಯೇ ಭೂಮತ್ವವು ಪ್ರತೀತವಾಗುವುದರಿಂದ, ಶಬ್ದಾದಿ ಪ್ರಮಾಣಗಳಿಂದ ಆ ಪ್ರತೀತಿಯೇ ಇಷ್ಟವ್ಯವಾದ್ದರಿಂದ, ಶಬ್ದಾದಿಗಳು ತತ್ತದ್ಯೋಗ್ಯ-ತಾನುಸಾರವಾಗಿ ಅರ್ಥಪ್ರತ್ಯಾಯಕವಾದ್ದರಿಂದ ಭೂಮತ್ವವು ನಾನಾಪ್ರಕಾರ-ವಾಗಿಯೇ ಉಪಾಸ್ಯವಾಗಿದೆ. ಭೂಮತ್ವದಲ್ಲಿ ವಿಶೇಷವು ಉಪಪನ್ನವಾಗುವು-ದಿಲ್ಲವಲ್ಲ? ಎಂದು ಶಂಕಿಸುವುದು ಸರಿಯಲ್ಲ. ಆನಂತ್ಯದಲ್ಲಿ ತಾರತಮ್ಯದಂತೆ ಭೂಮತ್ವದಲ್ಲಿಯೂ ತಾರತಮ್ಯವು ಉಪಪನ್ನವಾಗುತ್ತದೆ. ಆದ್ದರಿಂದ ಭೂಮತ್ವ-ದೃಷ್ಟಿಯಲ್ಲಿ ಅಧಿಕಾರಿಗಳಿಗೆ ವಿಶೇಷ ಇರುವುದರಿಂದ ತಾರತಮ್ಯವು ಯುಕ್ತವಾಗಿದೆ ಎಂದು ಸಿದ್ಧವಾಗುತ್ತದೆ.

**ನಾನಾಶಬ್ದಾಧಿಕರಣವು ಮುಗಿಯಿತು.**

ಅಧಿಕರಣ – 39

# ವಿಕಲ್ಪಾಧಿಕರಣ

## ಸಂಗತಿ

**ಸೂ.ರ.:– अत्र बिम्बातिरिक्तरूपोपासनस्याकर्तव्यता निरस्यते ।**

ಬಿಂಬಾತಿರಿಕ್ತವಾದ (ಯೋಗ್ಯಾತ್ಮಾತಿರಿಕ್ತವಾದ) ನೃಸಿಂಹಾದಿರೂಪಗಳ ಉಪಾಸನೆಗೆ ಅಕರ್ತವ್ಯತ್ವವನ್ನು ನಿರಾಸ ಮಾಡುತ್ತಿದ್ದಾರೆ ಮೂವತ್ತೊಂಭತ್ತನೇ ಈ ವಿಕಲ್ಪಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु नाधिकारिणा नृसिंहाद्युपासनं कार्यम् । तस्य मोक्षहेतुत्वाभावात् । फलान्तरस्यानपेक्षितत्वात् । प्रत्युत बिम्बोपासन-विरोधित्वाच्च । ततश्च तत्प्रतिपादकविद्यावैयर्थ्यमिति प्राप्ते सूत्रितम् ॥**

ಅಧಿಕಾರಿಯಾದವನು ಬಿಂಬಾತಿರಿಕ್ತವಾದ ನೃಸಿಂಹಾದಿಗಳ ಉಪಾಸನೆಯನ್ನು ಮಾಡಬಾರದು. ಕಾರಣ ಆ ನೃಸಿಂಹಾದ್ಯುಪಾಸನೆಯು ಮೋಕ್ಷಹೇತುವಾಗಿಲ್ಲ-ವಾದ್ದರಿಂದ. ಬೇರೆ ಫಲಕ್ಕಾಗಿ ಮಾಡೋಣವೆಂದರೆ, ಬೇರೆ ಫಲವು ಅಪೇಕ್ಷಿತವಾಗಿಲ್ಲ. ಪ್ರತ್ಯುತ ಬಿಂಬೋಪಾಸನೆಗೆ ವಿರೋಧಿಯೂ ಆಗಿದೆ. ಆದ್ದರಿಂದ ಅಂತಹ ನೃಸಿಂಹಾ-ದ್ಯುಪಾಸನಾಪ್ರತಿಪಾದಕವಾದ ವಿದ್ಯೆಗೆ ವೈಯರ್ಥ್ಯ ಬರುತ್ತದೆ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

### ॐ विकल्पो विशिष्टफलत्वात् ॐ (३-३-६१)

**ಸೂತ್ರಾರ್ಥ :- ವಿಕಲ್ಪಃ** = ಸ್ವಸ್ವಮೋಕ್ಷಸಾಧನವಾದದ್ದರಿಂದ ಅನ್ಯವಾದ ನೃಸಿಂಹಾದಿಗಳ ಉಪಾಸನೆಯು ಕಾರ್ಯವಾಗಿದೆ ಅಥವಾ ಕಾರ್ಯವಾಗಿಲ್ಲ ಎಂದು ಎರಡುವಿಧ ಪ್ರಕಾರವು ಆಗುತ್ತದೆ. ಕುತಃ = ಏಕೆ? **ವಿಶಿಷ್ಟಫಲತ್ವಾತ್** = ಅಂತಹ ನೃಸಿಂಹಾದಿಗಳ ಉಪಾಸನೆಯು ದುರಿತನಿವೃತ್ತಿರೂಪ ಫಲವಿಶೇಷವನ್ನು ಅಪೇಕ್ಷಿಸಿ ಕರ್ತವ್ಯವಾಗಿರುವುದರಿಂದ, ಅದಕ್ಕನುಸಾರವಾಗಿ ವಿಕಲ್ಪವೇ (ಕರ್ತವ್ಯ ಅಥವಾ ಕರ್ತವ್ಯ ಅಲ್ಲ ಎಂದು ದ್ವಿವಿಧಪ್ರಕಾರವೇ) ಯುಕ್ತವಾಗುತ್ತದೆ.

## ಸಿದ್ಧಾಂತ

ಸೂ.ಠ.:- एवं च नृसिंहाद्युपासनं न कर्तव्यमेवेति न भवति किन्तु बिम्बोपासनमनुष्ठाय विशिष्टफलापेक्षा चेत्कर्तव्यम् । न चेन्न कर्तव्यमिति विकल्पः । न च नृसिंहाद्युपासनाभावे दुरितनिवृत्त्यसिद्धिः । तीव्रया स्वबिम्बोपासनयाऽपि दुरितनिवृत्तिसिद्धेः । ततश्चान्योपासनस्यापि कर्तव्यत्वान्न तद्विद्याया वैयर्थ्यमिति सिद्धम् ॥

ನೃಸಿಂಹಾದ್ಯುಪಾಸನವು ಕರ್ತವ್ಯವಲ್ಲ ಎಂದಲ್ಲ, ಕಿಂತು ಬಿಂಬೋಪಾಸನವನ್ನು ಅನುಷ್ಠಾನ ಮಾಡಿ, ವಿಶಿಷ್ಟಫಲಾಪೇಕ್ಷಾ ಇರುವುದಾದರೆ ನೃಸಿಂಹಾದ್ಯುಪಾಸನವು ಕರ್ತವ್ಯ, ವಿಶಿಷ್ಟಫಲಾಪೇಕ್ಷೆ ಇಲ್ಲವಾದರೆ ಕರ್ತವ್ಯವಲ್ಲ ಎಂಬುದಾಗಿ ವಿಕಲ್ಪ ಉಂಟಾಗುತ್ತದೆ.

ಹಾಗಾದರೆ, ನೃಸಿಂಹಾದ್ಯುಪಾಸನ ಮಾಡದಿದ್ದ ಪಕ್ಷದಲ್ಲಿ ದುರಿತನಿವೃತ್ತಿಯು ಸಿದ್ಧವಾಗುವುದಿಲ್ಲ ಎಂದು ಶಂಕಿಸುವುದು ಸರಿಯಲ್ಲ, ಕಾರಣ ದ್ವಿತೀಯವಾದ ಸ್ವಬಿಂಬೋಪಾಸನೆಯಿಂದಲೂ (ಯೋಗ್ಯಾತ್ಮೋಪಾಸನೆಯಿಂದಲೂ) ಸಹ ದುರಿತನಿವೃತ್ತಿಯು ಸಿದ್ಧವಾಗುತ್ತದೆ. ಆದ್ದರಿಂದ ನೃಸಿಂಹಾದ್ಯುಪಾಸನವೂ ಕರ್ತವ್ಯ-ವಾದ್ದರಿಂದ ತತ್ಪ್ರತಿಪಾದಕವಾದ ವಿದ್ಯೆಗೆ ವೈಯರ್ಥ್ಯ ಬರುವುದಿಲ್ಲ ಎಂದು ಸಿದ್ಧವಾಗುತ್ತದೆ.

ವಿಕಲ್ಪಾಧಿಕರಣವು ಮುಗಿಯಿತು.

*ಅಧಿಕರಣ – 40*

## ಕಾಮಾಧಿಕರಣ

### ಸಂಗತಿ

**ಸೂ.ರ.:– अत्र ज्ञानसाधनोपासनस्यैवावश्यकत्वं न कामसाधनभगवद्रूपगुणविषयोपासनस्येति साध्यते ।**

ಜ್ಞಾನಸಾಧನವಾದ ಉಪಾಸನೆಯೇ ಆವಶ್ಯಕವಾಗಿದೆ, ಹೊರತು ಕಾಮಸಾಧನ-ವಾದ (ಕಾಮ್ಯವಾದ) ಭಗವದ್ರೂಪಗುಣವಿಷಯೋಪಾಸನೆಯು ಆವಶ್ಯಕವಾಗಿಲ್ಲ ಎಂದು ಸಾಧಿಸುತ್ತಾರೆ ನಲವತ್ತನೇ ಈ ಕಾಮಾಧಿಕರಣದಲ್ಲಿ.

### ಪೂರ್ವಪಕ್ಷ

**ಸೂ.ರ.:– ननु कामसाधनभगवद्रूपोपासनं तदनुगुणोपसंहारेणावश्यकम् । तत्साध्यस्य धनादेर्ज्ञानहेतुत्वात् । अतः काम्योपासनस्यावश्यकत्वाद्व्यर्थः प्रथमपाद इति प्राप्ते सूत्रमुपन्यस्यति ॥**

ಕಾಮಸಾಧನ ಭಗವದ್ರೂಪೋಪಾಸನೆಯು ತದನುಗುಣ ಉಪಸಂಹಾರ ಮಾಡುವ ಮೂಲಕವಾಗಿ ಆವಶ್ಯಕವಾಗಿದೆ. ಕಾರಣ ಅಂತಹ ಕಾಮಸಾಧನಭಗವ-ದ್ರೂಪೋಪಾಸನೆಯಿಂದ ಸಾಧ್ಯವಾದ ಧನಾದಿಗಳು ಜ್ಞಾನಹೇತುವಾದ್ದರಿಂದ. ಆದ್ದರಿಂದ ಕಾಮ್ಯೋಪಾಸನವು ಆವಶ್ಯಕವಾದ್ದರಿಂದ ಪ್ರಥಮಪಾದವು ವ್ಯರ್ಥವಾಗಿದೆ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ काम्यास्तु यथाकामं समुच्चीयेरन्न वा पूर्वहेत्वभावात् ॐ**

**(३-३-६२)**

**ಸೂತ್ರಾರ್ಥ :- ಕಾಮ್ಯಾಸ್ತು** = ಕಾಮ್ಯರೂಪದಲ್ಲಿ ಕಾಮಿತಸಾಧನಭಗವ-ದ್ಗುಣಗಳು **ಯಥಾಕಾಮಂ** = ಸ್ವಸ್ವಫಲದಲ್ಲಿ ಕಾಮಾನುಸಾರವಾಗಿ **ಸಮುಚ್ಚೀಯೇ-ರನ್ನ ವಾ** = ಮುಮುಕ್ಷುಗಳಲ್ಲದವರಿಂದ ಉಪಸಂಹರ್ತವ್ಯವಾಗಿವೆ, ಇನ್ನು ಮುಮುಕ್ಷು-ಗಳಿಂದ ಉಪಸಂಹರ್ತವ್ಯವಾಗಿಲ್ಲ ಎಂಬುದಾಗಿ ವ್ಯವಸ್ಥಿತವಿಕಲ್ಪವು ಉಂಟಾಗುತ್ತದೆ.

ಕುತಃ = ಏಕೆ? **ಪೂರ್ವಹೇತ್ವಭಾವಾತ್** = ಮುಮುಕ್ಷುಗಳಿಗೆ ಮೋಕ್ಷೇಚ್ಛಾ-ಪೂರ್ವಕಾಲೀನ ಪೂರ್ವಸೂತ್ರೋಕ್ತ ಅನ್ಯಕಾಮಾಖ್ಯ ಹೇತು ಇಲ್ಲವಾದ್ದರಿಂದ.

ಅಥವಾ ಮುಮುಕ್ಷುಭಿರೇವ ಈಶ್ವರಪ್ರೀತ್ಯರ್ಥಂ ಉಪಸಂಹಾರ್ಯಾಃ = ಮುಮುಕ್ಷುಗಳಿಂದಲೇನೇ ಈಶ್ವರಪ್ರೀತಿಗಾಗಿ ಉಪಸಂಹರ್ತವ್ಯವಾಗಿವೆ, ಫಲಾರ್ಥಂ ನೋಪಸಂಹರ್ತವ್ಯಾಃ = ಫಲಕ್ಕಾಗಿ ಉಪಸಂಹರ್ತವ್ಯವಾಗಿಲ್ಲ ಇತಿ ವಾ ವಿಕಲ್ಪಃ ಸ್ಯಾತ್ = ಎಂಬುದಾಗಿ ಆದರೂ ವಿಕಲ್ಪ ಉಂಟಾಗುತ್ತದೆ.

## ಸಿದ್ಧಾಂತ

**ಸೂ.ರ.:– एवं च कामसाधनरूपे कामसाधनगुणाः स्वस्व-कामानुसारेणोपसंहर्तव्या न वेति विकल्प एव न तु नियतिः । विकल्पश्चामुमुक्षुभिः कार्यं मुमुक्षुभिर्नेति । मुमुक्षूणां च कामना-विरहात् । अथवा मुमुक्षुष्वेवायं विकल्पः । फलार्थं न कार्यम् । ईश्वर-प्रसादार्थं कार्यमिति । अतः कामनोपासनस्य वैकल्पिकत्वेन सार्थक्यं वैराग्यपादस्येति सिद्धम् ॥**

ಕಾಮಸಾಧನರೂಪದಲ್ಲಿ ಕಾಮಸಾಧನವಾದ ಗುಣಗಳು ಸ್ವಸ್ವಕಾಮಾನು-ಸಾರವಾಗಿ ಉಪಸಂಹರ್ತವ್ಯವಾಗಿವೆ ಅಥವಾ ಉಪಸಂಹರ್ತವ್ಯವಾಗಿಲ್ಲ ಎಂಬುದಾಗಿ ವಿಕಲ್ಪವೇ ಉಂಟಾಗುತ್ತದೆ ಹೊರತು ನಿಯತಿ ಉಂಟಾಗುವುದಿಲ್ಲ.

ವಿಕಲ್ಪವಾದರೂ – ಮುಮುಕ್ಷುಗಳಿಗೆ ಕಾಮನಾ ಇರುವುದಿಲ್ಲವಾದ್ದರಿಂದ ಮುಮುಕ್ಷುಗಳಿಂದ ಉಪಸಂಹರ್ತವ್ಯವಲ್ಲ. ಅಮುಮುಕ್ಷುಗಳಿಗೆ ಕಾಮನಾ ಇರುವುದರಿಂದ ಅಮುಮುಕ್ಷುಗಳಿಂದ ಉಪಸಂಹರ್ತವ್ಯವಾಗಿದೆ ಎಂದು.

ಅಥವಾ ಮುಮುಕ್ಷುಗಳಲ್ಲಿಯೇ ಈ ವಿಕಲ್ಪ. ಹೇಗೆ ? ಫಲಕ್ಕಾಗಿ ಮುಮುಕ್ಷು-ಗಳಿಂದ ಉಪಸಂಹರ್ತವ್ಯವಾಗಿಲ್ಲ. ಈಶ್ವರಪ್ರಸಾದಕ್ಕಾಗಿ ಉಪಸಂಹರ್ತವ್ಯವಾಗಿವೆ ಎಂದು.

ಆದ್ದರಿಂದ ಕಾಮನೋಪಾಸನೆಯು ವೈಕಲ್ಪಿಕವಾದ್ದರಿಂದ ವೈರಾಗ್ಯಪಾದವು ಸಾರ್ಥಕವ[illegible] ಆಗಿದೆ ಎಂದು ಸಿದ್ಧವಾಗುತ್ತದೆ.

ಕಾಮಾಧಿಕರಣವು ಮುಗಿಯಿತು.

*ಅಧಿಕರಣ – 41*

# ಅಂಗಾಧಿಕರಣ

## ಸಂಗತಿ

**ಸೂ.ರ.:– अत्राङ्गाश्रितत्वेन देवतोपास्तेः कर्तव्यता समर्थ्यते ।**

ಅಂಗಾಶ್ರಿತತ್ವೇನ ದೇವತೋಪಾಸನೆಯು ಕರ್ತವ್ಯವಾಗಿದೆ ಎಂದು ಸಮರ್ಥಿಸುತ್ತಾರೆ ನಲವತ್ತೊಂದನೇ ಈ ಅಂಗಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु नाङ्गाश्रितदेवतोपासनं मुमुक्षुणा कर्तव्यम् । अधिकारिविशेषं लक्षीकृत्य तत्फलोद्देशेनानभिहितत्वात् । न चैवमप्यधिकारिविशेषः कल्पयितुं शक्यः । कल्पकाभावात् । न च कल्पकाभावेऽपि कल्पना युक्ता । चोदनाद्यविशेषादित्युक्तव्याघातात् । ततश्च निरधिकारिकत्वादङ्गाश्रितत्वेन देवतोपासनं न कर्तव्यमिति प्राप्ते परिहरत्सूत्रमाह ॥**

ಮುಮುಕ್ಷುವಾದವನು ಅಂಗಾಶ್ರಿತ ದೇವತೋಪಾಸನೆಯನ್ನು ಮಾಡಕೂಡದು. ಕಾರಣ – ವಿಶೇಷ ಅಧಿಕಾರಿಗಳನ್ನು ಲಕ್ಷದಲ್ಲಿರಿಸಿಕೊಂಡು ತತ್ಫಲೋದ್ದೇಶದಿಂದ ಅಭಿಹಿತವಾಗಿಲ್ಲವಾದ್ದರಿಂದ.

ಅಂಗಾಶ್ರಿತದೇವತೋಪಾಸನೆಯನ್ನು ಎಲ್ಲ ಮುಮುಕ್ಷುಗಳೂ ಮಾಡಬೇಕೋ? ಅಥವಾ ದೇವತೆಗಳು ಮಾಡಬೇಕೋ?

ಎಲ್ಲ ಮುಮುಕ್ಷುಗಳೂ ಮಾಡಬೇಕು ಎನ್ನುವುದು ಸರಿಯಲ್ಲ. ಕಾರಣ "ಆನಂದಾದಯಃ ಪ್ರಧಾನಸ್ಯ" ಎಂಬುದಾಗಿ ಹೇಳಿದ್ದರಿಂದ ವ್ಯಾಹತಿ ಬರುತ್ತದೆ. ಇನ್ನು ದೇವತೆಗಳು ಮಾಡಬೇಕು ಎನ್ನುವುದೂ ಸರಿಯಲ್ಲ. "ಬ್ರಹ್ಮಾ ಶಿರಸಿ ಲಲಾಟೇ ರುದ್ರಃ" ಇತ್ಯಾದಿ ತತ್ತತ್ಪ್ರಕರಣಗಳಲ್ಲಿ ದೇವತೆಗಳಿಗೆ ಮಾತ್ರ ಆ ಉಪಾಸನೆ ಎಂದು ಹೇಳಿಲ್ಲವಾದ್ದರಿಂದ.

ಹಾಗೆ ಹೇಳದಿದ್ದರೂ ಅಧಿಕಾರಿ ವಿಶೇಷವನ್ನು ಕಲ್ಪಿಸಲು ಶಕ್ಯವಿಲ್ಲ. ಕಾರಣ

ಕಲ್ಪಕವಾದದ್ದು ಯಾವುದೂ ಇಲ್ಲವಾದ್ದರಿಂದ. ಕಲ್ಪಕವಾದದ್ದು ಇಲ್ಲದಿದ್ದರೂ ಕಲ್ಪನೆ ಮಾಡುವುದು ಯುಕ್ತವಾಗುವುದಿಲ್ಲ. 'ಚೋದನಾದ್ಯವಿಶೇಷಾತ್' ಎಂದು ಹೇಳಿದ್ದರಿಂದ ವ್ಯಾಹತಿ ಬರುವುದರಿಂದ.

ಆದ್ದರಿಂದ ನಿರಧಿಕಾರಿಕವಾದ್ದರಿಂದ ಅಂಗಾಶ್ರಿತತ್ವೇನ ದೇವತೋಪಾಸನೆಯು ಕರ್ತವ್ಯವಾಗಿಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ अंगेषु यथाऽश्रयभावः ॐ (३-३-६३)**

**ಸೂತ್ರಾರ್ಥ :- ಅಂಗೇಷು** = ಭಗವಂತನ ಅಂಗಗಳಲ್ಲಿ **ಯಥಾಽಶ್ರಯಭಾವಃ** = 'ಚಕ್ಷೋಃ ಸೂರ್ಯೋಽಜಾಯತ' ಇತ್ಯಾದಿಗಳಲ್ಲಿ ಯಾವ ಯಾವ ರೀತಿಯಾಗಿ ಆಶ್ರಯತ್ವವು ಉಕ್ತವಾಗಿದೆಯೋ ಆ ರೀತಿಯಾಗಿ ಅವರಿಂದ ಉಪಾಸನೆಯು ಕರ್ತವ್ಯವಾಗಿದೆ.

## ಸಿದ್ಧಾಂತ

**ಸೂ.ರ.:- एवं च चक्षोः सूर्योऽजायते (ऋ. १०-९०-१३) त्यादिना यथा यथा भगवदङ्गाश्रयत्वमुक्तं तथोपासनं कार्यम् । अन्यथा तदुक्तिवैयर्थ्यात् । अतो देवानामङ्गाश्रितत्वेनोपास्यत्वात्सार्थकं तद्विधानमिति सिद्धम् ॥**

'ಚಕ್ಷೋಃ ಸೂರ್ಯೋಽಜಾಯತ' (ಋ. 10-90-13) ಇತ್ಯಾದಿಯಾಗಿ ದೇವತೆಗಳಿಗೆ ಯಾವ ಯಾವ ಭಗವದಂಗಾಶ್ರಿತತ್ವವು ಉಕ್ತವಾಗಿದೆಯೋ ಆ ರೀತಿ-ಯಾಗಿ ಉಪಾಸನೆಯು ಕಾರ್ಯವಾಗಿದೆ. ಅನ್ಯಥಾ ತದುಕ್ತಿವೈಯರ್ಥ್ಯ ಬರುತ್ತದೆ.

ಆದ್ದರಿಂದ ದೇವತೆಗಳು ಅಂಗಾಶ್ರಿತತ್ವೇನ ಉಪಾಸ್ಯರಾದ್ದರಿಂದ ತದ್ವಿಧಾನವು ಸಾರ್ಥಕವಾಗಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 64

**ಸೂ.ರ.:- युक्त्यन्तरेण देवानामङ्गाश्रितत्वेनोपास्तिमभिदधत्सूत्रं पठति ॥**

ಮತ್ತೊಂದು ಯುಕ್ತಿಯಿಂದಲೂ ದೇವತೆಗಳ ಅಂಗಾಶ್ರಿತತ್ವೇನ ಉಪಾಸನೆಯನ್ನು ಹೇಳುವ ಸೂತ್ರವನ್ನು ಪಠಿಸುತ್ತಾರೆ -

### ॐ शिष्टेश्च ॐ (३-३-६४)

**ಸೂತ್ರಾರ್ಥ :- ಶಿಷ್ಟೇಶ್ಚ** = 'ಯಸ್ಮಿನ್' ಎಂಬುದಾಗಿ ಪೌತ್ರಾಯಣಶ್ರುತಿಯಿಂದ ವಿಹಿತವಾದದ್ದರಿಂದಲೂ ಸಹ ದೇವತೆಗಳ ಅಂಗಾಶ್ರಿತತ್ವೇನ ಉಪಾಸನೆಯು ಕರ್ತವ್ಯವಾಗಿದೆ.

**ಸೂ.ರ.:- एवं च न केवलं चक्षोरित्यादावङ्गाश्रयत्वेनोक्त्यन्यथाऽनुपपत्त्याऽङ्गाश्रितत्वेनोपास्तिः कार्या । किन्तु यस्मिन्निति शिक्षा विधायकश्रुतौ तथा विधानात्कार्या । अत उक्तं युक्तमिति सिद्धम् ॥**

ಕೇವಲ 'ಚಕ್ಷೋಃ ಸೂರ್ಯೋಽಜಾಯತ' ಇತ್ಯಾದಿಗಳಲ್ಲಿ ಅಂಗಾಶ್ರಯತ್ವೇನ ಉಕ್ತ್ಯನ್ಯಥಾನುಪಪತ್ತಿಯಿಂದ ಅಂಗಾಶ್ರಿತತ್ವೇನ ಉಪಾಸ್ತಿ ಕರ್ತವ್ಯವಾಗಿದೆ ಎಂದಷ್ಟೇ ಅಲ್ಲ. ಕಿಂತು ಶಿಕ್ಷಾವಿಧಾಯಕವಾದ "ಯಸ್ಮಿನ್ ಯಸ್ಮಿನ್ ಯೋ ಹಿ ಚಾಂಗೇ ನಿವಿಷ್ಟಃ ಪರಸ್ಯ ಚಿಂತ್ಯಃ ಸ ತಥಾ ತಥೈವ' ಎಂದು ಪೌತ್ರಾಯಣಶ್ರುತಿಯಲ್ಲಿ ವಿಧಾನ ಮಾಡಿದ್ದರಿಂದಲೂ ಸಹ ಅಂಗಾಶ್ರಯತ್ವೇನ ಉಪಾಸನೆಯು ಕಾರ್ಯವಾಗಿದೆ ಎಂದು ಸಿದ್ಧವಾಗುತ್ತದೆ.

### ಸೂತ್ರ - 65

**ಸೂ.ರ.:- ननु निरधिकारिकत्वात्तद्विधानादिवैयर्थ्यस्यैवोचितत्वाच्च नाङ्गदेवतोपासनं युक्तमित्याशङ्कां परिहरत्सूत्रमुपन्यस्यति ॥**

ನಿರಧಿಕಾರಿಕವಾದ್ದರಿಂದ, ತದ್ವಿಧಾನಾದಿವೈಯರ್ಥ್ಯವೇ ಉಚಿತವಾದ್ದರಿಂದಲೂ ಅಂಗದೇವತೋಪಾಸನವು ಯುಕ್ತವಲ್ಲ ಎಂಬ ಶಂಕೆಯನ್ನು ಪರಿಹರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

### ॐ समाहारात् ॐ (३-३-६५)

**ಸೂತ್ರಾರ್ಥ** :- ಇಲ್ಲಿ ಸಮಾಹಾರಶಬ್ದದಿಂದ ಉಪಸಂಹಾರಫಲಶ್ರುತಿಯು ಗ್ರಹಿಸಲ್ಪಡುತ್ತದೆ. **ಸಮಾಹಾರಾತ್** = ಸ್ವಸ್ವಜನಕಾಂಗತ್ವರೂಪ ಗುಣೋಪಸಂಹಾರ

ವಿಷಯದಲ್ಲಿ ಫಲವಚನ ಇರುವುದರಿಂದಲೂ ಸಹ ತೈಃ ತಥಾ ಉಪಸಂಹೃತ್ಯ ಉಪಾಸನಂ ಕರ್ತವ್ಯಂ = ದೇವತೆಗಳಿಂದ ಹಾಗೆ ಉಪಸಂಹಾರ ಮಾಡಿ ಉಪಾಸನೆಯು ಕರ್ತವ್ಯವಾಗಿದೆ.

**ಸೂ.ರ.:- एवं च काषायणानां समाहरश्रुतिवचनात्संहरेतेति समाहारपदघटितश्रुतेरङ्गदेवतोपासनस्य परमस्थानरूपसायुज्यप्राप्ति-फलकत्वावगमात् । निरधिकारिकत्वाभावेन तद्विधानादिवैयर्थ्य-कल्पनाया अभावेन च देवैरेवाङ्गदेवतोपास्तिः कार्येति सिद्धम् ॥**

ಕಾಷಾಯಣರ ಸಮಾಹಾರಶ್ರುತಿವಚನ ಇರುವುದರಿಂದ, 'ಸಂಹರೇತ್' ಎಂಬುದಾಗಿ ಸಮಾಹಾರಪದಘಟಿತವಾದ ಶ್ರುತಿ ಇರುವುದರಿಂದ, ಅಂಗದೇವತೋ-ಪಾಸನೆಯು ಪರಮಸ್ಥಾನರೂಪ ಸಾಯುಜ್ಯಪ್ರಾಪ್ತಿಫಲ ಉಳ್ಳದ್ದಾಗಿದೆ ಎಂದು ತಿಳಿದುಬರುವುದರಿಂದ, (ದೇವತೆಗಳು ಅಧಿಕಾರಿಗಳಾಗಿ ಇದ್ದಾರೆಯಾದ್ದರಿಂದ) ನಿರಧಿಕಾರಿಕತ್ವ ಇಲ್ಲವಾದ್ದರಿಂದ ತದ್ವಿಧಾನಾದಿವೈಯರ್ಥ್ಯಕಲ್ಪನಾ ಇಲ್ಲದ ಕಾರಣ ದೇವತೆ-ಗಳಿಂದ ಅಂಗದೇವತೋಪಾಸನೆಯು ಕಾರ್ಯವಾಗಿದೆ ಎಂದು ಸಿದ್ಧವಾಗುತ್ತದೆ.

(ವಿ.ಸೂ. ಸೂತ್ರಾರ್ಥರತ್ನಾವಲಿಯಲ್ಲಿ ಅಭಿಪ್ರಾಯವು ಸ್ಪಷ್ಟವಾಗದ ಕಾರಣ ತತ್ವಪ್ರಕಾಶಿಕಾಭಾವ ನೀಡಲಾಗಿದೆ.)

ಅಂಗಾಶ್ರಿತತ್ವೇನ ದೇವತೋಪಾಸನೆಯು ಯುಕ್ತವೇ ಆಗಿದೆ. ಕಾರಣ ಅದಕ್ಕೆ ದೇವತೆಗಳು ಅಧಿಕಾರಿಗಳಾಗಿ ಇರುವುದರಿಂದ. ಹಾಗಾದರೆ ಶ್ರುತಿಯಲ್ಲಿ ದೇವತೆಗಳು ಅಧಿಕಾರಿಗಳು ಎಂದು ಹೇಳಿಲ್ಲವಲ್ಲ? ಎಂದರೆ, ಆ ಉಪಾಸನೆಗೆ ಪರಮಸ್ಥಾನ-ಪ್ರಾಪ್ತಿಯು ಫಲವಾಗಿ ಶ್ರುತವಾಗುತ್ತಿದೆ. ಅಂತಹ ಪರಮಸ್ಥಾನಪ್ರಾಪ್ತಿಯು (ಸಾಯುಜ್ಯಮೋಕ್ಷವು) ದೇವತೆಗಳಿಗೆ ಯೋಗ್ಯವಾಗಿದೆಯಾದ್ದರಿಂದ ಫಲಪರ್ಯಾ-ಲೋಚನೆಯಿಂದ ಮಧುವಿದ್ಯೆಯಲ್ಲಿಯಂತೆ ದೇವತೆಗಳು ಅಧಿಕಾರಿಗಳಾಗಿದ್ದಾರೆ ಎಂದು ಕಲ್ಪಿಸಲು ಬರುತ್ತದೆ. ಅದನ್ನು ಶ್ರುತಿ ಹೇಳಿದೆ -

''ಧ್ಯಾಯೇದಂಗೇಷ್ವಂಗದೇವತಾಃ ಪರಸ್ಯ ವಿಷ್ಣೋಃ ವಿಶಿಷ್ಟಾ ಹಿ ಗುಣಾ ಮುಕ್ತೌ ದೇವಾನಾಂ ಭವಂತಿ'' ಎಂದು.

## ಸೂತ್ರ - 66

**ಸೂ.ರ.:– हेत्वन्तरेणाङ्गदेवतोपासनस्य कर्तव्यतां समर्थयत्सूत्र-मुपन्यस्यति ॥**

ಮತ್ತೊಂದು ಹೇತುವಿನಿಂದಲೂ ಅಂಗದೇವತೋಪಾಸನೆಗೆ ಕರ್ತವ್ಯತ್ವವನ್ನು ಸಮರ್ಥಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ गुणसाधारण्यश्रुतेश्च ॐ (३-३-६६)**

**ಸೂತ್ರಾರ್ಥ :- ಗುಣಸಾಧಾರಣ್ಯಶ್ರುತೇಶ್ಚ ಗುಣಾನಾಂ** = ಭಗವದ್ಗುಣಗಳಿಗೆ **ಸಾಧಾರಣ್ಯಸ್ಯ** = ಸರ್ವೋಪಾಸ್ಯತ್ವವು **ಶ್ರುತೇಃ ಚ** = "ಸಾಧಾರಣ್ಯಾತ್" ಎಂದು ಮಾಂಡವ್ಯಶ್ರುತಿಯಲ್ಲಿ ಹೇಳಲ್ಪಟ್ಟಿದ್ದರಿಂದಲೂ ಸಹ ದೇವೈಃ ತಥೋಪಾಸನಂ ಕಾರ್ಯಂ = ದೇವತೆಗಳಿಂದ ಅಂಗದೇವತೋಪಾಸನೆಯು ಕಾರ್ಯವಾಗಿದೆ.

**ಸೂ.ರ.:– एवं च ज्ञानानन्दादिगुणानां सूर्याद्याश्रयचक्षुष्ट्वादीनां भगवद्गुणत्वात् । भगवद्गुणानां चोपास्यत्वेनैते उपास्या एते तु नेति विभागं विहाय योग्यानां सर्वेषामुपास्यत्वस्य निर्दिष्टश्रुतावुक्तत्वात् । अत्राङ्गाश्रितत्वेन देवतोपासनम् । देवताश्रयत्वेन तद्गुणबिम्बगुणत्वेन च परमात्मोपासनम् । तयोः समनियतत्वात् । समाहारात्, गुण-साधारण्यश्रुतेः, दर्शनाच्च, इत्येतेषां विरोधाभावात् । देवैरङ्गाश्रितत्वे-नाङ्गदेवताभावनायाः कर्तव्यत्वात् । अतो देवानां भगवदङ्गाश्रितत्वे-नोपासनमुक्तमुपपन्नमिति सिद्धम् ॥**

ಜ್ಞಾನ ಆನಂದಾದಿಗುಣಗಳಂತೆ ಸೂರ್ಯಾದ್ಯಾಶ್ರಯಚಕ್ಷುಷ್ಟ್ವಾದಿಗಳು ಭಗವದ್ಗುಣವಾದ್ದರಿಂದ, ಭಗವದ್ಗುಣಗಳು ಉಪಾಸ್ಯವಾಗಿರುವುದರಿಂದ, ಇವು ಉಪಾಸ್ಯವಾಗಿವೆ ಇವು ಉಪಾಸ್ಯವಲ್ಲ ಎಂಬ ವಿಭಾಗಬಿಟ್ಟು ಯೋಗ್ಯವಾದ ಎಲ್ಲ ಗುಣಗಳಿಗೂ ಉಪಾಸ್ಯತ್ವವು ನಿರ್ದಿಷ್ಟಶ್ರುತಿಯಲ್ಲಿ ಉಕ್ತವಾದ್ದರಿಂದ ಅಂಗಾಶ್ರಿತತ್ವೇನ ದೇವತೋಪಾಸನೆಯು ಕಾರ್ಯವಾಗಿದೆ.

ಇಲ್ಲಿ ಅಂಗಾಶ್ರಿತತ್ವೇನ ದೇವತೋಪಾಸನೆ ಹಾಗೂ ದೇವತಾಶ್ರಯತ್ವೇನ, ತದ್ಗುಣಬಿಂಬಗುಣತ್ವೇನ (ದೇವತೆಗಳ ಗುಣಗಳಿಗೆ ಬಿಂಬವಾದ ಗುಣಗಳುಳ್ಳವನು ಎಂಬ) ಪರಮಾತ್ಮೋಪಾಸನೆ ಎರಡೂ ಸಮನಿಯತವಾದ್ದರಿಂದ

''ಸಾಧಾರಣ್ಯಾತ್ ಸರ್ವಗುಣಾಃ ಪರಸ್ಯ ಸಮಾಹಾರ್ಯಾಃ ತತ್ವದೃಶೋ ಮುಮುಕ್ಷೋಃ''

ಎಂಬುದಾಗಿ ಮಾಂಡವ್ಯಶ್ರುತಿಯಲ್ಲಿ ಭಗವಂತನ ಎಲ್ಲ ಗುಣಗಳ ಉಪಾಸನೆ- ಯನ್ನೂ ವಿಧಾನ ಮಾಡಿದ್ದರಿಂದ, ದೇವತೆಗಳು ಭಗವಂತನ ಅಂಗಗಳಲ್ಲಿ ಆಶ್ರಿತ- ರಾದ್ದರಿಂದ ಅಂಗದೇವತೋಪಾಸನೆಯು ಕರ್ತವ್ಯವಾಗಿದೆ.

ಆದ್ದರಿಂದ ಅಂಗಾಶ್ರಿತತ್ವೇನ ದೇವತೆಗಳ ಉಪಾಸನೆಯನ್ನು ಹೇಳಿದ್ದು ಉಪಪನ್ನವಾಗಿದೆ ಎಂದು ಸಿದ್ಧವಾಗುತ್ತದೆ.

**ಅಂಗಾಧಿಕರಣವು ಮುಗಿಯಿತು.**

ಅಧಿಕರಣ – 42

## ನ ವಾಽಧಿಕರಣ

### ಸಂಗತಿ

ಸೂ.ರ.:– अत्राङ्गदेवतोपास्तेः सर्वशाखास्वनुक्तत्वेन प्राप्ताकर्तव्यत्वशङ्कानिरासेन कर्तव्यता समर्थ्यते ।

ಸರ್ವಶಾಖಾಗಳಲ್ಲಿ ಅನುಕ್ತತ್ವನಿಮಿತ್ತವಾಗಿ ಅಂಗದೇವತೋಪಾಸ್ತಿಗೆ ಪ್ರಾಪ್ತವಾದ ಅಕರ್ತವ್ಯತ್ವಶಂಕಾವನ್ನು ನಿರಾಸ ಮಾಡುವ ಮೂಲಕ ಕರ್ತವ್ಯತ್ವವನ್ನು ಸಮರ್ಥಿಸುತ್ತಾರೆ ನಲವತ್ತೆರಡನೇ ಈ ನ ವಾಽಧಿಕರಣದಲ್ಲಿ.

### ಪೂರ್ವಪಕ್ಷ

ಸೂ.ರ.:– ननु भगवदङ्गाश्रयत्वेनोपासनं न केनापि कर्तव्यम् । तथोपासनस्य तत्तद्योग्यगुणोपासननिरूपणपरासु सर्वशाखासु तत्तद्योग्य गुणोपासनैः सहानुक्तत्वात् । अतोऽङ्गदेवतोपासनस्याकर्तव्यत्वादुक्तमयुक्तमिति प्राप्ते सूत्रमाह ॥

ಭಗವದಂಗಾಶ್ರಯತ್ವೇನ ಉಪಾಸನೆಯನ್ನು ಯಾರೂ ಮಾಡುವಂತಿಲ್ಲ. ಕಾರಣ ಅಂತಹ ಉಪಾಸನೆಯು ತತ್ತದ್ಯೋಗ್ಯಗುಣೋಪಾಸನನಿರೂಪಣಪರವಾದ ಸರ್ವಶಾಖೆಗಳಲ್ಲಿ ತತ್ತದ್ಯೋಗ್ಯಗುಣೋಪಾಸನೆಗಳ ಜೊತೆ ಅನುಕ್ತವಾದದ್ದರಿಂದ. ಆದ್ದರಿಂದ ಅಂಗದೇವತೋಪಾಸನವು ಅಕರ್ತವ್ಯವಾದ್ದರಿಂದ ಹಿಂದೆ ಹೇಳಿದ್ದು ಸರಿಯಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ न वाऽतत्सहभावश्रुतेः ॐ (३-३-६७)**

**ಸೂತ್ರಾರ್ಥ** :- ಅಂಗದೇವತೋಪಾಸನಂ = ಅಂಗದೇವತೋಪಾಸನವು ದೇವಾನ್ಯೈಃ ನ ಕಾರ್ಯಂ = ದೇವತೆಗಳಿಂದ ಭಿನ್ನರಾದವರಿಂದ ಕಾರ್ಯವಾಗಿಲ್ಲ ಕಿಂತು ದೇವೈರೇವ = ಕಿಂತು ದೇವತೆಗಳಿಂದಲೇನೇ ಕಾರ್ಯವಾಗಿದೆ ಎಂಬುದಾಗಿ

ವಾ = ವ್ಯವಸ್ಥಿತವಿಕಲ್ಪವು ಉಂಟಾಗುತ್ತದೆ. ಕುತಃ = ಯಾಕೆ? **ಅತತ್ಸಹಭಾವಶ್ರುತೇಃ** = ತತ್ಸಹಶ್ರುತಿಯು ಇಲ್ಲವಾದ್ದರಿಂದ, ಸರ್ವಶಾಖಾಗತಗುಣೋಪಾಸನದ ಜೊತೆಗೆ ಅಂಗದೇವತೋಪಾಸನವು ಶ್ರುತವಾಗುತ್ತಿರುವುದರಿಂದ ಎಂದು ಅರ್ಥ.

## ಸಿದ್ಧಾಂತ

**ಸೂ.ರ.:– एवं च न कर्तव्य एव सर्वैर्भगवदङ्गेषु अङ्गदेवतोपसंहारः । किं नाम देवैरेव कर्तव्यः । सर्वशाखास्वनुक्तेः क्वचिदेवोक्तेः । अतो देवानां भगवदङ्गाश्रितत्वेनोपासनमुक्तमुपपन्नमिति सिद्धम् ॥**

ಭಗವದಂಗಗಳಲ್ಲಿ ಅಂಗದೇವತೋಪಸಂಹಾರವು ಎಲ್ಲ ಅಧಿಕಾರಿಗಳಿಗೂ ಕರ್ತವ್ಯವಾಗಿಲ್ಲ, ಕಿಂತು ದೇವತೆಗಳಿಗೇನೇ ಕರ್ತವ್ಯವಾಗಿದೆ. ಸರ್ವಶಾಖಾಗಳಲ್ಲಿ ಹೇಳಿಲ್ಲವಾದ್ದರಿಂದ, ಕೆಲವೆಡೆ ಮಾತ್ರ ಹೇಳಿದ್ದರಿಂದ. ಆದ್ದರಿಂದ ದೇವತೆಗಳಿಗೆ ಭಗವದಂಗಾಶ್ರಿತತ್ವೇನ ಉಪಾಸನೆಯನ್ನು ಹೇಳಿದ್ದು ಉಪಪನ್ನವಾಗಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 68

**ಸೂ.ರ.:– देवैरेव भगवदङ्गाश्रितत्वेनोपासनं कर्तव्यं नान्यैरित्येतमेवार्थं युक्तिसिद्धं श्रुत्याऽपि समर्थयत्सूत्रं पठित्वा तां श्रुतिमुदाहरति सूत्रकृत् ॥**

ಭಗವದಂಗಾಶ್ರಿತತ್ವೇನ ಉಪಾಸನವು ದೇವತೆಗಳಿಂದಲೇನೇ ಕರ್ತವ್ಯವಾಗಿದೆ, ಹೊರತು ಬೇರೆಯವರಿಂದ ಕರ್ತವ್ಯವಾಗಿಲ್ಲ ಎಂಬ ಈ ಅರ್ಥವನ್ನೇ ಯುಕ್ತಿಸಿದ್ಧವಾದದ್ದನ್ನೇ ಶ್ರುತಿಯಿಂದಲೂ ಸಹ ಸಮರ್ಥಿಸುವ ಸೂತ್ರವನ್ನು ಹೇಳಿ, ಆ ಶ್ರುತಿಯನ್ನು ಸೂತ್ರಕಾರರು ಉದಾಹರಿಸುತ್ತಾರೆ –

### ॐ दर्शनाच्च ॐ (३-३-६८)

ಸೂತ್ರಾರ್ಥ :- ದರ್ಶನಾಚ್ಚ = "ಸತ್ಯೋ ಜ್ಞಾನಃ" ಎಂಬ ಕಮಠಶ್ರುತಿಯಲ್ಲಿ ಈ ಅರ್ಥವನ್ನು ಹೇಳಿದ್ದರಿಂದಲೂ ಸಹ ದೇವತೆಗಳಿಂದಲೇನೇ ಅಂಗದೇವತೋಪಾಸನವು ಕರ್ತವ್ಯವಾಗಿದೆ, ಬೇರೆಯವರಿಂದ ಕರ್ತವ್ಯವಾಗಿಲ್ಲ.

ಸೂ.ರ.:- एवं च न केवलं युक्तेः किन्तु सत्यो ज्ञान इति श्रुतेश्चाङ्गदेवतोपसंहारो देवेतरैर्न कार्यः किन्तु देवैरेव कार्यः । अतो देवानां भगवदङ्गाश्रितत्वेनोपासनमुक्तमुपपन्नमेवेति सिद्धम् ॥

ಕೇವಲ ಯುಕ್ತಿಯಿಂದ ಮಾತ್ರವಲ್ಲ, ಕಿಂತು

"ಸತ್ಯೋ ಜ್ಞಾನಃ ಪರಮಾನಂದರೂಪ
ಆತ್ಮೇತ್ಯೇವಂ ನಿತ್ಯದೋಪಾಸನಂ ಸ್ಯಾತ್ ।
ನಾನ್ಯತ್ ಕಿಂಚಿತ್ ಸಮುಪಾಸೀತ ಧೀರಃ
ಸರ್ವೈರ್ಗುಣೈರ್ದೇವಗಣಾ ಉಪಾಸತೇ ॥"

ಎಂಬುದಾಗಿ ಕಮಠಶ್ರುತಿ ಇರುವುದರಿಂದಲೂ ಸಹ ಅಂಗದೇವತೋಪ-ಸಂಹಾರವು ದೇವೇತರರಿಂದ ಕರ್ತವ್ಯವಾಗಿಲ್ಲ, ಕಿಂತು ದೇವತೆಗಳಿಂದಲೇನೇ ಕರ್ತವ್ಯವಾಗಿದೆ ಎಂದು ತಿಳಿಯುತ್ತದೆ. ಆದ್ದರಿಂದ ದೇವತೆಗಳಿಗೆ ಭಗವದಂಗಾ-ಶ್ರಿತತ್ವೇನ ಉಪಾಸನೆಯನ್ನು ಹೇಳಿದ್ದು ಉಪಪನ್ನವೇ ಆಗಿದೆ ಎಂದು ಸಿದ್ಧವಾಗುತ್ತದೆ.

**ನ ವಾऽಧಿಕರಣವು ಮುಗಿಯಿತು.**

**ಇಲ್ಲಿಗೆ ಸೂತ್ರಾರ್ಥರತ್ನಾವಲೀ ವ್ಯಾಖ್ಯಾನಸಹಿತವಾದ ಬ್ರಹ್ಮಸೂತ್ರಗಳಲ್ಲಿ ಮೂರನೇ ಅಧ್ಯಾಯದ ಮೂರನೇ ಪಾದವು ಮುಗಿಯಿತು.**

# तृतीयाध्यायस्य चतुर्थः पादः

*ಅಧಿಕರಣ – 1*

## ಪುರುಷಾರ್ಥಾಧಿಕರಣ

### ಪಾದಸಂಗತಿ

**ಸೂ.ರ.:– ज्ञानसामर्थ्यमस्मिन्पाद उच्यते ॥**

ಜ್ಞಾನಸಾಮರ್ಥ್ಯವನ್ನು ಈ ನಾಲ್ಕನೇ ಪಾದದಲ್ಲಿ ಹೇಳುತ್ತಾರೆ.

### ಅಧಿಕರಣ ಸಂಗತಿ

**ಸೂ.ರ.:– अत्र ज्ञानस्य सर्वपुरुषार्थसाधनत्वमहिमा वर्ण्यते ।**

ಜ್ಞಾನಕ್ಕೆ ಸರ್ವಪುರುಷಾರ್ಥಸಾಧನತ್ವ ಮಹಿಮೆಯನ್ನು ವರ್ಣಿಸುತ್ತಾರೆ ಮೊದಲನೇ ಈ ಪುರುಷಾರ್ಥಾಧಿಕರಣದಲ್ಲಿ.

### ಪೂರ್ವಪಕ್ಷ

**ಸೂ.ರ.:– ननु ज्ञानं मोक्षमात्रसाधनम् । न स्वर्गादि-पुरुषार्थान्तरस्य । ज्ञानिनां मोक्षेतरपुरुषार्थे कामनाविरहितत्वात् । अकामितपुरुषार्थत्वे चानिष्टपुण्यवन्मोक्षविलम्बहेतुत्वेन पुरुषार्थत्वमेव न स्यात् । अतो ज्ञानस्य मोक्षमात्रहेतुत्वात्सर्वपुरुषार्थसाधनत्वबुध्या न तदापाद्यमिति प्राप्ते सूत्रितम् ॥**

ಜ್ಞಾನವು ಮೋಕ್ಷಕ್ಕೆ ಮಾತ್ರ ಸಾಧನವಾಗಿದೆ. ಹೊರತು ಸ್ವರ್ಗಾದಿ ಇತರ ಪುರುಷಾರ್ಥಗಳಿಗೆ ಸಾಧನವಾಗಿಲ್ಲ, ಕಾರಣ ಜ್ಞಾನಿಗಳಿಗೆ ಮೋಕ್ಷೇತರಪುರುಷಾರ್ಥ-ಗಳಲ್ಲಿ ವೈರಾಗ್ಯ ಇರುವ ಕಾರಣ ಅವರಿಗೆ ಮೋಕ್ಷೇತರಪುರುಷಾರ್ಥವಿಷಯವಾಗಿ ಇಚ್ಛಾವೇ ಉಂಟಾಗುವುದಿಲ್ಲವಾದ್ದರಿಂದ. ಮೋಕ್ಷೇತರಸ್ವರ್ಗಾದಿಪುರುಷಾರ್ಥಗಳು ಅಕಾಮಿತಪುರುಷಾರ್ಥವಾಗುವುದಾದರೆ ಅನಿಷ್ಟಪುಣ್ಯದಂತೆ ಮೋಕ್ಷವಿಲಂಬಹೇತು-ವಾಗುವುದರಿಂದ ಪುರುಷಾರ್ಥತ್ವವೇ ಇಲ್ಲದೇ ಹೋಗಬೇಕಾಗುತ್ತದೆ.

ಆದ್ದರಿಂದ ಜ್ಞಾನವು ಮೋಕ್ಷಮಾತ್ರಹೇತುವಾದದ್ದರಿಂದ ಸರ್ವಪುರುಷಾರ್ಥ-ಸಾಧನತ್ವಬುದ್ಧಿಯಿಂದ ಅದು ಆಪಾದ್ಯವಾಗಿಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ पुरुषार्थोऽतः शब्दादिति बादरायणः ॐ (३-४-१)**

**ಸೂತ್ರಾರ್ಥ :- ಪುರುಷಾರ್ಥಃ** = ಪುರುಷರಿಂದ ಅರ್ಥ್ಯಮಾನವಾದ ಯಾವ ಶುಭಫಲವಿದೆಯೋ ಅದೆಲ್ಲವೂ ಸಹ **ಅತಃ** = ಬ್ರಹ್ಮದರ್ಶನದಿಂದ ಉಂಟಾಗುತ್ತದೆ, ನ ತು ಮೋಕ್ಷಮಾತ್ರಂ = ಹೊರತು ಕೇವಲ ಮೋಕ್ಷವಷ್ಟೇ ಅಲ್ಲ, ಕುತಃ = ಯಾಕೆ ? **ಶಬ್ದಾತ್** = "ಯಂ ಯಂ ಲೋಕಂ ..." ಎಂಬುದಾಗಿ ಮುಂಡಕಶ್ರುತಿ ಇರುವುದ-ರಿಂದ **ಇತಿ** ಭಗವಾನ್ **ಬಾದರಾಯಣಃ** ಮನ್ಯತೇ = ಎಂಬುದಾಗಿ ಪೂಜ್ಯರಾದ ಬಾದರಾಯಣರು ತಿಳಿಯುತ್ತಾರೆ (ಅಭಿಪ್ರಾಯಪಡುತ್ತಾರೆ).

## ಸಿದ್ಧಾಂತ

**ಸೂ.ರ.:– एवं च ज्ञानेन यावदपेक्षितं भवति तत्सर्वमाप्यते । न तु मोक्षमात्रम् । यं यं लोकमिति श्रुतेः । न च परीक्ष्य लोकानिति (मुं. १-२-१२) प्रजहाति यदेति च श्रुतिभ्यां ज्ञानिनां कामाभावस्योक्तत्वेन कामितं ज्ञानेन भवतीत्युक्तमिति वाच्यम् । प्रायः कामाभावस्य श्रुत्या-द्यर्थत्वेन सर्वथा कामाभावस्यातदर्थत्वात् । इति बादरायणो मन्यते । अतो ज्ञानस्य सर्वपुरुषार्थसाधनत्वादत्यन्तापेक्षितं तदिति सिद्धम् ॥**

"ಯಂ ಯಂ ಲೋಕಂ ಮನಸಾ ಸಂವಿಭಾತಿ ವಿಶುದ್ಧಸತ್ವಃ ಕಾಮಯತೇ ಯಾಂಶ್ಚ ಕಾಮಾನ್ ತಂ ತಂ ಲೋಕಂ ಜಯತೇ ತಾಂಶ್ಚ ಕಾಮಾಂಸ್ತಸ್ಮಾದಾತ್ಮಜ್ಞಂ ಹ್ಯರ್ಚಯೇದ್ಭೂತಿಕಾಮಃ" (ಮುಂ.ಉ. 3-1-10)

ಎಂಬುದಾಗಿ ಶ್ರುತಿ ಇರುವುದರಿಂದ, ಅಪೇಕ್ಷಿತವಾದದ್ದು ಎಷ್ಟೆಷ್ಟಿದೆಯೋ ಅದೆಲ್ಲವೂ ಜ್ಞಾನದಿಂದ ದೊರೆಯುತ್ತದೆ. ಹೊರತು ಕೇವಲ ಮೋಕ್ಷ ಅಷ್ಟೇ ಅಲ್ಲ.

"ಪರೀಕ್ಷ್ಯ ಲೋಕಾನ್" (ಮುಂ. 1-2-12) "ಪ್ರಜಹಾತಿ ಯದಾ" ಎಂಬುದಾಗಿ ಶ್ರುತಿಗಳಿಂದ ಜ್ಞಾನಿಗಳಿಗೆ ಕಾಮಾಭಾವವನ್ನು ಹೇಳಿದ್ದರಿಂದ ಜ್ಞಾನದಿಂದ

ಕಾಮಿತವಾದದ್ದೆಲ್ಲವೂ ಸಿಗುತ್ತದೆ ಎಂದು ಹೇಳಿದ್ದು ಯುಕ್ತವಲ್ಲ ಎಂದು ಶಂಕಿಸುವುದು ಸರಿಯಲ್ಲ. ಕಾರಣ ಉದಾಹೃತಶ್ರುತಿಗಳಿಗೆ ಪ್ರಾಯಃ ಕಾಮಾಭಾವವು ಅರ್ಥ-ವಾಗಿದೆಯೇ ಹೊರತು ಸರ್ವಥಾ ಕಾಮಾಭಾವವು ಶ್ರುತ್ಯರ್ಥವಲ್ಲ ಎಂಬುದಾಗಿ ಭಗವಾನ್ ಬಾದರಾಯಣರು ಅಭಿಪ್ರಾಯಪಡುತ್ತಾರೆ.

ಆದ್ದರಿಂದ ಜ್ಞಾನವು ಸರ್ವಪುರುಷಾರ್ಥಸಾಧನವಾದ್ದರಿಂದ ಅದು ಅತ್ಯಂತಾ-ಪೇಕ್ಷಿತವಾಗಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 2

**ಸೂ.ರ.:– ननु कर्मैव पुरुषार्थसाधनं न ज्ञानमित्याक्षिप्य समादध-त्सूत्रमाह ॥**

ಕರ್ಮವೇ ಪುರುಷಾರ್ಥಸಾಧನವಾಗಿದೆ ಹೊರತು ಜ್ಞಾನ ಅಲ್ಲ ಎಂಬುದಾಗಿ ಆಕ್ಷೇಪ ಮಾಡಿಕೊಂಡು ಸಮಾಧಾನ ಹೇಳುವ ಸೂತ್ರವನ್ನು ಹೇಳುತ್ತಾರೆ -

**ॐ शेषत्वात्पुरुषार्थवादो यथाऽन्येष्विति जैमिनिः ॐ (३-४-२)**

**ಸೂತ್ರಾರ್ಥ :- ಶೇಷತ್ವಾತ್** = ಜ್ಞಾನವು ಕರ್ಮಾಂಗವಾದ ನಿಮಿತ್ತದಿಂದಲೇ **ಪುರುಷಾರ್ಥವಾದಃ** = 'ಯಂ ಯಂ' (ಮುಂ. 3-1-10) ಎಂಬುದಾಗಿ ಶ್ರುತಿಯಲ್ಲಿ ಜ್ಞಾನಕ್ಕೆ ಸ್ವರ್ಗಾದಿಪುರುಷಾರ್ಥಸಾಧನತ್ವವಾದವು, ನ ತು ಮೋಕ್ಷ ಇವ ಸ್ವರ್ಗಾದೌ ಪ್ರಾಧಾನ್ಯಾತ್ = ಹೊರತು ಮೋಕ್ಷದ ವಿಚಾರದಲ್ಲಿ ಪ್ರಾಧಾನ್ಯ ಇರುವಂತೆ ಸ್ವರ್ಗಾದಿವಿಚಾರದಲ್ಲಿ ಪ್ರಾಧಾನ್ಯ ಇರುವುದರಿಂದ ಎಂದಲ್ಲ

ತತ್ ಕಥಂ = ಅದು ಹೇಗೆ? **ಯಥಾ ಅನ್ಯೇಷು** = ಸ್ವರ್ಗಸಾಧನಕರ್ಮಗಳಿಗೆ ಶೇಷಭೂತವಾದ ಧನಾದಿಗಳ ವಿಚಾರದಲ್ಲಿ ಯಥಾ ಸ್ವರ್ಗಂ ಧನಾದಿತಿ ಪ್ರಾಧಾನ್ಯ-ವಾದಃ = ಯಾವ ರೀತಿಯಾಗಿ "ಸ್ವರ್ಗವು ಧನದಿಂದ" ಎಂಬುದಾಗಿ ಪ್ರಾಧಾನ್ಯ-ವಾದವು ಉಂಟೋ ತಥಾ = ಅದೇ ರೀತಿಯಾಗಿ **ಇತಿ ಜೈಮಿನಿಃ** ಆಚಾರ್ಯೋ ಮನ್ಯತೇ = ಎಂಬುದಾಗಿ ಜೈಮಿನಿ ಆಚಾರ್ಯರು ಅಭಿಪ್ರಾಯಪಡುತ್ತಾರೆ.

**ಸೂ.ರ.:– एवं च ब्रह्मदर्शनस्य मोक्षसाधनत्वसद्भावेन स्वर्गादिषु साधनत्वाभावात् । यं यं लोकमिति श्रुतेः कर्मणैव सिद्ध्यति**

स्वर्गेऽतिशयाधायकत्वरूपतच्छेषार्थत्वेन पुरुषार्थवादाविरोधात् । इति जैमिनिराचार्यो मन्यते । अतो ज्ञानस्य सर्वपुरुषार्थसाधनत्वमिति सिद्धम् ॥

ಬ್ರಹ್ಮದರ್ಶನಕ್ಕೆ ಮೋಕ್ಷಸಾಧನತ್ವ ಇರುವುದರಿಂದ, ಸ್ವರ್ಗಾದಿಗಳ ವಿಚಾರದಲ್ಲಿ ಸಾಧನತ್ವವು ಇಲ್ಲವಾದ್ದರಿಂದ, "ಯಂ ಯಂ ಲೋಕಂ..." ಎಂಬ ಶ್ರುತಿಯು ಕರ್ಮದಿಂದಲೇ ಮೋಕ್ಷವು ಸಿದ್ಧಿಸುತ್ತಿರಲು ಅತಿಶಯಾಧಾಯಕತ್ವರೂಪ ತಚ್ಛೇ-ಷಾರ್ಥ ಉಳ್ಳದ್ದಾದ್ದರಿಂದ ಪುರುಷಾರ್ಥವಾದವಿರೋಧ ಬರುವುದಿಲ್ಲ ಎಂಬುದಾಗಿ ಜೈಮಿನಿ ಆಚಾರ್ಯರು ಅಭಿಪ್ರಾಯಪಡುತ್ತಾರೆ.

ಆದ್ದರಿಂದ ಜ್ಞಾನವು ಸರ್ವಪುರುಷಾರ್ಥಸಾಧನವಾಗಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 3

ಸೂ.ರ.:– ननु श्रुतिबलात्ज्ञानस्यैव सर्वपुरुषार्थसाधनत्वं युक्तम् । ततश्च ज्ञानस्यैव सर्वपुरुषार्थसाधनत्वेन कुतः श्रुतेरर्थान्तरपरिकल्पनेत्याशङ्कां पराकुर्वत्सूत्रमुपन्यस्यति ॥

ಶ್ರುತಿಬಲದಿಂದಾಗಿ ಜ್ಞಾನಕ್ಕೇನೇ ಸರ್ವಪುರುಷಾರ್ಥಸಾಧನತ್ವವನ್ನು ಅಂಗೀ-ಕರಿಸುವುದು ಯುಕ್ತವಾಗುತ್ತದೆ. ಆದ್ದರಿಂದ ಜ್ಞಾನವೇ ಸರ್ವಪುರುಷಾರ್ಥಸಾಧನ-ವಾದ್ದರಿಂದ ಯಾಕೆ ಶ್ರುತಿಗೆ ಅರ್ಥಾಂತರಪರಿಕಲ್ಪನಾ ಮಾಡಬೇಕು? ಎಂಬ ಶಂಕೆಯನ್ನು ನಿರಾಕರಿಸುವ ಸೂತ್ರವನ್ನು ಹೇಳುತ್ತಾರೆ –

### ॐ आचारदर्शनात् ॐ (३-४-३)

**ಸೂತ್ರಾರ್ಥ :- ಆಚಾರದರ್ಶನಾತ್** = "ಯಜ್ಞೇನ ಯಜ್ಞಮಯಜಂತ ದೇವಾಃ" (ತೈ.ಆ. 3-12-7) ಎಂಬುದಾಗಿ ದೇವತೆಗಳಿಗೂ ಸಹ ಕರ್ಮಾನುಷ್ಠಾನವು ಶ್ರುತವಾಗುತ್ತಿರುವುದರಿಂದ, ಜ್ಞಾನದಿಂದಲೇ ಸರ್ವಪುರುಷಾರ್ಥಪ್ರಾಪ್ತಿ ಇಲ್ಲ.

ಸೂ.ರ.:– एवं च ज्ञानिनामेव न तु ज्ञानरहितानां देवादित्वप्राप्तानां कर्मानुष्ठानस्य श्रवणात् । देवादिकर्मानुष्ठानवैयर्थ्यप्रसङ्गात् । अतो न ज्ञानादेव सर्वपुरुषार्थप्राप्तिरिति सिद्धम् ॥

"ನೈವ ದೇವಪದಂ ಪ್ರಾಪ್ತಾ ಬ್ರಹ್ಮದರ್ಶನವರ್ಜಿತಾಃ"

ಎಂಬುದಾಗಿ ವಚನ ಇರುವುದರಿಂದ ದೇವತೆಗಳು ಜ್ಞಾನಿಗಳಾಗಿದ್ದಾರೆ (ಅಪರೋಕ್ಷಜ್ಞಾನಿಗಳಾಗಿದ್ದಾರೆ). ಅಂತಹ ಜ್ಞಾನಿಗಳಿಗೂ ಸಹ "ಯಜ್ಞೇನ ಯಜ್ಞಮಯಜಂತ ದೇವಾಃ" ಇತ್ಯಾದಿಗಳಲ್ಲಿ ಕರ್ಮಾನುಷ್ಠಾನವು (ಕಾಣುತ್ತಿದೆ) ಶ್ರುತವಾಗುತ್ತಿದೆ. ಹೀಗಾಗಿ ಜ್ಞಾನವೇ ಸರ್ವಪುರುಷಾರ್ಥಸಾಧನವಾಗುವುದಾದರೆ ದೇವತೆಗಳ ಕರ್ಮಾನುಷ್ಠಾನವು ವ್ಯರ್ಥವಾಗಬೇಕಾಗುತ್ತದೆ.

ಆದ್ದರಿಂದ ಜ್ಞಾನದಿಂದಲೇ ಸರ್ವಪುರುಷಾರ್ಥಪ್ರಾಪ್ತಿ ಅಲ್ಲ ಎಂದು ಸಿದ್ಧವಾಗುತ್ತದೆ.

## ಸೂತ್ರ - 4

ಸೂ.ರ.:- **नन्वेवमस्तु ज्ञानकर्मणोरुभयोरपि स्वर्गसाधनत्वम् । ज्ञानस्य कर्मशेषत्वं तु कुत इत्याशङ्कां परिहरत्सूत्रं पठति ॥**

ಹಾಗಾದರೆ ಜ್ಞಾನ ಹಾಗೂ ಕರ್ಮ ಎರಡಕ್ಕೂ ಸ್ವರ್ಗಸಾಧನತ್ವ ಇರಲಿ. ಜ್ಞಾನಕ್ಕೆ ಕರ್ಮಶೇಷತ್ವ ಯಾಕೆ? ಎಂಬ ಶಂಕೆಯನ್ನು ಪರಿಹರಿಸುವ ಸೂತ್ರವನ್ನು ಹೇಳುತ್ತಾರೆ-

**ॐ तच्छ्रुतेः ॐ (३-४-४)**

**ಸೂತ್ರಾರ್ಥ :- ತಚ್ಛ್ರುತೇಃ** = "ಯದೇವ ವಿದ್ಯಯಾ ಕರೋತಿ ಶ್ರದ್ಧಯಾ ಉಪನಿಷದಾ ತದೇವ ವೀರ್ಯವತ್ತರಂ ಭವತಿ" ಎಂಬುದಾಗಿ ಜ್ಞಾನಕ್ಕೆ ಕರ್ಮ-ಶೇಷತ್ವವನ್ನು ಹೇಳುವ ಶ್ರುತಿ ಇರುವುದರಿಂದ, ಜ್ಞಾನವು ಕರ್ಮಶೇಷವೇ ಹೊರತು ಪ್ರಧಾನವಲ್ಲ.

ಸೂ.ರ.:- **एवं च निर्दिष्टा श्रुतिर्बादरायणमते मानुषविषया तत्कर्तृकज्ञानशेषत्ववादिनी प्रतिबन्धकयुक्तदेवताविषया चेतीत्यभि-प्रायकत्वात् । ज्ञानिना ज्ञानेन कृतकर्मणोऽधिकफलसाधनत्वात् । अतः कर्मशेषत्वश्रुतेर्न ज्ञानं प्रधानमिति सिद्धम् ॥**

ನಿರ್ದಿಷ್ಟವಾದ ಶ್ರುತಿಯು ("ಯದೇವ ವಿದ್ಯಯಾ ಕರೋತಿ" ಎಂಬ ಶ್ರುತಿಯು) ಬಾದರಾಯಣಮತದಲ್ಲಿ ಮಾನುಷವಿಷಯಕವಾಗಿದೆ, ತತ್ಕರ್ತೃಕ

ಜ್ಞಾನಶೇಷತ್ವವಾದಿನಿಯಾಗಿದೆ, ಪ್ರತಿಬಂಧಕಯುಕ್ತದೇವತಾವಿಷಯಕವೂ ಆಗಿದೆ ಎಂದು ಅಭಿಪ್ರಾಯ ಇರುವುದರಿಂದ ಜ್ಞಾನಿಯಾದವನು ಜ್ಞಾನಪೂರ್ವಕವಾಗಿ ಮಾಡಿದ ಕರ್ಮವು ಅಧಿಕಫಲಸಾಧನವಾಗಿದೆ.

ಆದ್ದರಿಂದ ಕರ್ಮಶೇಷತ್ವ ಶ್ರುತಿ ಇರುವುದರಿಂದ ಜ್ಞಾನವು ಕರ್ಮಶೇಷವೇ ಹೊರತು ಪ್ರಧಾನ ಅಲ್ಲ ಎಂದು ಸಿದ್ಧವಾಗುತ್ತದೆ.

## ಸೂತ್ರ - 5

**ಸೂ.ರ.:- ननु यथा ज्ञानस्य यं यमिति श्रुतमपि प्राधान्यं न स्वीक्रियते । किन्तु शेषत्वमेव । तथा यदेव विद्ययेति श्रुतमपि कर्मणः प्राधान्यं नाङ्गीकार्यम् । किं नाम ज्ञानशेषत्वं कर्मणः साम्यं वा भवेत् । विशेषप्रमाणाभावादित्याशङ्कां पराकुर्वत्सूत्रमाह ॥**

ಯಾವ ರೀತಿಯಾಗಿ ಜ್ಞಾನಕ್ಕೆ 'ಯಂ ಯಂ ಲೋಕಂ' ಎಂಬುದಾಗಿ ಶ್ರುತವಾಗಿದ್ದರೂ ಸಹ ಪ್ರಾಧಾನ್ಯವು ಸ್ವೀಕರಿಸಲ್ಪಡುವುದಿಲ್ಲವೋ ಅದೇ ರೀತಿಯಾಗಿ 'ಯದೇವ ವಿದ್ಯಯಾ ಕರೋತಿ' ಎಂಬುದಾಗಿ ಕರ್ಮಕ್ಕೆ ಪ್ರಾಧಾನ್ಯವು ಶ್ರುತ-ವಾಗಿದ್ದರೂ ಸಹ ಅಂಗೀಕಾರ್ಯವಾಗಿಲ್ಲ. ಕಿಂ ನಾಮ ಕರ್ಮಕ್ಕೆ ಜ್ಞಾನಶೇಷತ್ವ-ವಾಗಲೀ ಅಥವಾ ಸಾಮ್ಯವಾಗಲೀ ಉಂಟಾಗಲಿ. ವಿಶೇಷಪ್ರಮಾಣ ಇಲ್ಲವಾದ್ದರಿಂದ ಎಂಬುದಾಗಿ ಆಕ್ಷೇಪ ಬಂದರೆ, ಪರಿಹರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

### ॐ समन्वारम्भणात् ॐ (३-४-५)

**ಸೂತ್ರಾರ್ಥ** :- ನ ಕರ್ಮಣಃ ಜ್ಞಾನಶೇಷತ್ವಂ ತತ್ಸಾಮ್ಯಂ ಚ = ಕರ್ಮಕ್ಕೆ ಜ್ಞಾನಶೇಷತ್ವವಾಗಲೀ ಅಥವಾ ತತ್ಸಾಮ್ಯವಾಗಲೀ ಇಲ್ಲ. ಕಿಂತು ಪ್ರಾಧಾನ್ಯಂ = ಕಿಂತು ಪ್ರಾಧಾನ್ಯವೇ ಇದೆ. ಕುತಃ = ಏಕೆ? **ಸಮನ್ವಾರಂಭಣಾತ್** = "ಕರ್ಮೈವ ದೇಹಂ ದೈವಿಕಂ ಮಾನುಷಂ ವಾಽಪ್ಯನ್ವಾರಭೇನ್ನಾಪರಸ್ತತ್ರ ಹೇತುಃ । ಭೋಗಾಂಸ್ತದೀಯಾಂಶ್ಚ ಯಥಾವಿಭಾಗಂ ದದಾತಿ ಕರ್ಮೈವ ಶುಭಾಶುಭಂ ಯತ್ ॥" (ಮಾಠರ ಶ್ರುತಿ) ಎಂಬುದಾಗಿ ಪ್ರಾಧಾನ್ಯೇನ ಸ್ವರ್ಗಾದ್ಯಾರಂಭಕತ್ವಶ್ರುತಿ ಇರುವುದರಿಂದ.

**ಸೂ.ರ.:- एवं च ज्ञानोत्तरकालीनं शुभाशुभं कर्मैव मनुष्याणामेव देवलोके ज्योतिर्मयदेहं मानुषं वा देहं प्रतिबन्धकयुक्तदेवानां चोभयं**

देहमन्वारभेत् । कर्मातिरिक्तज्ञानादिः शरीराद्युत्पादने प्राधान्येन कारणं न भवति । किन्तु कर्मशेषतयैव कारणं भवति । अतो न कर्मणो ज्ञानशेषत्वं किन्तु प्राधान्यमिति सिद्धम् ॥

ಜ್ಞಾನೋತ್ತರಕಾಲದಲ್ಲಿ ಆಚರಿಸಿದ ಶುಭಾ-ಅಶುಭ ಕರ್ಮವೇ ಮನುಷ್ಯರಿಗೇ ದೇವಲೋಕದಲ್ಲಿ ಜ್ಯೋತಿರ್ಮಯದೇಹವನ್ನು ಅಥವಾ ಮಾನುಷದೇಹವನ್ನು ಪ್ರತಿಬಂಧಕಯುಕ್ತದೇವತೆಗಳಿಗೆ ಉಭಯದೇಹಗಳನ್ನು ಆರಂಭಿಸುತ್ತದೆ. ಕರ್ಮಾತಿ-ರಿಕ್ತವಾದ ಜ್ಞಾನಾದಿಗಳು ಶರೀರಾದ್ಯುತ್ಪಾದನದಲ್ಲಿ ಪ್ರಾಧಾನ್ಯೇನ ಕಾರಣವಾಗುವು-ದಿಲ್ಲ. ಕಿಂತು ಕರ್ಮಶೇಷವಾಗಿಯೇನೇ ಕಾರಣವಾಗುತ್ತದೆ. ಆದ್ದರಿಂದ ಕರ್ಮಕ್ಕೆ ಜ್ಞಾನಶೇಷತ್ವ ಇಲ್ಲ, ಕಿಂತು ಪ್ರಾಧಾನ್ಯವಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 6

ಸೂ.ರ.:- ननु तथाऽपि न ज्ञानस्य कर्मशेषत्वं युक्तम् । किन्तु स्वयमेव पुरुषार्थहेतुः । कस्मात् । कर्मणां फलाभावात् । फलाभावेऽप्याचारस्तु मुक्तवल्लीलया भवेदित्याशङ्कां परिहरत्सूत्रं व्याचष्टे ॥

ಆದರೂ ಸಹ ಜ್ಞಾನಕ್ಕೆ ಕರ್ಮಶೇಷತ್ವವನ್ನು ಹೇಳುವುದು ಯುಕ್ತವಲ್ಲ. ಕಿಂತು ಜ್ಞಾನವು ಸ್ವಯಮೇವ ಪುರುಷಾರ್ಥಹೇತುವಾಗಿದೆ. ಯಾಕೆ? ಕರ್ಮಗಳಿಗೆ ಫಲವಿಲ್ಲವಾದ್ದರಿಂದ. ಫಲವು ಇಲ್ಲದಿದ್ದರೂ ಸಹ ಆಚಾರವು ಮುಕ್ತರಂತೆ ಲೀಲಯಾ ಉಂಟಾಗುತ್ತದೆ ಎಂದು ಶಂಕೆ ಬಂದರೆ, ಅದನ್ನು ಪರಿಹರಿಸುವುದಕ್ಕಾಗಿ ಸೂತ್ರವನ್ನು ವ್ಯಾಖ್ಯಾನಿಸುತ್ತಾರೆ -

### ॐ तद्वतो विधानात् ॐ (३-४-६)

ಸೂತ್ರಾರ್ಥ :- ತದ್ವತಃ ವಿಧಾನಾತ್ = "ಜ್ಞಾನೀ ಚ ಕರ್ಮಾಣಿ" ಎಂಬು-ದಾಗಿ ಕಮಠಶ್ರುತಿಯಲ್ಲಿ ಕರ್ಮವನ್ನು ವಿಧಾನ ಮಾಡಿದ್ದರಿಂದ ಜ್ಞಾನಿಗಳ ಕರ್ಮವು ಲೀಲಾರೂಪವಲ್ಲ.

ಸೂ.ರ.:- एवं च ज्ञानी च कर्माणीति ज्ञानिनोऽपि कर्मविधानेन फलसिद्धेः । ज्ञानिकृतकर्मफलाभावश्रुतिस्तु दुष्कर्मविषया । एवमेवं-

**विदिति (सौपर्णश्रुति.) वचनात् । अतो ज्ञानिकृतकर्म न लीलारूपमिति सिद्धम् ॥**

"ಜ್ಞಾನೀ ಚ ಕರ್ಮಾಣಿ ಸದೋದಿತಾನಿ ಕುರ್ಯಾದಕಾಮಃ ಸತತಂ ಭವೇತ್"

ಎಂಬುದಾಗಿ ಜ್ಞಾನಿಯಾದವನಿಗೂ ಸಹ ಕರ್ಮವನ್ನು ವಿಧಾನ ಮಾಡಿದ್ದರಿಂದ ಕರ್ಮಗಳಿಗೆ ಫಲವು ಸಿದ್ಧಿಸುತ್ತದೆ. ಇನ್ನು ಜ್ಞಾನಿಕೃತಕರ್ಮಫಲಾಭಾವಶ್ರುತಿಯಾದರೂ ಸಹ ದುಷ್ಕರ್ಮವಿಷಯಕವಾಗಿದೆ. "ಏವಮೇವಂ ವಿತ್" ಎಂದು ವಚನ (ಸೌಪರ್ಣ ಶ್ರುತಿ) ಇರುವುದರಿಂದ. ಆದ್ದರಿಂದ ಜ್ಞಾನಿಕೃತಕರ್ಮವು ಲೀಲಾರೂಪವಲ್ಲ ಎಂದು ಸಿದ್ಧವಾಗುತ್ತದೆ.

## ಸೂತ್ರ - 7

**ಸೂ.ರ.:– इतश्च ज्ञानिकृतकर्म न लीलामात्रमित्यभिदधत्सूत्रमुपन्यस्यति ॥**

ಈ ಕಾರಣಕ್ಕಾಗಿಯೂ ಸಹ ಜ್ಞಾನಿಕೃತವಾದ ಕರ್ಮವು ಲೀಲಾಮಾತ್ರವಲ್ಲ ಎಂದು ಪ್ರತಿಪಾದಿಸುವ ಸೂತ್ರವನ್ನು ಹೇಳುತ್ತಾರೆ -

**ॐ नियमाच्च ॐ (३-४-७)**

**ಸೂತ್ರಾರ್ಥ :- ನಿಯಮಾಚ್ಚ** = ಜ್ಞಾನಿಯಾದವನಿಗೂ ಸಹ ಕರ್ಮಾನುಷ್ಠಾನ ಮಾಡದಿದ್ದ ಪಕ್ಷದಲ್ಲಿ ಪ್ರತ್ಯವಾಯವು "ಕುರ್ವನ್ ..." (ಈ.2) ಎಂಬುದಾಗಿ ಶ್ರುತವಾಗುತ್ತಿರುವುದರಿಂದಲೂ ಸಹ ಜ್ಞಾನಿಕೃತ ಕರ್ಮವು ಲೀಲಾರೂಪವಲ್ಲ.

**ಸೂ.ರ.:– एवं च कर्मकरणेन पापलेपाभावेन भगवत्पूजात्वेन कर्मकरणस्यावश्यकत्वात् । अपि च कर्माकरणे एवं त्वयीति (ई.२) वचनात्प्रत्यवायश्रवणात् । अतो ज्ञानिकर्म न लीलामात्रमिति सिद्धम् ॥**

ಜ್ಞಾನಿಯಾದವನಿಗೂ ಸಹ ಕರ್ಮಾನುಷ್ಠಾನ ಮಾಡುವುದರಿಂದ ಪಾಪಲೇಪ ಆಗುವುದಿಲ್ಲವಾದ್ದರಿಂದ ಭಗವತ್ಪೂಜಾರೂಪವಾಗಿ ಕರ್ಮಾನುಷ್ಠಾನ ಮಾಡುವುದು ಆವಶ್ಯಕವಾಗಿದೆ ಮತ್ತು ಕರ್ಮಾನುಷ್ಠಾನ ಮಾಡದಿದ್ದರೆ "ಏವಂ ತ್ವಯಿ

ನಾನ್ಯಥೇತೋಽಸ್ತಿ ನ ಕರ್ಮ ಲಿಪ್ಯತೇ ನರೇ'' ಎಂಬುದಾಗಿ ವಚನ ಇರುವುದರಿಂದ ಪ್ರತ್ಯವಾಯವು ಶ್ರುತವಾಗುತ್ತಿರುವುದರಿಂದ. ಆದ್ದರಿಂದ ಜ್ಞಾನಿಕೃತವಾದ ಕರ್ಮವು ಲೀಲಾಮಾತ್ರವಲ್ಲ ಎಂದು ಸಿದ್ಧವಾಗುತ್ತದೆ.

## ಸೂತ್ರ - 8

**ಸೂ.ರ.:– एवं जैमिनिमतावलम्बेन चोदिते स्वमतं समर्थयत्सूत्रमुपन्यस्यति ॥**

ಈ ರೀತಿಯಾಗಿ ಜೈಮಿನಿಮತವನ್ನು ಅವಲಂಬಿಸಿ ವಿಷಯವನ್ನು ನಿರೂಪಿಸಿದಾಗ ಸ್ವಮತವನ್ನು ಸಮರ್ಥಿಸುವ ಸೂತ್ರವನ್ನು ಹೇಳುತ್ತಾರೆ –

**ॐ अधिकोपदेशात्तु बादरायणस्यैवं तद्दर्शनात् ॐ (३-४-८)**

ಸೂತ್ರಾರ್ಥ :- (ತು ಶಬ್ದವು ವ್ಯಾಸಮತವಿಶೇಷದ್ಯೋತಕವಾಗಿದೆ.) **ಬಾದರಾಯಣಸ್ಯ ತು ಏವಂ** = ಜ್ಞಾನದಿಂದಲೇ ಸರ್ವಪುರುಷಾರ್ಥಪ್ರಾಪ್ತಿ ಆಗುವುದು ಎಂಬುದಾಗಿ ಬಾದರಾಯಣರ ಮತವಾಗಿದೆ. ಕುತಃ = ಏಕೆ? **ಅಧಿಕೋಪದೇಶಾತ್** ಅಧಿಕಸ್ಯ = ಜ್ಞಾನಜನ್ಯವಾದ ಮೋಕ್ಷದಲ್ಲಿ ಕರ್ಮಾಧೀನವಾದ ಅತಿಶಯವನ್ನು ಉಪದೇಶಾತ್ = ''ಜ್ಞಾನಾದೇವ'' ಎಂಬ ಕೌಂಠರವ್ಯಶ್ರುತಿಯಲ್ಲಿ ಹೇಳಿದ್ದರಿಂದ. ಕಿಂಚ = ಮತ್ತು **ತದ್ದರ್ಶನಾತ್ ಚ** = ತಸ್ಯ ಜ್ಞಾನಜನ್ಯಫಲದಲ್ಲಿ ಕರ್ಮಜನ್ಯ ಅತಿಶಯವು ರಾಜಸೂಯಾದಿಯಾಗಗಳಿಂದ ಯುಧಿಷ್ಠಿರಾದಿಗಳಲ್ಲಿ ಉಪಲಬ್ಧವೂ ಆಗಿರುವುದರಿಂದ.

ಇಲ್ಲಿ ವ್ಯಾಸರ ಮತವು ದೇವತಾನಿಷ್ಠಜ್ಞಾನವಿಷಯವಾಗಿದೆ. ಜೈಮಿನ್ಯಾದಿಗಳ ಮತವು ತದನ್ಯಮನುಷ್ಯನಿಷ್ಠಜ್ಞಾನವಿಷಯವಾಗಿದೆ. ಆದ್ದರಿಂದ ವಿರೋಧವಿಲ್ಲ ಎಂದು ತಿಳಿಯುವುದು.

**ಸೂ.ರ.:– एवं च ज्ञानस्यैव सर्वपुरुषार्थसाधनत्वात् । ज्ञानादेवेति श्रुतौ तथाभिधानात् । युधिष्ठिरादीनां ज्ञानेनैव सिद्ध्यति पुरुषार्थे कर्मणाऽतिशयदर्शनात् । अतो ज्ञानादेव देवानां स्वर्गादिफलस्य कर्मणस्तु तत्रातिशयाधायकत्वेन ज्ञानशेषत्वस्य सिद्धत्वेनाचारादे-**

**वैयर्थ्याभावाद्विध्यनुपपत्तेरभावात् । ज्ञानादेव सर्वपुरुषार्थप्राप्तिरिति बादरायणमतस्य सद्भावात् । अतो ज्ञानस्य सर्वपुरुषार्थसाधन-त्वेनात्यन्तापेक्षितं तदिति सिद्धम् ॥**

ಜ್ಞಾನವೇ ಸರ್ವಪುರುಷಾರ್ಥಸಾಧನವಾಗಿದೆ.

"ಜ್ಞಾನಾದೇವ ಸ್ವರ್ಗೋ ಜ್ಞಾನಾದೇವಾಪವರ್ಗೋ ಜ್ಞಾನಾದೇವ ಸರ್ವೇ ಕಾಮಾಃ ಸಂಪದ್ಯತೇ । ಅಥಾಪಿ ಯಥಾ ಯಥಾ ಕರ್ಮ ಕುರುತೇ ತಥಾ ತಥಾऽಧಿಕೋ ಭವತಿ ॥"

ಎಂಬುದಾಗಿ ಕೌಂಠರವ್ಯಶ್ರುತಿಯಲ್ಲಿ ಹಾಗೆ ಹೇಳಿದ್ದರಿಂದ ಯುಧಿಷ್ಠಿರಾದಿಗಳಿಗೆ ಜ್ಞಾನದಿಂದಲೇ ಪುರುಷಾರ್ಥವು ಸಿದ್ಧಿಸುತ್ತಿರಲು ಕರ್ಮದಿಂದ ಅತಿಶಯ ಕಂಡಿದ್ದರಿಂದ.

ಆದ್ದರಿಂದ ದೇವತೆಗಳಿಗೆ ಜ್ಞಾನದಿಂದಲೇ ಸರ್ವಪುರುಷಾರ್ಥಪ್ರಾಪ್ತಿ. ಸ್ವರ್ಗಾದಿಫಲಕವಾದ ಕರ್ಮವಾದರೂ ತತ್ರ ಅತಿಶಯಾಧಾಯಕವಾಗುವುದರಿಂದ ಜ್ಞಾನಶೇಷತ್ವವು ಸಿದ್ಧಿಸುವುದರಿಂದ ಆಚಾರಾದಿಗಳಿಗೆ ವೈಯರ್ಥ್ಯ ಇಲ್ಲದ ಕಾರಣ ವಿಧ್ಯನುಪಪತ್ತಿ ಇಲ್ಲ. ಜ್ಞಾನದಿಂದಲೇ ಸರ್ವಪುರುಷಾರ್ಥಪ್ರಾಪ್ತಿಯಾಗುತ್ತದೆ ಎಂಬುದಾಗಿ ಬಾದರಾಯಣರ ಮತ ಇರುವುದರಿಂದ.

ಆದ್ದರಿಂದ ಜ್ಞಾನವು ಸರ್ವಪುರುಷಾರ್ಥಸಾಧನವಾದ್ದರಿಂದ ಅದು ಅತ್ಯಂತಾಪೇಕ್ಷಿತವಾಗಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 9

**ಸೂ.ರ.:- नन्वस्तु ज्ञानस्य सर्वपुरुपार्थहेतुत्वं कर्मणस्तु तच्छो-षत्वम् । शेपत्वं च न ज्ञानफलेऽतिशयाधायकत्वेन । नापि तदुत्पत्त्युप-योगित्वेन तदुत्तरभावित्वात् । किन्तु ज्ञानेन फले साधयितव्ये सामर्थ्य-सम्पादकतया ज्ञानेऽतिशयाधायकत्वेनेति किं न स्यादित्याशङ्कां परिहरत्सूत्रं पठति ॥**

ಜ್ಞಾನವು ಸರ್ವಪುರುಷಾರ್ಥಹೇತುವಾಗಲಿ. ಕರ್ಮವು ಅದಕ್ಕೆ ಶೇಷವಾಗಲಿ. ಆದರೆ ಜ್ಞಾನಫಲದಲ್ಲಿ ಅತಿಶಯಾಧಾಯಕವಾದ್ದರಿಂದ ಶೇಷತ್ವವಲ್ಲ. ಅಥವಾ ತದುತ್ಪತ್ತಿಗೆ ಉಪಯೋಗಿಯಾಗುವುದರಿಂದ ತದುತ್ತರಭಾವಿಯಾಗಿದೆ ಎಂಬ ಕಾರಣಕ್ಕೂ ಅಲ್ಲ. ಕಿಂತು ಜ್ಞಾನದಿಂದ ಫಲವು ಸಾಧಯಿತವ್ಯವಾಗುತ್ತಿರಲು ಸಾಮರ್ಥ್ಯಸಂಪಾದಕತಯಾ ಜ್ಞಾನದಲ್ಲಿ ಅತಿಶಯಾಧಾಯಕವಾಗುವುದರಿಂದ ಶೇಷತ್ವ ಇದೆ ಎಂದೇಕೆ ಆಗಬಾರದು? ಎಂಬ ಶಂಕೆಯನ್ನು ಪರಿಹರಿಸುವ ಸೂತ್ರವನ್ನು ಹೇಳುತ್ತಾರೆ -

## ॐ तुल्यं तु दर्शनम् ॐ (३-४-९)

**ಸೂತ್ರಾರ್ಥ** :- ಜ್ಞಾನಿಕರ್ಮ ನ ಜ್ಞಾನೇಽತಿಶಯಕೃತ್ = ಜ್ಞಾನಿಕರ್ಮವು ಜ್ಞಾನದಲ್ಲಿ ಅತಿಶಯಾಧಾಯಕವಾಗುವುದಿಲ್ಲ. ಕಿಂತು ಜ್ಞಾನಫಲ ಏವ = ಕಿಂತು ಜ್ಞಾನಫಲದಲ್ಲಿಯೇ ಅತಿಶಯಾಧಾಯಕವಾಗುತ್ತದೆ. ಕುತಃ = ಏಕೆ? ಯತಃ = ಯಾವ ಕಾರಣ **ದರ್ಶನಂ** = ಜ್ಞಾನವು **ತುಲ್ಯಂ ತು** = ಕರ್ಮಕರಣಪಕ್ಷ - ಕರ್ಮಾಕರಣಪಕ್ಷ ಎರಡರಲ್ಲಿಯೂ ಸಮಾನವೇ ಆಗಿದೆಯೋ ಅತಃ = ಆ ಕಾರಣ.

**ಸೂ.ರ.:– एवं च ज्ञानिकर्म न ज्ञानेऽतिशयाधायकम् । किन्तु ज्ञानफल एव । कर्मकरणाकरणयोर्ज्ञानस्य समत्वात् । अन्यथा कर्माभावे ज्ञानस्य पुरुषार्थहेतुत्वं न स्यात् । नापि जैमिनिमतस्याप्रामाण्यम् । तस्य भगवन्मतैकदेशत्वेन प्रामाण्यात् । न च विसंवादिद्वयोः प्रामाण्यायोगः । भगवन्मतस्य देवताविषयत्वात् । जैमिनिमतस्य प्रतिबद्धदेवताविषयत्वेन मानुषविषयत्वेन वाऽविरोधात् । अतो ज्ञानस्य सर्वपुरुषार्थसाधनत्वादत्यन्तापेक्षितं तदिति सिद्धम् ॥**

ಜ್ಞಾನಿಕರ್ಮವು ಜ್ಞಾನದಲ್ಲಿ ಅತಿಶಯಾಧಾಯಕವಾಗುವುದಿಲ್ಲ. ಕಿಂತು ಜ್ಞಾನಫಲದಲ್ಲಿಯೇ ಅತಿಶಯಾಧಾಯಕವಾಗುತ್ತದೆ. ಕಾರಣ ಕರ್ಮಕರಣಪಕ್ಷ ಹಾಗೂ ಕರ್ಮಾಕರಣಪಕ್ಷ ಎರಡರಲ್ಲಿಯೂ ಜ್ಞಾನವು ಸಮವಾದ್ದರಿಂದ. ಅನ್ಯಥಾ ಕರ್ಮ ಇಲ್ಲದೇ ಹೋದರೆ ಜ್ಞಾನಕ್ಕೆ ಪುರುಷಾರ್ಥಹೇತುತ್ವವು ಉಪಪನ್ನವಾಗುವುದಿಲ್ಲ.

ಮತ್ತು ಜೈಮಿನಿಮತಕ್ಕೆ ಅಪ್ರಾಮಾಣ್ಯವೂ ಬರುವುದಿಲ್ಲ. ಕಾರಣ ಜೈಮಿನಿ-ಮತವು ವ್ಯಾಸಮತ ಏಕದೇಶವಾದ್ದರಿಂದ ಪ್ರಾಮಾಣ್ಯವು ಉಪಪನ್ನವಾಗುತ್ತದೆ.

ಹಾಗೂ ವಿಸಂವಾದಾದಿಗಳಿಂದಾಗಿ ಎರಡಕ್ಕೂ ಪ್ರಾಮಾಣ್ಯ ಕೂಡುವುದಿಲ್ಲ ಎಂದು ಹೇಳುವುದು ಸರಿಯಲ್ಲ. ವ್ಯಾಸಮತವು ದೇವತಾವಿಷಯಕವಾಗಿದ್ದರಿಂದ, ಇತ್ತ ಜೈಮಿನಿಮತವು ಪ್ರತಿಬದ್ಧದೇವತಾವಿಷಯಕವಾಗಿದ್ದರಿಂದ ಅಥವಾ ಮಾನುಷ-ವಿಷಯಕವಾದ್ದರಿಂದ ವಿರೋಧ ಬರುವುದಿಲ್ಲ.

ಆದ್ದರಿಂದ ಜ್ಞಾನವು ಸರ್ವಪುರುಷಾರ್ಥಸಾಧನವಾದ್ದರಿಂದ ಅದು ಅತ್ಯಂತಾ-ಪೇಕ್ಷಿತವಾಗಿದೆ ಎಂದು ಸಿದ್ಧವಾಗುತ್ತದೆ.

**ಪುರುಷಾರ್ಥಾಧಿಕರಣವು ಮುಗಿಯಿತು.**

ಅಧಿಕರಣ - 2

# ಅಸಾರ್ವತ್ರಿಕಾಧಿಕರಣ

## ಸಂಗತಿ

**ಸೂ.ರ.:- अत्र ज्ञाने सर्वेषामधिकाराभावो वर्ण्यते ।**

ಜ್ಞಾನದಲ್ಲಿ ಎಲ್ಲರಿಗೂ ಅಧಿಕಾರ ಇಲ್ಲ ಎಂದು ವರ್ಣಿಸುತ್ತಾರೆ ಎರಡನೇ ಈ ಅಸಾರ್ವತ್ರಿಕಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:- नन्वस्ति सर्वेषामपि ज्ञानेऽधिकारः । तदुपयोगिनोऽर्थित्वादेः सर्वत्र सौलभ्यात् । सत्यप्यधिकारप्रयोजके कस्यचिदधिकारे कस्यापि न स्यादिति निरधिकारिताप्रसङ्गः । अथवा । पुरुषैरर्थ्यमानज्ञानसाध्यस्य मोक्षस्य तदपेक्षितत्वात् । सर्वेषां ज्ञानसाधने श्रवणादौ सामर्थ्यात्तदुपयोगिविद्वत्तासद्भावात् । अतः सर्वेषां ज्ञानाधिकारित्वान्न तदतिशयवदिति प्राप्ते सूत्रितम् ॥**

ವಿ.ಸೂ. ಸೂತ್ರಾರ್ಥರತ್ನಾವಲೀ ಮೂಲದಲ್ಲಿ ಪೂರ್ವಪಕ್ಷವಾಕ್ಯಗಳು ವ್ಯತ್ಯಸ್ತವಾಗಿವೆ. ಆದ್ದರಿಂದ ತತ್ತ್ವಪ್ರಕಾಶಿಕಾ ಪ್ರಕಾರ ಪೂರ್ವಪಕ್ಷ ಬರೆಯಲಾಗಿದೆ.

ಜ್ಞಾನದಲ್ಲಿ ಎಲ್ಲರಿಗೂ ಅಧಿಕಾರ ಇದೆಯೇ? ಇಲ್ಲವೇ ? ಎಂದು ಸಂದೇಹ.

ಎಲ್ಲರಿಗೂ ಜ್ಞಾನದಲ್ಲಿ ಅಧಿಕಾರ ಇದೆ ಎಂದು ಪೂರ್ವಪಕ್ಷ. ಕಾರಣ - ಫಲಾರ್ಥಿಯಾದವನು, ಸಮರ್ಥನಾದವನು, ವಿದ್ವಾನ್ ಆದವನು ತಾನೇ ಜ್ಞಾನಕ್ಕೆ ಅಧಿಕಾರಿಯಾಗುತ್ತಾನೆ! ಇವುಗಳಲ್ಲಿ ಜ್ಞಾನಫಲವಾದ ಮೋಕ್ಷದ ವಿಷಯದಲ್ಲಿ ಎಲ್ಲರಿಗೂ ಅರ್ಥಿತ್ವವು ಇದ್ದೇ ಇದೆ. ಕಾರಣ ಮೋಕ್ಷವು ನಿರ್ದುಃಖ ಆನಂದಾತ್ಮಕವಾದ್ದರಿಂದ. ಅಂತಹುದೇ ಪುರುಷಾರ್ಥವಾಗುವುದರಿಂದ. ಮತ್ತು ಶ್ರವಣಾದಿಗಳಲ್ಲಿ ಸಾಮರ್ಥ್ಯ, ತದುಪಯೋಗಿಯಾದ ವಿದ್ವತ್ತಾವು ಎಲ್ಲರಿಗೂ ಇದ್ದೇ ಇದೆ. ಹೀಗಾಗಿ ಅಧಿಕಾರಪ್ರಯೋಜಕವಾದದ್ದು ಇದ್ದಾಗಲೂ ಕೆಲವರಿಗೇ ಅಧಿಕಾರ (ಎಲ್ಲರಿಗೂ

ಅಧಿಕಾರ ಇಲ್ಲ) ಎಂದು ಹೇಳುವುದಾದರೆ ಜ್ಞಾನವು ನಿರಧಿಕಾರಿಕವಾಗಬೇಕಾದ ಅತಿಪ್ರಸಂಗ ಬರುತ್ತದೆ.

ಆದ್ದರಿಂದ ಎಲ್ಲರಿಗೂ ಜ್ಞಾನದಲ್ಲಿ ಅಧಿಕಾರ ಇದ್ದೇ ಇರುವುದರಿಂದ ಅದು ಅತಿಶಯ ಉಳ್ಳದ್ದಲ್ಲ ಎಂಬುದಾಗಿ ಪೂರ್ವಪಕ್ಷವು ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ असार्वत्रिकी ॐ (३-४-१०)**

**ಸೂತ್ರಾರ್ಥ :- ಅಸಾರ್ವತ್ರಿಕೀ** = ಜ್ಞಾನಾಧಿಕಾರಿತಾವು ಸರ್ವಜನಸ್ಥಿತ ಅಲ್ಲ.

## ಸಿದ್ಧಾಂತ

**ಸೂ.ರ.:– एवं च न सर्वेषां ज्ञानाधिकार इति सिद्धम् ॥**

ಎಲ್ಲರಿಗೂ ಜ್ಞಾನದಲ್ಲಿ ಅಧಿಕಾರ ಇಲ್ಲ ಎಂದು ಸಿದ್ಧವಾಗುತ್ತದೆ.

## ಸೂತ್ರ - 11

**ಸೂ.ರ.:– नन्वर्थित्वादेः सर्वेषां सद्भावात्कथं नाधिकारितेत्याशङ्कां पराकुर्वत्सूत्रमुपन्यस्यति ॥**

ಅರ್ಥಿತ್ವಾದಿಗಳು ಎಲ್ಲರಿಗೂ ಸಮಾನವಾಗಿ ಇರುವಾಗ ಅಧಿಕಾರ ಇಲ್ಲ ಎಂದು ಹೇಗೆ ಹೇಳುತ್ತೀರಿ? ಎಂಬ ಶಂಕೆಯನ್ನು ನಿರಾಕರಿಸುವ ಸೂತ್ರವನ್ನು ಉಪನ್ಯಾಸ ಮಾಡುತ್ತಾರೆ -

**ॐ विभागः शतवत् ॐ (३-४-११)**

**ಸೂತ್ರಾರ್ಥ :- ವಿಭಾಗಃ** = ಕೆಲವರಿಗೆ ಜ್ಞಾನಾಧಿಕಾರಿತ್ವವಿದೆ (ಕೆಲವರಿಗೆ) ಉಳಿದವರಿಗೆ ಇಲ್ಲ ಎಂಬ ವ್ಯವಸ್ಥೆಯು **ಶತವತ್** = ಪರಾಪರಬ್ರಹ್ಮಾಧಿಕ ದೇವತಾಶತಕ್ಕೇನೇ ಸೋಮಾಧಿಕಾರ ಇರುವುದು, ಉಳಿದವರಿಗೆ ಸೋಮಾಧಿಕಾರ ಇರುವುದಿಲ್ಲ ಎಂಬ ವ್ಯವಸ್ಥೆಯಂತೆ,

"ನವಕೋಟ್ಯೋ ಹಿ ದೇವಾನಾಂ ತೇಷಾಂ ಮಧ್ಯೇ ಶತಸ್ಯ ತು ।
ಸೋಮಾಧಿಕಾರೋ ವೇದೋಕ್ತೋ ಬ್ರಹ್ಮಣೇ ದ್ವೇ ಶತಾಧಿಕೇ ॥

ಯಥಾ ತಥೈವಾಸಂಖ್ಯೇಯಾಃ ಪ್ರಜಾಸ್ತಾಸು ಕಿಯಾಂಜನಃ ।
ಜ್ಞಾನಾಧಿಕಾರೀ ಸಂಪ್ರೋಕ್ತೋ ವಿಷ್ಣುಪಾದೈಕಸಂಶ್ರಯಃ ॥"

ಇತ್ಯಾದಿಗಳಲ್ಲಿ ಹೇಳಲ್ಪಟ್ಟಿದೆಯಾದ್ದರಿಂದ.

**ಸೂ.ರ.:– एवं च यथा सत्यपि देवत्वे ब्रह्मद्वयाधिकशतानामेव सोमाधिकार इति विभागः । तथा सत्यप्यर्थित्वे केषाञ्चिदधिकारो न सर्वेषामित्यभिप्रायकत्वात् । अतो ज्ञाने सर्वेषामधिकाराभावेनातिशयितं तदिति सिद्धम् ॥**

ನವಕೋಟಿ ಸಂಖ್ಯಾಕರಾದ ದೇವತೆಗಳಿಗೆ ದೇವತ್ವ ಸಮಾನವಾಗಿದ್ದರೂ ಸಹ ಪರಾಪರಬ್ರಹ್ಮಾಧಿಕ ಶತದೇವತೆಗಳಿಗೆ (ತತ್ವಪ್ರದೀಪದಲ್ಲಿ ನಿರೂಪಿಸಿದ ಪ್ರಕಾರ - ಪ್ರಧಾನವಾಯು 1, ವಸುಗಳು 8, ರುದ್ರರು 11, ಮರುತ್‌ಗಳು 49, ಆದಿತ್ಯರು 12, ವಿಶ್ವೇದೇವತೆಗಳು 10, ಬೃಹಸ್ಪತಿ 1, ಪಿತೃಗಳು 3, ಅಶ್ವಿನಿ ದೇವತೆಗಳು 2, ಋಭು, 1, ದ್ಯಾವಾ ಪೃಥಿವೀ 2, ಪರಬ್ರಹ್ಮ 1, ಅಪರಬ್ರಹ್ಮ 1 ಹೀಗೆ ಒಟ್ಟು 102 ದೇವತೆಗಳಿಗೆ) ಮಾತ್ರವೇ ಸೋಮಾಧಿಕಾರ ಇದೆ ಎಂದು ವ್ಯವಸ್ಥೆ ಮಾಡಿದಂತೆ, ಎಲ್ಲರಿಗೂ ಅರ್ಥಿತ್ವಾದಿಗಳು ಇದ್ದರೂ ಸಹ ಕೆಲವರಿಗೆ ಮಾತ್ರವೇ ಜ್ಞಾನಾಧಿಕಾರ ಇದೆ ಹೊರತು ಎಲ್ಲರಿಗೂ ಅಲ್ಲ ಎಂದು ಅಭಿಪ್ರಾಯ. ಆದ್ದರಿಂದ ಜ್ಞಾನದಲ್ಲಿ ಎಲ್ಲರಿಗೂ ಅಧಿಕಾರ ಇಲ್ಲವಾದ್ದರಿಂದ ಅದು ಅತಿಶಯಿತವಾದದ್ದು ಎಂದು ಸಿದ್ಧವಾಗುತ್ತದೆ.

## ಸೂತ್ರ - 12

**ಸೂ.ರ.:– ननु यद्यर्थित्वादिसाम्येऽपि न सर्वेषामधिकारस्तर्हि कस्याप्यसौ न स्यात् । यदि केषाञ्चिदधिकारोऽस्ति तर्ह्यर्थित्वाद्व्यतिरिक्ताधिकारप्रयोजकविशेषणस्य वक्तव्यत्वात् । न च तदस्तीति सर्वेषां ज्ञानाधिकारित्वान्न तदतिशयवदिति प्राप्ते सूत्रमाह ॥**

ಒಂದುವೇಳೆ ಅರ್ಥಿತ್ವಾದಿಸಾಮ್ಯವಿದ್ದರೂ ಸಹ ಎಲ್ಲರಿಗೂ ಅಧಿಕಾರ ಇಲ್ಲ ಎನ್ನುವುದಾದರೆ, ಹಾಗಾದರೆ ಯಾರಿಗೂ ಅಧಿಕಾರ ಇಲ್ಲದೇ ಹೋಗಬೇಕಾದೀತು. ಒಂದುವೇಳೆ ಕೆಲವರಿಗೆ ಅಧಿಕಾರ ಇರುವುದಾದರೆ ಹಾಗಾದರೆ ಅರ್ಥಿತ್ವಾದಿಗಳಿಂದ

ವ್ಯತಿರಿಕ್ತವಾದ ಅಧಿಕಾರಪ್ರಯೋಜಕವಾದ ವಿಶೇಷಣವನ್ನು ಹೇಳಬೇಕಾಗುತ್ತದೆ. ಅಂತಹ ವಿಶೇಷಣ ಯಾವುದೂ ಇಲ್ಲ. ಹೀಗಾಗಿ ಎಲ್ಲರೂ ಜ್ಞಾನಾಧಿಕಾರಿಗಳೇ ಆದ್ದರಿಂದ ಅದು ಅತಿಶಯ ಉಳ್ಳದ್ದಲ್ಲ ಎಂಬುದಾಗಿ ಆಕ್ಷೇಪ ಬಂದರೆ, ಅದನ್ನು ನಿರಾಕರಿಸಿ ಸಮಾಧಾನ ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ अध्ययनमात्रवतः ॐ (३-४-१२)**

**ಸೂತ್ರಾರ್ಥ :- ಅಧ್ಯಯನಮಾತ್ರವತಃ** = ಯಥಾಶಕ್ತಿಯಾಗಿ ಸರ್ವ-ವೇದಾಧ್ಯಯನ ಮಾಡಿದವರಿಗೆ ಮಾತ್ರ ಬ್ರಹ್ಮವಿದ್ಯಾಧಿಕಾರಿತ್ವ ಹೊರತು ಉಳಿದವರಿಗೆ ಅಲ್ಲ.

**ಸೂ.ರ.:- एवं च हरिभक्तिपूर्वकाध्यापनवतामेव ग्रहणात् । न चाभक्तस्यानधिकारित्वे चतुर्मुखस्य विरोचनाध्यापने कथं प्रवृत्तिरिति शङ्क्यम् । अभक्तानामनधिकारितया तदध्ययनस्य वैफल्यमेवेति ज्ञापनायाध्यापनोपपत्तेः । पठेद्वेदानिति (कौषारव.) श्रुतेश्च । अतो ज्ञाने सर्वेषामधिकाराभावादतिशयितं तदिति सिद्धम् ॥**

ಹರಿಭಕ್ತಿಪೂರ್ವಕವಾಗಿ ಅಧ್ಯಯನ ಮಾಡಿದವರನ್ನೇ ಗ್ರಹಿಸಿದ್ದರಿಂದ (ಗ್ರಹಣ ಮಾಡಿದ್ದರಿಂದ) ಅಧ್ಯಯನ ಉಳ್ಳವರಿಗೆ ಮಾತ್ರವೇ ಬ್ರಹ್ಮವಿದ್ಯಾಧಿಕಾರಿತ್ವ ಹೊರತು ಇತರರಿಗೆ ಅಲ್ಲ.

ಹಾಗಾದರೆ ಭಕ್ತರಲ್ಲದವರು ಅಧಿಕಾರಿಗಳಲ್ಲ ಎನ್ನುವುದಾದರೆ, ಚತುರ್ಮುಖ ಬ್ರಹ್ಮದೇವರಿಗೆ ವಿರೋಚನನ ಅಧ್ಯಾಪನದಲ್ಲಿ ಹೇಗೆ ಪ್ರವೃತ್ತಿ? ಎಂದು ಶಂಕಿಸುವುದು ಸರಿಯಲ್ಲ. ಕಾರಣ ಭಕ್ತರಲ್ಲದವರು ಅಧಿಕಾರಿಗಳಲ್ಲವಾದ್ದರಿಂದಲೇ ಅವರ ಅಧ್ಯಯನ ವಿಫಲ ಎಂದು ತೋರಿಸುವುದಕ್ಕಾಗಿ ಚತುರ್ಮುಖನ ಅಧ್ಯಾಪನವು ಉಪಪನ್ನ-ವಾಗುತ್ತದೆ. ''ಪಠೇದ್ವೇದಾನಥಾರ್ಥಾನಧೀಯೀತಾಥ ವಿಚಾರ್ಯ ಬ್ರಹ್ಮ ವಿಂದೇತ್'' ಎಂಬುದಾಗಿ ಕೌಷಾರವಶ್ರುತಿ ಇರುವುದರಿಂದ. ಆದ್ದರಿಂದ ಜ್ಞಾನದಲ್ಲಿ ಎಲ್ಲರಿಗೂ ಅಧಿಕಾರ ಇಲ್ಲದಿರುವುದರಿಂದ ಅದು ಅತಿಶಯಿತವಾದದ್ದು ಎಂದು ಸಿದ್ಧವಾಗುತ್ತದೆ.

ಅಸಾರ್ವತ್ರಿಕಾಧಿಕರಣವು ಮುಗಿಯಿತು.

ಅಧಿಕರಣ – 3

## ಅವಿಶೇಷಾಧಿಕರಣ

### ಸಂಗತಿ

**ಸೂ.ರ.:– अत्र ज्ञानाधिकारे तारतम्यं समर्थ्यते ।**

ಜ್ಞಾನಾಧಿಕಾರದಲ್ಲಿ ತಾರತಮ್ಯವನ್ನು ಸಮರ್ಥಿಸುತ್ತಾರೆ ಮೂರನೇ ಈ ಅವಿಶೇಷಾಧಿಕರಣದಲ್ಲಿ.

### ಪೂರ್ವಪಕ್ಷ

**ಸೂ.ರ.:– ननु सर्वेषामेकप्रकारेणैव ज्ञानाधिकारः । अधिकार-तारतम्यकल्पनाभावात् । न च ज्ञानतारतम्यान्यथाऽनुपपत्त्या तत्सिद्धिः । अधिकारसाम्येऽपि प्रयत्नतारतम्यादेव तत्सिद्धेः । अतो न ज्ञानं कर्मणः सकाशादतिशयवदिति प्राप्ते सूत्रितम् ॥**

ಅಧಿಕಾರತಾರತಮ್ಯವನ್ನು ಕಲ್ಪನಾ ಮಾಡುವುದು ವ್ಯರ್ಥವಾದ್ದರಿಂದ ದೇವಾದಿ ಎಲ್ಲ ಅಧಿಕಾರಿಗಳಿಗೂ ಸಹ ಜ್ಞಾನಾಧಿಕಾರವು ಏಕಪ್ರಕಾರವಾಗಿಯೇ ಇರುತ್ತದೆ. ಅಧಿಕಾರ ತಾರತಮ್ಯ ಇಲ್ಲದೇ ಹೋದರೆ ಜ್ಞಾನತಾರತಮ್ಯ ಕೂಡುವುದಿಲ್ಲವಾದ್ದರಿಂದ ಜ್ಞಾನತಾರತಮ್ಯಾನ್ಯಥಾನುಪಪತ್ತಿಯಿಂದ ಅಧಿಕಾರತಾರತಮ್ಯವು ಉಪಪನ್ನ-ವಾಗುತ್ತದೆಯಲ್ಲ? ಎಂದು ಶಂಕಿಸುವುದು ಸರಿಯಲ್ಲ. ಕಾರಣ ಅಧಿಕಾರತಾರತಮ್ಯ ಇದ್ದರೂ ಸಹ ಪ್ರಯತ್ನತಾರತಮ್ಯದಿಂದಲೇ ಜ್ಞಾನತಾರತಮ್ಯವು ಸಿದ್ಧಿಸುವುದರಿಂದ. ಆದ್ದರಿಂದ ಜ್ಞಾನವು ಕರ್ಮಕ್ಕಿಂತಲೂ ಅತಿಶಯ ಉಳ್ಳದ್ದಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

### ॐ नाविशेषात् ॐ (३-४-१३)

ಸೂತ್ರಾರ್ಥ :- ದೇವಾದೀನಾಂ ಜ್ಞಾನಾಧಿಕಾರಿತಾ = ದೇವಾದಿಗಳಿಗೆ ಜ್ಞಾನಾಧಿ-ಕಾರಿತ್ವವು ಅವಿಶೇಷಾತ್ ನ = ಸಾಮ್ಯದಿಂದಾಗಿ ಅಲ್ಲ. ಕಿಂತು ತಾರತಮ್ಯಾದಿನಾ = ಕಿಂತು ತಾರತಮ್ಯಾದಿಗಳಿಂದ.

## ಸಿದ್ಧಾಂತ

**ಸೂ.ರ.:– एवं च देवादीनां साम्ये न ज्ञानाधिकाराभावः । अन्यथा ज्ञानसाम्यप्रसङ्गात् । न च शक्तितारतम्येन ज्ञानतारतम्यमुपपन्नम् । अधिकारतारतम्याभावे भक्तितारतम्यस्यैवायोगात् । अतः सम्पूर्णज्ञानाधिकारस्य सर्वसुलभत्वाभावेन सातिशयं ज्ञानमिति सिद्धम् ॥**

ದೇವಾದಿ ಅಧಿಕಾರಿಗಳಿಗೆ ಸಾಮ್ಯದಿಂದ ಜ್ಞಾನಾಧಿಕಾರ ಅಲ್ಲ. ಹಾಗಾಗುವುದಾದರೆ ಜ್ಞಾನದಲ್ಲಿಯೂ ಸಾಮ್ಯ ಬರಬೇಕಾಗುತ್ತದೆ. ಜ್ಞಾನವು ಅಧಿಕಾರಾನುಸಾರಿಯಾದ್ದರಿಂದ. ಹೌದು ಅಧಿಕಾರಸಾಮ್ಯ ಇದ್ದರೂ ಸಹ ಶಕ್ತಿತಾರತಮ್ಯದಿಂದ ಜ್ಞಾನತಾರತಮ್ಯವನ್ನು ಹೇಳಬಹುದಲ್ಲ? ಎಂದರೆ, ಅದು ಸರಿಯಲ್ಲ. ಅಧಿಕಾರತಾರತಮ್ಯ ಇಲ್ಲದೇ ಹೋದರೆ ಶಕ್ತಿತಾರತಮ್ಯವೇ ಉಪಪನ್ನವಾಗುವುದಿಲ್ಲ. ಆದ್ದರಿಂದ ಸಂಪೂರ್ಣಜ್ಞಾನಾಧಿಕಾರವು ಸರ್ವಸುಲಭವಾಗದ ಕಾರಣ ಜ್ಞಾನವು ಕರ್ಮಕ್ಕಿಂತಲೂ ಅತಿಶಯ ಉಳ್ಳದ್ದು ಎಂದು ಸಿದ್ಧವಾಗುತ್ತದೆ.

ಅವಿಶೇಷಾಧಿಕರಣವು ಮುಗಿಯಿತು.

ಅಧಿಕರಣ – 4

# ಸ್ತುತ್ಯಧಿಕರಣ

## ಸಂಗತಿ

**ಸೂ.ರ.:– अत्र ज्ञानिनां सदसत्प्रवृत्त्योर्विशेषः साध्यते ।**

ಜ್ಞಾನಿಗಳಿಗೆ ಸತ್-ಅಸತ್ ಪ್ರವೃತ್ತಿಗಳಲ್ಲಿ ವಿಶೇಷವನ್ನು ಸಾಧಿಸುತ್ತಾರೆ ನಾಲ್ಕನೇ ಈ ಸ್ತುತ್ಯಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु न सदसत्प्रवृत्तिभ्यां ज्ञानिनो विशेषोऽस्ति । केन स्याद्येन स्यादिति (बृ. ५-५-१) यथेष्टप्रवृत्तिविधानात् । न हि मोक्षादतिशयितं फलमस्ति । यत्सत्प्रवृत्त्या भवेत् । नापि मोक्षे दुःखमस्ति । यदसत्प्रवृत्त्या भवेत् । अतः सदसत्प्रवृत्तिभ्यां ज्ञानिनो विशेषाभावेनाद्याधिकारिणोक्तं कर्मणो ज्ञानविशेषत्वमयुक्तमिति प्राप्ते सूत्रितम् ॥**

ಜ್ಞಾನಿಯಾದವನಿಗೆ ಸತ್‌ಪ್ರವೃತ್ತಿ – ಅಸತ್‌ಪ್ರವೃತ್ತಿಗಳಿಂದ ವಿಶೇಷವಿಲ್ಲ. ಕಾರಣ –

"ಅಥ ಮುನಿರಮೌನಂ ಚ ಮೌನಂ ಚ ನಿರ್ವಿದ್ಯಾಥ ಬ್ರಾಹ್ಮಣಃ ಸ ಬ್ರಾಹ್ಮಣಃ ಕೇನ ಸ್ಯಾದ್ಯೇನ ಸ್ಯಾತ್ತೇನೇದೃಶ ಏವ" (ಬೃ.ಉ. 5-5-1)

ಎಂಬುದಾಗಿ ಜ್ಞಾನಿಗೆ ಯಥೇಷ್ಟಪ್ರವೃತ್ತಿಯನ್ನು ವಿಧಾನ ಮಾಡಿದ್ದರಿಂದ. (ಒಂದುವೇಳೆ ಜ್ಞಾನಿಗೆ ಸತ್-ಅಸತ್ ಪ್ರವೃತ್ತಿಗಳಲ್ಲಿ ವಿಶೇಷ ಇರುವುದಾದರೆ ಆಗ "ಸದೇವ ಆಚರೇನ್ನಾಸತ್" ಎಂದು ಹೇಳಬೇಕಿತ್ತು. ಹೊರತು ಯಥೇಷ್ಟ ಆಚರಣವನ್ನು ವಿಧಾನ ಮಾಡಬಾರದಿತ್ತು. ಈಗಲಾದರೋ ಯಥೇಷ್ಟ ಆಚರಣ ವಿಧಾನ ಮಾಡಿದ್ದರಿಂದ ಜ್ಞಾನಿಗೆ ಸತ್ – ಅಸತ್ ಪ್ರವೃತ್ತಿಗಳಲ್ಲಿ ವಿಶೇಷ ಇಲ್ಲ ಎಂದು ತಿಳಿಯುತ್ತದೆ ಎಂದು ಭಾವ.)

ಜ್ಞಾನಿಗೆ ಸತ್ – ಅಸತ್ ಪ್ರವೃತ್ತಿಗಳಲ್ಲಿ ವಿಶೇಷವು ಅಯುಕ್ತವೂ ಆಗಿದೆ. ಕಾರಣ ಮೋಕ್ಷಕ್ಕಿಂತಲೂ ಅತಿಶಯಿತವಾದ ಫಲ ಯಾವುದೂ ಇಲ್ಲ. ಒಂದುವೇಳೆ ಇರುತ್ತಿದ್ದರೆ

ಸತ್‌ಪ್ರವೃತ್ತಿಯೇ ಉಪಪನ್ನವಾಗುತ್ತಿತ್ತು. ಮತ್ತು ಮೋಕ್ಷದಲ್ಲಿ ದುಃಖವೂ ಇಲ್ಲ, ಒಂದುವೇಳೆ ಇರುತ್ತಿದ್ದರೆ ಅಸತ್‌ಪ್ರವೃತ್ತಿಯು ಉಪಪನ್ನವಾಗುತ್ತಿತ್ತು.

ಆದ್ದರಿಂದ ಜ್ಞಾನಿಗೆ ಸತ್ - ಅಸತ್ ಪ್ರವೃತ್ತಿಗಳಿಂದ ವಿಶೇಷ ಇಲ್ಲವಾದ್ದರಿಂದ ಮೊದಲನೇ ಅಧಿಕರಣದಲ್ಲಿ ಹೇಳಿದ ಕರ್ಮಕ್ಕೆ ಜ್ಞಾನವಿಶೇಷತ್ವವು ಯುಕ್ತವಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

## ॐ स्तुतयेऽनुमतिर्वा ॐ (३-४-१४)

**ಸೂತ್ರಾರ್ಥ** :- ಜ್ಞಾನಿಯಾದವನಿಗೆ ಸತ್ - ಅಸತ್ ಪ್ರವೃತ್ತಿಗಳಲ್ಲಿ ವಿಶೇಷವು ಇದ್ದೇ ಇದೆ. ಕುತಃ = ಏಕೆ? ಯತಃ = ಯಾವ ಕಾರಣ ಯಥೇಷ್ಟಾಚಾರಃ = ಯಥೇಷ್ಟಾಚಾರವು, **ಸ್ತುತಯೇ** = ಜ್ಞಾನಿಯು ಮುಕ್ತನಾಗೇ ಆಗುತ್ತಾನೆ ಎಂಬುದಾಗಿ ಜ್ಞಾನಿಯ ಸ್ತುತಿಗಾಗಿಯೇ, "ಯೇನ ಸ್ಯಾತ್ಕೇನ ಸ್ಯಾತ್" ಎಂದು ಹೇಳಲ್ಪಡುತ್ತಿದೆ. **ಅನುಮತಿರ್ವಾ** = ಜ್ಞಾನಿಗಳಿಗೆ ಯಥೇಷ್ಟಾಚಾರದಲ್ಲಿ ಅಭ್ಯನುಜ್ಞಾಮಾತ್ರವೇ ಹೊರತು ಇಲ್ಲಿ ಯಥೇಷ್ಟಾಚಾರವಿಧಿ ಅಲ್ಲವೋ ಆ ಕಾರಣ ಎಂದರ್ಥ.

### ಸಿದ್ಧಾಂತ

**ಸೂ.ರ.:- एवं च केन स्याद्येन स्यादित्यस्य निषेधशास्त्राबद्धतया ज्ञानिनः स्तुतित्वेनाविधित्वात् । अथवाऽनुज्ञानमात्रमेतत् । अतोऽस्त्येव ज्ञानिनां सदसत्प्रवृत्तिभ्यां विशेष इति सिद्धम् ॥**

"ಕೇನ ಸ್ಯಾದ್ಯೇನ ಸ್ಯಾತ್" ಎನ್ನುವುದು ನಿಷೇಧಶಾಸ್ತ್ರಬದ್ಧವಾಗದ ಕಾರಣ ಜ್ಞಾನಿಯ ಸ್ತುತಿರೂಪವಾಗಿದೆಯೇ ಹೊರತು ವಿಧಿ ಆಗಿಲ್ಲ, ಅಥವಾ ಇದು ಅನುಮಿತಿ ಮಾತ್ರವೇ ಆಗಿದೆ. ಆದ್ದರಿಂದ ಜ್ಞಾನಿಗೆ ಸತ್ - ಅಸತ್ ಪ್ರವೃತ್ತಿಗಳಲ್ಲಿ ವಿಶೇಷ ಇದ್ದೇ ಇದೆ ಎಂದು ಸಿದ್ಧವಾಗುತ್ತದೆ.

### ಸೂತ್ರ - 15

**ಸೂ.ರ.:- ननु सदसत्प्रवृत्तिभ्यां ज्ञानिनो विशेषाङ्गीकारो न युज्यते । तथा सत्यसत्प्रवृत्त्या कुण्ठितशक्तेर्ज्ञानस्य मोक्षसाधनत्वा-**

**भावप्रसङ्गात् । तथा च सदसत्प्रवृत्तिभ्यां कथं विशेषो युज्यत इति प्राप्ते सूत्रितम् ॥**

ಜ್ಞಾನಿಗೆ ಸತ್ - ಅಸತ್ ಪ್ರವೃತ್ತಿಗಳಿಂದ ವಿಶೇಷವನ್ನು ಅಂಗೀಕಾರ ಮಾಡುವುದು ಯುಕ್ತವಾಗುವುದಿಲ್ಲ, ಕಾರಣ ಹಾಗೆ ವಿಶೇಷ ಇರುವುದಾದರೆ ಅಸತ್ ಪ್ರವೃತ್ತಿಯಿಂದ ಕುಂಠಿತವಾದ ಶಕ್ತಿಯುಳ್ಳ ಜ್ಞಾನಕ್ಕೆ ಮೋಕ್ಷಸಾಧನತ್ವ ಇಲ್ಲದೇ ಹೋಗಬೇಕಾದ ಪ್ರಸಂಗ ಬರುತ್ತದೆ. ಆದ್ದರಿಂದ ಸತ್ - ಅಸತ್ ಪ್ರವೃತ್ತಿಗಳಿಂದ ವಿಶೇಷವು ಹೇಗೆ ಕೂಡುತ್ತದೆ? ಎಂಬುದಾಗಿ ಆಕ್ಷೇಪ ಬಂದರೆ, ಪರಿಹಾರಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

### ॐ कामकारेण चैके ॐ (३-४-१५)

**ಸೂತ್ರಾರ್ಥ** :- ಏಕೇ=ಕೆಲವು ಶಾಖೀಗಳು **ಕಾಮಕಾರೇಣ ಚ** = ಯಥೇಷ್ಟಾಚಾರದಿಂದಲೂ ಸಹ ಜ್ಞಾನಿಗಳಿಗೆ ಮೋಕ್ಷವನ್ನು "ಕಾಮಚಾರಾಃ ..." ಎಂಬ ಸಾಮಶಾಖಾಶ್ರುತಿಯಲ್ಲಿ ಪಠಿಸುತ್ತಾರೆ. ಆದ್ದರಿಂದ ಜ್ಞಾನಿಗೆ ಸತ್-ಅಸತ್ ಪ್ರವೃತ್ತಿಗಳಿಂದ ವಿಶೇಷ ಒಪ್ಪಿದರೆ ಮೋಕ್ಷಹಾನಿ ಇಲ್ಲ, ಕಿಂತು ಫಲದಲ್ಲಿ ವಿಶೇಷ-ಮಾತ್ರವೇ ಇದೆ ಎಂದರ್ಥ.

**ಸೂ.ರ.:- एवं च कामचारा इति वचनात्ज्ञानिनां यथेष्ठाचारेऽपि मोक्षाभिधानेनासत्प्रवृत्तेरप्रतिबन्धकत्वात्तेषां सदसत्प्रवृत्तिभ्यां विशेषोऽस्तीति सिद्धम् ॥**

"ಕಾಮಚಾರಾಃ ಕಾಮಭಕ್ಷಾಃ ಕಾಮವಾದಾಃ ಕಾಮೇನೈವೇಮಂ ದೇಹ-ಮುತ್ಸೃಜ್ಯಾಥ ಪರಾತ್ಪರಮೀಯುರನಾರಂಭಣಮ್" (ಸಾಮಶಾಖಾ)

ಎಂಬುದಾಗಿ ವಚನ ಇರುವುದರಿಂದ ಜ್ಞಾನಿಗಳಿಗೆ ಯಥೇಷ್ಟಾಚಾರ ಇದ್ದರೂ ಸಹ ಮೋಕ್ಷವನ್ನು ಹೇಳಿದ್ದರಿಂದ, ಅಸತ್‌ಪ್ರವೃತ್ತಿಯು ಅಪ್ರತಿಬಂಧಕವಾದ್ದರಿಂದ, ಜ್ಞಾನಿಗಳಿಗೆ ಸತ್ - ಅಸತ್ ಪ್ರವೃತ್ತಿಗಳಿಂದ ವಿಶೇಷ ಇದೆ ಎಂದು ಸಿದ್ಧವಾಗುತ್ತದೆ.

### ಸೂತ್ರ - 16

**ಸೂ.ರ.:- सदसत्प्रवृत्तिभ्यां ज्ञानिनो विशेषोऽस्तीतीदमेव साध्यं**

**कैमुत्येन साधयत्सूत्रं पठित्वा चशब्दस्य विषभक्षान्मृतेरिवानिवार्यतया प्राप्तस्य प्रारब्धकर्मणोऽपीत्येवमप्यर्थत्वेन कैमुत्यद्योतकत्वमभिप्रेत्य व्याचष्टे ॥**

'ಸತ್ - ಅಸತ್ ಪ್ರವೃತ್ತಿಗಳಿಂದ ಜ್ಞಾನಿಗೆ ವಿಶೇಷ ಇದೆ' ಎಂಬ ಈ ಸಾಧ್ಯವನ್ನೇ ಕೈಮುತ್ಯದಿಂದ ಸಾಧಿಸುವ ಸೂತ್ರವನ್ನು ಪಠಿಸಿ, ಚಶಬ್ದವು 'ವಿಷಭಕ್ಷಣದಿಂದ ಮರಣದಂತೆ ಅನಿವಾರ್ಯವಾಗಿ ಪ್ರಾಪ್ತವಾದ ಪ್ರಾರಬ್ಧಕರ್ಮಕ್ಕೂ ಸಹ' ಎಂಬು-ದಾಗಿ ಅಪ್ಯರ್ಥಕವಾದ್ದರಿಂದ ಕೈಮುತ್ಯದ್ಯೋತಕವಾಗಿದೆ ಎಂಬ ಅಭಿಪ್ರಾಯದಿಂದ ವ್ಯಾಖ್ಯಾನಿಸುತ್ತಾರೆ -

### ॐ उपमर्दं च ॐ (३-४-१६)

**ಸೂತ್ರಾರ್ಥ** :- ಯದಾ = ಯಾವಾಗ ಚ = ಜ್ಞಾನಿನಃ ಪ್ರಾರಬ್ಧ-ಕರ್ಮಣೋಽಪಿ ಕಿಂಚಿದ್‌ಭುಕ್ತಸ್ಯ = ಜ್ಞಾನಿಯಾದವನ ಕಿಂಚಿತ್ ಭುಕ್ತವಾದ ಪ್ರಾರಬ್ಧಕರ್ಮಕ್ಕೂ ಸಹ ಜ್ಞಾನೇನ **ಉಪಮರ್ದಂ** = ಜ್ಞಾನದಿಂದ ಉಪಮರ್ದವನ್ನು (ಈಷತ್ ಫಲಹ್ರಾಸವನ್ನು) "ಓಂ ಇತ್ಯುಚ್ಚಾರ್ಯ" ಎಂಬ ಶ್ರುತಿಯಲ್ಲಿ (ತರಶ್ರುತಿಯಲ್ಲಿ) ಏಕೇ ಶಾಖಿನಃ ಪಠಂತಿ = ಕೆಲವು ಶಾಖಿಗಳು ಪಠಿಸುತ್ತಾರೆಯೋ ತದಾ = ಆಗ ಜ್ಞಾನೋತ್ತರಕಾಲೀನಾಸತ್ಕರ್ಮ = ಜ್ಞಾನೋತ್ತರದಲ್ಲಿ ಮಾಡಿದ ಅಸತ್ ಕರ್ಮವು ನ ಮೋಕ್ಷಪ್ರತಿಬಂಧಕಂ = ಮೋಕ್ಷಕ್ಕೆ ಪ್ರತಿಬಂಧಕವಲ್ಲ ಇತಿ ಕಿಂ ವರ್ಣನೀಯಂ ? = ಎಂದು ಏನು ವರ್ಣಿಸಬೇಕು ? ಎಂದರ್ಥ.

**ಸೂ.ರ.:– एवं च प्रारब्धस्यापि पापस्योपमर्देन ओमित्युच्चार्येति श्रुतौ मोक्षः श्रूयते । ततश्च ज्ञानिकृतपापस्य मोक्षाप्रतिबन्धकत्व-मित्यनायासेन सिद्धम् ॥**

"ಓಮಿತ್ಯುಚ್ಚಾರ್ಯಾಂತರಿಮಮಾತ್ಮಾನಮಭಿಪಶ್ಯೋಪಮೃದ್ಯ ಪುಣ್ಯಂ ಚ ಪಾಪಂ ಚ ಕಾಮಮಾಚರಂತೋ ಬ್ರಹ್ಮಾನುವ್ರಜಂತಿ" (ತರಶ್ರುತಿ)

ಎಂಬುದಾಗಿ ಶ್ರುತಿಯಲ್ಲಿ ಪ್ರಾರಬ್ಧವಾದ ಪಾಪಕ್ಕೂ ಸಹ ಉಪಮರ್ದವಾಗಿ ಜ್ಞಾನಿಗೆ ಮೋಕ್ಷವು ಶ್ರುತವಾಗುತ್ತಿದೆ. ಅಂದಮೇಲೆ ಜ್ಞಾನಿಕೃತವಾದ ಪಾಪವು ಮೋಕ್ಷಕ್ಕೆ ಪ್ರತಿಬಂಧಕವಲ್ಲ ಎಂದು ಅನಾಯಾಸೇನ ಸಿದ್ಧವಾಗುತ್ತದೆ.

## ಸೂತ್ರ - 17

ಸೂ.ರ.:– ननु यदि कामचाराणामपि ज्ञानिनां मुक्तियोग्यता तर्हि तद्वज्जिज्ञासूनामपि कामचाराणां ज्ञानाधिकारः स्यात् । अविशेषात् । तथा चाध्ययनमात्रवत इत्युक्तस्य विष्णुभक्तिशमदमादिवतामेवाधिकार इत्यस्य बाधः स्यादित्याशङ्कामपाकुर्वत्सूत्रं पठति ॥

ಒಂದುವೇಳೆ ಕಾಮಚಾರರಾದ ಜ್ಞಾನಿಗಳಿಗೆ ಮುಕ್ತಿಯೋಗ್ಯತಾ ಇರುವುದಾದರೆ ಹಾಗಾದರೆ ಅವರಂತೆ ಕಾಮಚಾರರಾದ ಜಿಜ್ಞಾಸುಗಳಿಗೂ ಸಹ (ಜ್ಞಾನವನ್ನು ಇಚ್ಛಿಸುವವರಿಗೂ ಸಹ) ಜ್ಞಾನಾಧಿಕಾರ ಬರಲಿ. ಇಬ್ಬರಲ್ಲಿ ವ್ಯತ್ಯಾಸವಿಲ್ಲವಾದ್ದರಿಂದ.

ಹಾಗಾಗಿ 'ಅಧ್ಯಯನಮಾತ್ರವತಃ' ಎಂದು ಹೇಳಿದ ವಿಷ್ಣುಭಕ್ತಿ - ಶಮ - ದಮಾದಿಗಳುಳ್ಳವರಿಗೇ ಅಧಿಕಾರ ಎಂಬುದಕ್ಕೆ ಬಾಧ ಬರುತ್ತದೆ ಎಂಬ ಶಂಕೆಯನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

### ॐ ऊर्ध्वरेतस्सु च शब्दे हि ॐ (३-४-१७)

ಸೂತ್ರಾರ್ಥ :- ಕಾಮಚಾರಾಣಾಮಪಿ ಜ್ಞಾನಿನಾಂ ಮುಕ್ತ್ಯಧಿಕಾರವತ್ = ಕಾಮಚಾರರಾದ ಜ್ಞಾನಿಗಳಿಗೂ ಸಹ ಮುಕ್ತ್ಯಧಿಕಾರ ಇರುವಂತೆ, ಕಾಮಚಾರಾಣಾಂ ಜಿಜ್ಞಾಸೂನಾಂ ನ ಜ್ಞಾನಾಧಿಕಾರಃ = ಕಾಮಚಾರರಾದ ಜಿಜ್ಞಾಸುಗಳಿಗೆ ಜ್ಞಾನಾಧಿಕಾರ ಇಲ್ಲ, ಕುತಃ = ಏಕೆ? ಹಿ = ಯಾವ ಕಾರಣ **ಶಬ್ದೇ** = "ಯ ಇಮಮ್ .... " ಎಂಬ ಶ್ರುತಿಯಲ್ಲಿ (ಮಾಠರಶ್ರುತಿಯಲ್ಲಿ) **ಊರ್ಧ್ವರೇತಸ್ಸು ಚ** (ಏವ) = ಊರ್ಧ್ವ-ರೇತಸ್ತ್ವಾದಿ ಗುಣವಿಶಿಷ್ಟರಾದವರಲ್ಲಿಯೇ ಜ್ಞಾನೋಪದೇಶಃ ವಿಹಿತಃ = ಜ್ಞಾನೋಪ-ದೇಶವು ವಿಹಿತವಾಗಿದೆಯೋ ತಸ್ಮಾತ್ = ಆ ಕಾರಣ.

ಸೂ.ರ.:– एवं च निर्दिष्टश्रुत्या गुरुकुलवासब्रह्मचर्यापरपर्यायोर्ध्वरेतस्त्वादिगुणवत्स्वेव ज्ञानोपदेशस्य विहितत्वात्कामचाराणां जिज्ञासूनां सुतरामपरोक्षज्ञानाधिकाराभावेन तेषामपरोक्षज्ञानाधिकाराभाववत्वमिति सिद्धम् ॥

ಯ ಇಮಂ ಪರಮಂ ಗುಹ್ಯಮೂರ್ಧ್ವರೇತಸ್ಸು ಭಾಷಯೇತ್ ।
ನ ತಥಾ ವಿದ್ಯತೇ ಭೂಯಾನ್ ಯಂ ಪ್ರಾಪ್ಯಾನ್ಯೇಽಪಿ ಭೂಯಸಃ ॥

ಎಂಬ ನಿರ್ದಿಷ್ಟ (ಮಾಠರ) ಶ್ರುತಿಯಲ್ಲಿ ಗುರುಕುಲವಾಸ-ಬ್ರಹ್ಮಚರ್ಯ ಅಪರಪರ್ಯಾಯವಾದ ಊರ್ಧ್ವರೇತಸ್ತ್ವಾದಿ ಗುಣ ಉಳ್ಳವರಲ್ಲಿಯೇ ಜ್ಞಾನೋಪದೇಶವು ವಿಹಿತವಾದ್ದರಿಂದ, ಕಾಮಚಾರರಾದ ಜಿಜ್ಞಾಸುಗಳಿಗೆ ಸುತರಾಂ ಅಪರೋಕ್ಷಜ್ಞಾನಾಧಿಕಾರ ಇಲ್ಲ ಎಂದು ಸಿದ್ಧವಾಗುತ್ತದೆ.

## ಸೂತ್ರ - 18

**ಸೂ.ರ.:- एवं केन स्यादित्यस्य यथेष्टाचारविधित्वमनङ्गीकृत्य स्तुत्यनुमतिरूपार्थावुक्तौ । अधुना यथेष्टाचारविधित्वानङ्गीकारेणैव यज्जैमिनिनाऽर्थान्तरमुक्तं तत्प्रतिपादयत्सूत्रमुपन्यस्यति ॥**

ಈ ರೀತಿಯಾಗಿ "ಕೇನ ಸ್ಯಾತ್ ಯೇನ ಸ್ಯಾತ್" ಎಂಬ ಶ್ರುತಿಗೆ ಯಥೇಷ್ಟಾಚಾರವಿಧಿತ್ವವನ್ನು ಅಂಗೀಕರಿಸದೇ ಸ್ತುತಿ-ಅನುಮತಿ ರೂಪವಾದ ಎರಡು ಅರ್ಥಗಳು ಹೇಳಲ್ಪಟ್ಟವು. ಈಗ ಯಥೇಷ್ಟಾಚಾರವಿಧಿತ್ವವನ್ನು ಅಂಗೀಕರಿಸದೆಯೇ ಏನು ಜೈಮಿನಿಗಳು ಅರ್ಥಾಂತರವನ್ನು ಹೇಳಿದ್ದಾರೆ ಅದನ್ನು (ಅರ್ಥಾಂತರವನ್ನು) ಪ್ರತಿಪಾದಿಸುವ ಸೂತ್ರವನ್ನು ಹೇಳುತ್ತಾರೆ -

**ॐ परामर्शं जैमिनिरचोदना चापवदति हि ॐ (३-४-१८)**

**ಸೂತ್ರಾರ್ಥ :- ಜೈಮಿನಿಃ** = ಜೈಮಿನಿಗಳು **ಪರಾಮರ್ಶಂ** = 'ಯೇನ ಸ್ಯಾತ್' ಎಂಬ ವಾಕ್ಯದಲ್ಲಿ 'ಪ್ರಾತರುತ್ಥಾಯ' ಇತ್ಯಾದಿ ಶ್ರುತ್ಯುಕ್ತಸದಾಚಾರದ್ದೇ ಗ್ರಹಣವನ್ನು ಅಂಗೀಕರಿಸಿ, ಇಲ್ಲಿ ಸದಾಚಾರದ್ದೇ ಸ್ವೇಚ್ಛೆಯ ನಿಮಿತ್ತದಿಂದ ಆಚರಣವು ಪ್ರತಿಪಾದ್ಯವಾಗಿದೆ, ಹೊರತು ನಿಷಿದ್ಧದ ಕರಣವು ಪ್ರತಿಪಾದ್ಯವಾಗಿಲ್ಲ ಎಂದು ಅಭಿಪ್ರಾಯಪಡುತ್ತಾರೆ. ಕುತಃ = ಯಾಕೆ? **ಹಿ** = ಯಾವ ಕಾರಣ **ಅಚೋದನಾ** = ಅನಿಷಿದ್ಧಂ ಜ್ಞಾನಿನಾ ಕಾರ್ಯಂ (ಅನಿಷಿದ್ಧವಾದದ್ದನ್ನು ಜ್ಞಾನಿಯು ಆಚರಿಸಬೇಕು) ಎಂದು ವಿಧಿ ಇಲ್ಲ, **ಅಪವದತಿ ಚ** = ಪ್ರತ್ಯುತ 'ಬ್ರಾಹ್ಮಣೋ ನ ಹಂತವ್ಯಃ' ಎಂಬ ಶ್ರುತಿಯು ವಿಕರ್ಮವನ್ನು ನಿಷೇಧಿಸುತ್ತದೆ ಕೂಡ ತಸ್ಮಾತ್ = ಆ ಕಾರಣ ಎಂದರ್ಥ.

**ಸೂ.ರ.:- एवं च प्रातरुत्थायाथ सन्ध्यामुपासीतेत्यादिना ज्ञानिनो**

सन्ध्यावन्दनाद्याचारपरामर्शाद्विधिबन्धवर्जितत्वेन कामचारणमेव येन स्यादिति श्रुत्या चोच्यते । न तु निषिद्धं कर्तव्यमेवेति विधीयते । ब्राह्मणो न हन्तव्य इत्यपवादश्रवणात् । अतो ज्ञानिनां सदसत्प्रवृत्तिभ्यां विशेष इति सिद्धम् ॥

"ಪ್ರಾತರುತ್ಥಾಯ ಸಂಧ್ಯಾಮುಪಾಸೀತ ಯತ್ ಸಂಧ್ಯಾಮುಪಾಸತೇ ಬ್ರಹ್ಮೈವ ತದುಪಾಸತೇಽಥ ದೇವಾನ್ ನಮೇತ್ ಜುಹುಯಾದ್ ವೇದಾನಾವರ್ತಯೀತ ನಾನ್ಯತ್ ಕಿಂಚಿದಾಚರೇತ್ ನ ಸುರಾಂ ಪಿಬೇತ್ ನ ಪಲಾಂಡುಂ ಭಕ್ಷಯೀತ ನ ಭೃಶಂ ವದೇತ್ ನ ವಿಸ್ಮರೇತಾತ್ಮಾನಂ ಸೋಮಂ ಪಿಬೇತ್ ಹುತಶೇಷೇಣ ವರ್ತಯೇತ್"

ಇತ್ಯಾದಿಯಾಗಿ ಜ್ಞಾನಿಯಾದವನಿಗೆ ಸಂಧ್ಯಾವಂದನಾದಿ ಆಚಾರಪರಾಮರ್ಶ ಮಾಡಿದ್ದರಿಂದ, ಜ್ಞಾನಿಗಳು ವಿಧಿಬಂಧವರ್ಜಿತರಾದ್ದರಿಂದ 'ಯೇನ ಸ್ಯಾತ್ ಕೇನ ಸ್ಯಾತ್' ಎಂಬ ಶ್ರುತಿಯಿಂದ ಜ್ಞಾನಿಗಳಿಗೆ ಕಾಮಚಾರಣವೇ ಹೇಳಲ್ಪಡುತ್ತದೆ. ಹೊರತು ನಿಷಿದ್ಧವಾದದ್ದನ್ನು ಮಾಡಲೇಬೇಕೆಂದು ವಿಧಾನ ಮಾಡುತ್ತಿಲ್ಲ. ಕಾರಣ - "ಬ್ರಾಹ್ಮಣೋ ನ ಹಂತವ್ಯಃ" ಎಂದು ಅಪವಾದ ಶ್ರುತವಾಗುತ್ತಿರುವ ಕಾರಣ. ಆದ್ದರಿಂದ ಜ್ಞಾನಿಗಳಿಗೆ ಸತ್-ಅಸತ್ ಪ್ರವೃತ್ತಿಗಳಿಂದ ವಿಶೇಷ ಇದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 19

ಸೂ.ರ.:- एवं येन स्यादिति वाक्यस्य जैमिनिमतानुसारेण स्वेच्छया सदाचारविधित्वमेवोक्त्वा यत्स्तुतयेऽनुमतिर्वेत्युक्तमभ्यनुज्ञातं तदेव कामचारश्रुत्यर्थतया प्रतिपादयत्सूत्रं पठति ॥

ಈ ರೀತಿಯಾಗಿ 'ಯೇನ ಸ್ಯಾತ್' ಎಂಬ ವಾಕ್ಯಕ್ಕೆ ಜೈಮಿನಿ ಮತಾನುಸಾರವಾಗಿ ಸ್ವೇಚ್ಛೆಯಿಂದ ಸದಾಚಾರವಿಧಿತ್ವವನ್ನು ಹೇಳಿ, "ಸ್ತುತಯೇಽನುಮತಿರ್ವಾ" ಎಂಬುದಾಗಿ ಏನು ಅಭ್ಯನುಜ್ಞಾತವಾಗಿದೆಯೋ ಅದನ್ನೇ ಕಾಮಚಾರಶ್ರುತ್ಯರ್ಥವಾಗಿ ಪ್ರತಿಪಾದಿಸುವ ಸೂತ್ರವನ್ನು ಹೇಳುತ್ತಾರೆ -

**ॐ अनुष्ठेयं बादरायणः साम्यश्रुतेः ॐ (३-४-१९)**

**ಸೂತ್ರಾರ್ಥ** :- **ಬಾದರಾಯಣಃ** = ಪೂಜ್ಯರಾದ ವೇದವ್ಯಾಸರಾದರೋ **ಅನುಷ್ಠೇಯಂ** = ಸ್ವೇಚ್ಛೆಯಿಂದ ಶ್ರುತ್ಯಾದ್ಯುಕ್ತ - ಅನುಷ್ಠಾನಯೋಗ್ಯ ಕಿಂಚಿತ್ ಕರ್ಮಾಚರಣಾಭ್ಯನುಜ್ಞಾನವೇ 'ಯೇನ ಸ್ಯಾತ್' ಎಂಬ ಶ್ರುತಿಯ ಅರ್ಥವಾಗಿದೆ. ನ ತು ಸರ್ವಕರ್ಮಕರಣಾಯ ಯಥೇಷ್ಟಾಚಾರವಿಧಿರೇವ ಇತಿ ಮನ್ಯತೇ = ಹೊರತು ಎಲ್ಲ ಕರ್ಮಗಳನ್ನೂ ಆಚರಿಸುವುದಕ್ಕಾಗಿ ಯಥೇಷ್ಟಾಚಾರವಿಧಿ ಅಲ್ಲ ಎಂಬುದಾಗಿ ಅಭಿಪ್ರಾಯಪಡುತ್ತಾರೆ. ಕುತಃ = ಯಾಕೆ? **ಸಾಮ್ಯಶ್ರುತೇಃ** = ಜ್ಞಾನಿಯು ಕರ್ಮವನ್ನು ಆಚರಿಸಿದರೂ ಆಚರಿಸದೇ ಇದ್ದರೂ "ಈದೃಶ ಏವ" (ಬೃ. 5-5-1) ಒಂದೇ ರೀತಿ ಇರುತ್ತಾನೆ ಎಂದು ಸಾಮ್ಯವು ಶ್ರುತವಾಗುತ್ತಿರುವುದರಿಂದ.

**ಸೂ.ರ.:– एवं चानुष्ठेयानां मध्ये कामचारो यस्मिन्करवाणीति कामस्तस्यानुचरणं यस्मिन्न करवाणीति कामस्तस्यानाचरण-मित्येवानुष्ठेये कामचारानुमतेरेव न तु सर्वेषां कामचारस्य येन स्यादिति श्रुतावुक्तत्वात् । ज्ञानिनः करणाकरणयोर्येन स्यादिति साम्यश्रुतेः (बृ.५-५-१) । इति बादरायणो मन्यते । अतो ज्ञानिनः सदसत्प्रवृत्तिभ्यां विशेष इति सिद्धम् ॥**

ಅನುಷ್ಠೇಯವಾದ ಕರ್ಮಗಳ ಮಧ್ಯದಲ್ಲಿಯೇ ಜ್ಞಾನಿಗೆ ಕಾಮಚಾರವು ಯಾವ ಕರ್ಮದ ವಿಷಯದಲ್ಲಿ ಮಾಡಬೇಕೆಂದು ಇಚ್ಛೆ ಬರುವುದೋ ಅದನ್ನು ಆಚರಿಸುವುದು, ಯಾವ ಕರ್ಮದ ವಿಷಯದಲ್ಲಿ ಮಾಡಬೇಕೆಂದು ಇಚ್ಛೆ ಬರುವುದಿಲ್ಲವೋ ಅದನ್ನು ಆಚರಿಸದಿರುವುದು, ಈ ರೀತಿಯಾಗಿಯೇ ಅನುಷ್ಠೇಯವಾದದ್ದರ ಮಧ್ಯದಲ್ಲಿ ಕಾಮಚಾರಾನುಮತಿಯು "ಯೇನ ಸ್ಯಾತ್" ಎಂಬ ಶ್ರುತಿಯಲ್ಲಿ ಉಕ್ತವಾಗಿದೆ. ಹೊರತು ಎಲ್ಲ ಕರ್ಮಗಳಲ್ಲಿ ಕಾಮಚಾರವು ಶ್ರುತಿಯಲ್ಲಿ ಉಕ್ತವಾಗಿಲ್ಲ. ಯಾಕೆ ? ಜ್ಞಾನಿಯು ಕರ್ಮಗಳನ್ನು ಆಚರಿಸಿದರೆ ಆಚರಿಸದಿದ್ದರೆ ಎರಡು ಪಕ್ಷಗಳಲ್ಲಿಯೂ

"ಕೇನ ಸ್ಯಾತ್ ಯೇನ ಸ್ಯಾತ್ ತೇನ **ಈದೃಶ ಏವ**" (ಬ.ಉ. 5-5-1)

ಎಂಬುದಾಗಿ ಸಾಮ್ಯವು ಶ್ರುತವಾಗುತ್ತಿರುವುದರಿಂದ ಎಂದು ಭಗವಾನ್ ಬಾದರಾಯಣರು ಅಭಿಪ್ರಾಯಪಡುತ್ತಾರೆ.

ಆದ್ದರಿಂದ ಜ್ಞಾನಿಯಾದವನಿಗೆ ಸತ್-ಅಸತ್ ಪ್ರವೃತ್ತಿಗಳಿಂದ ವಿಶೇಷ ಇದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 20

**ಸೂ.ರ.:– एवं केन स्यादिति वाक्यस्य यथेष्टाचारविधित्वाभावमभ्युपेत्य नियमेन सर्वदाचारविधित्वमनुष्ठेयानां मध्ये कामचाराभ्यनुज्ञानमित्यर्थद्वयं स्तुत्यनुमतिरूपार्थद्वयं चोक्तम् । अधुना स्वेच्छाचारणविधिर्वा भवतीत्यर्थप्रतिपादकं सूत्रमुपन्यस्यति ॥**

ಈ ರೀತಿಯಾಗಿ 'ಕೇನ ಸ್ಯಾತ್' ಎಂಬ ವಾಕ್ಯಕ್ಕೆ ಯಥೇಷ್ಟಾಚಾರವಿಧಿತ್ವಾಭಾವವನ್ನು ಅಂಗೀಕರಿಸಿ ನಿಯಮೇನ ಸರ್ವದಾಚಾರವಿಧಿತ್ವ - ಅನುಷ್ಠೇಯಾನಾಂ ಮಧ್ಯೇ ಕಾಮಾಚಾರಾಭ್ಯನುಜ್ಞಾನ ಎಂಬ ಎರಡು ಅರ್ಥಗಳನ್ನು ಹಾಗೂ ಸ್ತುತಿ - ಅನುಮತಿ ರೂಪವಾದ ಎರಡು ಅರ್ಥಗಳನ್ನು ಹೇಳಲಾಯಿತು. ಈಗ ಅಥವಾ 'ಕೇನ ಸ್ಯಾತ್' ಎಂಬ ವಾಕ್ಯವು ಸ್ವೇಚ್ಛಾಚಾರಣವಿಧಿಯೂ ಆಗಬಹುದು ಎಂದು ಪ್ರತಿಪಾದಿಸುವ ಸೂತ್ರವನ್ನು ಹೇಳುತ್ತಾರೆ -

### ॐ विधिर्वा धारणवत् ॐ (३-४-२०)

**ಸೂತ್ರಾರ್ಥ :- ಧಾರಣವತ್** = ಯಾವ ರೀತಿಯಾಗಿ ವೇದಧಾರಣವಿಧಿಗೆ ತ್ರೈವರ್ಣಿಕಾಧಿಕಾರಿಕತ್ವವೇ ಇದೆಯೇ ಹೊರತು ಸರ್ವಾಧಿಕಾರಿಕತ್ವ ಇಲ್ಲವೋ, ಅದೇ ರೀತಿಯಾಗಿ **ವಿಧಿಃ** = ಜ್ಞಾನಿಗಳಿಗೇನೇ 'ಯೇನ ಸ್ಯಾತ್' ಎಂದು ಸ್ವೇಚ್ಛಾಚಾರ ವಿಧಿಯು, ನ ತು ಅಜ್ಞಾನಿನಾಂ = ಹೊರತು ಅಜ್ಞಾನಿಗಳಿಗೆ ಅಲ್ಲ ಎಂದರ್ಥ. ವಾ ಶಬ್ದವು ಹಿಂದೆ ಹೇಳಿದ ಎರಡು ಪಕ್ಷಗಳಿಂದ ಇದಕ್ಕೆ (ಈ ಪಕ್ಷಕ್ಕೆ) ಪಕ್ಷಾಂತರತ್ವ-ದ್ಯೋತಕವಾಗಿದೆ.

**ಸೂ.ರ.:– एवं च त्रैवर्णिकानां वेदविधिधारणवद्येन स्यादिति स्वेच्छाचारविधेर्ज्ञानिनामेव सद्भावात् । ततश्चोक्तं युक्तमेवेति सिद्धम् ॥**

ತ್ರೈವರ್ಣಿಕರಿಗೆ ವೇದವಿಧಿಯು ಹೇಗೋ ಅದರಂತೆ 'ಯೇನ ಸ್ಯಾತ್' ಎಂಬುದಾಗಿ ಸ್ವೇಚ್ಛಾಚಾರವಿಧಿಯು ಜ್ಞಾನಿಗಳಿಗೇ ಇರುವುದರಿಂದ, ಜ್ಞಾನಿಗಳಿಗೆ ಸತ್

- ಅಸತ್ ಪ್ರವೃತ್ತಿಗಳಿಂದ ವಿಶೇಷವಿದೆ ಎಂದು ಹೇಳಿದ್ದು ಯುಕ್ತವಾಗಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 21

**ಸೂ.ರ.:– उक्तमाक्षिप्य समादधत्सूत्रं पठति ॥**

ಹಿಂದೆ ಹೇಳಿದ ವಿಚಾರದ ಮೇಲೆ ಆಕ್ಷೇಪ ಮಾಡಿಕೊಂಡು ಸಮಾಧಾನ ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ स्तुतिमात्रमुपादानादिति चेन्नापूर्वत्वात् ॐ (३-४-२१)**

**ಸೂತ್ರಾರ್ಥ** :- ಕೇನ ಸ್ಯಾದಿತಿ ವಾಕ್ಯಂ = 'ಕೇನ ಸ್ಯಾತ್' ಎಂಬ ವಾಕ್ಯವು **ಸ್ತುತಿಮಾತ್ರಂ** = ಹಿಂದೆ ಹೇಳಿದ ಸ್ತುತಿರೂಪವೇ ಆಗಿದೆ, ಹೊರತು ಸ್ವೇಚ್ಛಾಚರಣವಿಧಿ ಅಲ್ಲ. ಕುತಃ = ಏಕೆ? **ಉಪಾದಾನಾತ್** = ಜ್ಞಾನಿಗಳಿಂದಲೂ ಸಹ, 'ಸಂಧ್ಯಾಮುಪಾಸೀತ' ಇತ್ಯಾದಿ ಸಾಧಾರಣವಿಧಿಯು ಸ್ವೀಕರಿಸಲ್ಪಟ್ಟಿದ್ದರಿಂದ **ಇತಿ ಚೇನ್ನ** = ಎಂಬುದಾಗಿ ಶಂಕೆ ಬಂದರೆ ಅದು ಸರಿಯಲ್ಲ, ಕುತಃ = ಏಕೆ? **ಅಪೂರ್ವತ್ವಾತ್** = ಅಶಬ್ದವಾಚ್ಯಪರಮಾತ್ಮಾಧೀನವಾದ್ದರಿಂದ.

ಜ್ಞಾನಿಗೆ ಸ್ವೇಚ್ಛಾಚರಣವಿಧಿಯೂ ಇಲ್ಲವೆಂದಾದರೆ ಸರ್ವವಿಧ್ಯತಿದೂರತ್ವ-ಪ್ರಸಂಗ ಬರುವುದರಿಂದ ಪರಮಾತ್ಮಾಧೀನತ್ವವೂ ಇಲ್ಲದೇ ಹೋಗಬೇಕಾದೀತು ಎಂದು ಭಾವ.

**ಸೂ.ರ.:– एवं च विरिञ्चस्य पूर्वमनादिब्रह्मत्वाभावेन परब्रह्मणो वशगत्वात् । अनादिभिन्नस्य कस्माचिदुत्पत्तेरावश्यकत्वे तस्य तदधीनत्वात् । सर्वविधिनिपेधगोचरत्वेन विधिविपयत्वं विना स्तुमि-मात्रविपयत्वस्य ब्रह्मण्येव सत्त्वात् । विधीनां विषया इति (ब्रह्मतर्के.) वचनात् । अत उक्तं युक्तमिति सिद्धम् ॥**

ಜ್ಞಾನಿಗಳೂ ಸಹ ಸರ್ವಸಾಮಾನ್ಯವಾದ "ಸಂಧ್ಯಾಮುಪಾಸೀತ" ಇತ್ಯಾದಿ ವಿಧಿಯನ್ನು ಸ್ವೀಕರಿಸುವುದರಿಂದ "ಕೇನ ಸ್ಯಾತ್" ಎಂಬ ವಾಕ್ಯವು ಜ್ಞಾನಿಗಳ ಸ್ತೋತ್ರಪರವೇ ಹೊರತು ಸ್ವೇಚ್ಛಾಚರಣವನ್ನು ವಿಧಾನ ಮಾಡುತ್ತಿಲ್ಲ ಎಂದು ಹೇಳುವುದು ಸರಿಯಲ್ಲ.

ಕಾರಣ - ಜ್ಞಾನಿಗಳಿಗೆ ಸ್ವೇಚ್ಛಾಚರಣವಿಧಿ ಇಲ್ಲದೇ ಸ್ತುತಿವಿಷಯತ್ವ ಹೇಳುವುದಾದರೆ, ಸರ್ವವಿಧ್ಯತಿದೂರರಾಗಿ ಸ್ತುತಿಮಾತ್ರವಿಷಯರಾಗಬೇಕಾಗುತ್ತದೆ. ಆದರೆ ಜ್ಞಾನಿಗಳು ಪರಮಾತ್ಮನ ಅಧೀನರಾಗಿದ್ದರಿಂದ ಸರ್ವವಿಧ್ಯತಿದೂರತ್ವೇನ ಸ್ತುತಿಮಾತ್ರವಿಷಯತ್ವವು ಕೂಡುವುದಿಲ್ಲ. ಚತುರ್ಮುಖ ಬ್ರಹ್ಮದೇವರೂ ಸಹ ಅನಾದಿಬ್ರಹ್ಮರಲ್ಲ, ಪರಬ್ರಹ್ಮನ ವಶರೇ ಆಗಿದ್ದಾರೆ. ಯಾರು ಅನಾದಿಯಲ್ಲ ಅವರಿಗೆ ಯಾರಿಂದಲಾದರೂ ಉತ್ಪತ್ತಿ ಆವಶ್ಯಕವಾದ್ದರಿಂದ ಯಾರಿಂದ ಉತ್ಪತ್ತಿ ಆಗುವುದೋ ಅವರ ಅಧೀನರಾಗುತ್ತಾರೆ. ಹೀಗಾಗಿ ವಿರಿಂಚಾದಿ ಎಲ್ಲ ಜ್ಞಾನಿಗಳೂ ಪರಬ್ರಹ್ಮನಿಂದ ಉತ್ಪತ್ತಿ ಪಡೆಯುವ ಕಾರಣ ಪರಮಾತ್ಮನ ಅಧೀನರೇ ಆಗಿದ್ದಾರೆ. ಪರಮಾತ್ಮಾಧೀನ-ರಾದ ಜ್ಞಾನಿಗಳಿಗೆ ಸರ್ವವಿಧ್ಯತಿದೂರತ್ವೇನ ಸ್ತುತಿಮಾತ್ರವಿಷಯತ್ವವು ಉಪಪನ್ನ-ವಾಗುವುದಿಲ್ಲ.

ಪರಮಾತ್ಮಾಧೀನರಾದರೂ ಸಹ ಸರ್ವವಿಧ್ಯತಿದೂರತ್ವೇನ ಸ್ತುತಿಮಾತ್ರ-ವಿಷಯತ್ವ ಏಕೆ ಕೂಡಬಾರದು ? ಎಂಬ ಪ್ರಶ್ನೆ ಸರಿಯಲ್ಲ.

ವಿಧೀನಾಂ ವಿಷಯಾಸ್ತ್ವನ್ಯೇ ಬ್ರಹ್ಮಣಃ ಸ್ವೇಚ್ಛಯಾ ಕೃತೌ ।
ಪರಸ್ಯ ಬ್ರಹ್ಮಣೋ ಹ್ಯೇವ ಸರ್ವವಿಧ್ಯತಿದೂರತಾ ॥

ಎಂಬುದಾಗಿ ಬ್ರಹ್ಮತರ್ಕವಚನ ಇರುವುದರಿಂದ, ಸರ್ವವಿಧ್ಯತಿಕ್ರಮೇಣ ಸ್ತುತಿಮಾತ್ರವಿಷಯತ್ವವು ಪರಬ್ರಹ್ಮನಿಗೆ ಮಾತ್ರ ಇರುವುದು. ಪರಬ್ರಹ್ಮನನ್ನು ಬಿಟ್ಟು ವಿರಿಂಚಾದಿ ಯಾವ ಜ್ಞಾನಿಗೂ ಸಹ ಸರ್ವವಿಧ್ಯತಿಕ್ರಮೇಣ ಸ್ತುತಿಮಾತ್ರವಿಷಯತ್ವವು ಇಲ್ಲ.

ಆದ್ದರಿಂದ ಜ್ಞಾನಿಗಳಿಗೆ ಸತ್-ಅಸತ್ ಪ್ರವೃತ್ತಿಗಳಿಂದ ವಿಶೇಷವಿದೆ ಎಂದು ಹೇಳಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 22

**ಸೂ.ರ.:- ननु ज्ञानिनां स्वेच्छाचरणविधेः स्फुटप्रमाणसिद्धत्वे भवेत् येन स्यादिति वाक्यं स्वेच्छाचरणविध्यर्थकम् । विधेः स्फुट-प्रमाणसिद्धत्वमेव कुत इत्याशङ्कायां सूत्रमुपन्यस्यति ॥**

ಜ್ಞಾನಿಗಳ ಸ್ವೇಚ್ಛಾಚರಣವಿಧಿಯು ಸ್ಫುಟಪ್ರಮಾಣಸಿದ್ಧವಾಗಿದ್ದರೆ ಆಗ 'ಯೇನ

ಸ್ಯಾತ್' ಎಂಬ ವಾಕ್ಯವು ಸ್ವೇಚ್ಛಾಚರಣವಿಧ್ಯರ್ಥಕವಾಗುತ್ತಿತ್ತು. ಆದರೆ ಸ್ವೇಚ್ಛಾ-ಚರಣವಿಧಿಗೆ ಸ್ಫುಟಪ್ರಮಾಣಸಿದ್ಧತ್ವವೇ ಹೇಗೆ? ಎಂದು ಶಂಕೆ ಬಂದಾಗ ಸೂತ್ರವನ್ನು ಹೇಳುತ್ತಾರೆ –

### ॐ भावशब्दाच्च ॐ (३-४-२२)

**ಸೂತ್ರಾರ್ಥ** :- ಭಾವಃ ಇಚ್ಛಾ = ಭಾವ ಎಂದರೆ ಇಚ್ಛಾ **ಭಾವಶಬ್ದಾಚ್ಚ** = ಭಾವಶಬ್ದಘಟಿತವಾದ 'ಯಥಾ ವಿಧಾನಂ' ಎಂದು (ತರಶ್ರುತಿ) ಶ್ರುತಿ ಇರುವುದ-ರಿಂದಲೂ ಸಹ 'ಕೇನ ಸ್ಯಾತ್' ಎನ್ನುವುದು ಕಾಮಚಾರವಿಧಿಯಾಗಿದೆ.

**ಸೂ.ರ.:– एवं च केन स्यादित्यस्य विध्यतिदूरत्वेन ज्ञानिनः स्तुतित्वे सन्ध्यावन्दनादिसामान्यविध्यभावस्यानेन वाक्येनोक्तत्वात् । स्वेच्छाचरणविधेश्च वादिनाऽनङ्गीकारात् । सर्वविध्यतिदूरत्वेन स्तुतित्व प्रसङ्गात् । न च तदिष्टम् । तस्येश्वरधर्मत्वात् । अत उक्तं युक्तमिति सिद्धम् ॥**

'ಕೇನ ಸ್ಯಾತ್' ಎನ್ನುವುದು ವಿಧ್ಯತಿದೂರವಾಗಿ ಜ್ಞಾನಿಯ ಸ್ತುತಿರೂಪ-ವಾಗುವುದಾದರೆ, ಸಂಧ್ಯಾವಂದನಾದಿ ಸಾಮಾನ್ಯವಿಧ್ಯಭಾವವು ಇದರಿಂದ ಹೇಳಿ-ದಂತಾಗುವುದರಿಂದ, ಸ್ವೇಚ್ಛಾಚರಣವಿಧಿಯು ವಾದಿಯಿಂದ ಅನಂಗೀಕೃತವಾದ್ದ-ರಿಂದ, ಸರ್ವವಿಧ್ಯತಿದೂರವಾಗುವ ಕಾರಣ ಸ್ತುತಿತ್ವಪ್ರಸಂಗ ಬರಬೇಕಾಗುತ್ತದೆ. ಆದರೆ ಅದು ಇಷ್ಟವಾಗಿಲ್ಲ. ಅದು ಈಶ್ವರಧರ್ಮವಾದ್ದರಿಂದ. ಆದ್ದರಿಂದ ನಾವು ಹೇಳಿದ್ದು ಯುಕ್ತವಾಗಿದೆ ಎಂದು ಸಿದ್ಧವಾಗುತ್ತದೆ.

### ಸೂತ್ರ – 23

**ಸೂ.ರ.:– ननु केन स्यादिति वाक्यस्य प्रातरुत्थायेति वाक्यानु-सारेण जैमिनिमतमवलम्ब्य ज्ञानिभिः समस्तं कार्यमित्युक्तम् । तथा च यस्त्वात्मरतिरिति (गी.३-१७) वाक्यानुसारेण स्वेच्छाचरणानु-ज्ञानमर्थ उक्तः । पुनश्च यथापि विधानमित्याद्यनुसारेण स्वेच्छाचरण-विधायकत्वमुक्तम् । ततश्चैवं वाक्यं न कस्याप्यर्थस्य निश्चायकं स्यादिति प्राप्ते सूत्रितम् ॥**

'ಕೇನ ಸ್ಯಾತ್' ಎಂಬ ವಾಕ್ಯಕ್ಕೆ 'ಪ್ರಾತರುತ್ಥಾಯ' ಎಂಬ ವಾಕ್ಯಾನುಸಾರವಾಗಿ ಜೈಮಿನಿಮತವನ್ನು ಅವಲಂಬಿಸಿ ಜ್ಞಾನಿಗಳಿಂದ ಸಮಸ್ತವೂ ಕಾರ್ಯವಾಗಿದೆ ಎಂದು ಹೇಳಲಾಯಿತು. 'ಯಸ್ತ್ವಾತ್ಮರತಿಃ' (ಗೀತಾ 3-17) ಎಂಬ ವಾಕ್ಯಾನುಸಾರವಾಗಿ ಸ್ವೇಚ್ಛಾಚರಣಾನುಜ್ಞಾನವು ಅರ್ಥ ಎಂದು ಹೇಳಲಾಯಿತು. ಮತ್ತೆ 'ಯಥಾ ವಿಧಾನಂ' ಇತ್ಯಾದ್ಯನುಸಾರವಾಗಿ ಸ್ವೇಚ್ಛಾಚರಣವಿಧಾಯಕತ್ವವನ್ನು ಹೇಳಲಾಯಿತು. ಹಾಗಾಗಿ 'ಕೇನ ಸ್ಯಾತ್' ಎಂಬ ವಾಕ್ಯವು ಯಾವ ಅರ್ಥಕ್ಕೂ ನಿಶ್ಚಾಯಕವಲ್ಲ ಎಂಬುದಾಗಿ ಆಕ್ಷೇಪ ಬಂದರೆ, ಪರಿಹಾರಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

## ॐ परिप्लवार्था इति चेन्न विशेषितत्वात् ॐ (३-४-२३)

**ಸೂತ್ರಾರ್ಥ :-** ನಿಯಮೇನ ಸರ್ವಧರ್ಮಾಚರಣವಿಧಿಪಕ್ಷಸ್ಯ = ನಿಯಮೇನ ಸರ್ವಧರ್ಮಾಚರಣವಿಧಿಪಕ್ಷ ಹಾಗೂ ಅನುಷ್ಠೇಯಾನಾಂ ಮಧ್ಯೇ ಸ್ವೇಚ್ಛಯಾ ಕತಿಪಯಧರ್ಮಾಚರಣಾಭ್ಯನುಜ್ಞಾನಪಕ್ಷಸ್ಯ = ಅನುಷ್ಠೇಯವಾದವುಗಳ ಮಧ್ಯದಲ್ಲಿ ಸ್ವೇಚ್ಛೆಯಿಂದ ಕತಿಪಯಧರ್ಮಾಚರಣ ಅಭ್ಯನುಜ್ಞಾನಪಕ್ಷ ಮತ್ತು ಸ್ವೇಚ್ಛಾಚರಣವಿಧಿ ಪಕ್ಷಸ್ಯ ಚ = ಸ್ವೇಚ್ಛಾಚರಣವಿಧಿಪಕ್ಷ ಇವುಗಳು ಪರಸ್ಪರವಿರುದ್ಧತ್ವಾತ್ = ಪರಸ್ಪರ ವಿರುದ್ಧವಾದ್ದರಿಂದ ಯೇನ ಸ್ಯಾದಿತ್ಯಾದಯಃ = ಯೇನ ಸ್ಯಾತ್ ಇತ್ಯಾದಿ ವಾಕ್ಯಗಳು **ಪರಿಪ್ಲವಾರ್ಥಾಃ** = ಅವ್ಯವಸ್ಥಿತಾರ್ಥಕವಾಗಿವೆ **ಇತಿ ಚೇನ್ನ** = ಎಂದು ಶಂಕೆ ಬಂದರೆ, ಅದು ಸರಿಯಲ್ಲ. ಕುತಃ = ಏಕೆ? **ವಿಶೇಷಿತತ್ವಾತ್** = 'ತ್ರೇಧಾ ಹಿ ಜ್ಞಾನಿನಃ' ಎಂಬ ಶ್ರುತಿಯಲ್ಲಿ ಜ್ಞಾನಿಗಳು ವಿಧಿ – ನಿಯತಾದಿ ಪದಗಳಿಂದ ವಿಶೇಷಿತರಾದ್ದರಿಂದ, ಜ್ಞಾನಿಗಳಿಗೆ ಅನೇಕ ಪ್ರಕಾರತ್ವವನ್ನು ಹೇಳಿದ್ದರಿಂದ ಎಂದರ್ಥ.

**ಸೂ.ರ.:– एवं च ज्ञानिनां त्रिविधत्वेन तदधिकारानुसारेण तत्तन्निश्चायकत्वसम्भवात् । तत्र विधिनियता मनुष्या अनियता देवाः स्वेच्छानियतस्तु चतुर्मुख इति विवेकः । अत उक्तं युक्तमिति सिद्धम् ॥**

ಜ್ಞಾನಿಗಳು ತ್ರಿವಿಧರಾದ್ದರಿಂದ ಅವರವರ ಅಧಿಕಾರಾನುಸಾರವಾಗಿ ತತ್ತನ್ನಿಶ್ಚಾಯಕತ್ವವು ಸಂಭವಿಸುತ್ತದೆ. ಅವುಗಳಲ್ಲಿ ವಿಧಿನಿಯತರಾದವರು ಮನುಷ್ಯರು, ಅನಿಯತರಾದವರು ದೇವತೆಗಳು, ಸ್ವೇಚ್ಛಾನಿಯತರಾದವರು ಚತುರ್ಮುಖ-ಬ್ರಹ್ಮದೇವರು ಎಂದು ವಿವೇಕ. ಆದ್ದರಿಂದ ಹೇಳಿದ್ದು ಯುಕ್ತವಾಗಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 24

**ಸೂ.ರ.:– ननु ज्ञानिनामनेकप्रकारत्वोक्त्या कथं परिहारो जात इत्याशङ्कां पराकुर्वत्सूत्रं पठति ॥**

ಜ್ಞಾನಿಗಳಿಗೆ ಅನೇಕಪ್ರಕಾರತ್ವವನ್ನು ಹೇಳಿದ್ದರಿಂದ ಹೇಗೆ ಪರಿಹಾರವು ಉಂಟಾಯಿತು? ಎಂದು ಶಂಕೆ ಬಂದರೆ, ಅದನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

### ॐ तथा चैकवाक्योपबन्धात् ॐ (३-४-२४)

**ಸೂತ್ರಾರ್ಥ** :- ಉಕ್ತಪಕ್ಷತ್ರಯಾನುಸಾರಿವಾಕ್ಯಾನಾಂ ಅಧಿಕಾರಿಭೇದಮಾಶ್ರಿತ್ಯ ಅವಿರೋಧೇನ ಏಕವಾಕ್ಯತಾಯಾ ಯುಕ್ತತ್ವಾತ್ = ಹೇಳಿದ ಮೂರುಪಕ್ಷಗಳಿಗೆ ಅನುಸಾರಿಯಾದ ವಾಕ್ಯಗಳಿಗೆ ಅಧಿಕಾರಿಭೇದವನ್ನು ಆಶ್ರಯಿಸಿದಾಗ ವಿರೋಧ ಬರುವುದಿಲ್ಲವಾದ್ದರಿಂದ ಏಕವಾಕ್ಯತ್ವವು ಯುಕ್ತವಾಗಿದೆ.

**ತಥಾ ಚ** ಶ್ರುತೀನಾಂ ಏಕವಾಕ್ಯತ್ವೇ ಸಿದ್ಧೇ = ಶ್ರುತಿಗಳಿಗೆ ಏಕವಾಕ್ಯತ್ವವು ಸಿದ್ಧವಾಗುತ್ತಿರಲು ಯೇನ ಸ್ಯಾದಿತಿ ವಾಕ್ಯಸ್ಯಾಪಿ = 'ಯೇನ ಸ್ಯಾತ್' ಎಂಬ ವಾಕ್ಯಕ್ಕೂ ಸಹ **ಏಕವಾಕ್ಯೋಪಬಂಧಾತ್** = ಅಧಿಕಾರಿಭೇದದಿಂದ ವ್ಯವಸ್ಥಿತಾರ್ಥಕತ್ವವು ಉಪಪನ್ನವಾಗುವುದರಿಂದ ನ ಪರಿಪ್ಲವಾರ್ಥತ್ವಂ = ಅವ್ಯವಸ್ಥಿತಾರ್ಥಕತ್ವವಿಲ್ಲ.

**ತಥಾ ಚ** ಜೈಮಿನಿಮತಂ ಮನುಷ್ಯಜ್ಞಾನಿವಿಷಯಂ = ಜೈಮಿನಿಗಳ ಮತವು ಮನುಷ್ಯಜ್ಞಾನಿವಿಷಯಕವಾದದ್ದು. ವ್ಯಾಸಮತಂ ದೇವತಾವಿಷಯಂ = ವ್ಯಾಸರ ಮತವು ದೇವತಾವಿಷಯಕವಾಗಿದೆ. ವಿಧಿರ್ವೇತಿ ಮತಂ ವಿಧಿವೇತ್ತೃವಿಷಯಮಿತಿ ನ ವಿರೋಧಃ ಇತಿ ಭಾವಃ = 'ವಿಧಿರ್ವಾ' ಎಂಬ ಮತವು ವಿಧಿವೇತ್ತೃಗಳ ವಿಷಯಕವಾದದ್ದು. ಹೀಗಾಗಿ ವಿರೋಧವಿಲ್ಲ ಎಂದು ಭಾವ.

**ಸೂ.ರ.:– एवं च प्रातरुत्थायेत्यादीनां तथा यथाविधानमपर इति (तुर श्रुतिः) वाक्यस्य चाविरोधेनोक्तं युक्तमिति सिद्धम् ॥**

'ಪ್ರಾತರುತ್ಥಾಯ' ಇತ್ಯಾದಿವಾಕ್ಯಗಳಿಗೆ 'ಯಥಾ ವಿಧಾನಮಪರೇ' ಎಂಬ ತುರಶ್ರುತಿವಾಕ್ಯಗಳಿಗೆ ವಿರೋಧವಿಲ್ಲವಾದ್ದರಿಂದ ಹೇಳಿದ್ದು ಯುಕ್ತವಾಗಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 25

ಸೂ.ರ.:- एवं ज्ञानिनः केन स्यादिति श्रुतिबलेन सदसत्प्रवृत्त्योः शङ्कितोऽविशेषः श्रुतेरर्थान्तरोक्त्या परामर्शमित्यादिना परिहृतः । तत्रोक्तं ज्ञानिनः सदसत्प्रवृत्त्योर्विशेषे ज्ञानस्यासत्प्रवृत्तिकुण्ठितशक्ते- र्मोक्षसाधनविधुरत्वं कामकारेण चैक इत्यादिना परिहृतम् । अत्र तु सत्प्रवृत्त्या ज्ञानिनां विशेषसत्वात् सत्प्रवृत्तिसमुचितमेव ज्ञानं मोक्षसाधनमिति तद्विधुराणां ज्ञानिनां मोक्षो न स्यादित्याशङ्कां पराकुर्वत्सूत्रं पठति ॥

ಈ ರೀತಿಯಾಗಿ 'ಕೇನ ಸ್ಯಾತ್' ಎಂಬ ಶ್ರುತಿಬಲದಿಂದ ಜ್ಞಾನಿಯಾದವನಿಗೆ ಸತ್-ಅಸತ್ ಪ್ರವೃತ್ತಿಗಳಲ್ಲಿ ಅವಿಶೇಷವು (ಯಾವ ವಿಶೇಷವಿಲ್ಲ ಎಂದು) ಶಂಕಿಸಲಾಗಿ, 'ಸ್ತುತಯೇ' ಎಂಬ ಸೂತ್ರದಿಂದ ಶ್ರುತಿಗೆ ಅರ್ಥಾಂತರವನ್ನು (ಸ್ತುತ್ಯರ್ಥಕತ್ವವನ್ನು) ಹೇಳುವ ಮೂಲಕ ಹಾಗೂ 'ಪರಾಮರ್ಶಂ' ಇತ್ಯಾದಿ ಸೂತ್ರಗಳಿಂದ ಸದಾಚಾರಮಾತ್ರವಿಷಯತ್ವವನ್ನು ಹೇಳುವ ಮೂಲಕ ಅವಿಶೇಷ ಶಂಕೆಯನ್ನು ಪರಿಹರಿಸಲಾಯಿತು. ಅಲ್ಲಿ "ಜ್ಞಾನಿಯಾದವನಿಗೆ ಸತ್-ಅಸತ್ ಪ್ರವೃತ್ತಿಗಳಲ್ಲಿ ವಿಶೇಷ ಇರುವುದಾದರೆ ಅಸತ್‌ಪ್ರವೃತ್ತಿಯಿಂದ ಕುಂಠಿತವಾದ ಶಕ್ತಿಯುಳ್ಳ ಜ್ಞಾನವು ಮೋಕ್ಷಸಾಧನವಾಗದೇ ಹೋಗಬೇಕಾಗುತ್ತದೆ" ಎಂಬುದಾಗಿ ಏನು ಶಂಕೆ ಬಂತು ಅದನ್ನು 'ಕಾಮಕಾರೇಣ ಚೈಕೇ' ಇತ್ಯಾದಿ ಸೂತ್ರಗಳಿಂದ ಪರಿಹರಿಸಲಾಯಿತು.

ಈಗ ಪ್ರಕೃತದಲ್ಲಿ ಜ್ಞಾನಿಗಳಿಗೆ ಸತ್ಪ್ರವೃತ್ತಿಯಿಂದ ವಿಶೇಷ ಇರುವುದರಿಂದ ಜ್ಞಾನವು ಸತ್ಪ್ರವೃತ್ತಿಸಾಪೇಕ್ಷವಾಗಿಯೇ ಮೋಕ್ಷಸಾಧನವಾಗುತ್ತದೆ ಎಂದಾಗಿ, ಸತ್ಪ್ರವೃತ್ತಿರಹಿತರಾದ ಜ್ಞಾನಿಗಳಿಗೆ ಮೋಕ್ಷ ಆಗದೇ ಹೋಗಬೇಕಾಗುತ್ತದೆ ಎಂಬ ಶಂಕೆಯನ್ನು ಪರಿಹರಿಸುವ ಸೂತ್ರವನ್ನು ಹೇಳುತ್ತಾರೆ -

### ॐ अत एव चाग्नीन्धनाद्यनपेक्षा ॐ (३-४-२५)

ಸೂತ್ರಾರ್ಥ :- ಅಗ್ನೀಂಧನಾದ್ಯನಪೇಕ್ಷಾ = ಜ್ಞಾನಕ್ಕೆ ಮೋಕ್ಷಸಾಧನತ್ವ ವಿಷಯದಲ್ಲಿ ಅಗ್ನಿಹೋತ್ರಾದಿ ಸತ್ಕರ್ಮಗಳ ಸಾಪೇಕ್ಷತ್ವ ಇಲ್ಲ. ಕುತಃ ? = ಯಾಕೆ ?

**ಅತ ಏವ** = ಕಾಮಚಾರರಾದ ಜ್ಞಾನಿಗಳಿಗೂ ಸಹ ಮೋಕ್ಷವು ಪ್ರಮಾಣಸಿದ್ಧ-ವಾದ್ದರಿಂದ.

**ಸೂ.ರ.:– एवं च न ब्रूमो वयमग्निहोत्रादिसमुचितस्यैव ज्ञानस्य मोक्षसाधनत्वं येनोक्तदोषः स्यात् । किं नाम केवलस्यैव मोक्षहेतुत्वम् । कामचाराणामपि मोक्षश्रवणात् । अतो ज्ञानिनां सदसत्प्रवृत्तिभ्यां विशेषसद्भावेन मोक्षो नियत एवेति सिद्धम् ॥**

ಅಗ್ನಿಹೋತ್ರಾದಿ ಸತ್ಪ್ರವೃತ್ತಿಸಾಪೇಕ್ಷ(ಸಮುಚಿತ)ವಾದ ಜ್ಞಾನವೇ ಮೋಕ್ಷಸಾಧನ ಎಂಬುದಾಗಿ ನಾವು ಹೇಳುವುದಿಲ್ಲ. ಒಂದುವೇಳೆ ಹಾಗೆ ಹೇಳುತ್ತಿದ್ದರೆ, ಸತ್ಪ್ರವೃತ್ತಿ-ರಹಿತರಾದ ಜ್ಞಾನಿಗಳಿಗೆ ಮೋಕ್ಷವಾಗದೇ ಹೋಗಬೇಕಾಗುತ್ತದೆ ಎಂಬ ದೋಷ ನಮಗೆ ಬರುತ್ತಿತ್ತು.

ಕಿಂ ನಾಮ ? ಮತ್ತೆ ಏನು ಹೇಳುತ್ತೇವೆ ? ಕಾಮಚಾರರಾದ ಜ್ಞಾನಿಗಳಿಗೂ ಮೋಕ್ಷವು ಶ್ರುತವಾಗುತ್ತಿರುವುದರಿಂದ ಕೇವಲ ಜ್ಞಾನವೇ ಮೋಕ್ಷಸಾಧನ ಎಂದು ಹೇಳುತ್ತೇವೆ. ಆದ್ದರಿಂದ ಜ್ಞಾನಿಗಳಿಗೆ ಸತ್-ಅಸತ್ ಪ್ರವೃತ್ತಿಗಳಿಂದ ವಿಶೇಷ ಇರುವುದರಿಂದ ಮೋಕ್ಷವು ನಿಯತವೇ ಆಗಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ – 26

**ಸೂ.ರ.:– नन्वस्तु ज्ञानिनः सत्प्रवृत्त्या विशेषः । स च मोक्ष-प्राप्तिरूप एव । नाधिक्यरूपः । न चैवं ज्ञानिनां सुकृतौ कृतावकृतौ च मोक्षश्रुतिविरोधः । तत्प्रवृत्तेर्मोक्षहेतुत्वेऽप्यसत्प्रवृत्तेरप्रतिबन्धकत्वेन तदुपपत्तेरित्याशङ्कां परिहरत्सूत्रमुपन्यस्यति ॥**

ಜ್ಞಾನಿಯಾದವನಿಗೆ ಸತ್ಪ್ರವೃತ್ತಿಯಿಂದ ವಿಶೇಷ ಇದೆ ಎಂದಾಗಲಿ. ಆ ವಿಶೇಷವು ಮೋಕ್ಷಪ್ರಾಪ್ತಿರೂಪವೇ ಆಗಿದೆ. ಹೊರತು ಆಧಿಕ್ಯರೂಪವಾಗಿಲ್ಲ. ಹಾಗಾದರೆ ಜ್ಞಾನಿಗಳಿಗೆ ಸತ್ಕರ್ಮ ಮಾಡಿದಾಗಲೂ ಮಾಡದಿದ್ದಾಗಲೂ ಮೋಕ್ಷವಾಗೇ ಆಗುತ್ತದೆ ಎಂದು ಹೇಳುವ 'ಕಾಮಚಾರಾಃ ಕಾಮಭಕ್ಷಾಃ' ಎಂಬ ಶ್ರುತಿಯ ವಿರೋಧ ಬರುವುದಿಲ್ಲವೇ ? ಎಂಬ ಶಂಕೆ ಬೇಡ. ಕಾರಣ – ಜ್ಞಾನಿಗಳ ಪ್ರವೃತ್ತಿಯು

ಮೋಕ್ಷಹೇತುವಾಗಿದ್ದರೂ ಸಹ ಅಸತ್ಪ್ರವೃತ್ತಿಯು ಮೋಕ್ಷಕ್ಕೆ ಪ್ರತಿಬಂಧಕವಾಗದ ಕಾರಣ ಮೋಕ್ಷಶ್ರುತಿಯು ಉಪಪನ್ನವಾಗುತ್ತದೆ ಎಂಬುದಾಗಿ ಶಂಕೆ ಬಂದರೆ, ಆ ಶಂಕೆಯನ್ನು ಪರಿಹರಿಸುವ ಸೂತ್ರವನ್ನು ಹೇಳುತ್ತಾರೆ -

## ॐ सर्वापेक्षा च यज्ञादिश्रुतेरश्ववत् ॐ (३-४-२६)

**ಸೂತ್ರಾರ್ಥ :- ಅಶ್ವವತ್** = ಯಾವ ರೀತಿಯಾಗಿ ಗತಿ(ಗಮನ)ಸಾಧನವಾದ ಕುದುರೆ ಮೊದಲಾದವುಗಳು ಗತಿನಿಷ್ಪತ್ತಿಗಾಗಿಯೇ (ಗಮನ ಮಾಡುವುದಕ್ಕಾಗಿಯೇ) ಅಪೇಕ್ಷಿಸಲ್ಪಡುತ್ತವೆ, ಹೊರತು ಆ ಗಮನಫಲವಾದ ಗ್ರಾಮಾದಿಪ್ರಾಪ್ತಿಗಾಗಿ ಅಪೇಕ್ಷಿಸಲ್ಪಡುವುದಿಲ್ಲ. ಅದರಂತೆಯೇ **ಸರ್ವಾಪೇಕ್ಷಾ** = ಎಲ್ಲ ಸತ್ಪ್ರವೃತ್ತಿಗಳ ಅಪೇಕ್ಷೆಯು ಮೋಕ್ಷಸಾಧನಜ್ಞಾನೋತ್ಪತ್ತೌ ಏವ = ಮೋಕ್ಷಸಾಧನವಾದ ಜ್ಞಾನದ ಉತ್ಪತ್ತಿಗಾಗಿಯೇ ಹೊರತು ಜ್ಞಾನಫಲವಾದ ಮೋಕ್ಷಪ್ರಾಪ್ತಿಗಾಗಿ ಅಲ್ಲ.

ಕುತಃ = ಯಾಕೆ ? **ಯಜ್ಞಾದಿಶ್ರುತೇಃ** = "ವಿವಿದಿಷಂತಿ ಯಜ್ಞೇನ ದಾನೇನ ತಪಸಾಽನಾಶಕೇನ" (ಬೃ.ಉ. 6-4-22) ಎಂಬುದಾಗಿ ಶ್ರುತಿ ಇರುವುದರಿಂದ.

**ಸೂ.ರ.:- एवं च ज्ञानार्थं तावत्सर्वकर्मणोऽपेक्षितत्वेन तेषां निष्पन्नज्ञानस्य मोक्षप्राप्त्यर्थमनपेक्षणात् । तत्र निर्दिष्टनिदर्शन-सद्भावात् । अतः सदसत्प्रवृत्तिभ्यां ज्ञानिनां विशेष इति सिद्धम् ॥**

"ವಿವಿದಿಷಂತಿ ಯಜ್ಞೇನ ದಾನೇನ ತಪಸಾಽನಾಶಕೇನ" (ಬೃ.ಉ. 6-4-22) ಎಂಬುದಾಗಿ ಶ್ರುತಿ ಇರುವುದರಿಂದ ಜ್ಞಾನಕ್ಕಾಗಿಯೇ ಅಗ್ನಿಹೋತ್ರಾದಿ ಎಲ್ಲ ಸತ್ಕರ್ಮಗಳು ಅಪೇಕ್ಷಿತವಾದ್ದರಿಂದ, ಜ್ಞಾನವನ್ನು ಪಡೆದ ಆ ಜ್ಞಾನಿಗಳಿಗೆ ಮೋಕ್ಷ-ಪ್ರಾಪ್ತಿಗಾಗಿ ಅಪೇಕ್ಷಿತವಾಗಿಲ್ಲ. ಆ ವಿಷಯದಲ್ಲಿ ನಿರ್ದಿಷ್ಟವಾದ ಕುದುರೆ ಮುಂತಾದ ನಿದರ್ಶನವೂ ಇದೆ. ಆದ್ದರಿಂದ, ಜ್ಞಾನಿಗಳಿಗೆ ಸತ್-ಅಸತ್ ಪ್ರವೃತ್ತಿಗಳಿಂದ ವಿಶೇಷವಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 27

**ಸೂ.ರ.:- ननु यदि सदसत्प्रवृत्तिभ्यां मोक्षतदभावयोरभावस्तर्हि ज्ञानिनस्ताभ्यां विशेषो नास्तीति न तेन सत्कर्म कार्यमसत्कार्यं**

**त्याज्यम् । न च ताभ्यां मोक्षे आधिक्यादि भवतीत्युक्तमिति वाच्यम् । ज्ञानादेवेति श्रुतेर्ज्ञानादेव तदुपपत्तेरित्याशङ्कां पराकुर्वत्सूत्रं पठति ॥**

ಒಂದುವೇಳೆ ಸತ್ಪ್ರವೃತ್ತಿ-ಅಸತ್ಪ್ರವೃತ್ತಿಗಳಿಂದ ಮೋಕ್ಷ-ತದಭಾವಗಳು ಇಲ್ಲ ಎಂದಾದರೆ, ಜ್ಞಾನಿಗೆ ಸತ್-ಅಸತ್ ಪ್ರವೃತ್ತಿಗಳಿಂದ ವಿಶೇಷ ಇಲ್ಲ ಎಂದಾಗುತ್ತದೆ. ವಿಶೇಷ ಇಲ್ಲ ಎಂದಮೇಲೆ ಜ್ಞಾನಿಯು ಸತ್ಕರ್ಮವನ್ನು ಮಾಡುವುದು ಬೇಡ. ಅಸತ್ಕರ್ಮವನ್ನು ಬಿಡುವುದು ಬೇಡ.

ಹಾಗಲ್ಲ, ಜ್ಞಾನದಿಂದ ಮೋಕ್ಷವು ಸಿದ್ಧವಾದರೂ ಸಹ ಸತ್ಕರ್ಮಗಳಿಂದ ಮೋಕ್ಷದಲ್ಲಿ ಆಧಿಕ್ಯ ಉಂಟಾಗುತ್ತದೆ, ಅಸತ್ಕರ್ಮದಿಂದ ಹ್ರಾಸ ಉಂಟಾಗುತ್ತದೆ. ಆದ್ದರಿಂದ ಸತ್ಕರ್ಮ ಕಾರ್ಯ, ಅಸತ್ಕರ್ಮ ತ್ಯಾಜ್ಯ ಎಂದು ಹೇಳಿದ್ದೇವೆಯಲ್ಲ ? ಎಂದು ಶಂಕಿಸುವುದು ಸರಿಯಲ್ಲ. ಕಾರಣ, 'ಜ್ಞಾನಾದೇವ' ಎಂದು ಶ್ರುತಿ ಇರುವುದರಿಂದ ಜ್ಞಾನದಿಂದಲೇ ಮೋಕ್ಷ-ಮೋಕ್ಷಾಧಿಕ್ಯಗಳು ಉಪಪನ್ನವಾಗು-ವುದರಿಂದ ಎಂಬುದಾಗಿ ಶಂಕೆ ಬಂದರೆ, ಆದನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ शमदमाद्युपेतः स्यात्तथापि तु तद्विधेस्तदङ्गतया तेषामवश्यानुष्ठेयत्वात् ॐ (३-४-२७)**

**ಸೂತ್ರಾರ್ಥ** :- ಯದ್ಯಪಿ ಜ್ಞಾನೇನೈವ ಮೋಕ್ಷೋ ನಿಯತಃ = ಯದ್ಯಪಿ ಜ್ಞಾನದಿಂದಲೇ ಮೋಕ್ಷವು ನಿಯತವಾಗಿದೆ. **ತಥಾಪಿ** = ಆದರೂ ಸಹ ಜ್ಞಾನೀ = ಜ್ಞಾನಿಯಾದವನು **ಶಮದಮಾದ್ಯುಪೇತಃ ಸ್ಯಾತ್** = ಶಮದಮಾದಿಗಳಿಂದ ಸಹಿತನಾಗಬೇಕು. (ಶಮದಮಾದಿಗಳನ್ನು ಅನುಷ್ಠಾನ ಮಾಡಬೇಕು) ಕುತಃ = ಯಾಕೆ ? **ತದ್ವಿಧೇಃ** = "ಆಚಾರ್ಯಾದ್ವಿದ್ಯಾಮವಾಪ್ಯ" ಎಂಬುದಾಗಿ ಶ್ರುತಿಯಿಂದ (ಮಾಠರ ಶ್ರುತಿಯಿಂದ) ಜ್ಞಾನಿಯಾದವನಿಗೂ ಶಮದಮಾದಿಗಳನ್ನು ವಿಧಾನ ಮಾಡಿದ್ದರಿಂದ.

ತಥಾಪಿ ನ ಜ್ಞಾನಿನಃ ಶಮದಮಾದಿವೈಯರ್ಥ್ಯಂ = ಆದರೂ ಜ್ಞಾನಿಗೆ ಶಮ-ದಮಾದಿಗಳ ಅನುಷ್ಠಾನ ವ್ಯರ್ಥವಲ್ಲ. ಕುತಃ = ಯಾಕೆ ? **ತದಂಗತಯಾ** = ಜ್ಞಾನಕ್ಕೆ ಅಂಗವಾಗಿ **ತೇಷಾಂ ಅವಶ್ಯಾನುಷ್ಠೇಯತ್ವಾತ್** = ಶಮದಮಾದಿಗಳು ಅವಶ್ಯವಾಗಿ ಅನುಷ್ಠಾನಾರ್ಹವಾಗಿವೆ.

ಸೂತ್ರದಲ್ಲಿ ತು ಶಬ್ದವು ಜ್ಞಾನಿಯು ಮಾಡುವ ಶಮದಮಾದಿಗಳಿಗೆ ಪೂರ್ಣ-ಫಲಾರ್ಥತ್ವವನ್ನು (ಪೂರ್ಣಫಲವಿದೆ ಎನ್ನುವುದನ್ನು) ಸೂಚಿಸುತ್ತಿದೆ.

**ಸೂ.ರ.:– एवं च न च ज्ञानिनां सत्कार्यमसत्त्याज्यमित्यनियमः सदसदनुष्ठानपरित्यागाभ्यां विशेषाभावादिति वाच्यम् । अचार्याद्विद्यामिति माठरश्रुतौ ज्ञानिनोऽपि तद्विधानात् । ब्राह्मी वावेति श्रुतौ (केन.४-७-९) शमदमादीनामङ्गत्वाभिधानाच्च । अतो ज्ञानिनां सदसत्प्रवृत्तिभ्यां विशेष इति सिद्धम् ॥**

ಸತ್ಕರ್ಮಗಳ ಅನುಷ್ಠಾನ, ಅಸತ್ಕರ್ಮಗಳ ಪರಿತ್ಯಾಗ ಇವುಗಳಿಂದ ಯಾವ ವಿಶೇಷವೂ ಇಲ್ಲವಾದ್ದರಿಂದ ಜ್ಞಾನಿಗಳು ಸತ್ಕರ್ಮಗಳನ್ನು ಮಾಡಬೇಕು, ಅಸತ್ಕರ್ಮಗಳನ್ನು ಪರಿತ್ಯಜಿಸಬೇಕು ಎಂಬ ನಿಯಮವಿಲ್ಲ ಎಂಬುದಾಗಿ ಶಂಕಿಸು-ವುದು ಸರಿಯಲ್ಲ. ಕಾರಣ–

''ಆಚಾರ್ಯಾದ್ವಿದ್ಯಾಮವಾಪ್ಯ ಏತಮಾತ್ಮಾನಮಭಿಪಶ್ಯನ್ ಶಾಂತೋ ಭವೇತ್ ದಾಂತೋ ಭವೇತ್ ಅನುಕೂಲೋ ಭವೇತ್ ಆಚಾರ್ಯಂ ಪರಿಚರೇತ್ ಪರಿಚರೇತ್ ಆಚಾರ್ಯಂ''

ಎಂಬುದಾಗಿ ಮಾಠರಶ್ರುತಿಯಲ್ಲಿ ಜ್ಞಾನಿಯಾದವನಿಗೂ ಸಹ ಶಮದಮಾದಿ-ಗಳನ್ನು ವಿಧಾನ ಮಾಡಿದ್ದರಿಂದ. ಜ್ಞಾನದಿಂದಲೇ ಮೋಕ್ಷ ಸಿದ್ಧವಾಗುವುದರಿಂದ ಶ್ರುತಿಯು ವಿಧಾನ ಮಾಡುವುದೇ ವ್ಯರ್ಥ ಎಂಬ ಶಂಕೆ ಬೇಡ.

''ಬ್ರಾಹ್ಮೀಂ ವಾವ ತ ಉಪನಿಷದಮಬ್ರೂಮೇತಿ । ತಸ್ಯೈ ತಪೋ ದಮಃ ಕರ್ಮೇತಿ ಪ್ರತಿಷ್ಠಾ ವೇದಾಃ ಸರ್ವಾಂಗಾನಿ ಸತ್ಯಮಾಯತನಮ್ । ಯೋ ವಾ ಏತಾಮುಪನಿಷದಮೇವಂ ವೇದ'' (ಕೇ.ಉ. 4-7-9)

ಎಂಬುದಾಗಿ ತಲವಕಾರ ಶ್ರುತಿಯಲ್ಲಿ ಶಮದಮಾದಿಗಳು ಜ್ಞಾನಕ್ಕೆ ಅಂಗವಾಗಿವೆ ಎಂದು ಹೇಳಲಾಗಿದೆ. ಹಾಗಾಗಿ ಜ್ಞಾನಕ್ಕೆ ಅಂಗವಾಗಿ ಶಮದಮಾದಿಗಳು ಕರ್ತವ್ಯವಾಗಿವೆ. ಆದ್ದರಿಂದ ಜ್ಞಾನಿಗಳಿಗೆ ಸತ್ಪ್ರವೃತ್ತಿ - ಅಸತ್ಪ್ರವೃತ್ತಿಗಳಿಂದ ವಿಶೇಷ ಇದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 28

**ಸೂ.ರ.:- ननु यदि सदसत्प्रवृत्तिभ्यां ज्ञानिनो विशेषः कथं तर्ह्येवंविन्निखिलं भक्षयीतेति तस्य निषिद्धान्नभोजनेऽपि ह्रासाभावोक्तिः सम्भवति । तस्मान्न विशेषः स्यादिति पूर्वोक्तस्य तर्कपराहतिमाशङ्क्य परिहरत्सूत्रमाचष्टे ॥**

"ಒಂದುವೇಳೆ ಜ್ಞಾನಿಯಾದವನಿಗೆ ಸತ್ಪ್ರವೃತ್ತಿ-ಅಸತ್ಪ್ರವೃತ್ತಿಗಳಿಂದ ವಿಶೇಷ ಇರುವುದಾದರೆ, ಹಾಗಾದರೆ "ಏವಂವಿನ್ನಿಖಿಲಂ ಭಕ್ಷಯೀತ" ಎಂಬುದಾಗಿ ಜ್ಞಾನಿಗೆ ನಿಷಿದ್ಧಾನ್ನವನ್ನು ತಿಂದಾಗಲೂ ಸಹ ಹ್ರಾಸವಿಲ್ಲ ಎಂದು ಹೇಳಿದ್ದು ಹೇಗೆ ಕೂಡುತ್ತದೆ ? ಈಗಲಾದರೋ 'ಜ್ಞಾನಿಗೆ ನಿಷಿದ್ಧಾನ್ನ ತಿಂದರೂ ಹ್ರಾಸವಿಲ್ಲ' ಎಂದು ಹೇಳಿದ್ದರಿಂದ ಜ್ಞಾನಿಗೆ ಸತ್-ಅಸತ್ ಪ್ರವೃತ್ತಿಗಳಿಂದ ವಿಶೇಷವಿಲ್ಲ ಎಂದೇ ಸಿದ್ಧವಾಗುತ್ತದೆ."

ಈ ರೀತಿಯಾಗಿ ಹಿಂದೆ ಹೇಳಿದ ವಿಶೇಷಕ್ಕೆ ತರ್ಕಪರಾಹತಿಯನ್ನು ಶಂಕಿಸಿದರೆ, ಅದನ್ನು ನಿರಾಕರಿಸುವ ಸೂತ್ರವನ್ನು ಹೇಳುತ್ತಾರೆ -

**ॐ सर्वान्नानुमतिश्च प्राणात्यये तद्दर्शनात् ॐ (३-४-२८)**

**ಸೂತ್ರಾರ್ಥ** :- ಸೂತ್ರದಲ್ಲಿರುವ ಚ ಶಬ್ದವು ಏವ ಎಂಬ ಅವಧಾರಣಾರ್ಥ-ದಲ್ಲಿ ಇದೆ. **ಸರ್ವಾನ್ನಾನುಮತಿಃ** = "ಯದಿ ಹ ವಾ ಏವಂವಿನ್ನಿಖಿಲಂ ಭಕ್ಷಯೀತ" ಎಂಬುದಾಗಿ ಜ್ಞಾನಿಯಾದವನಿಗೆ ನಿಷಿದ್ಧ-ಅನಿಷಿದ್ಧ ಭಕ್ಷಣವನ್ನು ಅನುಮೋದಿಸುವ ಶ್ರುತಿಯು **ಪ್ರಾಣಾತ್ಯಯೇ ಚ** = ಪ್ರಾಣತ್ಯಾಗಕಾಲವಿಷಯಕವೇ ಆಗಿದೆ. ಹೊರತು ಸರ್ವಕಾಲವಿಷಯಕ ಅಲ್ಲ. ಕುತಃ = ಯಾಕೆ ? **ತದ್ದರ್ಶನಾತ್** = ಆ ವಿಷಯದಲ್ಲಿ "ನ ವಾ ಅಜೀವಿಷ್ಯಂ" ಎಂದು ಶ್ರುತಿ ಇರುವುದರಿಂದ ಹಾಗೂ ತದರ್ಥರೂಪವಾದ ಲಿಂಗವೂ ಕಂಡಿದ್ದರಿಂದ.

**ಸೂ.ರ.:- एवं च जीवनोपाययुक्तनिषिद्धभक्षणानुमतिस्ततोऽधिकरागप्राप्तानुपानप्रत्याख्यानरूपलिङ्गप्रतिपादकवचनात् । अतो ह्रासाभावोक्तेरन्यथोपपन्नत्वेन न तद्बलाज्ज्ञानिनः सदसत्प्रवृत्त्योरविशेषः शङ्कनीय इति ज्ञानिनाऽपि निषिद्धं न कार्यमेव । ज्ञानिनः सदसत्प्रवृत्त्योर्विशेषाभ्युपगमे यदि ह वा इति सर्वान्नानुमतिश्रुतेः**

**प्राणात्ययकालविषयत्वेन तद्बाधाभावात् । अतः सदसत्प्रवृत्तिभ्यां ज्ञानिनो विशेष इति सिद्धम् ॥**

"ಯದಿ ಹ ವಾ ಏವಂವಿನ್ನಿಖಿಲಂ ಭಕ್ಷಯೀತ" ಎಂಬುದಾಗಿ ಶ್ರುತಿಯಲ್ಲಿ ನಿಷಿದ್ಧ-ಅನಿಷಿದ್ಧ ಸರ್ವಭಕ್ಷಣ ಹೇಳಿರುವುದು ಜೀವನೋಪಾಯಸಹಿತ ನಿಷಿದ್ಧಭಕ್ಷಣ ಅನುಮತಿಯಾಗಿದೆ. ಕಾರಣ - ಜೀವನೋಪಾಯಕ್ಕಿಂತಲೂ ಹೆಚ್ಚಿನ ರಾಗದಿಂದ ಪ್ರಾಪ್ತವಾದ ಜಲಪಾನವನ್ನು ಚಕ್ರಾಯಣನ ಮಗ ಉಷಸ್ತಿಯು ನಿರಾಕರಣೆ ಮಾಡಿದ್ದೇ ಈ ವಿಷಯದಲ್ಲಿ ಲಿಂಗವಾಗಿದೆ. ಇಂತಹ ಲಿಂಗಪ್ರತಿಪಾದಕವಾದ

"ನ ವಾ ಅಜೀವಿಷ್ಯಂ ಇಮಾನ್ ಅಖಾದನ್ ಇತಿ ಹೋವಾಚ ಕಾಮೋ ಮ ಉದಪಾನಂ"

ಎಂಬ ವಚನ (ಛಾಂದೋಗ್ಯಶ್ರುತಿ 1-10-4) ಇರುವುದರಿಂದ.

ಇಲ್ಲಿ ಕಥಾನಕ ಇಷ್ಟು - ಚಕ್ರಾಯಣನ ಮಗ ಉಷಸ್ತಿ ಎಂಬುವನು ಬಹಳ ಹಸಿವೆಯಿಂದ ಆಹಾರವನ್ನು ಅಪೇಕ್ಷಿಸಿ ಸಂಚರಿಸುವಾಗ ಕುಲ್ಮಾಷವನ್ನು ತಿನ್ನುತ್ತಿದ್ದ ವ್ಯಕ್ತಿಯನ್ನು ಕಂಡು ತನಗೂ ಕುಲ್ಮಾಷವನ್ನು ಕೊಡಲು ಯಾಚಿಸುತ್ತಾನೆ. ಆ ವ್ಯಕ್ತಿ ಉಳಿದಿದ್ದ ಕುಲ್ಮಾಷವನ್ನು ಕೊಟ್ಟು ಜೊತೆಗೆ ಉಳಿದಿದ್ದ ನೀರನ್ನೂ ಕೊಡುತ್ತಾನೆ. ಆಗ ಉಷಸ್ತಿ - ನಾನು ಈ ಕುಲ್ಮಾಷವನ್ನು ತಿನ್ನದಿದ್ದರೆ ನನ್ನ ಪ್ರಾಣಹಾನಿಯೇ ಆಗುವುದು. ಹಾಗಾಗಿ ಉಚ್ಛಿಷ್ಟವಾದರೂ ಕುಲ್ಮಾಷವನ್ನು ಬದುಕುವುದಕ್ಕಾಗಿ ತಿನ್ನುತ್ತೇನೆ. ಆದರೆ ಕುಲ್ಮಾಷ ತಿಂದು ಪ್ರಾಣ ಉಳಿಸಿಕೊಂಡ ಮೇಲೆ ನೀರು ಕುಡಿಯುವುದು ಅನಿವಾರ್ಯವಲ್ಲ. ಅದು ನನ್ನ ಇಚ್ಛಾಧೀನ. ಆದ್ದರಿಂದ ನನಗೆ (ಬದುಕಲು) ಕುಲ್ಮಾಷ ಸಾಕು, ನೀರು ಬೇಡ ಎಂದು ಹೇಳಿ ನೀರನ್ನು ನಿರಾಕರಿಸುತ್ತಾನೆ.

ಈ ಕಥಾನಕದಲ್ಲಿ ತಿಳಿದುಬರುವ ತತ್ತ್ವ - ಪ್ರಾಣಹಾನಿ ಸಂದರ್ಭದಲ್ಲಿ ನಿಷಿದ್ಧಭಕ್ಷಣ ಮಾಡಿದರೂ ಅದು ದೋಷವಲ್ಲ. ಜೀವನೋಪಾಯ ಬಿಟ್ಟು ಹೆಚ್ಚಿನ ರಾಗದಿಂದ ನಿಷಿದ್ಧಭಕ್ಷಣ ಮಾಡಿದರೆ ಅದು ದೋಷವಾಗುತ್ತದೆ.

ಆದ್ದರಿಂದ ನಿಷಿದ್ಧಾನ್ನಭಕ್ಷಣ ಮಾಡಿದರೂ ಹ್ರಾಸವಿಲ್ಲ ಎಂಬ ಮಾತು ಅನ್ಯಥೋಪಪನ್ನವಾದ್ದರಿಂದ (ಪ್ರಾಣತ್ಯಾಗಕಾಲವಿಷಯಕವಾಗಿ ಕೂಡಿಸಬಹು-ದಾದ್ದರಿಂದ) ಆ ಮಾತಿನ ಬಲದಿಂದ ಜ್ಞಾನಿಗೆ ಸತ್-ಅಸತ್ ಪ್ರವೃತ್ತಿಗಳಲ್ಲಿ ವಿಶೇಷವಿಲ್ಲ ಎಂದು ಶಂಕಿಸುವುದು ಸರಿಯಲ್ಲ. ಹಾಗಾಗಿ ಪ್ರಾಣತ್ಯಾಗಕಾಲ ಬಿಟ್ಟು

ಬೇರೆ ಕಾಲದಲ್ಲಿ ನಿಷಿದ್ಧಭಕ್ಷಣ ದೋಷ(ಹ್ರಾಸ)ಕಾರಿಯಾಗುವುದರಿಂದ ಜ್ಞಾನಿ-ಯಾದವನೂ ಸಹ ಅಸತ್ಕರ್ಮವನ್ನು ಪರಿತ್ಯಜಿಸಲೇಬೇಕು.

ಜ್ಞಾನಿಗೆ ಸತ್-ಅಸತ್ ಪ್ರವೃತ್ತಿಗಳಲ್ಲಿ ವಿಶೇಷ ಒಪ್ಪಿದಾಗ, "ಯದಿ ಹ ವಾ" ಎಂಬ ಸರ್ವಾನ್ನಾನುಮತಿಶ್ರುತಿಯು ಪ್ರಾಣತ್ಯಾಗಕಾಲವಿಷಯಕವಾಗುವುದರಿಂದ ಆ ಶ್ರುತಿಯ ಬಾಧವೂ ಬರುವುದಿಲ್ಲ. ಆದ್ದರಿಂದ ಜ್ಞಾನಿಯಾದವನಿಗೆ ಸತ್-ಅಸತ್ ಪ್ರವೃತ್ತಿಗಳಲ್ಲಿ ವಿಶೇಷ ಇದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 29

**ಸೂ.ರ.:– ननु यदत्रोक्तं ज्ञानिनां न निषिद्धं त्याज्यमिति तत्र किं निषिद्धाकरणे बाधकसद्भावान्निषिद्धं न कर्तव्यमित्युच्यते उत विधिसद्भावादिति प्राप्ते सूत्रमुपन्यस्यति ॥**

ಜ್ಞಾನಿಗಳು ನಿಷಿದ್ಧವಾದದ್ದನ್ನು ಬಿಡುವುದು ಬೇಡ (ನಿಷಿದ್ಧವಾದದ್ದನ್ನು ಮಾಡಬಹುದು) ಎಂದು ಏನು ಹೇಳಿದಿರಿ, ಅದು ನಿಷಿದ್ಧವಾದದ್ದನ್ನು ಮಾಡದಿದ್ದರೆ ಬಾಧಕ ಇರುವುದರಿಂದ ಹಾಗೆ ಹೇಳುತ್ತಿದ್ದೀರೋ ? ಅಥವಾ ಹಾಗೆ ವಿಧಿ ಇರುವುದರಿಂದ ಹಾಗೆ ಹೇಳುತ್ತಿದ್ದೀರೋ ? ಈ ರೀತಿಯಾಗಿ ಶಂಕೆ ಬಂದರೆ, ಪರಿಹಾರಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

### ॐ अबाधाच ॐ (३-४-२९)

**ಸೂತ್ರಾರ್ಥ :- ಅಬಾಧಾಚ್ಚ** = ಜ್ಞಾನಿಗಳಿಗೆ ನಿಷಿದ್ಧವಾದದ್ದನ್ನು ಮಾಡದಿದ್ದರೆ ಬಾಧಕ ಇಲ್ಲವಾದ್ದರಿಂದಲೂ ಸಹ ನಿಷಿದ್ಧಂ ನ ಕಾರ್ಯಂ = ಜ್ಞಾನಿಗಳು ನಿಷಿದ್ಧವಾದದ್ದನ್ನು ಮಾಡಬಾರದು.

**ಸೂ.ರ.:– एवं च न केवलं निषिद्धकरणे साधकप्रमाणा-भावाज्ज्ञानिनः सदसत्प्रवृत्त्योरविशेषो न युक्तः । किन्तु निषिद्धाकरणे बाधकाभावात् । अन्याय्यचरणाभाव इति (ब्रह्मतर्के.) वचनादुक्त-हेत्वोरसिद्धेः । ततश्च ज्ञानिनः सदसत्प्रवृत्तिभ्यां विशेषोऽस्तीति सिद्धम् ॥**

ಕೇವಲ ನಿಷಿದ್ಧವಾದದ್ದನ್ನು ಮಾಡುವ ವಿಷಯದಲ್ಲಿ ಸಾಧಕಪ್ರಮಾಣ ಇಲ್ಲ-

ವಾದ್ದರಿಂದ ಜ್ಞಾನಿಗೆ ಸತ್-ಅಸತ್ ಪ್ರವೃತ್ತಿಗಳಲ್ಲಿ ಅವಿಶೇಷವು ಯುಕ್ತವಲ್ಲ ಎಂದಷ್ಟೇ ಅಲ್ಲ. ಕಿಂತು ನಿಷಿದ್ಧವಾದದ್ದನ್ನು ಮಾಡದಿದ್ದರೆ ಬಾಧಕ ಇಲ್ಲವಾದ್ದರಿಂದಲೂ ಅವಿಶೇಷವು ಯುಕ್ತವಲ್ಲ.

ಹಾಗಾದರೆ – ಇಷ್ಟು ಅನುಮಾನ ಮಾಡಿದಂತಾಗುತ್ತದೆ :-

1. ಜ್ಞಾನಿನಃ ಸದಸತ್ಪ್ರವೃತ್ತ್ಯೋಃ ಅವಿಶೇಷಃ, ನ ಯುಕ್ತಃ, ನಿಷಿದ್ಧಾಕರಣೇ ಸಾಧಕಪ್ರಮಾಣಾಭಾವಾತ್ ।

2. ಜ್ಞಾನಿನಃ ಸದಸತ್ಪ್ರವೃತ್ತ್ಯೋಃ ಅವಿಶೇಷಃ, ನ ಯುಕ್ತಃ, ನಿಷಿದ್ಧಕರಣೇ ಬಾಧಕಾಭಾವಾಚ್ಚ ।

ಇಲ್ಲಿ ಜ್ಞಾನಿಯಾದವನು ನಿಷಿದ್ಧವಾದದ್ದನ್ನು ಮಾಡಬೇಕು ಎನ್ನುವ ವಿಷಯದಲ್ಲಿ ಸಾಧಕಪ್ರಮಾಣ ಇಲ್ಲ ಎಂದು ಏಕೆ ? ಮತ್ತು ನಿಷಿದ್ಧವಾದದ್ದನ್ನು ಮಾಡದಿದ್ದರೆ ಬಾಧಕ ಇಲ್ಲ ಎನ್ನುವುದೂ ಏಕೆ ? ಎಂಬ ಪ್ರಶ್ನೆಗೆ ಅವಕಾಶವಿಲ್ಲ. ಕಾರಣ –

ಅನ್ಯಾಯ್ಯಚರಣಾಭಾವೇ ನ ಹಿ ಜ್ಞಾನಸ್ಯ ಬಾಧನಮ್ ।<br>
ಅತೋ ವಿದ್ವಾನಪಿ ನ್ಯಾಯ್ಯಂ ವರ್ತೇತೋತ್ಕರ್ಷಸಿದ್ಧಯೇ ॥

ಎಂಬುದಾಗಿ ಬ್ರಹ್ಮತರ್ಕವಚನ ಇರುವುದರಿಂದ. ಆದ್ದರಿಂದ ಜ್ಞಾನಿಗೆ ಸತ್-ಅಸತ್ ಪ್ರವೃತ್ತಿಗಳಲ್ಲಿ ವಿಶೇಷ ಇದೆ ಎಂದು ಸಿದ್ಧವಾಗುತ್ತದೆ.

## ಸೂತ್ರ – 30

**ಸೂ.ರ.:– ननु ज्ञानिनो निषिद्धकरणनिषेधकप्रमाणाभावान्न सदसत्प्रवृत्त्योर्विशेषो युक्त इत्याशङ्कां परिहरत्सूत्रमुपन्यस्यति ॥**

ಜ್ಞಾನಿಯಾದವನಿಗೆ ನಿಷಿದ್ಧಕಾರ್ಯವನ್ನು ನಿಷೇಧಿಸುವ ಪ್ರಮಾಣ ಯಾವುದೂ ಇಲ್ಲವಾದ್ದರಿಂದ ಜ್ಞಾನಿಗೆ ಸತ್-ಅಸತ್ ಪ್ರವೃತ್ತಿಗಳಲ್ಲಿ ವಿಶೇಷ ಯುಕ್ತವಲ್ಲ ಎಂಬುದಾಗಿ ಶಂಕೆ ಬಂದರೆ, ಅದನ್ನು ಪರಿಹರಿಸುವ ಸೂತ್ರವನ್ನು ಹೇಳುತ್ತಾರೆ –

## ॐ अपि स्मर्यते ॐ (३-४-३०)

**ಸೂತ್ರಾರ್ಥ :-** ಅಪಿ ಸ್ಮರ್ಯತೇ = "ಅತೀತಾನಾಗತಜ್ಞಾನೀ" ಇತ್ಯಾದಿಯಾಗಿ ಕೃಷ್ಣ ಮೊದಲಾದವರಿಂದ 'ಜ್ಞಾನಿಗಳು ನಿಷಿದ್ಧವಾದದ್ದನ್ನು ಮಾಡಬಾರದು' ಎಂಬುದಾಗಿ ಸ್ಮೃತಿಗಳಲ್ಲಿ ಹೇಳಲ್ಪಟ್ಟಿದೆ ಕೂಡ. ಅತೋಽಪಿ ನ ನಿಷಿದ್ಧಂ ಜ್ಞಾನಿಭಿಃ ಕಾರ್ಯಂ = ಆದ್ದರಿಂದಲೂ ಸಹ ಜ್ಞಾನಿಗಳು ನಿಷಿದ್ಧವಾದದ್ದನ್ನು ಮಾಡಬಾರದು.

**ಸೂ.ರ.:– एवं च अतीतानागतेति हरिवंशे त्रैलोक्योद्धरण-क्षमत्वेऽपि ज्ञानिभिः न सत्कर्म त्याज्यमित्युक्तत्वाच्च । अतोऽपि न ज्ञानिभिः निषिद्धं कार्यमिति सिद्धम् ॥**

ಅತೀತಾನಾಗತಜ್ಞಾನೀ ತ್ರೈಲೋಕ್ಯೋದ್ಧರಣಕ್ಷಮಃ ।
ಏತಾದೃಶೋಽಪಿ ನಾಚಾರಂ ಶ್ರೌತಂ ಸ್ಮಾರ್ತಂ ಪರಿತ್ಯಜೇತ್ ॥

ಎಂಬುದಾಗಿ ಹರಿವಂಶದಲ್ಲಿ ಅಪರೋಕ್ಷಜ್ಞಾನಿಯು ಮೂರುಲೋಕಗಳನ್ನು (ಜನರ ಪಾಪಗಳನ್ನು) ಉದ್ಧರಣ ಮಾಡಲು ಸಮರ್ಥನಾಗಿದ್ದರೂ ಸತ್ಕರ್ಮಗಳ ಆಚರಿಸುವುದನ್ನು ಬಿಡಬಾರದು ಎಂದು ಹೇಳಿದ್ದರಿಂದ, ಜ್ಞಾನಿಗಳು ಸತ್ಕರ್ಮಗಳ ಪರಿತ್ಯಾಗ ಮಾಡಬಾರದು, ಅಸತ್ಕರ್ಮಗಳ ಆಚರಣೆಯನ್ನೂ ಮಾಡಬಾರದು ಎಂದು ಸಿದ್ಧವಾಗುತ್ತದೆ.

## ಸೂತ್ರ - 31

**ಸೂ.ರ.:– ज्ञानिना निषिद्धकरणे न केवलं स्मृतिरेव निषेधिका किन्तु श्रुतिरपीत्याह सूत्रकृत् ॥**

ಜ್ಞಾನಿಯಾದವನು ನಿಷಿದ್ಧವಾದ ಕರ್ಮವನ್ನು ಆಚರಿಸುವ ವಿಷಯದಲ್ಲಿ ಕೇವಲ ಸ್ಮೃತಿಯಷ್ಟೇ ನಿಷೇಧಕವಾಗಿಲ್ಲ. ಕಿಂತು ಶ್ರುತಿಯೂ ಸಹ ನಿಷೇಧಕವಾಗಿದೆ (ಜ್ಞಾನಿಯು ನಿಷಿದ್ಧವಾದದ್ದನ್ನು ಮಾಡಬಾರದು ಎಂಬುದಾಗಿ ಸ್ಮೃತಿಯು ಮಾತ್ರ ನಿಷೇಧಿಸುತ್ತಿಲ್ಲ. ಕಿಂತು ಶ್ರುತಿಯೂ ಸಹ ನಿಷೇಧಿಸುತ್ತಿದೆ) ಎಂಬುದಾಗಿ ಸೂತ್ರಕಾರರು ಹೇಳುತ್ತಾರೆ –

**ॐ शब्दश्चातोऽकामचारे ॐ (३-४-३१)**

**ಸೂತ್ರಾರ್ಥ** :- **ಚ** = ಯಾವ ಕಾರಣ **ಅಕಾಮಚಾರೇ** = ಜ್ಞಾನಿಯು ತನ್ನ ಇಚ್ಛಾನುಸಾರವಾಗಿ ಕರ್ಮವನ್ನು ಮಾಡಬಾರದು (ನಿಷಿದ್ಧಕರ್ಮವನ್ನು ಮಾಡಬಾರದು) ಎಂಬ ವಿಷಯದಲ್ಲಿ **ಶಬ್ದಃ** = 'ಸ ಯ ಏತದೇವಂವಿತ್' ಎಂಬುದಾಗಿ ಕೌಂಡಿನ್ಯ ಶ್ರುತಿಯೂ ಸಹ ಇದೆಯೋ **ಅತಶ್ಚ** = ಆ ಕಾರಣಕ್ಕಾಗಿಯೂ ಸಹ ಜ್ಞಾನಿನಾ ನಿಷಿದ್ಧಂ ನ ಕಾರ್ಯಂ = ಜ್ಞಾನಿಯಾದವನು ನಿಷಿದ್ಧವಾದದ್ದನ್ನು ಮಾಡಬಾರದು.

ಸೂ.ರ.:- एवं च निर्दिष्टश्रुत्या कामचारस्याल्पफलत्वोक्तेः । सत्प्रवृत्तेः पूर्णफलकत्वसूचनेनासत्प्रवृत्तेरल्पफलत्वस्यार्थादागतत्वात् । अतः पूर्णं यज्ज्ञानफलं तदिच्छुः सन् निषिद्धानि कर्माणि नानुवर्तेतेति सिद्धम् ॥

"ಸ ಯ ಏತದೇವಂವಿದೇವಂ ಮನ್ವಾನ ಏವಂ ಪಶ್ಯನ್ ನ ಕಾಮಚರಿತಂ ಚರೇನ್ನ ಕಾಮಂ ಭಕ್ಷಯೀತ ನ ಕಾಮಮನುವರ್ತೇತ"

ಎಂಬುದಾಗಿ ನಿರ್ದಿಷ್ಟಶ್ರುತಿಯಲ್ಲಿ (ಕೌಂಡಿನ್ಯಶ್ರುತಿಯಲ್ಲಿ) ಕಾಮಚಾರ-ನಾದವನಿಗೆ (ಇಚ್ಛಾನುಸಾರ ಕರ್ಮ ಮಾಡುವ, ನಿಷಿದ್ಧಕರ್ಮ ಮಾಡುವ ಜ್ಞಾನಿಗೆ) ಅಲ್ಪಫಲವನ್ನು ಹೇಳಲಾಗಿದೆ. ಸತ್ಕರ್ಮಗಳನ್ನು ಆಚರಿಸಿದರೆ ಪೂರ್ಣಫಲ ದೊರಕುವುದೆಂದು ಸೂಚಿಸುವುದರಿಂದ ಅಸತ್ಕರ್ಮಗಳನ್ನು ಮಾಡಿದರೆ ಅಲ್ಪಫಲ ಸಿಗುವುದೆಂದು ಅರ್ಥಾತ್ ಹೇಳಿದಂತಾಗುತ್ತದೆ.

ಆದ್ದರಿಂದ ಪೂರ್ಣವಾದ ಯಾವ ಜ್ಞಾನಫಲವಿದೆಯೋ ಅದನ್ನು ಇಚ್ಛಿಸು-ವಂತಹ ಜ್ಞಾನಿಯು ನಿಷಿದ್ಧ ಕರ್ಮಗಳನ್ನು ಆಚರಿಸಬಾರದು ಎಂದು ಸಿದ್ಧವಾಗುತ್ತದೆ.

## ಸೂತ್ರ - 32

ಸೂ.ರ.:- नन्वस्तु निषिद्धाचरणे फलह्रासादिबाधकसद्भावात्तत्परित्यागस्तथाऽपि न वर्णाश्रमोचितं कार्यम् । ह्रासकारणाभावे ज्ञानादेव पूर्णफलसिद्धेरित्याशङ्कां परिहरत्सूत्रं पठति ॥

ನಿಷಿದ್ಧವಾದ ಕರ್ಮಗಳನ್ನು ಆಚರಿಸಿದರೆ ಫಲಹ್ರಾಸಾದಿ ಬಾಧಕ ಇರುವುದ-ರಿಂದ ನಿಷಿದ್ಧಕರ್ಮಗಳನ್ನು ತ್ಯಜಿಸಬೇಕು ಎಂದಾಗಲಿ. ಆದರೆ ಆದರಿಂದ ಸತ್ಕರ್ಮ-ಗಳನ್ನು ಆಚರಿಸಬೇಕು ಎಂದೇನಾಗುವುದಿಲ್ಲ. ನಿಷಿದ್ಧಕರ್ಮಗಳನ್ನು ಆಚರಿಸದೇ ಫಲಹ್ರಾಸಕ್ಕೆ ಕಾರಣವಾದದ್ದು ಯಾವುದೂ ಇಲ್ಲದಿದ್ದಾಗ ಜ್ಞಾನದಿಂದಲೇ ಪೂರ್ಣಫಲವು ಸಿದ್ಧವಾಗುತ್ತದೆ ಎಂಬುದಾಗಿ ಆಶಂಕೆ ಬಂದರೆ, ಪರಿಹಾರಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ विहितत्वाच्चाश्रमकर्माऽपि ॐ (३-४-३२)**

**ಸೂತ್ರಾರ್ಥ** :- ಸೂತ್ರದಲ್ಲಿ **ಚ** ಶಬ್ದವು ಕಾರಣವನ್ನು ಸಮುಚ್ಚಯ ಮಾಡುತ್ತದೆ. **ಅಪಿ** ಶಬ್ದವು ವರ್ಣಾಶ್ರಮಧರ್ಮಗಳನ್ನು ಸಮುಚ್ಚಯ ಮಾಡುತ್ತದೆ.

ಜ್ಞಾನಿನಾ ನ ಕೇವಲಂ ನಿಷಿದ್ಧಂ ಅಕಾರ್ಯಂ = ಜ್ಞಾನಿಯಾದವನು ಕೇವಲ ನಿಷಿದ್ಧವಾದದ್ದನ್ನು ಮಾಡಬಾರದು ಎಂದಷ್ಟೇ ಅಲ್ಲ. ಕಿಂತು **ಆಶ್ರಮಕರ್ಮ ಅಪಿ** ಕಾರ್ಯಂ = ಸಂಪೂರ್ಣಫಲಸಿದ್ಧಿಗಾಗಿ ವರ್ಣಾಶ್ರಮೋಚಿತ ಕರ್ಮಗಳನ್ನೂ ಆಚರಿಸಲೇಬೇಕು. ಕುತಃ = ಯಾಕೆ ? **ವಿಹಿತತ್ವಾಚ್ಚ** = ''ಪಶ್ಯನ್ನಪಿ'' ಎಂಬುದಾಗಿ ಕೌಷಾರವ ಶ್ರುತಿಯಿಂದ ವಿಹಿತವಾದ್ದರಿಂದ.

**ಸೂ.ರ.:– एवं च निर्दिष्टश्रुत्या ज्ञानिनां सम्पूर्णफलार्थं वर्णाश्रमोचितमपि कार्यमिति सिद्धम् ॥**

''ಪಶ್ಯನ್ನಪೀಮಮಾತ್ಮಾನಂ ಕುರ್ಯಾತ್ ಕರ್ಮಾವಿಚಾರಯನ್ । ಯದಾತ್ಮನಃ ಸುನಿಯತಮಾನಂದೋತ್ಕರ್ಷಮಾಪ್ನುಯಾತ್''

ಎಂಬುದಾಗಿ ಶ್ರುತಿ (ಕೌಷಾರವಶ್ರುತಿ) ಇರುವುದರಿಂದ ಜ್ಞಾನಿಗಳೂ ಸಹ ಸಂಪೂರ್ಣಫಲಸಿದ್ಧಿಗಾಗಿ ತಮ್ಮ ವರ್ಣಾಶ್ರಮೋಚಿತವಾದ ಕರ್ಮಗಳನ್ನೂ ಮಾಡಲೇಬೇಕು ಎಂದು ಸಿದ್ಧವಾಗುತ್ತದೆ.

## ಸೂತ್ರ - 33

**ಸೂ.ರ.:– ननु विहितत्वेऽपि न ज्ञानिना सत्कर्मानुष्ठेयम् । फलाभावात् । ह्रासकारणाभावे ज्ञानादेव पूर्णफलसिद्धेः । अन्यथा समुच्चयवादापत्तिरित्याशङ्कामपाकुर्वत्सूत्रं पठति ॥**

''ಪಶ್ಯನ್ನಪೀಮಮಾತ್ಮಾನಂ'' ಎಂಬ ಶ್ರುತಿಯಿಂದ ವಿಹಿತವಾಗಿದ್ದರೂ ಸಹ ಜ್ಞಾನಿಯಾದವನು ಸತ್ಕರ್ಮಗಳ ಅನುಷ್ಠಾನ ಮಾಡಬೇಕಾದ ಆವಶ್ಯಕತೆ ಇಲ್ಲ. ಕಾರಣ - ಜ್ಞಾನಿಯು ಮಾಡುವ ಕರ್ಮಾನುಷ್ಠಾನಕ್ಕೆ ಯಾವುದೇ ಫಲ ಇಲ್ಲವಾದ್ದರಿಂದ. ಫಲಹ್ರಾಸವಾಗುವುದಕ್ಕೆ ಕಾರಣವಾದದ್ದು ಯಾವುದೂ ಇಲ್ಲದಿದ್ದಾಗ ಜ್ಞಾನದಿಂದಲೇ ಪೂರ್ಣವಾದ ಫಲವು ಸಿದ್ಧಿಸುತ್ತದೆ.

ಅನ್ಯಥಾ = ಜ್ಞಾನದಿಂದ ಬಹುಫಲ, ಕರ್ಮಗಳಿಂದ ಉಳಿದ ಫಲ ಹೀಗೆ

ಸಂಪೂರ್ಣಫಲಸಿದ್ಧಿ ಹೇಳುವುದಾದರೆ ಸಮುಚ್ಚಯವಾದ ಅಂಗೀಕೃತವಾದಂತಾ-ಗುತ್ತದೆ ಎಂಬುದಾಗಿ ಶಂಕೆ ಬಂದರೆ, ಅದನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

## ॐ सहकारित्वेन च ॐ (३-४-३३)

**ಸೂತ್ರಾರ್ಥ :-** ಜ್ಞಾನಿನಾ ಫಲಸಂಪೂರ್ಣಸಿದ್ಧ್ಯೈ ಸತ್ಕರ್ಮ ಕಾರ್ಯಮೇವ = ಸಂಪೂರ್ಣಫಲಸಿದ್ಧಿಗಾಗಿ ಜ್ಞಾನಿಯಾದವನು ಸತ್ಕರ್ಮವನ್ನು ಮಾಡಲೇಬೇಕು. ಕುತಃ = ಯಾಕೆ ? **ಸಹಕಾರಿತ್ವೇನ ಚ** = 'ಯಥಾ ರಾಜ್ಞಃ' ಎಂಬ ಶ್ರುತಿಯಲ್ಲಿ ಮೋಕ್ಷಫಲಾತಿಶಯಕ್ಕಾಗಿ ಕರ್ಮಗಳು ಜ್ಞಾನಕ್ಕೆ ಸಹಕಾರಿಯಾಗಿ ಹೇಳಲ್ಪಟ್ಟವೆ-ಯಾದ್ದರಿಂದ.

**ಸೂ.ರ.:- एवं च यथा मन्त्रिणं विनाऽपि कार्यकरणसमर्थस्य राज्ञः फलातिशयहेतुत्वेन मन्त्री सहकार्येवं सदाचारं विनाऽपि मोक्षदानसमर्थस्य फलातिशयहेतुत्वेन सहकारिणः सदाचारस्यावश्य-कत्वात् । अतो ज्ञानिनां सदसत्प्रवृत्तिभ्यां विशेषसद्भावेऽपि मोक्षो नियत एवेति सिद्धम् ॥**

"ಯಥಾ ರಾಜ್ಞಃ ಸಹಕಾರ್ಯೇವ ಮಂತ್ರೀ ತಥಾऽಪ್ಯೃತೇ ತಂ ಕ್ಷಿತಿಪಃ ಕಾರ್ಯಮೃಚ್ಛೇತ್ । ಏವಂ ಜ್ಞಾನಂ ಕರ್ಮ ವಿನಾऽಪಿ ಕಾರ್ಯಂ ಸಹಾಯಭೂತಂ ನ ವಿಚಾರಃ ಕುತಶ್ಚಿತ್"

ಎಂಬುದಾಗಿ ಕಮಠಶ್ರುತಿ ಹೇಳುವಂತೆ ಯಾವ ರೀತಿಯಾಗಿ ಮಂತ್ರಿ ಇಲ್ಲದಿದ್ದರೂ ಕೆಲಸ ಮಾಡಲು ಸಮರ್ಥನಾದ ರಾಜನಿಗೆ ಫಲಾತಿಶಯಕ್ಕೆ ಹೇತುವಾಗಿ ಮಂತ್ರಿಯು ಸಹಕಾರಿಯಾಗುವನೋ, ಅದೇ ರೀತಿಯಾಗಿ ಸದಾಚಾರ ಇಲ್ಲದೆಯೂ ಮೋಕ್ಷವನ್ನು ಕೊಡಲು ಸಮರ್ಥವಾದ ಜ್ಞಾನಕ್ಕೆ ಫಲಾತಿಶಯಕ್ಕೆ ಹೇತುವಾಗಿ ಸದಾಚಾರವು ಸಹಕಾರಿಯಾದ್ದರಿಂದ ಸದಾಚಾರವು (ವಿಹಿತ ಸತ್ಕರ್ಮಾನುಷ್ಠಾನವು) ಆವಶ್ಯಕವಾಗಿದೆ. ಆದ್ದರಿಂದ ಜ್ಞಾನಿಗಳಿಗೆ ಸತ್-ಅಸತ್ ಪ್ರವೃತ್ತಿಗಳಿಂದ ವಿಶೇಷ ಇದೆ, ವಿಶೇಷ ಇದ್ದರೂ ಸಹ ಮೋಕ್ಷವು ನಿಯತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಸ್ತುತ್ಯಧಿಕರಣವು ಮುಗಿಯಿತು.

ಅಧಿಕರಣ - 5

# ಉಭಯಲಿಂಗಾಧಿಕರಣ

## ಸಂಗತಿ

**ಸೂ.ರ.:- अत्र ब्रह्मज्ञानस्याधिकारिमात्रप्राप्यत्वं वर्ण्यते ।**

ಬ್ರಹ್ಮಜ್ಞಾನವು ಅಧಿಕಾರಿಗಳಿಂದ ಮಾತ್ರ ಪ್ರಾಪ್ಯವಾಗಿದೆ ಎಂದು ವರ್ಣಿಸುತ್ತಾರೆ ಐದನೇ ಈ ಉಭಯಲಿಂಗಾಧಿಕರಣದಲ್ಲಿ.

ಬ್ರಹ್ಮಜ್ಞಾನವು ಅಧಿಕಾರಿಗಳಿಂದ ಮಾತ್ರ ಪ್ರಾಪ್ಯವೋ? ಅಥವಾ ಅನಧಿಕಾರಿಗಳಿಂದಲೂ ಪ್ರಾಪ್ಯವಾಗಿದೆಯೋ? ಎಂದು ಸಂದೇಹ.

## ಪೂರ್ವಪಕ್ಷ

**ಸೂ.ರ.:- नन्वनधिकारिभिरपि ज्ञानमाप्यते । असुराणामपि प्रल्हादादीनां ज्ञानस्मृतेः । न च स्मृत्युक्तमप्यसम्भावितत्वान्न सिद्ध्यतीति वाच्यम् । वेदानधिकारेऽपि शूद्राणां वेदप्राप्तेर्दृष्टत्वेन तदनधिकारिणां तत्प्राप्तेः सम्भावितत्वात् । अतोऽयोग्यैरपि ज्ञानस्य प्राप्तुं शक्यत्वेनायोग्यानामपि मोक्ष इति प्राप्ते सूत्रितम् ॥**

ಅನಧಿಕಾರಿಗಳಿಂದಲೂ ಬ್ರಹ್ಮಜ್ಞಾನವು ಪ್ರಾಪ್ಯವಾಗಿದೆ ಎಂದು ಪೂರ್ವಪಕ್ಷ. ಯಾಕೆ? ಪ್ರಹ್ಲಾದ ಮೊದಲಾದ ಅಸುರರಿಗೂ ಸಹ ಬ್ರಹ್ಮಜ್ಞಾನವು ಸ್ಮೃತ್ಯುಕ್ತ-ವಾಗಿದ್ದರಿಂದ.

ಹೌದು, ಸ್ಮೃತ್ಯುಕ್ತವಾದರೂ ಸಹ ಅಸಂಭಾವಿತವಾದ್ದರಿಂದ ಅನಧಿಕಾರಿಗಳಿಗೆ ಜ್ಞಾನವು ಸಿದ್ಧಿಸುವುದಿಲ್ಲ ಎಂದು ಶಂಕೆ ಬಂದರೆ, ಅದು ಸರಿಯಲ್ಲ. ಶೂದ್ರರಿಗೆ ವೇದದಲ್ಲಿ ಅಧಿಕಾರ ಇಲ್ಲದಿದ್ದರೂ ಸಹ ವೇದಪ್ರಾಪ್ತಿಯು ದೃಷ್ಟವಾದ್ದರಿಂದ, ಜ್ಞಾನಾನಧಿಕಾರಿಗಳಿಗೆ ಜ್ಞಾನಪ್ರಾಪ್ತಿಯು ಸಂಭಾವಿತವಾಗಿದೆ.

ಆದ್ದರಿಂದ ಅಯೋಗ್ಯರಾದವರಿಂದಲೂ ಜ್ಞಾನವು ಹೊಂದಲು ಶಕ್ಯವಾದ್ದರಿಂದ, ಅಯೋಗ್ಯರಾದವರಿಗೂ ಮೋಕ್ಷ ಇದೆ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

## ॐ सर्वथाऽपि तु त एवोभयलिङ्गात् ॐ (३-४-३४)

**ಸೂತ್ರಾರ್ಥ :-** ಸರ್ವಥಾಽಪಿ = ದೇಶ ಕಾಲ ಗುರೂಪದೇಶಾದ್ಯನೇಕ ಸಾಧನಸಂಪತ್ತು ಇದ್ದಾಗಲೂ ಸಹ ಯೇ ಜ್ಞಾನಯೋಗ್ಯಾಃ = ಯಾರು ಜ್ಞಾನಯೋಗ್ಯರಾಗಿದ್ದಾರೋ **ತೇ ಏವ** = ಅಂತಹ ಯೋಗ್ಯರೇ ಜ್ಞಾನಮಾಪ್ನುವಂತಿ = ಜ್ಞಾನವನ್ನು ಹೊಂದುತ್ತಾರೆ. ನ ಅಯೋಗ್ಯಾಃ = ಹೊರತು ಅಯೋಗ್ಯರು ಜ್ಞಾನವನ್ನು ಹೊಂದುವುದಿಲ್ಲ. ಕುತಃ = ಯಾಕೆ? **ಉಭಯಲಿಂಗಾತ್** = ಉಭಯರಲ್ಲಿ ಯೋಗ್ಯ - ಅಯೋಗ್ಯರಾದ ಇಂದ್ರ - ವಿರೋಚನ ಇಬ್ಬರಲ್ಲಿ ವಿರಿಂಚೋಪದೇಶಸಾಮ್ಯೇಽಪಿ = ವಿರಿಂಚೋಪದೇಶಸಾಮ್ಯ ಇದ್ದರೂ ಸಹ ಸಮ್ಯಕ್ - ವಿಪರೀತಜ್ಞಾನ-ಪ್ರಾಪ್ತಿರೂಪವಾದ ಜ್ಞಾಪಕ ಇದ್ದದ್ದರಿಂದಲೇ.

### ಸಿದ್ಧಾಂತ

**ಸೂ.ರ.:- एवं च गुरूपसत्त्याद्यनेकोत्साहेऽपि योग्यानामेव ज्ञानप्राप्तिर्नायोग्यानाम् । य आत्मेति (छां. ८-७-३.) इन्द्रविरोचन-योरेकप्रकारेण चतुर्मुखोपदेशेऽपीन्द्र एव सम्यग्ज्ञानमाप । विरोचनस्तु विपरीतज्ञानमापेत्युभयविधलिङ्गात् । अतो भगवज्ज्ञानस्य योग्यैक-साध्यत्वेन योग्यानामेव मोक्ष इति सिद्धम् ॥**

ಗುರೂಪಸತ್ತಿ ಮೊದಲಾದ ಅನೇಕೋತ್ಸಾಹ ಇದ್ದರೂ ಸಹ ಯೋಗ್ಯರಾದವರಿಗೆ ಮಾತ್ರವೇ ಜ್ಞಾನಪ್ರಾಪ್ತಿ ಆಗುತ್ತದೆ. ಹೊರತು ಅಯೋಗ್ಯರಿಗೆ ಜ್ಞಾನಪ್ರಾಪ್ತಿ ಆಗುವುದಿಲ್ಲ.

"ಯ ಆತ್ಮಾಽಪಹತಪಾಪ್ಮಾ ವಿಜರೋ ವಿಮೃತ್ಯುರ್ವಿಶೋಕೋಽವಿಜಿಘಿತ್ಸೋಽ-ಪಿಪಾಸಃ ಸತ್ಯಕಾಮಃ ಸತ್ಯಸಂಕಲ್ಪಃ ಸೋಽನ್ವೇಷ್ಟವ್ಯಃ ಸ ವಿಜಿಜ್ಞಾಸಿತವ್ಯಃ"

(ಛಾಂ.ಉ. 8-7-3)

ಎಂದು ಹೇಳಿದಂತೆ ಇಂದ್ರ - ವಿರೋಚನ ಇಬ್ಬರಲ್ಲಿಯೂ ಏಕಪ್ರಕಾರವಾಗಿ ಚತುರ್ಮುಖೋಪದೇಶ ಇದ್ದರೂ ಸಹ ಇಂದ್ರದೇವರು ಮಾತ್ರವೇ ಸಮ್ಯಕ್‌ಜ್ಞಾನ-ವನ್ನು ಪಡೆದರು. ವಿರೋಚನನಾದರೂ ವಿಪರೀತಜ್ಞಾನವನ್ನು ಹೊಂದಿದ ಎಂಬುದಾಗಿ ಉಭಯವಿಧಲಿಂಗ ಇರುವುದರಿಂದ.

ಆದ್ದರಿಂದ ಭಗವದ್‌ಜ್ಞಾನವು ಯೋಗ್ಯೈಕಸಾಧ್ಯವಾದ್ದರಿಂದ (ಯೋಗ್ಯರಿಂದ ಮಾತ್ರವೇ ಸಾಧ್ಯವಾದ್ದರಿಂದ) ಯೋಗ್ಯರಿಗೆ ಮಾತ್ರವೇ ಮೋಕ್ಷ ಸಿಗುತ್ತದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 35

**ಸೂ.ರ.:– ननु महता प्रयत्नेनायोग्यताया अभिभावयितुं शक्यत्वादयोग्यानामपि ज्ञानप्राप्तिर्भवेत् । दृष्टं हि विश्वामित्रस्य महता प्रयत्नेन विप्रत्वमित्याशङ्कामपाकुर्वत्सूत्रं पठति ॥**

ಮಹಾಪ್ರಯತ್ನದಿಂದ ಅಯೋಗ್ಯತೆಯನ್ನು ಕಳೆದುಕೊಳ್ಳಲು ಸಾಧ್ಯವಿರುವುದರಿಂದ ಅಯೋಗ್ಯರಿಗೂ ಸಹ ಜ್ಞಾನಪ್ರಾಪ್ತಿಯು ಉಂಟಾಗಬಹುದು. ವಿಶ್ವಾಮಿತ್ರರಿಗೆ ಮಹಾಪ್ರಯತ್ನದಿಂದ ವಿಪ್ರತ್ವ ಬಂದದ್ದು ಕಂಡಿದೆ ಕೂಡ ಎಂಬ ಶಂಕೆಯನ್ನು ಪರಿಹರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ अनभिभवं च दर्शयति ॐ (३-४-३५)**

**ಸೂತ್ರಾರ್ಥ** :- ಚ ಎಂಬ ಶಬ್ದಕ್ಕೆ, ಯತಃ (ಯಾವ ಕಾರಣ) ಎಂದರ್ಥ. ಚ = ಯಾವ ಕಾರಣ ದೈವೀಮೇವ ಇತಿ ಶ್ರುತಿಃ = "ದೈವೀಮೇವ" ಎಂಬ ಶ್ರುತಿಯು ನ ಕೇವಲಂ ಯೋಗ್ಯಾಯೋಗ್ಯಸ್ವರೂಪಂ ದರ್ಶಯತಿ = ಕೇವಲ ಯೋಗ್ಯ - ಅಯೋಗ್ಯಸ್ವರೂಪವನ್ನು ತೋರಿಸುವುದಿಲ್ಲ, ಕಿಂತು = ಕಿಂತು **ಅನಭಿಭವಂ ಚ ದರ್ಶಯತಿ** = ಅನಭಿಭವವನ್ನೂ ಪ್ರತಿಪಾದಿಸುತ್ತದೆಯೋ ಅತಃ = ಆ ಕಾರಣ ನ ಅಯೋಗ್ಯಾನಾಂ ಜ್ಞಾನಪ್ರಾಪ್ತಿಃ = ಅಯೋಗ್ಯರಿಗೆ ಜ್ಞಾನಪ್ರಾಪ್ತಿ ಇಲ್ಲ ಎಂದರ್ಥ.

**ಸೂ.ರ.:– एवं च निर्दिष्टश्रुत्या देवासुरस्वभावस्य योग्यायोग्यत्वयोः प्रतिपादितत्वाद्योग्यानामेव मोक्ष इति सिद्धम् ॥**

"ದೈವೀಮೇವ ಸಂಪತ್ತಿಂ ದೇವಾ ಅಭಿಗಚ್ಛಂತ್ಯಾಸುರೀಮೇವ ಚಾಸುರಾ ನೈವೈತಯೋರಭಿಭವಃ ಕದಾಚಿತ್ ಸ್ವಭಾವ ಏವ ಹ್ಯವತಿಷ್ಠತೇ"

ಎಂಬ ನಿರ್ದಿಷ್ಟಶ್ರುತಿಯಿಂದ ದೇವಸ್ವಭಾವಕ್ಕೆ ಯೋಗ್ಯತ್ವ, ಅಸುರಸ್ವಭಾವಕ್ಕೆ ಅಯೋಗ್ಯತ್ವವು ಪ್ರತಿಪಾದಿತವಾದ್ದರಿಂದ ಯೋಗ್ಯರಿಗೆ ಮಾತ್ರವೇ ಮೋಕ್ಷ ಉಂಟಾಗುತ್ತದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 36

**ಸೂ.ರ.:– ननु मास्तु तमोयोग्यानां मुक्तियोग्यानां चातिदार्ढ्येन स्वभावाभिभवायोगेन सम्यग्विपरीतज्ञानप्राप्तिः । तथाऽपि सा मध्यम-मनुष्याणां भवतु । कोटिद्वयविषयकतया तज्ज्ञानस्य दार्ढ्याभावेन तत्स्वभावाभिभवस्य कर्तुं शक्यत्वादित्याशङ्कां परिहरत्सूत्रमुपन्यस्यति ॥**

ತಮೋಯೋಗ್ಯರಿಗೆ ಹಾಗೂ ಮುಕ್ತಿಯೋಗ್ಯರಿಗೆ ಅತಿದಾರ್ಢ್ಯ ಇರುವುದರಿಂದ ಅವರ ಸ್ವಭಾವಕ್ಕೆ ಅಭಿಭವವು ಯುಕ್ತವಾಗುವುದಿಲ್ಲವಾದ್ದರಿಂದ ಸಮ್ಯಕ್‌ಜ್ಞಾನ-ವಿಪರೀತಜ್ಞಾನ ಪ್ರಾಪ್ತಿ ಬೇಡ (ತಮೋಯೋಗ್ಯರಿಗೆ ಸಮ್ಯಕ್‌ಜ್ಞಾನಪ್ರಾಪ್ತಿ ಬೇಡ. ಮುಕ್ತಿಯೋಗ್ಯರಿಗೆ ವಿಪರೀತಜ್ಞಾನಪ್ರಾಪ್ತಿ ಬೇಡ.) ತಥಾಪಿ (ಆದರೂ) ಸಮ್ಯಕ್-ವಿಪರೀತಜ್ಞಾನಪ್ರಾಪ್ತಿಯು ಮಧ್ಯಮಮನುಷ್ಯರಿಗೆ ಆಗಲಿ. ಕಾರಣ ಅವರ ಜ್ಞಾನವು ಕೋಟಿದ್ವಯವಿಷಯಕವಾದ್ದರಿಂದ ದಾರ್ಢ್ಯವಿಲ್ಲವಾದ್ದರಿಂದ ಅವರ ಸ್ವಭಾವಕ್ಕೆ ಅಭಿಭವ ಮಾಡಲು ಶಕ್ಯವಿದೆಯಾದ್ದರಿಂದ ಎಂಬುದಾಗಿ ಆಶಂಕೆ ಬಂದರೆ, ಅದನ್ನು ಪರಿಹರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ अन्तरा चापि तु तद्दृष्टेः ॐ (३-४-३६)**

ಸೂತ್ರಾರ್ಥ :- ಚಶಬ್ದ ಹಾಗೂ ತುಶಬ್ದಗಳು ಅವಧಾರಣಾರ್ಥಕವಾಗಿವೆ. **ಅಂತರಾ** = ಸಮ್ಯಕ್‌ಜ್ಞಾನ - ವಿಪರೀತಜ್ಞಾನಗಳ ಮಧ್ಯದಲ್ಲಿ **ಅಪಿ** ಸ್ಥಿತಾನಾಂ ನಿತ್ಯಸಂಸಾರಿಣಾಮಪಿ = ಇರುವ ನಿತ್ಯಸಂಸಾರಿಗಳಿಗೂ ಸಹ **ಚ ತು (ಏವ)** ಮಿಶ್ರಸ್ವಭಾವಾನಭಿಭವ ಏವ = ಅವರ ಮಿಶ್ರಸ್ವಭಾವಕ್ಕೆ ಅಭಿಭವವಿಲ್ಲ, ಕುತಃ = ಏಕೆ? **ತದ್ದೃಷ್ಟೇಃ** = ಅವರಿಗೆ ಆ ಮಿಶ್ರಜ್ಞಾನದಲ್ಲಿಯೇ ದಾರ್ಢ್ಯವು ಕಂಡಿದ್ದರಿಂದ.

**ಸೂ.ರ.:– एवं च मिश्रज्ञान एव तेषां दार्ढ्यदृष्टेस्तत्स्वभावाभि-भवाभावान्मोक्षो योग्यानामेवेति सिद्धम् ॥**

ಮಿಶ್ರಜ್ಞಾನದಲ್ಲಿಯೇ ಮಧ್ಯಮಮನುಷ್ಯರಿಗೆ ದಾರ್ಢ್ಯವು ಕಂಡಿದ್ದರಿಂದ, ಅವರ ಸ್ವಭಾವಕ್ಕೆ ಅಭಿಭವ ಇಲ್ಲವಾದ್ದರಿಂದ ಯೋಗ್ಯರಿಗೆ ಮಾತ್ರವೇ ಮೋಕ್ಷ ಎಂದು ಸಿದ್ಧವಾಗುತ್ತದೆ.

## ಸೂತ್ರ - 37

**ಸೂ.ರ.:- ननु देवानां मानवानां सम्यग्ज्ञानादिस्वभावत्वे तद्योग्यतास्वभावत्वे च भवेदभिभवाभावः । तदेव कुतः । तादृशस्वभावत्वे च तथा फलेन भाव्यम् । तदपि कुत इत्याशङ्कां स्मृत्या परिहरत्सूत्रमुपन्यस्यति ॥**

ದೇವತೆಗಳಿಗೆ ಮಾನವರಿಗೆ ಸಮ್ಯಕ್‌ಜ್ಞಾನಾದಿಸ್ವಭಾವತ್ವ ಹಾಗೂ ತದ್ಯೋಗ್ಯತಾ ಸ್ವಭಾವತ್ವವು ಇರುತ್ತಿದ್ದರೆ ಆಗ ಅಭಿಭವಾಭಾವವು ಕೂಡುತ್ತಿತ್ತು. ಆದರೆ ಅದೇ ಏಕೆ? ಅವರು ಅಂತಹ ಸ್ವಭಾವ ಉಳ್ಳವರಾಗಿದ್ದರೆ ಅಂತಹ ಫಲವು ಇರಬೇಕು. ಅವರಿಗೆ ತಾದೃಶಸ್ವಭಾವತ್ವವೇ ಏಕೆ? ಎಂದು ಶಂಕೆ ಬಂದರೆ, ಅದನ್ನು ಸ್ಮೃತಿಯಿಂದ ಪರಿಹರಿಸುವ ಸೂತ್ರವನ್ನು ಹೇಳುತ್ತಾರೆ -

### ॐ अपि स्मर्यते ॐ (३-४-३७)

**ಸೂತ್ರಾರ್ಥ** :- ಕೃಷ್ಣಾದಿಭಿಃ ಸ್ವಭಾವಾನಭಿಭವಃ = ಕೃಷ್ಣಾದಿಗಳಿಂದ ಸ್ವಭಾವದ ಅನಭಿಭವವು (ಅಭಿಭವಾಭಾವವು) **ಅಪಿ ಸ್ಮರ್ಯತೇ** = "ಅಸುರಾಃ" ಎಂಬುದಾಗಿ ಸ್ಮರಿಸಲ್ಪಡುತ್ತದೆ ಕೂಡ (ಸ್ಮೃತ್ಯುಕ್ತವಾಗಿದೆ). ಅತೋಽಪಿ = ಆ ಕಾರಣಕ್ಕಾಗಿಯೂ ಸಹ ದೇವದಾನವಮಾನವಸ್ವಭಾವಾನಾಂ ನಾಭಿಭವ ಇತ್ಯರ್ಥಃ = ದೇವ - ದಾನವ - ಮಾನವರ ಸ್ವಭಾವಗಳಿಗೆ ಅಭಿಭವ ಇಲ್ಲ ಎಂದರ್ಥ.

**ಸೂ.ರ.:- एवं चासुरा आसुरेणैवेति स्कान्दवचनाद्देवादीनां तत्तत्स्वभावानुसारिणा कर्मणा ज्ञानेन च तत्तत्स्वभावस्य तादृशफलस्य च तथा तत्तत्फलस्वभावयोर्व्यत्यासाभावस्य चोक्तत्वेनोक्तं युक्तमिति सिद्धम् ॥**

ಅಸುರಾ ಆಸುರೇಣೈವ ಸ್ವಭಾವೇನ ಚ ಕರ್ಮಣಾ ।
ಜ್ಞಾನೇನ ವಿಪರೀತೇನ ತಮೋ ಯಾಂತಿ ವಿನಿಶ್ಚಯಾತ್ ॥
ದೇವಾ ದೈವಸ್ವಭಾವೇನ ಕರ್ಮಣಾ ಚಾಪ್ಯಸಂಶಯಮ್ ।
ಸಮ್ಯಗ್‌ಜ್ಞಾನೇನ ಪರಮಾಂ ಗತಿಂ ಗಚ್ಛಂತಿ ವೈಷ್ಣವೀಮ್ ॥

ನಾನಯೋರನ್ಯಥಾಭಾವಃ ಕದಾಚಿತ್ಕ್ವಾಪಿ ವಿದ್ಯತೇ ।
ಮಾನುಷಾ ಮಿಶ್ರಮತಯೋ ವಿಮಿಶ್ರಗತಯೋಽಪಿ ಚ ॥

ಎಂಬ ಸ್ಕಾಂದವಚನ ಇರುವುದರಿಂದ ದೇವ - ದಾನವ - ಮಾನವರಿಗೆ ತತ್ತತ್ಸ್ವಭಾವಾನುಸಾರಿಯಾದ ಕರ್ಮದಿಂದ ಹಾಗೂ ಜ್ಞಾನದಿಂದ ತತ್ತತ್ಸ್ವಭಾವವನ್ನು ಮತ್ತು ತಾದೃಶಫಲವನ್ನು ಹಾಗೂ ತತ್ತತ್ಫಲ - ಸ್ವಭಾವಗಳಿಗೆ ವ್ಯತ್ಯಾಸಾಭಾವವನ್ನು ಹೇಳಿದ್ದರಿಂದ ನಾವು ಹೇಳಿದ್ದು ಯುಕ್ತವಾಗಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 38

**ಸೂ.ರ.:– हेत्वन्तरेण देवानामेव सम्यग्ज्ञानतत्फले नान्येषामित्यर्थप्रतिपादकसूत्रमुपन्यस्य तदपेक्षितं पूरयति ॥**

ಮತ್ತೊಂದು ಹೇತುವಿನಿಂದ "ದೇವತೆಗಳಿಗೇನೇ ಸಮ್ಯಕ್‌ಜ್ಞಾನ - ತತ್ಫಲಗಳು ಹೊರತು ಇತರರಿಗೆ ಅಲ್ಲ" ಎಂದು ಪ್ರತಿಪಾದನೆ ಮಾಡುವ ಸೂತ್ರವನ್ನು ಹೇಳಿ, ಅದಕ್ಕೆ ಅಪೇಕ್ಷಿತವಾದದ್ದನ್ನು ಪೂರ್ಣಮಾಡುತ್ತಾರೆ -

### ॐ विशेषानुग्रहं च ॐ (३-४-३८)

**ಸೂತ್ರಾರ್ಥ** :- ಚ ಶಬ್ದವು ಯುಕ್ತಿಸಮುಚ್ಚಾಯಕವಾಗಿದೆ ಯತಃ = ಯಾವ ಕಾರಣ, 'ಶೃಣ್ವೇ ವೀರ' (ಋ. 6-47-16) ಎಂಬ ಶ್ರುತಿಯು ದೇವೇಷು ಪರಮೇಶ್ವರಸ್ಯ **ವಿಶೇಷಾನುಗ್ರಹಂ ಚ** ದರ್ಶಯತಿ ಪ್ರತಿಪಾದಯತಿ = ದೇವತೆಗಳಲ್ಲಿ ಪರಮಾತ್ಮನ ವಿಶೇಷಾನುಗ್ರಹವನ್ನು ಪ್ರತಿಪಾದಿಸುತ್ತದೆಯೋ ಅತಃ = ಆ ಕಾರಣ ದೇವಾನಾಮೇವ ಸಮ್ಯಕ್ ಜ್ಞಾನತತ್ಫಲೇ ನಾನ್ಯೇಷಾಂ = ದೇವತೆಗಳಿಗೇನೇ ಸಮ್ಯಕ್‌ಜ್ಞಾನ ತತ್ಫಲಗಳು ಹೊರತು ಇತರರಿಗೆ ಅಲ್ಲ ಎಂದರ್ಥ.

**ಸೂ.ರ.:– एवं च शृण्वे वीर इत्यसुरान्दमयन्निति (भविष्यत्पर्वणि.) च श्रुतिस्मृत्योर्देवेषु विशेषानुग्राहकयोः प्रमाणत्वेन देवानामेव नान्येषां सम्यग्ज्ञानफले भवत इति सिद्धम् ॥**

ಶೃಣ್ವೇ ವೀರ ಉಗ್ರಮುಗ್ರಂ ದಮಾಯನ್ನನ್ಯಮನ್ಯಮತಿ ನೇನೀಯಮಾನಃ ।
ಏಧಮಾನ ದ್ವಿಳುಭಯಸ್ಯ ರಾಜಾ ಚೋಷ್ಕೂಯತೇ ವಿಶ ಇಂದ್ರೋ ಮನುಷ್ಯಾನ್ ॥

ಎಂಬ ಶ್ರುತಿ ಹಾಗೂ

ಅಸುರಾನ್ ದಮಯನ್ ವಿಷ್ಣುಃ ಸ್ವಪದಂ ಚ ಸುರಾನ್ನಯನ್ ।
ಪುನಃ ಪುನರ್ಮಾನುಷಾಂಸ್ತು ಸೃತಾವಾವರ್ತಯತ್ಯಸೌ ॥

ಎಂಬ ಸ್ಮೃತಿ ದೇವತೆಗಳಿಗೆ ಪರಮಾತ್ಮನು ವಿಶೇಷಾನುಗ್ರಾಹಕನಾಗಿದ್ದಾನೆ ಎಂಬ ವಿಷಯದಲ್ಲಿ ಪ್ರಮಾಣವಾದ್ದರಿಂದ ದೇವತೆಗಳಿಗೇನೇ ಸಮ್ಯಕ್‌ಜ್ಞಾನ - ತತ್ಫಲಗಳು, ಇತರರಿಗೆ ಅಲ್ಲ ಎಂದು ಸಿದ್ಧವಾಗುತ್ತದೆ.

## ಸೂತ್ರ - 39

**ಸೂ.ರ.:- ननु यदुक्तं श्रुतिस्मृतिभ्यां न दैत्यानां तत्स्वभावाभिभवेन देवत्वप्राप्तिरिति तदेव युक्त्याऽपि समर्थयत्सूत्रं पठति ॥**

ದೈತ್ಯರಿಗೆ ಅವರ ಸ್ವಭಾವಕ್ಕೆ ಅಭಿಭವ ಇಲ್ಲವಾದ್ದರಿಂದ ದೇವತ್ವಪ್ರಾಪ್ತಿ ಇಲ್ಲ ಎಂಬುದಾಗಿ ಶ್ರುತಿ-ಸ್ಮೃತಿಗಳಿಂದ ಏನು ಹೇಳಲಾಗಿದೆಯೋ ಅದನ್ನೇ ಯುಕ್ತಿಯಿಂದಲೂ ಸಹ ಸಮರ್ಥಿಸುವ ಸೂತ್ರವನ್ನು ಹೇಳುತ್ತಾರೆ -

**ॐ अतस्त्वितरज्ज्यायो लिङ्गाच्च ॐ (३-४-३९)**

**ಸೂತ್ರಾರ್ಥ** :- ತುಶಬ್ದವು ಅವಧಾರಣಾರ್ಥಕವಾಗಿದೆ. **ಅತಃ** = ದೇವಭಾಗಕ್ಕಿಂತಲೂ ಅಸುರಭಾಗಕ್ಕೆ ಎಂದಿಗೂ ಊನತ್ವ ಇಲ್ಲವಾದ್ದರಿಂದ **ಇತರತ್** = ಅಸುರವೃಂದವೇ **ಅತಃ** = ದೇವಭಾಗಕ್ಕಿಂತಲೂ **ಜ್ಯಾಯಃ** = ಬಹುಲವಾಗಿದೆ. ಕುತಃ = ಏಕೆ? **ಲಿಂಗಾತ್** = "ತಸ್ಮಾನ್ನ ಜನತಾಮಿಯಾತ್" ಎಂಬುದಾಗಿ ಜನಸಂಘಪ್ರವೇಶನಿಷೇಧೋಕ್ತ್ಯನ್ಯಥಾನುಪಪತ್ತಿರೂಪವಾದ ಲಿಂಗದಿಂದ. ಚ ಶಬ್ದಸೂಚಿತವಾದ "ತತಃ ಕನೀಯಸಾ" ಎಂಬ ಶ್ರುತಿ ಇರುವುದರಿಂದಲೂ ಸಹ.

**ಸೂ.ರ.:- एवं चासुराणां देवत्वे प्राप्ते दैत्यभागस्य कालक्रमेण क्षीणत्वमापन्नं स्यात् । प्रत्यहं ब्राह्मणाय दीयमानधान्यादिराशेः क्षयदर्शनात् । न च तदस्ति । असुरा बहुला इति वचनात् । तेन न दैत्यानां स्वरूपोपमर्देन देवत्वं भवतीति सिद्धम् ॥**

ಅಸುರರಿಗೆ ದೇವತ್ವವು ಪ್ರಾಪ್ತವಾದರೆ ದೈತ್ಯಭಾಗವು ಕಾಲಕ್ರಮೇಣ ಕ್ಷೀಣವಾಗಬೇಕಾಗುತ್ತದೆ. ಪ್ರತ್ಯಹಂ (ಪ್ರತಿದಿನ) ಬ್ರಾಹ್ಮಣನಿಗೆ ದೀಯಮಾನವಾದ ಧಾನ್ಯಾದಿರಾಶಿಗೆ ಕ್ಷಯ ಕಂಡಿದ್ದರಿಂದ. ಈಗಲಾದರೂ ಅದಿಲ್ಲ. "**ಅಸುರಾ ಬಹುಲಾ ಯಸ್ಮಾತ್ತಸ್ಮಾನ್ನ ಜನತಾಮಿಯಾತ್**" ಎಂದು ವಚನ ಇರುವುದರಿಂದ. ಇದರಿಂದಾಗಿ ದೈತ್ಯರಿಗೆ ಸ್ವರೂಪೋಪಮರ್ದದಿಂದ ದೇವತ್ವವು ಪ್ರಾಪ್ತವಾಗುವುದಿಲ್ಲ ಎಂದು ಸಿದ್ಧವಾಗುತ್ತದೆ.

## ಸೂತ್ರ - 40

**ಸೂ.ರ.:- जैमिनिमतेनापि स्वरूपाभिभवो नेत्यर्थं समर्थयत्सूत्रं पठति ॥**

ಜೈಮಿನಿಮತದಿಂದಲೂ ಸಹ ಸ್ವರೂಪಾಭಿಭವ ಇಲ್ಲ ಎಂಬ ಅರ್ಥವನ್ನು ಸಮರ್ಥಿಸುವ ಸೂತ್ರವನ್ನು ಹೇಳುತ್ತಾರೆ -

**ॐ तद्भूतस्य तु तद्भावो जैमिनेरपि नियमात्तद्रूपाभावेभ्यः ॐ (३-४-४०)**

**ಸೂತ್ರಾರ್ಥ :- ತದ್ಭೂತಸ್ಯ ತು** = ದೇವಭೂತನಾದವನಿಗೇನೇ **ತದ್ಭಾವಃ** = ದೇವತಾಭಾವ ಬರುತ್ತದೆ, ಏವಮಸುರಸ್ಯೈವಾಸುರಭಾವಃ = ಇದೇ ರೀತಿಯಾಗಿ ಅಸುರರಿಗೇನೇ ಅಸುರಭಾವ ಬರುತ್ತದೆ ಎನ್ನುವುದು **ಜೈಮಿನೇರಪಿ** = ಜೈಮಿನಿ ಆಚಾರ್ಯರಿಗೂ ಸಹ ಸಿದ್ಧಃ = ಸಿದ್ಧವಾಗಿದೆ. ಕುತಃ = ಏಕೆ? **ನಿಯಮಾತ್ ತದ್ರೂಪಾಭಾವೇಭ್ಯಃ** = "ನಾಸುರಾ ದೈವೀಂ" ಎಂಬುದಾಗಿ ಚಶಬ್ದಸೂಚಿತ ಶ್ರುತಿ ಇರುವುದರಿಂದ, "ನಾಸುರಾಣಾಂ ದೈವಂ" ಎಂಬುದಾಗಿ ಅತದ್ರೂಪತ್ವಶ್ರುತಿ ಇರುವುದರಿಂದ, "ತಂ ಭೂಃ" ಎಂಬುದಾಗಿ ಭಾವಶಬ್ದಿತ ಶ್ರುತಿ ಇರುವುದರಿಂದ.

**ಸೂ.ರ.:- एवं च निर्दिष्टश्रुतिभिरसुरजातेरेवासुरत्वं देवजातेरेव देवत्वमिति जैमिनेराचार्यस्यापि सिद्धम् । स्वरूपतो देवानां प्रल्हादादीनां ब्रह्मादिशापेन तिरोहितस्वभावत्त्वात् तेषां पुनर्निजस्वरूपत्वमुपपन्नम् । कारणान्तरादुक्तस्यान्यथाभावाभावात् । अतो भगवज्ज्ञानस्य योग्यैकसाध्यत्वेन योग्यानामेव मोक्ष इति सिद्धम् ॥**

"ನಾಸುರಾ ದೈವೀಂ ನ ದೇವಾ ಆಸುರೀಂ ನ ಮನುಷ್ಯಾ ದೈವೀಂ ಆಸುರೀಂ ಚ ..." "ನಾಸುರಾಣಾಂ ದೈವಂ ರೂಪಂ ನ ದೇವಾನಾಂ ಆಸುರಂ ..." "ತಂ ಭೂತಿರಿತಿ ದೇವಾ ಉಪಾಸಾಂಚಕ್ರಿರೇ ..."

ಎಂಬ ಶ್ರುತಿಗಳಿರುವುದರಿಂದ ಅಸುರಜಾತಿಯವರಿಗೇನೇ ಅಸುರತ್ವ, ದೇವ-ಜಾತಿಯವರಿಗೇನೇ ದೇವತ್ವ ಎಂಬುದಾಗಿ ಜೈಮಿನಿ ಆಚಾರ್ಯರಿಗೂ ಸಿದ್ಧವಾಗಿದೆ.

ಸ್ವರೂಪತಃ ದೇವತೆಗಳಾದ ಪ್ರಹ್ಲಾದಾದಿಗಳಿಗೆ ಬ್ರಹ್ಮಾದಿಶಾಪದಿಂದ ತಿರೋಹಿತ ಸ್ವಭಾವತ್ವ ಬಂದಿರುತ್ತದೆಯಾದ್ದರಿಂದ ಅವರಿಗೆ ಪುನಃ ನಿಜಸ್ವರೂಪತ್ವವು ಉಪಪನ್ನ-ವಾಗುತ್ತದೆ. ಆದ್ದರಿಂದ ಭಗವದ್‌ಜ್ಞಾನವು ಯೋಗ್ಯರಿಂದ ಮಾತ್ರ ಸಾಧ್ಯವಾದ್ದರಿಂದ ಯೋಗ್ಯರಾದವರಿಗೇನೇ ಮೋಕ್ಷ ಎಂದು ಸಿದ್ಧವಾಗುತ್ತದೆ.

**ಉಭಯಲಿಂಗಾಧಿಕರಣವು ಮುಗಿಯಿತು.**

*ಅಧಿಕರಣ – 6*

## ಆಧಿಕಾರಿಕಾಧಿಕರಣ

### ಸಂಗತಿ

**ಸೂ.ರ.:– अत्र ब्रह्मज्ञानस्य देवतापदाकाङ्क्षाशून्यैरेव प्राप्यत्व-महिमा वर्ण्यते ।**

ಬ್ರಹ್ಮಜ್ಞಾನಕ್ಕೆ ದೇವತಾಪದಾಕಾಂಕ್ಷಾಶೂನ್ಯರಾದವರಿಂದಲೇ ಪ್ರಾಪ್ಯತ್ವವನ್ನು ವರ್ಣಿಸುತ್ತಾರೆ ಆರನೇ ಈ ಆಧಿಕಾರಿಕಾಧಿಕರಣದಲ್ಲಿ.

ದೇವತಾಪದವು ಅನ್ಯರಿಂದ ಪ್ರಾಪ್ಯವಾಗಿದೆಯೋ ? ಅಥವಾ ಅನ್ಯರಿಂದ ಪ್ರಾಪ್ಯವಲ್ಲವೋ? ಎಂದು ಸಂದೇಹ.

### ಪೂರ್ವಪಕ್ಷ

**ಸೂ.ರ.:– ननु देवतापदमन्यैः प्राप्यम् । स्वधर्मनिष्ठ इत्यादेः । अतो देवत्वादिकमस्वाभाविकम् । अपि तु प्रयत्नाधीनम् । ततश्चा-योग्यैरपि ज्ञानं प्राप्यमिति प्राप्ते सूत्रमाह ॥**

ದೇವತಾಪದವು ಅನ್ಯರಿಂದ ಪ್ರಾಪ್ಯವಾಗಿದೆ. "ಸ್ವಧರ್ಮನಿಷ್ಠಃ ಶತಜನ್ಮಭಿಃ ಪುಮಾನ್ ವಿರಿಂಚತಾಮೇತಿ ..." ಎಂದು ವಚನ ಇರುವುದರಿಂದ. ಆದ್ದರಿಂದ ದೇವತ್ವಾದಿಗಳು (ಅಸ್ವಾಭಾವಿಕವಾಗಿವೆ) ಸ್ವಾಭಾವಿಕವಲ್ಲ ಕಿಂತು ಪ್ರಯತ್ನಾಧೀನವಾಗಿವೆ. ಆದ್ದರಿಂದ ಅಯೋಗ್ಯರಿಂದಲೂ ಜ್ಞಾನವು ಪ್ರಾಪ್ಯವಾಗಿದೆ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರ ಹೇಳುತ್ತಾರೆ –

**ॐ न चाधिकारिकमपि पतनानुमानात्तदयोगात् ॐ (३-४-४१)**

ಸೂತ್ರಾರ್ಥ :- ಚ ಶಬ್ದವು ಜ್ಞಾನಾರ್ಥಿಗಳಿಗೆ ಅಯೋಗ್ಯಾಕಾಂಕ್ಷಾ-ವರ್ಜನರೂಪ ಇತಿಕರ್ತವ್ಯತಾಂತರ ಸೂಚಕವಾಗಿದೆ. **ಆಧಿಕಾರಿಕಮಪಿ** = ದೇವತಾ-ಪದವೂ ಸಹ ಇತರೈಃ = ಇತರರಿಂದ ನ ಆಕಾಂಕ್ಷ್ಯಂ = ಆಕಾಂಕ್ಷ್ಯವಾಗಿಲ್ಲ

ಭಗವದೈಶ್ವರ್ಯಾದಿಗಳಂತೂ ಸುತರಾಂ ಆಕಾಂಕ್ಷ್ಯವಲ್ಲ ಎಂದು ಸೂಚಿಸಲು **ಅಪಿಶಬ್ದ**. **ಕುತಃ** = ಏಕೆ? **ಪತನಾನುಮಾನಾತ್** = ಅಯೋಗ್ಯೇಚ್ಛಾದಿಂದ ಪತನವು ಸ್ಮಾರ್ತಯುಕ್ತಿಸಿದ್ಧವಾದ್ದರಿಂದ. **ಅತ ಏವ** = ಆದ್ದರಿಂದಲೇ **ತದಯೋಗಾತ್** = ಅಯೋಗ್ಯಾಕಾಂಕ್ಷೆ ಮಾಡಲು ಯುಕ್ತವಲ್ಲದ್ದರಿಂದ.

## ಸಿದ್ಧಾಂತ

**ಸೂ.ರ.:- एवं च न देवपदमन्यैः प्राप्यम् । तदाकाङ्क्षामात्रस्य पातहेतुत्वात् । ब्रह्मादिपदाकाङ्क्षावान्पतति अयोग्यवृत्तिमत्त्वात् । अयोग्यवृक्षारोहाय प्रयतमानवदिति प्रयोगसम्भवात् । देवासुरेति वचनाद्योग्यत्वविशेषणसिद्धेः । न च प्रयत्नस्य पतनकारणत्वेऽपि नेच्छामात्रं पतनकारणमिति । स्वकीयमिच्छमानमिति वचनात् । अतो ब्रह्मादिपदस्य तद्योग्यैकलभ्यत्वेनोक्तं युक्तमिति सिद्धम् ॥**

ದೇವಪದವು ಅನ್ಯರಿಂದ ಪ್ರಾಪ್ಯವಲ್ಲ. ಏಕೆ? ಕೇವಲ ದೇವಪದದ ಆಕಾಂಕ್ಷೆ ಮಾತ್ರವೂ ಪಾತಹೇತುವಾದ್ದರಿಂದ.

ಬ್ರಹ್ಮಾದಿಪದಾಕಾಂಕ್ಷಾವಾನ್ ಪತತಿ ಅಯೋಗ್ಯವೃತ್ತಿಮತ್ವಾತ್ ಅಯೋಗ್ಯ-ವೃಕ್ಷಾರೋಹಾಯ ಪ್ರಯತಮಾನವತ್ ।

ಎಂಬುದಾಗಿ ಪ್ರಯೋಗ ಮಾಡಲು ಸಾಧ್ಯವಿರುವುದರಿಂದ.

ಪ್ರಯತ್ನವು ಪತನಕಾರಣವಾದರೂ ಸಹ ಕೇವಲ ಇಚ್ಛೆಯು ಪತನಕಾರಣ-ವಾಗುವುದಿಲ್ಲ ಎಂದು ಶಂಕಿಸುವುದು ಸರಿಯಲ್ಲ.

ಸ್ವಕೀಯಮಿಚ್ಛಮಾನಂ ತು ರಾಜಾದ್ಯಾಃ ಪಾತಯಂತಿ ಹಿ ।
ಏವಮೇವ ಸುರಾದ್ಯಾಶ್ಚ ಹರಿಶ್ಚ ಸ್ವಪದೇಚ್ಛುಕಮ್ ॥

ಎಂದು ವಚನವಿರುವುದರಿಂದ. ಆದ್ದರಿಂದ ಬ್ರಹ್ಮಾದಿಪದವು ತದ್ಯೋಗ್ಯರಿಂದ ಮಾತ್ರ ಲಭ್ಯವಾದ್ದರಿಂದ ಜ್ಞಾನವು ಯೋಗ್ಯರಿಂದಲೇ ಪ್ರಾಪ್ಯ ಎಂದು ಸಿದ್ಧವಾಗುತ್ತದೆ.

## ಸೂತ್ರ - 42

**ಸೂ.ರ.:– कैमुत्येनापि देवतापदाकाङ्क्षाऽयोगं साधयत्सूत्रं पठति ॥**

ದೇವತಾಪದಾಕಾಂಕ್ಷಾ ಕೂಡುವುದಿಲ್ಲ ಎಂಬುದನ್ನು ಕೈಮುತ್ಯದಿಂದಲೂ ಸಾಧಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ उपपूर्वमपीत्येके भावशमनवत्तदुक्तम् ॐ (३-४-४२)**

**ಸೂತ್ರಾರ್ಥ :- ಭಾವಶಮನವತ್** = ಭಾವೇ ಚಿತ್ತೇ ಶಮನಂ ಭಗವನ್ನಿಷ್ಠಾ ಯೇಷಾಂ ತೇ ಭಾವಶಮನಾಃ ಋಷಯಃ । ಭಾವ ಎಂದರೆ ಚಿತ್ತ (ಮನಸ್ಸು). ಅಂತಹ ಮನಸ್ಸಿನಲ್ಲಿ ಶಮನ = ಭಗವನ್ನಿಷ್ಠೆಯು ಯಾರಿಗೆ ಇದೆಯೋ ಅಂತಹ ಋಷಿಗಳು ಭಾವಶಮನರು. ತತ್ಪದಂ ಯಥಾ ನಾಕಾಂಕ್ಷ್ಯಂ ತಥಾ = ಅಂತಹ ಋಷಿಗಳ ಪದವು ಹೇಗೆ ಆಕಾಂಕ್ಷ್ಯವಲ್ಲವೋ ಅದರಂತೆ **ಉಪಪೂರ್ವಮಪಿ** = ಉಪಶಬ್ದಪೂರ್ವಕ ಉಪದೇವಶಬ್ದವಾಚ್ಯರಾದ ಗಂಧರ್ವರ ಪದವೂ ಜ್ಞಾನಿಭಿಃ ನ ಆಕಾಂಕ್ಷ್ಯಂ = ಜ್ಞಾನಿಗಳಿಂದ ಆಕಾಂಕ್ಷ್ಯವಾಗಿಲ್ಲ.

ಕಿಮುತ ಸುತರಾಂ ದೇವಾದಿಪದಂ ಇತಿ ಸೂಚಯಿತುಂ ಅಪಿಶಬ್ದಃ = ಅಂದಮೇಲೆ ದೇವಾದಿಪದವು ಸುತರಾಂ ಆಕಾಂಕ್ಷ್ಯವಲ್ಲ ಎಂದು ಹೇಳುವುದೇನು? ಎಂದು ಸೂಚಿಸಲು ಅಪಿಶಬ್ದ ಪ್ರಯೋಗಿಸಿದ್ದಾರೆ. ಇತಿ = ಈ ರೀತಿಯಾಗಿ **ಏಕೇ** = ಕೆಲವು ಶಾಖಿಗಳು ತಿಳಿಯುತ್ತಾರೆ. ಕುತಃ = ಏಕೆ? ಯತಃ = ಯಾವ ಕಾರಣ ಜ್ಞಾನಾರ್ಥಿನಾಂ = ಜ್ಞಾನಾರ್ಥಿಗಳಿಗೆ "ಅಥ ಯಥರ್ಷೀನ್ ಪ್ರಜಾಪತೀನ್ನಾಕಾಂಕ್ಷೇ-ದೇವಂ ನ ಗಂಧರ್ವಾನ್ನ ವಿದ್ಯಾಧರಾನ್ನ ಸಿದ್ಧಾನ್" ಎಂಬುದಾಗಿ ಇಂದ್ರದ್ಯುಮ್ನ ಶ್ರುತಿಯಲ್ಲಿ **ತದುಕ್ತಂ** = ಹಾಗೆ ಹೇಳಲಾಗಿದೆಯೋ ಅತಃ = ಆ ಕಾರಣ ಎಂದರ್ಥ.

**ಸೂ.ರ.:– एवं च ब्रह्मादिपदस्य तद्योग्यैकलभ्यत्वादुक्तं युक्तमिति सिद्धम् ॥**

ಆದ್ದರಿಂದ ಬ್ರಹ್ಮಾದಿಪದವು ಅದಕ್ಕೆ ಯೋಗ್ಯರಾದವರಿಂದ ಮಾತ್ರ ಲಭ್ಯ-ವಾದ್ದರಿಂದ ಜ್ಞಾನವು ಯೋಗ್ಯಪ್ರಾಪ್ಯವಾಗಿದೆ ಎಂದು ಹೇಳಿದ್ದು ಯುಕ್ತವಾಗಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 43

**ಸೂ.ರ.:– ज्ञानार्थिना यथा देवादिपदं नाकाङ्क्ष्यमेवं ज्ञान-भक्त्यादिकमाकाङ्क्ष्यं न वेति सन्देहमपाकुर्वत्सूत्रं पठति ॥**

ಜ್ಞಾನಾರ್ಥಿಯಾದವನಿಂದ ಯಾವ ರೀತಿಯಾಗಿ ದೇವಾದಿಪದವು ಆಕಾಂಕ್ಷ್ಯ-ವಾಗಿಲ್ಲವೋ ಅದೇ ರೀತಿಯಾಗಿ ಜ್ಞಾನ - ಭಕ್ತ್ಯಾದಿಗಳೂ ಆಕಾಂಕ್ಷ್ಯವಾಗಿವೆಯೋ ? ಇಲ್ಲವೋ? ಎಂಬ ಸಂದೇಹವನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

### ॐ बहिस्तूभयथाऽपि स्मृतेराचाराच्च ॐ (३-४-४३)

**ಸೂತ್ರಾರ್ಥ :- ಬಹಿಸ್ತು** = ದೇವಾದಿಪದಗಳಿಂದ ಭಿನ್ನವಾದ ಜ್ಞಾನದ ವಿಷಯದಲ್ಲಿ, ಭಕ್ತ್ಯಾದಿ ವಿಷಯದಲ್ಲಿ **ಉಭಯಥಾऽಪಿ** = ಆಕಾಂಕ್ಷಾ ಮಾಡಿದರೂ ಸಹ ಆಕಾಂಕ್ಷಾ ಮಾಡದಿದ್ದರೂ ಸಹ ನ ದೋಷಃ = ದೋಷವಿಲ್ಲ. ಕುತಃ = ಏಕೆ? **ಸ್ಮೃತೇಃ** = "ದೇವರ್ಷಿಗಂಧರ್ವಾಣಾಂ" ಎಂದು ಸ್ಮೃತಿ ಇರುವುದರಿಂದ, **ಆಚಾರಾಚ್ಚ** = "ನಾನಾತ್ವಮೇವ ಕಾಮಾನಾಂ" ಎಂಬುದಾಗಿ ಶುಭಾಚಾರ ವಿಧಾಯಕ ಶಬ್ದ ಇರುವುದರಿಂದಲೂ ಸಹ.

**ಸೂ.ರ.:– एवं च न तु देवपदादिकमिव स्वर्गादिकमपि नाकाङ्क्ष्यमुच्यते । देवर्षिगन्धर्वादिपदादिभ्योऽन्यत्र शुभविषये आकाङ्क्षायामपि पतनाभावात् । देवर्षिगन्धर्वाणां पदाकाङ्क्षिणः पतनं नेत्युभयथा श्रुतेः । अतोऽविरुद्धकामः स्यादित्याचाराभिधानात् । ततो ब्रह्मादिपदस्य तद्योग्यैकलभ्यत्वेनोक्तं युक्तमिति सिद्धम् ॥**

ದೇವಪದಾದಿಗಳಂತೆ ಸ್ವರ್ಗಾದಿಗಳೂ ಆಕಾಂಕ್ಷ್ಯವಲ್ಲ ಎಂದು ಹೇಳುವುದಿಲ್ಲ. ದೇವ - ಋಷಿ - ಗಂಧರ್ವಾದಿ ಪದಗಳಿಂದ ಭಿನ್ನವಾದ ಶುಭವಿಷಯದಲ್ಲಿ ಆಕಾಂಕ್ಷಾ ಮಾಡಿದರೂ ಸಹ ಪತನ ಇಲ್ಲವಾದ್ದರಿಂದ.

ದೇವರ್ಷಿಗಂಧರ್ವಾಣಾಂ ಪದಾಕಾಂಕ್ಷೀ ಪತೇದ್ಧ್ರುವಮ್ ।
ಅನ್ಯತ್ರ ಶುಭಮಾಕಾಂಕ್ಷನ್ನ ಪತೇದವಿರೋಧತಃ ॥

ಎಂದು ಸ್ಮೃತಿ ಇರುವುದರಿಂದ, ಹಾಗೂ

ನಾನಾತ್ವಮೇವ ಕಾಮಾನಾಂ ನಾಕಾಮಃ ಕ್ವ ಚ ದೃಶ್ಯತೇ ।
ಅತೋಽವಿರುದ್ಧಕಾಮಃ ಸ್ಯಾದಕಾಮಸ್ತೇನ ಭಣ್ಯತೇ ॥

ಎಂದು ಆಚಾರ ಹೇಳಿದ್ದರಿಂದ.

ಆದ್ದರಿಂದ ಬ್ರಹ್ಮಾದಿಪದಗಳು ತದ್ಯೋಗ್ಯರಿಂದ ಮಾತ್ರ ಲಭ್ಯವಾದ್ದರಿಂದ ಜ್ಞಾನವು ಯೋಗ್ಯರಿಂದ ಮಾತ್ರ ಪ್ರಾಪ್ಯವಾಗಿದೆ ಎಂದು ಹೇಳಿದ್ದು ಯುಕ್ತವಾಗಿದೆ ಎಂದು ಸಿದ್ಧವಾಗುತ್ತದೆ.

**ಅಧಿಕಾರಿಕಾಧಿಕರಣವು ಮುಗಿಯಿತು.**

ಅಧಿಕರಣ – 7

# ಫಲಶ್ರುತ್ಯಧಿಕರಣ

## ಸಂಗತಿ

**ಸೂ.ರ.:– अत्र ब्रह्मज्ञानस्य संनिधिमात्रेणास्वामिनोऽपि पराधीनस्य ज्ञानिनः कर्तुः फलदातृत्वमहिमा वर्ण्यते ।**

ಭಗವತ್ಪ್ರಾಪ್ತಿಗೆ ಸಾಧನವಾದ ಜ್ಞಾನವು ಸ್ವಾಮಿಯಾಗದವನಿಗೂ (ಜ್ಞಾನಿಗೂ) ಸನ್ನಿಧಿ ಮಾತ್ರದಿಂದ ಫಲ ನೀಡುತ್ತದೆ ಎಂಬ ಮಹಿಮೆಯನ್ನು ವರ್ಣಿಸುತ್ತಾರೆ ಏಳನೇ ಈ ಫಲಶ್ರುತ್ಯಧಿಕರಣದಲ್ಲಿ.

ಪ್ರಕೃತವಾದ ಜ್ಞಾನವು ದೇವತೆಗಳಿಗೆ ಫಲಪ್ರದವಾಗಿದೆಯೋ? ಅಥವಾ ಪ್ರಜೆಗಳಿಗೆ ಫಲಪ್ರದವಾಗಿದೆಯೋ? ಎಂದು ಸಂದೇಹ.

## ಪೂರ್ವಪಕ್ಷ

**ಸೂ.ರ.:– ननु ब्रह्मज्ञानफलं देवानामेव न मनुष्याणामिन्द्रियादिप्रवर्तकत्वेन तेषामेव ज्ञानस्वामित्वात् । लोके च स्वामिन एव फलदर्शनात् । यदु किञ्चेति (माध्यन्दिनायन.) श्रुतेः । न च कर्तृत्वेनास्वामिनामपि फलम् । कर्तृत्वस्याप्रयोजकत्वात् । न च स्वामित्वात्फलम् । असिद्धेः । किञ्चैवमासतम आत्रेयो मन्यत इति । ततश्च ज्ञानिनां मोक्षनियमोऽयुक्त इति प्राप्ते सूत्रितम् ॥**

ಬ್ರಹ್ಮಜ್ಞಾನದ ಫಲವು (ಮೋಕ್ಷವು) ದೇವತೆಗಳಿಗೇನೇ ಹೊರತು ಮನುಷ್ಯರಿಗೆ ಅಲ್ಲ. ಯಾಕೆ? ದೇವತೆಗಳು ಇಂದ್ರಿಯಾದಿಪ್ರವರ್ತಕರಾದ್ದರಿಂದ ಅವರೇ ಜ್ಞಾನ-ಸ್ವಾಮಿಯಾಗಿರುವುದು ಕಾರಣ. ಲೋಕದಲ್ಲಿಯೂ ಸಹ ಸ್ವಾಮಿಯಾದವನಿಗೇನೇ ಫಲ ಕಂಡಿದ್ದರಿಂದ.

"ಯದು ಕಿಂಚೇಮಾಃ ಪ್ರಜಾಃ ... ಸ್ವಾಮೀ ಹಿ ಫಲಮಶ್ನುತೇ ನಾಸ್ವಾಮೀ ..."

ಎಂಬುದಾಗಿ ಶ್ರುತಿಯೂ ಇರುವುದರಿಂದ. ಹೌದು, ಮನುಷ್ಯರು ಸ್ವಾಮಿ-ಯಾಗದೇ ಇದ್ದರೂ ಸಹ ಕರ್ತೃಗಳಾದ್ದರಿಂದ ಫಲ ಉಳ್ಳವರಾಗಬಹುದಲ್ಲ? ಎಂದು ಶಂಕಿಸುವುದು ಸರಿಯಲ್ಲ, ಕಾರಣ ಫಲಪ್ರಾಪ್ತಿಗೆ ಕರ್ತೃತ್ವವು ಅಪ್ರಯೋಜಕ-ವಾದ್ದರಿಂದ. ಮನುಷ್ಯರು ಸ್ವಾಮಿಯಾಗಿಲ್ಲ ಎಂದು ಏಕೆ ಹೇಳುತ್ತೀರಿ? ಸ್ವಾಮಿತ್ವ ಉಂಟಲ್ಲ ಎನ್ನುವುದು ಸರಿಯಲ್ಲ, ಕಾರಣ ಮನುಷ್ಯರು ಸ್ವಾಮಿಗಳಾಗಿಲ್ಲವಾದ್ದರಿಂದ ಸ್ವಾಮಿತ್ವವು ಅಸಿದ್ಧವಾಗಿದೆ. ಮತ್ತು ಈ ರೀತಿಯಾಗಿ (ದೇವತೆಗಳು ಸ್ವಾಮಿಗಳಾದ್ದ-ರಿಂದ ಅವರಿಗೇ ಜ್ಞಾನದ ಫಲ ಎಂಬುದಾಗಿ) ಆಪ್ತತಮರಾದ ಆತ್ರೇಯರು ಅಭಿಪ್ರಾಯಪಡುತ್ತಾರೆ.

ಆದ್ದರಿಂದ ಜ್ಞಾನಿಗಳಿಗೆ ಮೋಕ್ಷನಿಯಮವು ಯುಕ್ತವಲ್ಲ ಎಂಬುದಾಗಿ ಶಂಕೆ ಬಂದರೆ, ಅದಕ್ಕಾಗಿ ಸೂತ್ರ ಹೇಳುತ್ತಾರೆ –

### ॐ स्वामिनः फलश्रुतेरित्यात्रेयः ॐ (३-४-४४)

**ಸೂತ್ರಾರ್ಥ** :- ಸಮುದಾಯವಿವಕ್ಷೆಯಿಂದ 'ಸ್ವಾಮಿನಃ' ಎಂದು ಏಕವಚನ ಪ್ರಯುಕ್ತವಾಗಿದೆ. **ಸ್ವಾಮಿನಃ ಸ್ವಾಮಿನಾಂ ಏವ** = ಸ್ವಾಮಿಗಳಾದ ದೇವತೆಗಳಿಗೇನೇ ಜ್ಞಾನಫಲಂ ಭವತಿ = ಜ್ಞಾನದ ಫಲವು ಸಿಗುತ್ತದೆ. ನ ಪ್ರಜಾನಾಂ = ಹೊರತು ಪ್ರಜೆಗಳಿಗೆ ಅಲ್ಲ. ಕಸ್ಮಾತ್ = ಯಾಕೆ? ತೇಷಾಮೇವ ಜ್ಞಾನಸ್ವಾಮಿತ್ವಾತ್ = ಅವರೇ ಜ್ಞಾನಸ್ವಾಮಿಗಳಾದ್ದರಿಂದ. **ಫಲಶ್ರುತೇಃ** = 'ಯದು ಕಿಂಚ' ಎಂಬುದಾಗಿ ಅವರಿ-ಗೇನೇ ಫಲ ಹೇಳುವ ಶ್ರುತಿ ಇರುವುದರಿಂದಲೂ ಸಹ. ಇತ್ಯೇವಂ = ಈ ರೀತಿಯಾಗಿ **ಆತ್ರೇಯಃ** = ಆತ್ರೇಯ ಆಚಾರ್ಯರು ಮನ್ಯತೇ = ಅಭಿಪ್ರಾಯಪಡುತ್ತಾರೆ ಎಂದರ್ಥ.

**ಸೂ.ರ.:– एवं च देवानामेवेन्द्रियप्रेरकत्वेन स्वामित्वात् । लोके च स्वामिन एव फलदर्शनात् । यदु किञ्चेति (माध्यन्दिनायन) श्रुतेश्च । अतो देवानामेव ज्ञानफलमित्यात्रेयेणोक्तं युक्तमिति सिद्धम् ॥**

ದೇವತೆಗಳೇ ಇಂದ್ರಿಯಪ್ರೇರಕರಾದ ಕಾರಣ ಸ್ವಾಮಿಗಳಾದ್ದರಿಂದ, ಲೋಕ-ದಲ್ಲಿಯೂ ಸಹ ಸ್ವಾಮಿಯಾದವನಿಗೇನೇ ಫಲ ಕಂಡಿದ್ದರಿಂದ,

"ಯದು ಕಿಂಚೇಮಾಃ ಪ್ರಜಾಃ ಶುಭಮಾಚರಂತಿ ದೇವಾ ಏವ ತದಾಚರಂತಿ

ಯದು ಕಿಂ ಚೇಮಾಃ ಪ್ರಜಾಃ ವಿಜಾನತೇ ದೇವಾ ಏವ ತದ್ವಿಜಾನತೇ ದೇವಾನಾಂ ಹ್ಯೇತದ್ಭವತಿ ಸ್ವಾಮೀ ಹಿ ಫಲಮಶ್ನುತೇ ನಾಸ್ವಾಮೀ ಕರ್ಮ ಕುರ್ವಾಣಃ"

ಎಂಬುದಾಗಿ ಮಾಧ್ಯಂದಿನಶ್ರುತಿಯೂ ಇರುವುದರಿಂದ, ಆದ್ದರಿಂದ ದೇವತೆ-ಗಳಿಗೇನೇ ಜ್ಞಾನದ ಫಲ ಎಂಬುದಾಗಿ ಆತ್ರೇಯರು ಹೇಳಿದ್ದು ಯುಕ್ತವಾಗಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 45

**ಸೂ.ರ.:- नन्वात्रेयमतविरोधो भवेदिति तन्मतावलम्बेन पूर्वपक्षिते सिद्धान्तयत्सूत्रं पठति ॥**

ಹಾಗಾದರೆ ಆತ್ರೇಯಮತವಿರೋಧ ಬರುವುದಲ್ಲ ಎಂಬುದಾಗಿ ಆತ್ರೇಯ-ಮತವನ್ನು ಅವಲಂಬಿಸಿ ಪೂರ್ವಪಕ್ಷ ಬಂದಾಗ, ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ-

**ॐ आर्त्विज्यमित्यौडुलोमिस्तस्मै हि परिक्रियते ॐ (३-४-४५)**

**ಸೂತ್ರಾರ್ಥ** :- **ಹಿ** = ಯಾವ ಕಾರಣ **ತಸ್ಮೈ** = ಪ್ರಜೆಗಳಿಗಾಗಿ ದೇವೈಃ = ದೇವತೆಗಳಿಂದ **ಪರಿಕ್ರಿಯತೇ** = ಪ್ರಜಾದ್ವಾರಾ ಜ್ಞಾನವು ಸಂಪಾದಿಸಲ್ಪಡುತ್ತದೆಯೋ ತಸ್ಮಾತ್ = ಆ ಕಾರಣ **ಆರ್ತ್ವಿಜ್ಯಂ** ಆರ್ತ್ವಿಜ್ಯಮಿವ = ಋತ್ವಿಜರಿಗೆ ಯಜ್ಞಫಲದಂತೆ ಪ್ರಜಾನಾಮಪಿ ಅಲ್ಪಜ್ಞಾನಫಲಮಸ್ತಿ = ಪ್ರಜೆಗಳಿಗೂ ಸಹ ಅಲ್ಪಜ್ಞಾನಫಲವಿದೆ ಇತಿ **ಔಡುಲೋಮಿಃ** ಆಚಾರ್ಯಃ ಮನ್ಯತೇ = ಎಂಬುದಾಗಿ ಔಡುಲೋಮಿ ಆಚಾರ್ಯರು ಅಭಿಪ್ರಾಯಪಡುತ್ತಾರೆ ಎಂದರ್ಥ.

### ಸಿದ್ಧಾಂತ

**ಸೂ.ರ.:- एवं च न केवलं देवानामेव फलं किन्तु प्रजानामपि । तासां देवैः क्रियमाणे ज्ञानयज्ञे ऋत्विक्त्वेन सत्रयागे ऋत्विजां याज-मान्यमिव देवाधीनत्वस्वामित्वसद्भावात् । तदर्थं देवैः क्रियमाणत्वाच्च । अत आत्रेयाचार्यमताविरोधात् । प्रजानामप्यल्पफलाभ्युपगमात्तदुपपत्तेः। श्रुत्यादेस्तदभिप्रायकत्वादित्यौडुलोमिराचार्यो मन्यत इत्यर्थः ॥**

ಕೇವಲ ದೇವತೆಗಳಿಗಷ್ಟೇ ಫಲ ಅಲ್ಲ, ಕಿಂತು ಪ್ರಜೆಗಳಿಗೂ ಸಹ ಫಲ ಇದೆ. ಆ ಪ್ರಜೆಗಳು ದೇವತೆಗಳಿಂದ ಕ್ರಿಯಮಾಣವಾದ ಜ್ಞಾನಯಜ್ಞದಲ್ಲಿ ಋತ್ವಿಜರಾದ್ದರಿಂದ, ಸತ್ರಯಾಗದಲ್ಲಿ ಋತ್ವಿಜರಿಗೆ ಯಾಜಮಾನ್ಯದಂತೆ ದೇವಾಧೀನಸ್ವಾಮಿತ್ವ ಇದ್ದೇ ಇರುವ ಕಾರಣ.

ಆದ್ದರಿಂದ ಆತ್ರೇಯ ಆಚಾರ್ಯರ ಮತವಿರೋಧ ಬಾರದ ಕಾರಣ, ಪ್ರಜೆಗಳಿಗೂ ಸಹ ಅಲ್ಪಫಲವನ್ನು ಅಂಗೀಕರಿಸಿದ್ದರಿಂದ, ಅದು ಉಪಪನ್ನವಾಗುತ್ತದೆ. ಶ್ರುತ್ಯಾದಿಗಳು ತದಭಿಪ್ರಾಯಕವಾಗಿವೆ ಎಂಬುದಾಗಿ ಔಡುಲೋಮಿ ಆಚಾರ್ಯರು ಅಭಿಪ್ರಾಯಪಡುತ್ತಾರೆ ಎಂದರ್ಥ.

## ಸೂತ್ರ - 46

**ಸೂ.ರ.:– ननु यदि देवैः प्रजार्थं ज्ञानादि साध्यते तर्हि तत्फलं प्रजानामेव भवेत् । न किञ्चिद्देवानामित्याशङ्कां पराकुर्वत्सूत्रमुपन्यस्यति ॥**

ಒಂದುವೇಳೆ ದೇವತೆಗಳಿಂದ ಪ್ರಜೆಗಳಿಗಾಗಿ ಜ್ಞಾನಾದಿಗಳು ಸಾಧಿಸಲ್ಪಡುವು- ದಾದರೆ ಆಗ ಅದರ ಫಲವು ಪ್ರಜೆಗಳಿಗೇನೇ ಉಂಟಾಗಲಿ. ಹೊರತು ದೇವತೆಗಳಿಗೆ ಕಿಂಚಿತ್ತೂ ಉಂಟಾಗಬಾರದು ಎಂಬುದಾಗಿ ಆಶಂಕೆ ಬಂದರೆ, ಅದನ್ನು ನಿರಾಕರಿಸು- ವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ सहकार्यन्तरविधिः पक्षेण तृतीयं तद्वतो विध्यादिवत् ॐ**

**(३-४-४६)**

ಸೂತ್ರಾರ್ಥ :- **ಸಹಕಾರ್ಯಂತರವಿಧಿಃ** = ಜ್ಞಾನದಾನಕಾರ್ಯದಲ್ಲಿ ದೇವತೆ- ಗಳನ್ನು ಕುರಿತು ಪ್ರಜೆಗಳನ್ನು ಸಹಕಾರಿಯಾಗಿ ವಿಧಾನ ಮಾಡಿರುವುದು **ಪಕ್ಷೇಣ ತೃತೀಯಂ** = ಮೂರನೇ ಪಕ್ಷವಾಗಿದೆ. ಕಥಂ = ಹೇಗೆ ? **ತದ್ವತಃ ವಿಧ್ಯಾದಿವತ್** = ಪ್ರಜೆಗಳಿಂದ ಸಹಿತನಾದ ರಾಜನ, ಶಿಷ್ಯರಿಂದ ಸಹಿತರಾದ ಗುರುಗಳ ಕುರಿತಾದ "ಪಾಲಯೇಚ್ಚ ಪ್ರಜಾ ರಾಜಾ ಶಿಷ್ಯಾನಧ್ಯಾಪಯೇತ್ ಗುರುಃ" ಎಂಬ ವಿಧಿಯಂತೆ. ಆದಿಪದದಿಂದ ಫಲವನ್ನು ತೆಗೆದುಕೊಳ್ಳುವುದು.

ರಾಜರಿಗೆ ಸಹಕಾರಿಗಳಾಗಿ ಪ್ರಜೆಗಳನ್ನು ವಿಧಾನ ಮಾಡಿರುವುದು, ಗುರುಗಳಿಗೆ ಸಹಕಾರಿಗಳಾಗಿ ಶಿಷ್ಯರನ್ನು ವಿಧಾನ ಮಾಡಿರುವುದು ಮತ್ತು ಫಲವೂ ಸಹ ಅವರಿಬ್ಬರಿ- ಗೇನೇ (ರಾಜ-ಗುರುಗಳಿಗೇನೇ) ಮುಖ್ಯವಾಗಿ ಇರುವುದು ಹೇಗೋ ಅದರಂತೆ.

ಅಂದರೆ – ಯಾವ ರೀತಿಯಾಗಿ ರಾಜನು ಪ್ರಜೆಗಳಿಗಾಗಿ ಪಾಲನ ಮಾಡಿದರೂ ಸಹ, ಪಾಲನ ಫಲವು ಪ್ರಜೆಗಳಿಗೆ ಮಾತ್ರ ಅಲ್ಲ. ಕಿಂತು ರಾಜನಿಗೇ ಮುಖ್ಯವಾಗಿ ಫಲ. ಪ್ರಜೆಗಳು ಕೇವಲ ಸಹಕಾರಿಗಳಾಗಿದ್ದಾರೆ.

ಯಾವ ರೀತಿಯಾಗಿ ಗುರುಗಳು ಶಿಷ್ಯರಿಗಾಗಿಯೇ ವ್ಯಾಖ್ಯಾನವನ್ನು ಮಾಡಿದರೂ ಸಹ, ದೇವತೆಗಳು ಜ್ಞಾನದಾನಕ್ಕೆ ಮುಖ್ಯಸ್ವಾಮಿಗಳಾದ್ದರಿಂದ ದೇವತೆಗಳಿಗೇನೇ ಮುಖ್ಯಫಲ. ಶಿಷ್ಯರು ಸಹಕಾರಿಮಾತ್ರರಾದದ್ದರಿಂದ ಅವರಿಗೆ ಅಲ್ಪ ಫಲ. ಅದರಂತೆ ಎಂದು ಭಾವ.

**ಸೂ.ರ.:– एवं च प्रजार्थं देवैः क्रियमाणत्वेऽपि देवानां मुख्य-स्वामित्वेन मुख्यं फलम् । प्रजानां सहकारिमात्रत्वेनाल्पं फलमित्यङ्गी-कारात् । प्रजानामपि ज्ञानफलसद्भावात् । पूर्वोक्तमतद्वयाविरोधेनोक्तं युक्तमिति सिद्धम् ॥**

ಪ್ರಜೆಗಳಿಗಾಗಿ ದೇವತೆಗಳಿಂದ ಕ್ರಿಯಮಾಣವಾಗಿದ್ದರೂ ಸಹ ದೇವತೆಗಳು ಮುಖ್ಯಸ್ವಾಮಿಗಳಾದ್ದರಿಂದ ದೇವತೆಗಳಿಗೆ ಮುಖ್ಯವಾದ ಫಲ. ಪ್ರಜೆಗಳು ಸಹಕಾರಿ ಮಾತ್ರರಾದ್ದರಿಂದ ಅವರಿಗೆ ಅಲ್ಪವಾದ ಫಲ ಎಂದು ಅಂಗೀಕರಿಸಿದ್ದರಿಂದ, ಪ್ರಜೆ-ಗಳಿಗೂ ಜ್ಞಾನಫಲ ಇರುವುದರಿಂದ, ಹಿಂದೆ ಹೇಳಿದ ಎರಡು ಮತಗಳ ವಿರೋಧ ಬರುವುದಿಲ್ಲವಾದ್ದರಿಂದ ಜ್ಞಾನವು ಯೋಗ್ಯೈಕಲಭ್ಯವಾಗಿದೆ ಎಂದು ಹೇಳಿದ್ದು ಯುಕ್ತವಾಗಿದೆ ಎಂದು ಸಿದ್ಧವಾಗುತ್ತದೆ.

ಫಲಶ್ರುತ್ಯಧಿಕರಣವು ಮುಗಿಯಿತು.

ಅಧಿಕರಣ – ៩

## ಕೃತ್ಸ್ನಭಾವಾಧಿಕರಣ

### ಸಂಗತಿ

**ಸೂ.ರ.:– अत्र ब्रह्मज्ञाने विशेषाधिकारिणां यतीनां सर्वाश्रमिभ्योऽतिशयसमर्थनेन ज्ञानमहिमा वर्ण्यते ।**

ಬ್ರಹ್ಮಜ್ಞಾನದಲ್ಲಿ ವಿಶೇಷಾಧಿಕಾರಿಗಳಾದ ಯತಿಗಳಿಗೆ ಸರ್ವಾಶ್ರಮಿಗಳಿಗಿಂತಲೂ ಅತಿಶಯವನ್ನು ಸಮರ್ಥಿಸುವುದರಿಂದ ಜ್ಞಾನಮಹಿಮಾ ವರ್ಣಿಸಲ್ಪಡುತ್ತದೆ ಎಂಟನೇ ಈ ಕೃತ್ಸ್ನಭಾವಾಧಿಕರಣದಲ್ಲಿ.

### ಪೂರ್ವಪಕ್ಷ

**ಸೂ.ರ.:– ननु मुक्तौ यतिभ्यो गृहस्थ एवोत्तमः । तस्य ज्योतिष्टोमादिसर्वकर्माधिकारित्वात् । सर्वकर्मानुष्ठानं च चिरकालसाध्यम् । चिरकालसाध्य एव हि मोक्ष उत्तमः । किञ्च छन्दोग आचार्यकुलाद्वेदमधीत्येति गृहस्थस्य मोक्षमुक्त्वोपसंहारः क्रियते । न च गृहस्थादुत्तमसद्भावे तदुक्तोपसंहारो युज्यते । अतः कर्मिणामेवोत्तमत्वेन न ज्ञानमतिशयितमिति प्राप्ते सूत्रमाह ॥**

ಮುಕ್ತಿವಿಷಯದಲ್ಲಿ ಯತಿಗಳಿಗಿಂತಲೂ ಗೃಹಸ್ಥನೇ ಉತ್ತಮನಾಗಿದ್ದಾನೆ. ಕಾರಣ ಗೃಹಸ್ಥನು ಜ್ಯೋತಿಷ್ಟೋಮಾದಿ ಸರ್ವಕರ್ಮಾಧಿಕಾರಿಯಾಗಿದ್ದರಿಂದ. ಸರ್ವಕರ್ಮಾನುಷ್ಠಾನವಾದರೂ ಚಿರಕಾಲ ಸಾಧ್ಯವಾಗಿದೆ. ಚಿರಕಾಲಸಾಧ್ಯವಾದ ಮೋಕ್ಷವೇ ಅದಕ್ಕೆ ಉತ್ತಮಫಲವಾಗಿದೆ. ಮತ್ತು ಛಾಂದೋಗ್ಯೋಪನಿಷತ್ತಿನಲ್ಲಿ "ಆಚಾರ್ಯಕುಲಾದ್ವಾ ಇದಮಧೀತ್ಯ" ಎಂಬುದಾಗಿ ಗೃಹಸ್ಥರಿಗೆ ಮೋಕ್ಷವನ್ನು ಹೇಳಿ ಉಪಸಂಹಾರ ಮಾಡಲಾಗುತ್ತಿದೆ. ಗೃಹಸ್ಥರಿಗಿಂತಲೂ ಉತ್ತಮರು ಇರುವುದಾದರೆ, ಅಲ್ಲಿ ಹೇಳಿದ ಉಪಸಂಹಾರವು ಯುಕ್ತವಾಗುವುದಿಲ್ಲ.

ಆದ್ದರಿಂದ ಕರ್ಮಿಗಳು ಉತ್ತಮರಾದ್ದರಿಂದ ಜ್ಞಾನವು ಅತಿಶಯಿತವಲ್ಲ

ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

## ॐ कृत्स्नभावात्तु गृहिणोपसंहारः ॐ (३-४-४७)

**ಸೂತ್ರಾರ್ಥ :- ಗೃಹಿಣೋಪಸಂಹಾರಃ ತು** = "ಕುಟುಂಬೇ ಶುಚೌ ದೇಶೇ" ಎಂಬುದಾಗಿ ಛಾಂದೋಗ್ಯೋಪನಿಷತ್ತಿನಲ್ಲಿ ಗೃಹಸ್ಥರಿಗೆ ಮಾತ್ರ ಮೋಕ್ಷವನ್ನು ಹೇಳಿ ಉಪಸಂಹಾರ ಮಾಡಿರುವುದು ದೇವಾನಾಂ **ಕೃತ್ಸ್ನಭಾವಾತ್** = ದೇವತೆಗಳು ಸಂಪೂರ್ಣ ಗೃಹಸ್ಥಧರ್ಮ ಉಳ್ಳವರಾದ್ದರಿಂದ, ಅಂತಹ ದೇವತೆಗಳ ಪರವಾಗಿದೆ. ಹೊರತು ಮನುಷ್ಯಗೃಹಸ್ಥ ಪರವಾಗಿಲ್ಲ.

ಒಂದುವೇಳೆ ಆ ಉಪಸಂಹಾರವು ಮನುಷ್ಯಗೃಹಸ್ಥಪರವಾಗಿದ್ದರೆ ಆಗ ಅದರ ಬಲದಿಂದ ಯತಿಗಳಿಗಿಂತಲೂ ಗೃಹಸ್ಥರಿಗೆ ಉತ್ತಮತ್ವವು ತಿಳಿಯಬಹುದಾಗಿತ್ತು ಎಂದು ಭಾವ.

### ಸಿದ್ಧಾಂತ

**ಸೂ.ರ.:– एवं च मनुष्येषु यतेरेव सर्वापेक्षयोत्तमत्वं न गृहिणः । गृहिमोक्षाद्यतिमोक्षस्य चिरकालसाध्यत्वात् । गृहिणां बहुकर्माधिकारभावेऽपि तैः सर्वेषामननुष्ठानेन कतिपयानुष्ठानेनैव तदपरोक्षज्ञानसिद्धेः । न चैवं गृहिणोपसंहारविरोधः । तस्य देवताविषयत्वात् । अतो धर्माधिकारिषु ज्ञानप्रचुराणां यतीनामेवोत्तमत्वेन युक्तं ज्ञानस्यातिशयितत्वमिति सिद्धम् ॥**

ಮನುಷ್ಯರಲ್ಲಿ ಯತಿಗಳಿಗೇನೇ ಸರ್ವಾಪೇಕ್ಷಯಾ ಉತ್ತಮತ್ವವಿದೆ. ಹೊರತು ಗೃಹಸ್ಥಾಶ್ರಮಿಗಳಿಗೆ ಉತ್ತಮತ್ವವಿಲ್ಲ. ಕಾರಣ - ಗೃಹಸ್ಥಾಶ್ರಮಿಗಳ ಮೋಕ್ಷಕ್ಕಿಂತಲೂ ಯತಿಗಳ ಮೋಕ್ಷವು ಚಿರಕಾಲಸಾಧ್ಯವಾದ್ದರಿಂದ.

ಗೃಹಸ್ಥಾಶ್ರಮಿಗಳಿಗೆ ಬಹುಕರ್ಮಾಧಿಕಾರ ಇದ್ದರೂ ಸಹ ಅವರು ಎಲ್ಲವನ್ನೂ ಅನುಷ್ಠಾನ ಮಾಡುವುದಿಲ್ಲವಾದ್ದರಿಂದ, ಕೆಲವು (ಸ್ವಲ್ಪ) ಕರ್ಮಾನುಷ್ಠಾನದಿಂದಲೂ ಅವರಿಗೆ ಅಪರೋಕ್ಷಜ್ಞಾನವು ಸಿದ್ಧವಾಗುತ್ತದೆ.

ಹಾಗಾದರೆ ಗೃಹಿಣೋಪಸಂಹಾರವಿರೋಧ ಬರುವುದಲ್ಲ? ಎಂದರೆ, ಬರುವುದಿಲ್ಲ, ಕಾರಣ ಅದು ದೇವತಾವಿಷಯಕವಾದ್ದರಿಂದ. ಆದ್ದರಿಂದ ಧರ್ಮಾಧಿಕಾರಿಗಳಲ್ಲಿ ಜ್ಞಾನಪ್ರಚುರರಾದ ಯತಿಗಳೇ ಉತ್ತಮರಾದ್ದರಿಂದ ಜ್ಞಾನಕ್ಕೆ ಅತಿಶಯಿತತ್ವವನ್ನು ಹೇಳಿದ್ದು ಯುಕ್ತವಾಗಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 48

**ಸೂ.ರ.:– युक्त्यन्तरेण मानुषयतिभ्यो देवानामुत्तमत्वं समर्थयत्सूत्रमुपन्यस्यति ॥**

ಮತ್ತೊಂದು ಯುಕ್ತಿಯಿಂದಲೂ ಸಹ ಮಾನುಷಯತಿಗಳಿಗಿಂತ ದೇವತೆಗಳಿಗೆ ಉತ್ತಮತ್ವವನ್ನು ಸಮರ್ಥಿಸುವ ಸೂತ್ರವನ್ನು ಹೇಳುತ್ತಾರೆ –

**ॐ मौनवदितरेषामप्युपदेशात् ॐ (३-४-४८)**

**ಸೂತ್ರಾರ್ಥ :- ಮೌನವತ್** = ಯತಿತ್ವದಂತೆ (ದೇವತೆಗಳಿಗೆ ಯತಿತ್ವ ಹೇಗೆ ಉಂಟೋ ಅದರಂತೆ) **ಇತರೇಷಾಮಪಿ** = ಅನ್ಯಾಶ್ರಮಧರ್ಮಗಳನ್ನೂ ಸಹ **ಉಪದೇಶಾತ್** = "ದೇವಾ ಏವ ಬ್ರಹ್ಮಚಾರಿಣಃ" ಎಂಬ ಶ್ರುತಿಯಲ್ಲಿ ಹೇಳಿದ್ದರಿಂದ, ಎಲ್ಲ ಆಶ್ರಮಿಗಳಿಗಿಂತಲೂ ದೇವತೆಗಳಿಗೆ ಉತ್ತಮತ್ವವಿದೆ ಎಂದರ್ಥ.

**ಸೂ.ರ.:– एवं च देवेषु सम्पूर्णयतिधर्मस्य सद्भावेन तेषां यत्युत्तमत्वात् । न च देवानां यतित्वाभावः । कृत्स्ना ह्येत इति (पौत्रायण.) श्रुत्या देवानां यतित्वसद्भावस्य प्रतिपादितत्वात् । अपि च यथा ह्येते मुनय इति (कौण्ठरव्य.) श्रुतेर्यतित्वदृष्टान्तेन सर्ववर्णाश्रमित्वाभिधानात् । अतो ज्ञानप्रचुराणां यतीनामेवोत्तमत्वाद्युक्तं ज्ञानस्यातिशयितत्वमिति सिद्धम् ॥**

ದೇವತೆಗಳಲ್ಲಿ ಸಂಪೂರ್ಣಯತಿಧರ್ಮವು ಇರುವುದರಿಂದ ಅವರು ಯತಿಗಳಿಗಿಂತಲೂ ಉತ್ತಮರಾಗಿದ್ದಾರೆ. ದೇವತೆಗಳಿಗೆ ಯತಿತ್ವ ಇಲ್ಲವಲ್ಲ? ಎಂದು ಶಂಕಿಸುವುದು ಸರಿಯಲ್ಲ.

"ಕೃತ್ಸ್ನಾ ಹ್ಯೇತೇ ಗೃಹಿಣೋ ದೇವಾಃ" ಎಂಬ ಶ್ರುತಿಯಿಂದ ದೇವತೆಗಳಿಗೆ ಯತಿತ್ವವಿದೆ ಎಂದು ಪ್ರತಿಪಾದಿತವಾದ್ದರಿಂದ. ಮತ್ತು "ಯಥಾ ಹ್ಯೇತೇ ಮುನಯಃ" ಎಂಬ ಶ್ರುತಿಯಿಂದ ಯತಿತ್ವದೃಷ್ಟಾಂತದಿಂದ ಸರ್ವವರ್ಣಾಶ್ರಮಿತ್ವ-ವನ್ನು ಹೇಳಿದ್ದರಿಂದ. ಆದ್ದರಿಂದ ಜ್ಞಾನಪ್ರಚುರರಾದ ಯತಿಗಳಿಗೇ ಉತ್ತಮತ್ವ ಇರುವುದರಿಂದ ಜ್ಞಾನಕ್ಕೆ ಅತಿಶಯಿತತ್ವವನ್ನು ಹೇಳಿದ್ದು ಯುಕ್ತವಾಗಿದೆ ಎಂದು ಸಿದ್ಧವಾಗುತ್ತದೆ.

ಕೃತ್ಸ್ನಭಾವಾಧಿಕರಣವು ಮುಗಿಯಿತು.

ಅಧಿಕರಣ - 9

# ಅನ್ವಯಾಧಿಕರಣ

## ಸಂಗತಿ

ಸೂ.ರ.:- अत्रापरोक्षज्ञानसङ्गतपरोक्षज्ञानस्यातिगोप्यत्वमहिमा वर्ण्यते ॥

ಅಪರೋಕ್ಷಜ್ಞಾನಸಂಗತವಾದ ಪರೋಕ್ಷಜ್ಞಾನಕ್ಕೆ ಅತಿಗೋಪ್ಯತ್ವಮಹಿಮಾವನ್ನು ವರ್ಣಿಸುತ್ತಾರೆ ಒಂಭತ್ತನೇ ಈ ಅನ್ವಯಾಧಿಕರಣದಲ್ಲಿ.

## ಪೂರ್ವಪಕ್ಷ

ಸೂ.ರ.:- अपरोक्षज्ञानहेतुपरोक्षज्ञानसिद्धये आविष्कारेणैव वेदविद्योपदेष्टव्या । सभाचत्वरादावुपविश्य विद्यापेदेशोऽप्यशेषज्ञानयोग्यानां ज्ञानलाभसिद्धेः । आवश्यकश्च बहूपदेशः । यथा यथेति (माठर.) श्रुतेः । अत आविष्कारेणैवोपदेष्टव्यत्वात्तस्य रहस्यत्वातिशयो न सिद्ध्येदिति प्राप्ते सूत्रमाह ॥

ಅಪರೋಕ್ಷಜ್ಞಾನಹೇತುವಾದ ಪರೋಕ್ಷಜ್ಞಾನದ ಸಿದ್ಧಿಗಾಗಿ ಆವಿಷ್ಕಾರದಿಂದಲೇ ವೇದವಿದ್ಯೆಯು ಉಪದೇಷ್ಟವ್ಯವಾಗಿದೆ. ಸಭಾ-ಚತ್ವರಾದಿಗಳಲ್ಲಿ ಕುಳಿತು ವಿದ್ಯೋಪದೇಶ ಮಾಡುವುದರಿಂದ ಜ್ಞಾನಯೋಗ್ಯರಾದ ಎಲ್ಲರಿಗೂ ಜ್ಞಾನಲಾಭವು ಸಿದ್ಧಿಸುತ್ತದೆ.

"ಯಥಾ ಯಥಾ ಹ ವೈ ಬ್ರೂಯಾತ್ತಥಾ ತಥಾಽಧಿಕೋ ಭವತಿ"

ಎಂಬುದಾಗಿ ಮಾಠರಶ್ರುತಿ ಇರುವುದರಿಂದ ಬಹೂಪದೇಶವು ಆವಶ್ಯಕವೂ ಆಗಿದೆ.

ಆದ್ದರಿಂದ ವೇದವಿದ್ಯೆಯು ಆವಿಷ್ಕಾರದಿಂದಲೇ ಉಪದೇಷ್ಟವ್ಯವಾದ್ದರಿಂದ ಪರೋಕ್ಷಜ್ಞಾನಕ್ಕೆ ರಹಸ್ಯತ್ವಾತಿಶಯವು ಸಿದ್ಧಿಸುವುದಿಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

## ॐ अनाविष्कुर्वन्नन्वयात् ॐ (३-४-४९)

**ಸೂತ್ರಾರ್ಥ** :- ಗುರುಃ = ಗುರುವು **ಅನಾವಿಷ್ಕುರ್ವನ್** = ಸಭಾ - ಚತ್ವರಾದಿಗಳಲ್ಲಿ ಆವಿಷ್ಕಾರ ಮಾಡದೆಯೇ ಶಿಷ್ಯೇಭ್ಯೋ ವಿದ್ಯಾಂ ಉಪದಿಶೇತ್ = ಶಿಷ್ಯರಿಗೆ ವಿದ್ಯೆಯನ್ನು ಉಪದೇಶ ಮಾಡಬೇಕು. ಕುತಃ = ಏಕೆ ? **ಅನ್ವಯಾತ್** = ಅಯೋಗ್ಯರಿಗೂ ಸಹ ಜ್ಞಾನಪ್ರಾಪ್ತಿಪ್ರಸಂಗ ರೂಪವಾದ ಯುಕ್ತಿ ಇರುವುದರಿಂದ ಎಂದರ್ಥ.

### ಸಿದ್ಧಾಂತ

**ಸೂ.ರ.:-** **एवं चानाविष्कारेण स्वविद्योपदेशः कार्यः । आविष्कारेणोपदेशोऽयोग्यानामपि ज्ञानप्रसङ्गात् । न च तदिष्टम् । विद्या ह वै ब्राह्मणमाजगामेति (मुक्ति उ. १-५९) तन्निषेधात् । अतोऽल्पाविष्कारेण ज्ञानस्योपदेष्टव्यत्वेन युक्तस्तस्यातिशय इति सिद्धम् ॥**

ಸಭಾ-ಚತ್ವರಾದಿಗಳಲ್ಲಿ ಆವಿಷ್ಕಾರ ಮಾಡದೆಯೇ ಸ್ವವಿದ್ಯೋಪದೇಶವು ಕಾರ್ಯವಾಗಿದೆ. ಕಾರಣ ಆವಿಷ್ಕಾರದಿಂದ ವಿದ್ಯೋಪದೇಶ ಮಾಡಿದರೆ ಅಯೋಗ್ಯರಾದವರಿಗೂ ಜ್ಞಾನಪ್ರಾಪ್ತಿಪ್ರಸಂಗ ಬರುವುದರಿಂದ. ಅಯೋಗ್ಯರಿಗೂ ಜ್ಞಾನಪ್ರಾಪ್ತಿಪ್ರಸಂಗವು ಇಷ್ಟವಾಗಿಲ್ಲ.

ವಿದ್ಯಾ ಹ ವೈ ಬ್ರಾಹ್ಮಣಮಾಜಗಾಮ
ಗೋಪಾಯ ಮಾಂ ಶೇವಧಿಷ್ಟೇऽಹಮಸ್ಮಿ ।
ಅನಾರ್ಯಕಾಯಾನೃಜವೇ ಶಠಾಯ
ಮಾ ಸ್ಮ ಬ್ರೂಯಾ ಋಜವೇ ಬ್ರೂಹಿ ನಿತ್ಯಮ್ ॥

ಎಂಬುದಾಗಿ ಅಯೋಗ್ಯರಿಗೆ ಜ್ಞಾನಪ್ರಾಪ್ತಿಯನ್ನು ನಿಷೇಧಿಸಿದ್ದರಿಂದ. ಆದ್ದರಿಂದ ಅಲ್ಪಾವಿಷ್ಕಾರದಿಂದ ಜ್ಞಾನವು (ಪರೋಕ್ಷಜ್ಞಾನವು) ಉಪದೇಷ್ಟವ್ಯವಾದ್ದರಿಂದ ಪರೋಕ್ಷಜ್ಞಾನಕ್ಕೆ ರಹಸ್ಯತ್ವಾತಿಶಯವು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಅನ್ವಯಾಧಿಕರಣವು ಮುಗಿಯಿತು.

*ಅಧಿಕರಣ – 10*

## ಐಹಿಕಾಧಿಕರಣ

### ಸಂಗತಿ

**ಸೂ.ರ.:– अत्रापरोक्षज्ञानस्य प्रतिबन्धाभावे साधनसम्पत्तिजन्मन्येवोत्पत्तिः समर्थ्यते ।**

ಪ್ರತಿಬಂಧಕ ಇಲ್ಲದಿದ್ದರೆ ಅಪರೋಕ್ಷಜ್ಞಾನವು ಸಾಧನಸಂಪತ್ತಿಜನ್ಮದಲ್ಲಿಯೇ ಹುಟ್ಟುತ್ತದೆ ಎಂದು ಸಮರ್ಥಿಸುತ್ತಾರೆ ಹತ್ತನೇ ಈ ಐಹಿಕಾಧಿಕರಣದಲ್ಲಿ.

### ಪೂರ್ವಪಕ್ಷ

**ಸೂ.ರ.:– ननु ज्ञानसाधनं कृष्यादिवदैहिकफलस्यैव हेतुः । ततः साधनसम्पूर्तिजन्मन्येवापरोक्षज्ञानम् । कस्यचित्प्रतिबन्धकवशात्साधने दुष्टे नैकदापि फलोदयः । षण्डबीजावापिना कदापि फलानुदयदर्शनात् । न हि दुष्टं बीजं कालान्तरे फलहेतुरिति दृष्टम् । न च यागादिवदुपपत्तिः । तस्यैहिकफलहेतुत्वाभावेन वैषम्यात् । अतो ज्ञानस्यैवैहिकत्वेन प्राप्तत्वात्कस्यचित्प्रतिबन्धकेन तदनुदये जन्मान्तरेऽप्यनुदय एवेति प्राप्ते सूत्रमाह ॥**

ಜ್ಞಾನಸಾಧನವು ಕೃಷ್ಯಾದಿಗಳಂತೆ ಐಹಿಕಫಲಕ್ಕೇನೇ ಹೇತುವಾಗುತ್ತದೆ. ಆದ್ದರಿಂದಾಗಿ ಯಾವ ಜನ್ಮದಲ್ಲಿ ಸಾಧನಸಂಪೂರ್ತಿಯಾಗುವುದೋ ಆ ಜನ್ಮದಲ್ಲಿಯೇ ಅಪರೋಕ್ಷಜ್ಞಾನ ಹುಟ್ಟುತ್ತದೆ. ಕೆಲವರಿಗೆ ಪ್ರತಿಬಂಧಕವಶದಿಂದಾಗಿ ಸಾಧನವು ದುಷ್ಟವಾದರೆ ಎಂದಿಗೂ ಫಲೋದಯ ಆಗದೇ ಹೋಗಬೇಕಾಗುತ್ತದೆ. ದುಷ್ಟವಾದ ಬೀಜವನ್ನು ಬಿತ್ತುವುದರಿಂದ ಎಂದಿಗೂ ಫಲೋತ್ಪತ್ತಿ ಕಂಡಿಲ್ಲವಾದ್ದರಿಂದ. ಕಾಲಾಂತರದಲ್ಲಿ ಫಲೋತ್ಪತ್ತಿ ಆಗಬಹುದಲ್ಲ ? ಎಂಬ ಶಂಕೆಯೂ ಬೇಡ. ದುಷ್ಟವಾದ ಬೀಜವು ಕಾಲಾಂತರದಲ್ಲಿ ಫಲಹೇತುವಾಗುತ್ತದೆ ಎಂದೂ ಕಂಡಿಲ್ಲ.

ಯಾಗಾದಿಗಳಂತೆ ಅದು ಉಪಪನ್ನವಾಗಬಹುದಲ್ಲ? ಎಂದು ಶಂಕಿಸುವುದು

ಸರಿಯಲ್ಲ. ಕಾರಣ ಯಾಗಾದಿಗಳು ಐಹಿಕಫಲಹೇತುವಾಗದ ಕಾರಣ ವೈಷಮ್ಯ ಇದೆ. ಆದ್ದರಿಂದ ಜ್ಞಾನವು ಐಹಿಕವಾದ್ದರಿಂದ (ಸಾಧನಸಂಪೂರ್ತಿಜನ್ಮದಲ್ಲಿಯೇ ಹುಟ್ಟುವು-ದಾದದ್ದರಿಂದ), ಕೆಲವರಿಗೆ ಪ್ರತಿಬಂಧಕವಶಾತ್ ಅದು ಆಗ ಹುಟ್ಟದೇ ಹೋದರೆ, ಬೇರೆ ಜನ್ಮದಲ್ಲಿಯೂ ಹುಟ್ಟದೇ ಹೋಗಬೇಕಾಗುತ್ತದೆ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

## ॐ ऐहिकमप्रस्तुतप्रतिबन्धे तद्दर्शनात् ॐ (३-४-५०)

**ಸೂತ್ರಾರ್ಥ :- ಅಪ್ರಸ್ತುತಪ್ರತಿಬಂಧೇ** = ಪ್ರಸ್ತುತ ಪ್ರತಿಬಂಧಶಬ್ದೋಕ್ತ ಪ್ರಾರಬ್ಧಕರ್ಮ ಇಲ್ಲದೇ ಹೋದರೆ ಅಪರೋಕ್ಷಜ್ಞಾನಂ = ಅಪರೋಕ್ಷಜ್ಞಾನವು **ಐಹಿಕಂ** = ಶ್ರವಣಾದಿಗಳ ಸಂಪೂರ್ತಿ ಆಗುವ ಜನ್ಮದಲ್ಲಿಯೇ ಉಂಟಾಗುತ್ತದೆ. ಪ್ರತಿಬಂಧೇ ತು ಜನ್ಮಾಂತರೇ ಭವತಿ = ಪ್ರತಿಬಂಧಕವಿದ್ದಾಗ ಜನ್ಮಾಂತರದಲ್ಲಿ ಆಗುತ್ತದೆ. ಕುತಃ = ಏಕೆ? **ತದ್ದರ್ಶನಾತ್** = "ಶ್ರುತ್ವಾ" ಎಂಬ ಸೌಪರ್ಣಶ್ರುತಿಯಲ್ಲಿ ಹಾಗೆ ಪ್ರತಿಪಾದನೆ ಮಾಡಿದ್ದರಿಂದ ಎಂದರ್ಥ.

### ಸಿದ್ಧಾಂತ

**ಸೂ.ರ.:– एवं च श्रवणादिकमैहिकहेतुरिति सत्यम् । तथाऽपि श्रवणादिसम्पूर्तिजन्मन्येव भवतीति न नियमः । किन्तु प्रतिबन्धक-सद्भावे जन्मान्तरेऽपि भवति । अतः प्रतिबन्धकाभावे ज्ञानस्यैहि-कत्वान्नोक्तानुपपत्तिरिति सिद्धम् ॥**

ಶ್ರವಣಾದಿಗಳು ಐಹಿಕಹೇತುವಾಗಿವೆ ಎನ್ನುವುದು ಸತ್ಯವೇ. ಆದರೂ ಸಹ ಅಪರೋಕ್ಷಜ್ಞಾನವು ಶ್ರವಣಾದಿಸಂಪೂರ್ತಿಜನ್ಮದಲ್ಲಿಯೇ ಆಗುತ್ತದೆ ಎಂದು ನಿಯಮವಿಲ್ಲ. ಕಿಂತು ಪ್ರತಿಬಂಧಕ (ಪ್ರಾರಬ್ಧಕರ್ಮ) ಇಲ್ಲದಿದ್ದರೆ ಆ ಜನ್ಮದಲ್ಲಿಯೇ ಉಂಟಾಗುತ್ತದೆ. ಪ್ರತಿಬಂಧಕ ಇದ್ದರೆ ಜನ್ಮಾಂತರದಲ್ಲಿ ಆಗುತ್ತದೆ.

ಆದ್ದರಿಂದ ಪ್ರತಿಬಂಧಕ ಇಲ್ಲದಿದ್ದರೆ ಜ್ಞಾನವು ಐಹಿಕವಾದ್ದರಿಂದ (ಸಾಧನ-ಸಂಪೂರ್ತಿ ಜನ್ಮದಲ್ಲಿಯೇ ಉಂಟಾಗುವುದರಿಂದ) ಯಾವ ಅನುಪಪತ್ತಿಯೂ ಇಲ್ಲ ಎಂದು ಸಿದ್ಧವಾಗುತ್ತದೆ.

ಐಹಿಕಾಧಿಕರಣವು ಮುಗಿಯಿತು.

*ಅಧಿಕರಣ – 11*

# ಮುಕ್ತಿಫಲಾಧಿಕರಣ

## ಸಂಗತಿ

**ಸೂ.ರ.:– अत्र ब्रह्मज्ञानस्य स्वोत्पत्तिजन्मानन्तरमेव प्रतिबन्धकाभावे मुक्तिसाधनत्वमहिमा वर्ण्यते ।**

ಪ್ರತಿಬಂಧಕ ಇಲ್ಲದೇ ಹೋದರೆ ಬ್ರಹ್ಮಜ್ಞಾನವು ಸ್ವೋತ್ಪತ್ತಿಜನ್ಮಾನಂತರದಲ್ಲಿಯೇ ಮುಕ್ತಿಸಾಧನವಾಗುತ್ತದೆ ಎಂದು ವರ್ಣಿಸುತ್ತಾರೆ ಹನ್ನೊಂದನೇ ಈ ಮುಕ್ತಿಫಲಾಧಿ ಕರಣದಲ್ಲಿ.

ಯಾವ ಶರೀರದಲ್ಲಿ ಅಪರೋಕ್ಷಜ್ಞಾನವು ಉತ್ಪನ್ನವಾಗುತ್ತದೆಯೋ ತದ್ದೇಹ-ಪಾತಾನಂತರದಲ್ಲಿಯೇ ಮೋಕ್ಷವಾಗುತ್ತದೆಯೋ? ಅಥವಾ ತದ್ದೇಹಪಾತಾ-ನಂತರದಲ್ಲಿ ಆಗುವುದಿಲ್ಲವೋ ? ಎಂದು ಸಂದೇಹ.

## ಪೂರ್ವಪಕ್ಷ

**ಸೂ.ರ.:– नन्वपरोक्षज्ञानोदये देहपातानन्तरमेव मोक्षो भवतीत्यङ्गीकारो युक्तः । न तु विलम्बाङ्गीकारः । विलम्बे कारणाभावात् । एवमेव कस्यचिन्मोक्षविलम्बाङ्गीकारे तस्य कदाऽपि मोक्षो न स्यात् । तत्साधनानां गतवीर्यत्वात् । न हि जीर्णानां धान्यानामङ्कुरकार्यकारिता । ततश्चानियम इत्युक्तव्याघात इति प्राप्ते सूत्रमाह ॥**

ಅಪರೋಕ್ಷಜ್ಞಾನವು ಉತ್ಪನ್ನವಾದಾಗ ತದ್ದೇಹಪಾತಾನಂತರದಲ್ಲಿಯೇ ಮೋಕ್ಷ-ವಾಗುತ್ತದೆ ಎಂದು ಅಂಗೀಕರಿಸುವುದು ಯುಕ್ತವಾಗುತ್ತದೆ. ಹೊರತು ವಿಲಂಬವನ್ನು ಅಂಗೀಕರಿಸುವುದು ಯುಕ್ತವಲ್ಲ. ವಿಲಂಬ ಅಂಗೀಕಾರಕ್ಕೆ ಕಾರಣ ಯಾವುದೂ ಇಲ್ಲದ್ದರಿಂದ. ಹಾಗೆ ಕಾರಣವಿಲ್ಲದಿದ್ದರೂ ಸಹ ಕೆಲವರಿಗೆ ಮೋಕ್ಷವಿಲಂಬವನ್ನು ಅಂಗೀಕರಿಸುವುದಾದರೆ, ಅವರಿಗೆ ಎಂದಿಗೂ ಮೋಕ್ಷ ಆಗದೇ ಹೋಗಬೇಕಾಗುತ್ತದೆ. ಮೋಕ್ಷಸಾಧನವಾದವು ಗತವೀರ್ಯವಾದ್ದರಿಂದ. ಜೀರ್ಣವಾದ ಧಾನ್ಯಗಳು ಅಂಕುರಕಾರ್ಯಕಾರಿಯಾಗಿದ್ದು ಕಂಡಿಲ್ಲ.

ಆದ್ದರಿಂದ 'ಅನಿಯಮಃ' ಎಂದು ಹೇಳಿದ್ದು ವ್ಯಾಹತವಾಗುತ್ತದೆ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ एवं मुक्तिफलानियमस्तदवस्थावधृतेस्तदवस्थावधृते: ॐ**

**(३-४-५१)**

**ಸೂತ್ರಾರ್ಥ** :- ಏವಂ = ಯಾವ ರೀತಿಯಾಗಿ ಜ್ಞಾನದಲ್ಲಿ ಅನಿಯಮವೋ, ತಥಾ = ಅದೇ ರೀತಿಯಾಗಿ, **ಮುಕ್ತಿಫಲಾನಿಯಮಃ** = ಮೋಕ್ಷರೂಪವಾದ ಫಲದ ವಿಷಯದಲ್ಲಿಯೂ ಸಹ ಜ್ಞಾನಿಗೆ ತದ್ದೇಹಪಾತಾನಂತರದಲ್ಲಿಯೇ ಮೋಕ್ಷವಾಗುತ್ತದೆ ಎಂದು ನಿಯಮವಿಲ್ಲ.

ಕಿಂತು ಪ್ರಾರಬ್ಧಕರ್ಮವಿಲ್ಲದಿದ್ದಾಗ ತದ್ದೇಹಪಾತಾನಂತರದಲ್ಲಿಯೇ ಮೋಕ್ಷ-ವಾಗುತ್ತದೆ. ಪ್ರಾರಬ್ಧಕರ್ಮವಿದ್ದಾಗ ದೇಹಾಂತರ ಅವಸಾನವಾದಾಗ ಮೋಕ್ಷವಾಗುತ್ತದೆ.

ನನು ಕುತ ಏವಂ ಕಲ್ಪ್ಯತೇ ? = ಹೀಗೇಕೆ ಕಲ್ಪಿಸಬೇಕು ? ಜ್ಞಾನಜನ್ಮಾನಂತರಂ ಮುಕ್ತ್ಯಭಾವೇ ಕದಾऽಪಿ ಮುಕ್ತಿರ್ನೇತ್ಯೇವಂ ಕುತೋ ನ ಕಲ್ಪ್ಯತೇ ಇತ್ಯತ ಉಕ್ತಂ **ತದಿತಿ** = ಜ್ಞಾನಜನ್ಮ ಮುಗಿದ ಮೇಲೆ ಮೋಕ್ಷವಾಗದಿದ್ದರೆ ಎಂದಿಗೂ ಮೋಕ್ಷವಾಗುವುದಿಲ್ಲ ಎಂಬುದಾಗಿ ಏಕೆ ಕಲ್ಪಿಸುವುದಿಲ್ಲ ಎಂದು ಶಂಕೆ ಬಂದರೆ, ಅದಕ್ಕೆ ಹೇಳಿದರು **ತದವಸ್ಥಾವಧೃತೇಃ ತದವಸ್ಥಾವಧೃತೇಃ** ತಸ್ಯಾಂ = 'ಬ್ರಹ್ಮಸಂಸ್ಥಿತಃ' ಎಂಬ ಶ್ರುತಿಯಲ್ಲಿ ತಸ್ಮಿನ್ = ಬ್ರಹ್ಮನಲ್ಲಿ ಅವಸ್ಥಿತಸ್ಯ = ಆಸಕ್ತನಾದ ಬ್ರಹ್ಮಜ್ಞಾನಿಗೆ ಅವಧೃತೇಃ = "ಅಮೃತತ್ವಮೇತ್ಯೇವ" ಎಂಬುದಾಗಿ ಮೋಕ್ಷಫಲ ಅವಧಾರಣ (ನಿಶ್ಚಯ) ಹೇಳಿದ್ದ-ರಿಂದ. ಅತಃ ಪ್ರತಿಬಂಧಕಕಲ್ಪನಾ ಇತಿ ಭಾವಃ = ಆ ಕಾರಣಕ್ಕಾಗಿಯೇ ಪ್ರತಿಬಂಧಕ-ಕಲ್ಪನಾ ಮಾಡಲಾಗುತ್ತಿದೆ ಎಂದು ಅಭಿಪ್ರಾಯ.

ಉಕ್ತಸ್ಯ ಸರ್ವಸ್ಯ ಏತದಧ್ಯಾಯಾರ್ಥಸ್ಯ ಪ್ರಸಿದ್ಧತ್ವಸೂಚನಾರ್ಥಾ ದ್ವಿರುಕ್ತಿಃ = ಹೇಳಿದ ಎಲ್ಲ ಈ ಅಧ್ಯಾಯಾರ್ಥವು ಪ್ರಸಿದ್ಧವಾಗಿದೆ ಎಂದು ಸೂಚಿಸುವುದಕ್ಕಾಗಿ 'ತದವಸ್ಥಾವಧೃತೇಃ' 'ತದವಸ್ಥಾವಧೃತೇಃ' ಎಂಬುದಾಗಿ ದ್ವಿರುಕ್ತಿ.

## ಸಿದ್ಧಾಂತ

**ಸೂ.ರ.:- एवं च ज्ञानोदये देहपातानन्तरमेव मोक्ष इति न**

नियमः । किन्तु प्रतिबन्धकाभावे तद्देहपातानन्तरम् । अन्यथा तु जन्मान्तरं प्राप्येत्यनियमः । धर्मी स्वर्गमिति श्रुतेः । विद्वानमृतमिति (नारायणाध्यात्म.) स्मृतेश्च । अतो ज्ञानिनां प्रतिबन्धकाभावे मोक्षस्यादूरत्वेनोक्तं युक्तमिति सिद्धम् ॥

"ಧರ್ಮೀ ಸ್ವರ್ಗಂ ವಿಧರ್ಮೀ ನಿರಯಂ ..." ಎಂದು ಶ್ರುತಿ ಇರುವುದರಿಂದ,

ವಿದ್ವಾನಮೃತಮಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ।
ಅವಸನ್ನಂ ಯದಾರಬ್ಧಂ ಕರ್ಮ ತತ್ರೈವ ಗಚ್ಛತಿ ।
ನ ಚೇದ್ಬಹೂನಿ ಜನ್ಮಾನಿ ಪ್ರಾಪ್ಯೈವಾಂತೇ ನ ಸಂಶಯಃ ॥

ಎಂಬುದಾಗಿ ಸ್ಮೃತಿಯೂ ಇರುವುದರಿಂದ, ಜ್ಞಾನೋದಯವಾದಾಗ ದೇಹ-ಪಾತಾನಂತರವೇ ಮೋಕ್ಷವಾಗುತ್ತದೆ ಎಂದು ನಿಯಮವಿಲ್ಲ. ಕಿಂತು ಪ್ರತಿಬಂಧಕ-ವಿಲ್ಲದಿದ್ದಾಗ ತದ್ದೇಹಪಾತಾನಂತರದಲ್ಲಿ ಮೋಕ್ಷವಾಗುತ್ತದೆ, ಪ್ರತಿಬಂಧಕವಿದ್ದಾಗ ಜನ್ಮಾಂತರವನ್ನು ಪಡೆದು ಅನಂತರ ಮೋಕ್ಷವಾಗುತ್ತದೆ ಎಂದು ಅನಿಯಮ. ಆದ್ದರಿಂದ ಜ್ಞಾನಿಗಳಿಗೆ ಪ್ರತಿಬಂಧಕ ಇಲ್ಲದಿದ್ದರೆ ಮೋಕ್ಷವು (ಅದೂರವಾದ್ದರಿಂದ) ಸಮೀಪವಾದ್ದರಿಂದ ಹೇಳಿದ್ದು ಯುಕ್ತವಾಗಿದೆ ಎಂದು ಸಿದ್ಧವಾಗುತ್ತದೆ.

ಮುಕ್ತಿಫಲಾಧಿಕರಣವು ಮುಗಿಯಿತು.

ಇಲ್ಲಿಗೆ ಸೂತ್ರಾರ್ಥರತ್ನಾವಲೀ ವ್ಯಾಖ್ಯಾನಸಹಿತವಾದ ಬ್ರಹ್ಮಸೂತ್ರಗಳಲ್ಲಿ
ಮೂರನೇ ಅಧ್ಯಾಯದ ನಾಲ್ಕನೇ ಪಾದವು ಮುಗಿಯಿತು.

# चतुर्थोऽध्यायः

## प्रथमः पादः

ಅಧಿಕರಣ - 1

## ಆವೃತ್ತ್ಯಧಿಕರಣ

### ಅಧ್ಯಾಯಸಂಗತಿ

**ಸೂ.ರ.:- ब्रह्मदर्शनजन्यमोक्षरूपाख्यफलं निगद्यतेऽस्मिन्नध्याये ।**

ಬ್ರಹ್ಮದರ್ಶನಜನ್ಯವಾದ ಮೋಕ್ಷರೂಪವಾದ ಫಲವನ್ನು ನಿರೂಪಿಸುತ್ತಾರೆ ನಾಲ್ಕನೇ ಈ ಫಲಾಧ್ಯಾಯದಲ್ಲಿ.

### ಪಾದಸಂಗತಿ

**ಸೂ.ರ.:- मोक्षलक्षणज्ञानफलस्य कर्मक्षयोत्क्रान्तिमार्गभोगभेदेन चातुर्विध्याद्दर्शनपूर्वकालीनसञ्चितकर्मनाशाख्यफलं निगद्यतेऽस्मिन्पादे ।**

ಮೋಕ್ಷರೂಪವಾದ ಜ್ಞಾನಫಲವು ಕರ್ಮಕ್ಷಯ-ಉತ್ಕ್ರಾಂತಿ-ಮಾರ್ಗ-ಭೋಗ ಎಂಬುದಾಗಿ ನಾಲ್ಕುವಿಧವಾದ್ದರಿಂದ, ದರ್ಶನಪೂರ್ವಕಾಲೀನ ಸಂಚಿತ-ಕರ್ಮ-(ಕ್ಷಯ)ನಾಶರೂಪವಾದ ಫಲವನ್ನು ನಿರೂಪಿಸುತ್ತಾರೆ ಮೊದಲನೇ ಈ ಕರ್ಮಕ್ಷಯಪಾದದಲ್ಲಿ.

### ಅಧಿಕರಣ ಸಂಗತಿ

**ಸೂ.ರ.:- अत्र नित्यशः कार्यं सर्वथा भाव्यं साधनमुच्यते । प्रायिकत्वाच्चाध्यायानां पादानां च न विरोधः ।**

'ಆವೃತ್ತಿಃ' ಇತ್ಯಾದಿ ಸೂತ್ರಗಳಲ್ಲಿ ಕರ್ಮಕ್ಷಯೋಕ್ತಿಯು ಪ್ರತೀತವಾಗದ ಕಾರಣ ಇದು ಹೇಗೆ ಉಪಪನ್ನವಾಗುತ್ತದೆ? ಎಂದು ಶಂಕೆ ಬಂದರೆ, ಆದಕ್ಕಾಗಿ ಉತ್ತರ ನೀಡಿದರು - ''ನಿತ್ಯಶಃ ಕಾರ್ಯಂ'' ಎಂದು. ಸತ್ಯವೇ ಈ ಸೂತ್ರಗಳಲ್ಲಿ ಕರ್ಮಕ್ಷಯವು

ನಿರೂಪಿತವಾಗಿಲ್ಲ, ಕಿಂತು ಜ್ಞಾನಸಾಧನವೇ ನಿರೂಪಿತವಾಗಿದೆ. ಹೌದು, ಜ್ಞಾನ-ಸಾಧನವನ್ನು ತೃತೀಯಾಧ್ಯಾಯದಲ್ಲಿಯೇ ಏಕೆ ಹೇಳಲಿಲ್ಲ ? ಎಂಬ ಶಂಕೆ ಬೇಡ. ತೃತೀಯಾಧ್ಯಾಯದಲ್ಲಿ ಜ್ಞಾನಸಾಧನವನ್ನು ಹೇಳಿಯಾಗಿದೆ. ಹಾಗಾದರೆ ಇಲ್ಲಿ ಪುನಃ ಏಕೆ ಹೇಳಲಾಗುತ್ತದೆ ? ಎಂದರೆ, ಹಿಂದೆ ಹೇಳಿದ ಜ್ಞಾನಸಾಧನಕ್ಕೇನೇ ನಿತ್ಯಶಃ ಕಾರ್ಯತ್ವವನ್ನು ಹೇಳುತ್ತಾರೆ ಈ ಪಾದದಲ್ಲಿ.

ನಿತ್ಯಶಃ ಕಾರ್ಯವಾದ, ಸರ್ವಥಾ ಭಾವ್ಯವಾದ ಸಾಧನವನ್ನು ಹೇಳುತ್ತಾರೆ ಈ ಪಾದದಲ್ಲಿ ಎಂದು ಅಭಿಪ್ರಾಯ.

ಹಾಗಾದರೆ ಫಲಾಧ್ಯಾಯದಲ್ಲಿ ಕರ್ಮಕ್ಷಯಪಾದದಲ್ಲಿ ಸಾಧನವನ್ನೇ ಹೇಳುವುದಾದರೆ, ಅಧ್ಯಾಯಪಾದಗಳಿಗೆ ಅರ್ಥವ್ಯವಸ್ಥಾ ಇಲ್ಲದೇ ಹೋಗ-ಬೇಕಾಗುತ್ತದೆಯಲ್ಲ? ಎಂದು ಶಂಕೆ ಬಂದರೆ, ಅದಕ್ಕೆ ಹೇಳಿದರು – ''ಪ್ರಾಯಿಕತ್ವಾಚ್ಚ ಅಧ್ಯಾಯಾನಾಂ'' ಎಂದು. ಅರ್ಥಾಂತರವನ್ನು ಹೇಳಿದರೂ ಸಹ ವ್ಯವಸ್ಥಾಭಾವಂ ವಿರೋಧ ಬರುವುದಿಲ್ಲ. ''ಯೋಽರ್ಥೋ ಯತ್ರ ಪ್ರಾಯೇಣೋಚ್ಯತೇ ಸೋಽಧ್ಯಾಯಾದಿಃ ತದರ್ಥ ಇತಿ ವ್ಯವಸ್ಥೋಪಪತ್ತೇಃ'' । ಯಾವ ಅರ್ಥವು ಎಲ್ಲಿ ಪ್ರಾಯೇಣ ಹೇಳಲ್ಪಡುತ್ತದೆಯೋ ಆ ಅಧ್ಯಾಯಾದಿಗಳು ತದರ್ಥವಾಗಿವೆ ಎಂದು ವ್ಯವಸ್ಥೆ ಹೇಳಬಹುದಾದ್ದರಿಂದ ವಿರೋಧವಿಲ್ಲ.

ಈ ಫಲಾಧ್ಯಾಯದಲ್ಲಿ ಈ ಕರ್ಮಕ್ಷಯಪಾದದಲ್ಲಿ ಜ್ಞಾನಸಾಧನವನ್ನು ಸ್ವಲ್ಪ ಹೇಳಿದರೂ ಸಹ ಮೋಕ್ಷ – ಕರ್ಮಕ್ಷಯಾದಿಗಳನ್ನು ಪ್ರಾಯೇಣ ಹೇಳುವುದರಿಂದ ಅಧ್ಯಾಯ–ಪಾದವಿರೋಧ ಬರುವುದಿಲ್ಲ ಎಂದು ಭಾವ.

ಶ್ರವಣಾದಿಗಳು ವಿಷಯ. ಶ್ರವಣಾದಿಗಳು ಸಕೃತ್ ಅನುಷ್ಠೇಯವಾಗಿವೆಯೋ? ಅಥವಾ ಶ್ರವಣಾದಿಗಳ ಆವೃತ್ತಿ ಮಾಡಬೇಕೋ? ಎಂದು ಸಂದೇಹ.

## ಪೂರ್ವಪಕ್ಷ

**ಸೂ.ರ.:– ननु सकृदेव श्रवणादिकमनुष्ठेयम् । तावतैव विधिपर्यवसानात् । अन्यथा सकृदेव ज्योतिष्टोमादिकमनुष्ठाय कृती न स्यात् । एवं च विहितश्रवणाद्यनुष्ठानेन ज्ञानदर्शनात् । विधेर-प्रामाण्यात् । प्रमाणान्तरस्याप्यभावात् । न श्रवणादि ज्ञानसाधनमिति प्राप्ते सूत्रितम् ॥**

(ತತ್ವಪ್ರಕಾಶಿಕಾ ಪ್ರಕಾರ ಪೂರ್ವಪಕ್ಷ ಬರೆಯಲಾಗಿದೆ)

ಶ್ರವಣಾದಿಗಳು ಸಕೃತ್ ಮಾತ್ರ ಅನುಷ್ಠೇಯವಾಗಿವೆ. ಕಾರಣ - ಸಕೃತ್ ಅನುಷ್ಠಿತ ಅಗ್ನಿಷ್ಟೋಮಾದಿಗಳಿಂದ ಸ್ವರ್ಗಫಲವು ಕಂಡಿದ್ದರಿಂದ, ಅದರಂತೆಯೇ ಸಕೃತ್ ಅನುಷ್ಠಿತ ಶ್ರವಣಾದಿಗಳಿಂದಲೂ ಜ್ಞಾನವು ಸಂಭವಿಸುವುದರಿಂದ. ಶ್ರವಣಾದಿ-ವಿಧಿಯಾದರೂ ಅಗ್ನಿಷ್ಟೋಮಾದಿವಿಧಿಯಂತೆ ಸಕೃದನುಷ್ಠಾನದಿಂದ ಚರಿತಾರ್ಥ-ವಾಗುತ್ತದೆ.

ಆದ್ದರಿಂದ ಶ್ರವಣಾದಿಗಳು ಜ್ಞಾನಸಾಧನವಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

## ॐ आवृत्तिरसकृदुपदेशात् ॐ (४-१-१)

**ಸೂತ್ರಾರ್ಥ** :- ಜ್ಞಾನಾರ್ಥಂ ಶ್ರವಣಾದೀನಾಂ **ಆವೃತ್ತಿಃ** ಕಾರ್ಯಾ = ಜ್ಞಾನಕ್ಕಾಗಿ ಶ್ರವಣಾದಿಗಳ ಆವೃತ್ತಿಯು ಕಾರ್ಯವಾಗಿದೆ (ಪುನಃ ಪುನಃ ಶ್ರವಣಾದಿಗಳ ಅನುಷ್ಠಾನ ಮಾಡಬೇಕು). ಕುತಃ = ಏಕೆ? **ಅಸಕೃದುಪದೇಶಾತ್** = ಶ್ವೇತಕೇತುವನ್ನು ಕುರಿತು ಉದ್ದಾಲಕರು ಬಹುವಾರವಾಗಿ ಪರತತ್ವೋಪದೇಶ ಮಾಡಿದ್ದರಿಂದ.

## ಸಿದ್ಧಾಂತ

**ಸೂ.ರ.:– एवं चावृत्तेरेव श्रवणादीनां फलहेतुत्वात् । अपरोक्षज्ञानसिद्धयेऽसकृदनुष्ठानस्योद्दालकेनोपदेशात् । ततश्च श्रवणाद्यावृत्तौ नियमेन फलोपलम्भेन तद्विधेः प्रामाण्याच्छ्रवणादिकं ज्ञानसाधनमिति सिद्धम् ॥**

ಶ್ರವಣಾದಿಗಳ ಆವೃತ್ತಿಯೇ ಫಲಹೇತುವಾದ್ದರಿಂದ, ಅಪರೋಕ್ಷಜ್ಞಾನಸಿದ್ಧಿಗಾಗಿ ಅಸಕೃದನುಷ್ಠಾನವನ್ನು ಉದ್ದಾಲಕರು ಉಪದೇಶ ಮಾಡಿದ್ದರಿಂದ, ಶ್ರವಣಾದಿಗಳ ಆವೃತ್ತಿ ಮಾಡಿದಾಗ ನಿಯಮೇನ ಫಲೋಪಲಂಭ ಕಂಡಿದ್ದರಿಂದ, ಶ್ರವಣಾದಿವಿಧಿಗೆ ಪ್ರಾಮಾಣ್ಯ ಕೂಡುವುದರಿಂದ ಶ್ರವಣಾದಿಗಳು ಜ್ಞಾನಸಾಧನವಾಗಿವೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 2

**ಸೂ.ರ.:– हेत्वन्तरेण श्रवणाद्यावृत्तिं साधयत्सूत्रमुपन्यस्यति ॥**

ಮತ್ತೊಂದು ಹೇತುವಿನಿಂದಲೂ ಶ್ರವಣಾದಿಗಳ ಆವೃತ್ತಿಯನ್ನು ಸಾಧಿಸುವ ಸೂತ್ರವನ್ನು ಹೇಳುತ್ತಾರೆ -

**ॐ लिङ्गाच्च ॐ (४-१-२)**

**ಸೂತ್ರಾರ್ಥ :- ಲಿಂಗಾಚ್ಚ** = ಭೃಗು ಋಷಿಗಳು ಮಾಡಿರುವ ಶ್ರವಣಾದ್ಯಾ-ವೃತ್ತಿರೂಪವಾದ ಲಿಂಗದಿಂದಲೂ ಸಹ, ಶ್ರವಣಾದಿಗಳನ್ನು ಪುನಃ ಪುನಃ ಮಾಡ-ಬೇಕೆಂದು ಸಿದ್ಧವಾಗುತ್ತದೆ.

**ಸೂ.ರ.:– एवं च स तपो तप्यतेत्याद्यावर्तनलिङ्गश्रवणात् (तै. ३-२-१) । ततश्च श्रवणाद्यावृत्तिः कार्येति सिद्धम् ॥**

"ಸ ತಪೋಽತಪ್ಯತ" (ತೈ. 3-2-1) ಎಂಬುದಾಗಿ ಆವರ್ತನಲಿಂಗ ಶ್ರವಣ-ವಾಗುತ್ತಿರುವುದರಿಂದಲೂ ಸಹ ಶ್ರವಣಾದಿಗಳ ಆವೃತ್ತಿ ಕಾರ್ಯವಾಗಿದೆ ಎಂದು ಸಿದ್ಧವಾಗುತ್ತದೆ.

**ವಿವರಣೆ :-** ಭೃಗು ಋಷಿಗಳು ಬ್ರಹ್ಮನನ್ನು ತಿಳಿಯುವುದಕ್ಕಾಗಿ ತಂದೆಯಾದ ವರುಣನ ಸಮೀಪ ಬಂದು "ಅಧೀಹಿ ಭಗವೋ ಬ್ರಹ್ಮೇತಿ" ಎಂಬುದಾಗಿ ಬ್ರಹ್ಮನ ಬಗ್ಗೆ ಉಪದೇಶ ಮಾಡಲು ಪ್ರಾರ್ಥಿಸುತ್ತಾರೆ. ವರುಣನು

"ಅನ್ನಂ ಪ್ರಾಣಂ ಚಕ್ಷುಃ ಶ್ರೋತ್ರಂ ಮನೋ ವಾಚಮಿತಿ ।"

ಎಂಬುದಾಗಿ ಅನ್ನಾದಿ ಭಗವದ್ರೂಪಗಳನ್ನು ಉಪದೇಶ ಮಾಡಿ,

"ಯತೋ ವಾ ಇಮಾನಿ ಭೂತಾನಿ ಜಾಯಂತೇ"

ಇತ್ಯಾದಿಯಾಗಿ ಆ ಭಗವದ್ರೂಪಗಳಲ್ಲಿ ಬ್ರಹ್ಮಲಕ್ಷಣಗಳನ್ನು ಹೇಳಿ,

"ತದ್ವಿಜಿಜ್ಞಾಸಸ್ವ"

ನಾನು ಉಪದೇಶ ಮಾಡಿದ ರೂಪದ ವಿಷಯದಲ್ಲಿ ಶ್ರವಣ ಮನನ ಧ್ಯಾನಗಳನ್ನು ಮಾಡು ಎಂಬುದಾಗಿ ಭೃಗುಋಷಿಗಳಿಗೆ ಉಪದೇಶ ಮಾಡುತ್ತಾನೆ.

ವರುಣನಿಂದ ಉಪದಿಷ್ಟರಾದ ಭೃಗುಋಷಿಗಳು ಒಂದು ರೂಪವನ್ನು ಮನನ-ಧ್ಯಾನಗಳಿಂದ ಅಪರೋಕ್ಷೀಕರಿಸಿಕೊಂಡು,

''ಪುನರೇವ ಪಿತರಂ ಉಪಸಸಾರ । ಅಧೀಹಿ ಭಗವೋ ಬ್ರಹ್ಮೇತಿ ।''

ಪುನಃ ತಂದೆಯ ಬಳಿ ಬಂದು, ಬ್ರಹ್ಮನ ಎರಡನೇ ರೂಪದ ಉಪದೇಶ ಮಾಡಲು ಪ್ರಾರ್ಥಿಸುತ್ತಾರೆ. ವರುಣನು ಎರಡನೇ ರೂಪವನ್ನು ಉಪದೇಶಿಸಿ, ಅದರಲ್ಲಿ ಶ್ರವಣ ಮನನಾದಿಗಳನ್ನು ಮಾಡು ಎಂದು ಹೇಳಿಕಳುಹಿಸುತ್ತಾನೆ. ಇದೇ ರೀತಿಯಾಗಿ ಬೇರೆ ಬೇರೆ ರೂಪಗಳ ಬಗ್ಗೆ ಉಪದೇಶಿಸಲು ಭೃಗುಋಷಿಗಳಿಂದ ಪ್ರಾರ್ಥನೆ, ಆ ರೂಪಗಳ ಬಗ್ಗೆ ವರುಣನ ಉತ್ತರಗಳು. ಭೃಗು ಋಷಿಗಳು ಮಾಡಿದ ಶ್ರವಣಾದ್ಯಾವರ್ತನವು ಶ್ರವಣಾದ್ಯಾವೃತ್ತಿ ವಿಷಯದಲ್ಲಿ ಲಿಂಗವಾಗುತ್ತದೆ ಎಂದು ಅಭಿಪ್ರಾಯ.

ಆವೃತ್ತ್ಯಧಿಕರಣವು ಮುಗಿಯಿತು.

ಅಧಿಕರಣ – 2

## ಆತ್ಮಾಧಿಕರಣ

### ಸಂಗತಿ

**ಸೂ.ರ.:– अत्रात्मत्वोपास्तेर्नित्यशः कार्यत्वं समर्थ्यते ॥**

ಆತ್ಮತ್ವೋಪಾಸನೆಯು ನಿತ್ಯಶಃ ಕಾರ್ಯವಾಗಿದೆ ಎಂದು ಸಮರ್ಥಿಸುತ್ತಾರೆ ಎರಡನೇ ಈ ಆತ್ಮಾಧಿಕರಣದಲ್ಲಿ.

### ಪೂರ್ವಪಕ್ಷ

**ಸೂ.ರ.:– ननु न नित्यश आत्मत्वस्योपदेश उपासनं च कार्यम् । अतिप्रसिद्धत्वात् । किन्त्वप्रसिद्धस्यैव कस्यचिद्गुणस्य । ततश्च न तत्र वेदस्य महातात्पर्यं युक्तमिति प्राप्ते सूत्रितम् ॥**

ಆತ್ಮತ್ವದ ಉಪದೇಶ ಹಾಗೂ ಉಪಾಸನೆಯು (ವಿಷ್ಣುಃ ಆತ್ಮಾ = ಮಮ ಸ್ವಾಮೀ ಎಂದು ಉಪದೇಶವು ಹಾಗೂ ಉಪಾಸನೆಯು) ನಿತ್ಯಶಃ ಕಾರ್ಯವಾಗಿಲ್ಲ. ಕಾರಣ ಅದು ಅತಿಪ್ರಸಿದ್ಧವಾದದ್ದರಿಂದ. ಕಿಂತು ಅಪ್ರಸಿದ್ಧವಾದ ಕೆಲವು ಗುಣದ ಉಪದೇಶ - ಉಪಾಸನೆಗಳನ್ನೇ ಮಾಡಬೇಕು. ಹಾಗಾಗಿ ಭಗವಂತನ ಆತ್ಮತ್ವ (ಸ್ವಾಮಿತ್ವ)ದ ವಿಷಯದಲ್ಲಿ ವೇದಗಳಿಗೆ ಮಹಾತಾತ್ಪರ್ಯ ಯುಕ್ತವಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

### ॐ आत्मेति तूपगच्छन्ति ग्राहयन्ति च ॐ (४-१-३)

**ಸೂತ್ರಾರ್ಥ** :- ಸೂತ್ರದಲ್ಲಿ ತು ಶಬ್ದವು ಏವ ಎಂಬ ಅರ್ಥದಲ್ಲಿದೆ. **ಆತ್ಮಾ** = ವಿಷ್ಣುವು, **ಆತ್ಮಾ ಇತಿ** = 'ಮಮ ಸ್ವಾಮೀ ಇತಿ' ನನಗೆ ಸ್ವಾಮಿಯಾಗಿದ್ದಾನೆ ಎಂದು ಉಪಾಸ್ಯಃ **ತು (ಏವ)** = ಉಪಾಸ್ಯನೇ ಆಗಿದ್ದಾನೆ. ಕುತಃ = ಏಕೆ? ಯಸ್ಮಾತ್ = ಯಾವ ಕಾರಣ ಜ್ಞಾನಿನಃ = ಜ್ಞಾನಿಗಳು ತಥಾ **ಉಪಗಚ್ಛಂತಿ** = ಹಾಗೆ ತಾವೂ ತಿಳಿಯುತ್ತಾರೆ ಮತ್ತು ಹಾಗೆ ತಾವು ಉಪಾಸನೆಯನ್ನೂ ಮಾಡುತ್ತಾರೆ. ಶಿಷ್ಯಾನ್ ಪ್ರತಿ = ಶಿಷ್ಯರನ್ನು ಕುರಿತು **ಗ್ರಾಹಯಂತಿ ಚ** = ಉಪದೇಶ ಮಾಡುತ್ತಾರೆ ಕೂಡ ತಸ್ಮಾತ್ = ಆ ಕಾರಣ.

## ಸಿದ್ಧಾಂತ

**ಸೂ.ರ.:– एवं च मोक्षसाधनाभिज्ञैर्विष्णुरात्मेत्युपदेशस्योपासनस्य च नित्यशोऽनुष्ठीयमानत्वात् । नान्यमिति श्रुतेः । आत्मेतीति (भविष्यत्पर्व) स्मृतेश्च । उपासनस्य फलहेतुतायाः प्रामाणिकत्वेन प्रसिद्धेरप्रयोजकत्वात् । न हि राजवर्णनं प्रीतिसाधनमिति प्रसिद्धत्वेन राजा प्रीत्यर्थिभिर्न वर्ण्यते । येनेह तथा स्यात् । अतो विष्णोः स्वामित्वस्य सदा सर्वथोपास्यत्वाद्युक्तं तत्र वेदानां महातात्पर्यमिति सिद्धम् ॥**

"ನಾನ್ಯಂ ವಿಚಿಂತಯೇ ಆತ್ಮಾನಮೇವಾಹಂ ವಿಜಾನೀಯಾಂ ಆತ್ಮಾನಮುಪಾಸೇ ಆತ್ಮಾ ಹಿ ಮಮ್ಯೈಷ ಭವತಿ"

ಎಂಬುದಾಗಿ ಶ್ರುತಿ ಇರುವುದರಿಂದ ಹಾಗೂ

ಆತ್ಮೇತ್ಯುಪಾಸನಂ ಕಾರ್ಯಂ ಸರ್ವಥೈವ ಮುಮುಕ್ಷುಭಿಃ ।
ನಾನಾಕ್ಲೇಶಸಮಾಯುಕ್ತೋಽಪ್ಯೇತಾವನ್ನೈವ ವಿಸ್ಮರೇತ್ ॥

ಎಂಬುದಾಗಿ (ಭವಿಷ್ಯತ್ಪರ್ವವಚನ) ಸ್ಮೃತಿಯೂ ಇರುವುದರಿಂದ ಮೋಕ್ಷ-ಸಾಧನವನ್ನು ಯಾರು ಚೆನ್ನಾಗಿ ಬಲ್ಲರೋ ಅವರು "ವಿಷ್ಣುಃ ಆತ್ಮಾ" (ಮಮ ಸ್ವಾಮೀ) ಎಂಬುದಾಗಿ ಉಪದೇಶವನ್ನು ಮತ್ತು ಉಪಾಸನೆಯನ್ನು ನಿತ್ಯಶಃ ಅನುಷ್ಠಾನ ಮಾಡಲೇಬೇಕು. ವಿಷ್ಣುವಿಗೆ ಆತ್ಮತ್ವವು ಅತಿಪ್ರಸಿದ್ಧವಾದ್ದರಿಂದ ಅದು ಉಪಾಸ್ಯವಲ್ಲ ಎಂಬುದಾಗಿ ಹೇಳಿದ್ದೇವೆಯಲ್ಲ ? ಎಂಬ ಶಂಕೆ ಬೇಡ. ಕಾರಣ – ಉಪಾಸನೆಗೆ ಫಲಹೇತುತ್ವವು ಪ್ರಾಮಾಣಿಕವಾದ್ದರಿಂದ ಪ್ರಸಿದ್ಧಿಯು ಅಪ್ರಯೋಜಕವಾಗಿದೆ.

ರಾಜನನ್ನು ವರ್ಣಿಸುವುದು ರಾಜನ ಪ್ರೀತಿಗೆ ಸಾಧನವಾಗಿದೆ ಎಂದು ಪ್ರಸಿದ್ಧವಾದ್ದರಿಂದ ರಾಜನು ಪ್ರೀತ್ಯರ್ಥಿಗಳಿಂದ ವರ್ಣಿಸಲ್ಪಡುವುದಿಲ್ಲ ಎಂದಲ್ಲ.

ಆದ್ದರಿಂದ ವಿಷ್ಣುವಿನ ಸ್ವಾಮಿತ್ವೋಪಾಸನೆಯನ್ನು ಸದಾ ಮಾಡಲೇ-ಬೇಕಾದ್ದರಿಂದ ಅದರಲ್ಲಿ ವೇದಗಳಿಗೆ ಮಹಾತಾತ್ಪರ್ಯವಿದೆ ಎಂದು ಸಿದ್ಧವಾಗುತ್ತದೆ.

ಆತ್ಮಾಧಿಕರಣವು ಮುಗಿಯಿತು.

ಅಧಿಕರಣ – 3

## ನ ಪ್ರತೀಕಾಧಿಕರಣ

### ಸಂಗತಿ

ಸೂ.ರ.:– अत्र ब्रह्मज्ञानार्थिनो विष्णुप्रतीकैक्योपासनवर्जनमावश्यकमिति प्रतिपाद्यते ।

ಬ್ರಹ್ಮಜ್ಞಾನಾರ್ಥಿಯಾದವನಿಗೆ ವಿಷ್ಣು-ಪ್ರತೀಕಗಳಲ್ಲಿ ಐಕ್ಯೋಪಾಸನೆಯ ವರ್ಜನವು ಆವಶ್ಯಕವಾಗಿದೆ ಎಂದು ಪ್ರತಿಪಾದಿಸುತ್ತಾರೆ ಮೂರನೇ ಈ ನ ಪ್ರತೀಕಾಧಿಕರಣದಲ್ಲಿ.

### ಪೂರ್ವಪಕ್ಷ

ಸೂ.ರ.:– ननु प्रतीकं ब्रह्मतयोपास्यम् । नामोपास्स्वेत्यादिविधीनां स यो मनो ब्रह्मेति पर्यालोचनया नाम ब्रह्मेत्युपासीतेति (छां.७-१-५) शाखान्तरपर्यालोचनया च प्रतीके ब्रह्मदृष्टिरिति तात्पर्यावगमात् । न च प्रतीकब्रह्मणोर्भेदेन तथोपासनासम्भवः । उपासनायां फलस्यैव प्रयोजकत्वेन वस्तुतथात्वस्याप्रयोजकत्वात् । ततश्च प्रतीके ब्रह्मत्वेनोपासनस्य कर्तव्यत्वात् उक्तं स्वामित्वोपासनमयुक्तमिति प्राप्ते सूत्रमाह ॥

ಪ್ರತೀಕವು ಬ್ರಹ್ಮತ್ವೇನ ಉಪಾಸ್ಯವಾಗಿದೆ. ಕಾರಣ – 'ನಾಮೋಪಾಸ್ಸ್ವ' ಇತ್ಯಾದಿ ವಿಧಿಗಳಿಗೆ 'ಸ ಯೋ ಮನೋ ಬ್ರಹ್ಮ' ಎಂದು ಪರ್ಯಾಲೋಚನೆಯಿಂದ ಹಾಗೂ 'ನಾಮ ಬ್ರಹ್ಮೇತ್ಯುಪಾಸೀತ' (ಛಾಂ. 7-1-5) ಎಂಬ ಶಾಖಾಂತರ ಪರ್ಯಾಲೋಚನೆಯಿಂದ ಪ್ರತೀಕದಲ್ಲಿ ಬ್ರಹ್ಮದೃಷ್ಟಿ ಎನ್ನುವುದರಲ್ಲಿ ತಾತ್ಪರ್ಯವಿದೆ ಎಂದು ತಿಳಿದುಬರುವುದರಿಂದ.

ಪ್ರತೀಕ-ಬ್ರಹ್ಮರಲ್ಲಿ ಭೇದವಿರುವುದರಿಂದ ಹಾಗೆ ಐಕ್ಯೋಪಾಸನೆ ಮಾಡಲು ಬರುವುದಿಲ್ಲ ಎಂದು ಶಂಕಿಸುವುದು ಸರಿಯಲ್ಲ. ಉಪಾಸನೆಯಲ್ಲಿ ಫಲವೇ ಪ್ರಯೋಜಕವಾದ್ದರಿಂದ ವಸ್ತುತಥಾತ್ವವು ಅಪ್ರಯೋಜಕವಾಗಿದೆ.

ಆದ್ದರಿಂದ ಪ್ರತೀಕದಲ್ಲಿ ಬ್ರಹ್ಮತ್ವೋಪಾಸನೆಯು (ಪ್ರತೀಕವೇ ಬ್ರಹ್ಮ ಎಂಬ ಉಪಾಸನೆಯು) ಕರ್ತವ್ಯವಾದ್ದರಿಂದ ಹಿಂದೆ ಹೇಳಿದ ಸ್ವಾಮಿತ್ವೋಪಾಸನೆಯು ಯುಕ್ತವಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

### ॐ न प्रतीके न हि सः ॐ (४-१-४)

**ಸೂತ್ರಾರ್ಥ** :- ಪ್ರತೀಕೇ = ನಾಮಾದ್ಯಧಿಷ್ಠಾನ ವಿಷಯದಲ್ಲಿ ಆತ್ಮೇತ್ಯುಪಾಸ್ತಿಃ ನ ಕಾರ್ಯಾ = ಆತ್ಮಾ ಎಂಬ ಉಪಾಸನೆಯು (ಪ್ರತೀಕವೇ ಬ್ರಹ್ಮ ಎಂಬ ಉಪಾಸನೆಯು) ಕಾರ್ಯವಾಗಿಲ್ಲ. ಕಿಂತು ತದ್ಗತತಯಾ = ಕಿಂತು ಪ್ರತೀಕಸ್ಥಿತತ್ವೇನ ಆತ್ಮೋಪಾಸನೆ ಕರ್ತವ್ಯವಾಗಿದೆ. ಕುತಃ = ಏಕೆ? ಹಿ = ಯಾವ ಕಾರಣ ಸಃ = ವಿಷ್ಣುವು ನಾಮಾದಿಪ್ರತೀಕಂ ನ = ನಾಮಾದಿಪ್ರತೀಕವೇ ಆಗಿಲ್ಲವೋ ತಸ್ಮಾತ್ = ಆ ಕಾರಣ ಎಂದರ್ಥ.

### ಸಿದ್ಧಾಂತ

**ಸೂ.ರ.:– एवं चोक्तविधीनां प्रतीके ब्रह्मदृष्ट्यभिधायकत्वात् । प्रतीकस्याब्रह्मत्वेन मिथ्योपासाप्रसङ्गाच्च । न हि मिथ्योपासा फलहेतुः । मिथ्योपासाया अनर्थहेतुत्वेन प्रमाणसिद्धत्वात् । कथं तर्ह्युपासना कार्येति चेत् । तत्स्थत्वेनेति ग्रहणाद् द्वितीयाश्रवणात् । महाव्याकरण-मूलकसुपां सुपो भवतीति कात्यायनवचनेन द्वितीयायाः सप्तम्यर्थत्वात् । ततश्च प्रतीकस्थत्वेनैव ब्रह्मोपासनं कार्यमिति सिद्धम् ॥**

'ನಾಮೋಪಾಸ್ವ' ಇತ್ಯಾದಿ ವಿಧಿಗಳು ಪ್ರತೀಕದಲ್ಲಿ ಬ್ರಹ್ಮದೃಷ್ಟಿ ಅಭಿಧಾಯಕ-ವಾದ್ದರಿಂದ, ಪ್ರತೀಕವು ಬ್ರಹ್ಮವಲ್ಲದ್ದರಿಂದ ಪ್ರತೀಕವೇ ಬ್ರಹ್ಮ ಎಂದು ಉಪಾಸನೆ ಮಾಡಿದರೆ ಮಿಥ್ಯೋಪಾಸನೆ ಆಗಬೇಕಾಗುತ್ತದೆ. ಮಿಥ್ಯೋಪಾಸನೆಯು ಫಲಹೇತು-ವಲ್ಲ. ಮಿಥ್ಯೋಪಾಸನೆಯು ಅನರ್ಥಹೇತುವಾಗಿದೆ ಎಂದು ಪ್ರಮಾಣಸಿದ್ಧವಾದ್ದರಿಂದ.

ಹಾಗಾದರೆ ಹೇಗೆ ಉಪಾಸನೆ ಮಾಡಬೇಕು? ಎಂದು ಕೇಳಿದರೆ, ಪ್ರತೀಕದಲ್ಲಿ ಬ್ರಹ್ಮನು ಸನ್ನಿಹಿತನಾಗಿದ್ದಾನೆ ಎಂದು ಉಪಾಸನೆ ಮಾಡಬೇಕು. ಹಾಗಾದರೆ 'ನಾಮಸು' ಎಂದು ಸಪ್ತಮೀ ಇರಬೇಕಿತ್ತು. 'ನಾಮ' ಎಂದು ದ್ವಿತೀಯಾವಿಭಕ್ತಿ

ಇದೆಯಲ್ಲ? ಎಂದರೆ, ''ಸಪ್ತಸು ಪ್ರಥಮಾ'' ''ಷಟ್‌ಸು ದ್ವಿತೀಯಾ'' ಇತ್ಯಾದಿಯಾಗಿ ಹೇಳಿದಂತೆ ಪ್ರಥಮಾದಿ ವಿಭಕ್ತಿಗಳಿಗೇ ಸಪ್ತಮ್ಯರ್ಥ ಇರುವುದರಿಂದ ಪ್ರಕೃತ 'ನಾಮ' ಎಂಬ ದ್ವಿತೀಯಾ ಸಪ್ತಮ್ಯರ್ಥಕವಾಗಿದೆ. ಹೀಗಾಗಿ ನಾಮ = ನಾಮಸು ಬ್ರಹ್ಮೇತ್ಯುಪಾಸೀತ ಎಂದು ಅರ್ಥ ಬರುತ್ತದೆ.

ಆದ್ದರಿಂದ ಪ್ರತೀಕದಲ್ಲಿ ಇದ್ದಾನೆ ಎಂಬುದಾಗಿಯೇ ಬ್ರಹ್ಮನ ಉಪಾಸನೆ ಮಾಡಬೇಕು ಎಂದು ಸಿದ್ಧವಾಗುತ್ತದೆ.

**ನ ಪ್ರತೀಕಾಧಿಕರಣವು ಮುಗಿಯಿತು.**

ಅಧಿಕರಣ – 4

# ಬ್ರಹ್ಮಾಧಿಕರಣ

## ಸಂಗತಿ

**ಸೂ.ರ.:– अत्र ब्रह्मत्वोपास्तेरावश्यकत्वं समर्थ्यते ।**

ಬ್ರಹ್ಮತ್ವೋಪಾಸನೆಗೆ (ಪೂರ್ಣತ್ವೋಪಾಸನೆಗೆ) ಆವಶ್ಯಕತ್ವವನ್ನು ಸಮರ್ಥಿಸುತ್ತಾರೆ ನಾಲ್ಕನೇ ಈ ಬ್ರಹ್ಮಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु ब्रह्मत्वं सदा सर्वथा नोपास्यम् । उपासनं तु भगवत्प्रसादार्थम् । स च नित्यहं विविधगुणोपासनेनैव भवेदिति व्यर्थं ब्रह्मत्वोपासनम् । अतो ब्रह्मत्वस्य सदोपास्यत्वाभावादुक्तमयुक्तमिति प्राप्ते सूत्रं पठति ॥**

ಬ್ರಹ್ಮತ್ವವು (ಪೂರ್ಣತ್ವವು) ಸದಾ ಸರ್ವಥಾ ಉಪಾಸ್ಯವಾಗಿಲ್ಲ. ಕಾರಣ - ಉಪಾಸನೆ ಏಕೆ ಮಾಡುವುದು? ಭಗವಂತನ ಪ್ರಸಾದಕ್ಕಾಗಿ. ಅಂತಹ ಭಗವತ್ಪ್ರಸಾದವು ನಿತ್ಯದಲ್ಲಿ ವಿವಿಧಗುಣೋಪಾಸನೆಯಿಂದಲೇ ಆಗುತ್ತದೆ ಎಂದಮೇಲೆ ಬ್ರಹ್ಮತ್ವೋಪಾಸನವು ವ್ಯರ್ಥ. ಆದ್ದರಿಂದ ಬ್ರಹ್ಮತ್ವವು ಸದಾ ಉಪಾಸ್ಯವಾಗಿಲ್ಲವಾದ್ದರಿಂದ ನೀವು ಹೇಳಿದ್ದು ಯುಕ್ತವಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ ब्रह्मदृष्टिरुत्कर्षात् ॐ (४-१-५)**

**ಸೂತ್ರಾರ್ಥ** :- ಬ್ರಹ್ಮಣಿ = ಪರಮಾತ್ಮನಲ್ಲಿ ಬ್ರಹ್ಮದೃಷ್ಟಿಃ = ಪೂರ್ಣತ್ವೋಪಾಸನೆಯು ಕಾರ್ಯಾ = ಕಾರ್ಯವಾಗಿದೆ. ಕುತಃ = ಏಕೆ? **ಉತ್ಕರ್ಷಾತ್** = ಪೂರ್ಣನಾದ ಭಗವಂತನು ಉತ್ಕೃಷ್ಟನಾದ್ದರಿಂದ, ಬ್ರಹ್ಮತ್ವೋಪಾಸನೆಯೂ ಉತ್ಕೃಷ್ಟವಾಗಿದೆಯಾದ್ದರಿಂದ.

## ಸಿದ್ಧಾಂತ

ಸೂ.ರ.:– एवं च कार्यमेव सदा सर्वथा ब्रह्मत्वोपासनम् । भगवत उत्कृष्टत्वात् । तथोपास्तेस्तत्प्रसादजनकत्वात् । ब्रह्मत्वोपासकातिरिक्तचतुर्गुणोपासकैरप्यात्मत्वादिविशेषणतया ब्रह्मत्वोपासनस्यात्मेत्येवेति (ब्र.त.) वचनात्कार्यत्वात् । तथा च ब्रह्मणो विशिष्योपास्यत्वादुक्तं युक्तमिति सिद्धम् ॥

ಬ್ರಹ್ಮತ್ವೋಪಾಸನೆಯು ಸದಾ ಸರ್ವಥಾ ಕಾರ್ಯವೇ ಆಗಿದೆ. ಕಾರಣ - ಪೂರ್ಣನಾದ ಭಗವಂತನು ಉತ್ಕೃಷ್ಟನಾದ್ದರಿಂದ, ಅಂತಹ ಬ್ರಹ್ಮತ್ವೋ-(ಪೂರ್ಣತ್ವೋ)ಪಾಸನೆಯೂ ಭಗವಂತನ ಪ್ರಸಾದಜನಕವಾದ್ದರಿಂದ. ಬ್ರಹ್ಮತ್ವೋ-ಪಾಸಕರಿಂದ ಅತಿರಿಕ್ತರಾದ ಚತುರ್ಗುಣೋಪಾಸಕರೂ ಸಹ ಆತ್ಮತ್ವಾದಿ-ವಿಶೇಷಣತಯಾ ಬ್ರಹ್ಮತ್ವೋಪಾಸನೆ ಮಾಡಬೇಕೆಂದು

ಆತ್ಮೇತ್ಯೇವ ಯದೋಪಾಸಾ ತದಾ ಬ್ರಹ್ಮತ್ವಸಂಯುತಾ ।
ಕಾರ್ಯೈವ ಸರ್ವಥಾ ವಿಷ್ಣೋರ್ಬ್ರಹ್ಮತ್ವಂ ನ ಪರಿತ್ಯಜೇತ್ ॥ (ಬ್ರಹ್ಮತರ್ಕ)

ವಚನವಿರುವುದರಿಂದ ಬ್ರಹ್ಮತ್ವೋಪಾಸನೆಯು ಕಾರ್ಯವಾಗಿದೆ. ಆದ್ದರಿಂದ ಬ್ರಹ್ಮತ್ವವು ವಿಶಿಷ್ಯ ಉಪಾಸ್ಯವಾದ್ದರಿಂದ ನಾವು ಹೇಳಿದ್ದು ಯುಕ್ತವಾಗಿದೆ ಎಂದು ಸಿದ್ಧವಾಗುತ್ತದೆ.

ಬ್ರಹ್ಮಾಧಿಕರಣವು ಮುಗಿಯಿತು.

ಅಧಿಕರಣ – 5

# ಆದಿತ್ಯಾಧಿಕರಣ

## ಸಂಗತಿ

**ಸೂ.ರ.:– अत्र विष्ण्वङ्गाश्रितत्वेन देवतोपासनमावश्यकमिति साध्यते ।**

ವಿಷ್ಣ್ವಂಗಾಶ್ರಿತತ್ವೇನ ದೇವತೋಪಾಸನೆಯು ಆವಶ್ಯಕವಾಗಿದೆ ಎಂದು ಸಾಧಿಸುತ್ತಾರೆ ಐದನೇ ಈ ಆದಿತ್ಯಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु न सर्वदा सर्वथा तथोपासनं देवैः कार्यम् । सूर्यादिभिरितस्ततः सञ्चरणेन सदा भगवदङ्गाश्रितत्वाभावात् । तथाप्युपासनेऽन्यथोपासनत्वेनानर्थप्रसङ्गात् । सत्स्वपि गुणान्तरेषु स्वाश्रयत्वेन भगवदुपासने विशेषकारणाभावात् । अत आश्रयाश्रयिभावस्यासदातनत्वेन सर्वोपास्यत्वाभावात्तद्वत्सदातनत्वाभावेन नात्मत्वोपासनमावश्यकमिति प्राप्ते सूत्रं पठति ॥**

ವಿಷ್ಣುವಿನ ಅಂಗಾಶ್ರಿತತ್ವೇನ ಉಪಾಸನೆಯು ದೇವತೆಗಳಿಂದ ಸರ್ವದಾ ಸರ್ವಥಾ ಕಾರ್ಯವಾಗಿಲ್ಲ. ಕಾರಣ – ಸೂರ್ಯಾದಿಗಳು ಇತಸ್ತತಃ ಸಂಚಾರ ಮಾಡುವುದರಿಂದ ಸದಾ ಭಗವದಂಗಾಶ್ರಿತರಾಗಿರಲು ಸಾಧ್ಯವಿಲ್ಲವಾದ್ದರಿಂದ. ದೇವತೆಗಳು ಸದಾ ಭಗವದಂಗಾಶ್ರಿತರಾಗದಿದ್ದರೂ ಭಗವದಂಗಾಶ್ರಿತತ್ವೇನ ಉಪಾಸನೆ ಮಾಡುವುದಾದರೆ ಅದು ಮಿಥ್ಯೋಪಾಸನೆಯಾಗುವುದರಿಂದ (ಅನರ್ಥಕಾರಿಯಾಗುತ್ತದೆ.) ಅನರ್ಥವಾಗಬೇಕಾಗುತ್ತದೆ.

ಇತರ ಅನೇಕ ಗುಣಗಳು ಇದ್ದಾಗಲೂ ಸಹ ಸ್ವಾಶ್ರಯತ್ವೇನ ಭಗವದುಪಾಸನೆ ಮಾಡುವುದಕ್ಕೆ ವಿಶೇಷ ಕಾರಣವೂ ಯಾವುದೂ ಇಲ್ಲ.

ಆದ್ದರಿಂದ ಆಶ್ರಯ–ಆಶ್ರಯಿಭಾವವು ಸದಾತನವಲ್ಲದ್ದರಿಂದ ಸರ್ವೋಪಾಸ್ಯವಾಗದ ಕಾರಣ (ಅಂಗಾಶ್ರಿತತ್ವೇನ ದೇವತೋಪಾಸನೆಯು ಯುಕ್ತವಲ್ಲವಾದ್ದರಿಂದ) ಆತ್ಮತ್ವೋಪಾಸನ ಹೇಳಿದ್ದು ಆವಶ್ಯಕವಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

## ॐ आदित्यादिमतयश्चाङ्ग उपपत्तेः ॐ (४-१-६)

**ಸೂತ್ರಾರ್ಥ** :- **ಅಂಗೇ** = ತಮ್ಮ ಉತ್ಪತ್ತಿಗೆ ಕಾರಣವಾದ ಪರಮಾತ್ಮನ ಅಂಗಗಳಲ್ಲಿ, ತಾವು ಆಶ್ರಿತರಾಗಿದ್ದೇವೆ ಎಂದು **ಆದಿತ್ಯಾದಿಮತಯಃ** = ಆದಿತ್ಯನೇ ಮೊದಲಾದ ದೇವತೆಗಳಿಂದ ಉಪಾಸನೆಯು ಕರ್ತವ್ಯವಾಗಿದೆ. ಕುತಃ = ಏಕೆ? **ಉಪಪತ್ತೇಃ** = ಆದಿತ್ಯಾದಿ ದೇವತೆಗಳಿಗೆ ಆ ಆ ಅಂಗಗಳಲ್ಲಿ ಪ್ರವೇಶವು ಲಯಕಾಲದಲ್ಲಿ ಅಪೇಕ್ಷಿತವಾದ್ದರಿಂದ, ಅಂಗಾಶ್ರಿತತ್ವೇನ ಉಪಾಸನೆಯು ಯುಕ್ತವಾಗುವುದರಿಂದ.

### ಸಿದ್ಧಾಂತ

**ಸೂ.ರ.:– एवं च चक्षोः सूर्योऽजायतेत्यादिनोक्तं (ऋ. १०-९०-१३) स्वाश्रयत्वेन भगवदङ्गोपासनमादित्यादिदेवैः सर्वथा कार्यमेव । मुक्तौ तत्र लयस्यापेक्षितत्वात् । रूपान्तरेणाङ्गानां स्वाश्रयत्वेन मिथ्योपासनाप्रसङ्गाभावात् । अतस्तदुपासनस्यावश्यकत्वादुक्तमात्मत्वोपासनं युक्तमिति सिद्धम् ॥**

"ಚಕ್ಷೋಃ ಸೂರ್ಯೋಽಜಾಯತ" (ಋ. 10-90-13) ಇತ್ಯಾದಿಯಾಗಿ ಹೇಳಿದ ಸ್ವಾಶ್ರಯತ್ವೇನ ಭಗವದಂಗೋಪಾಸನೆಯು ಆದಿತ್ಯಾದಿದೇವತೆಗಳಿಂದ ಸರ್ವಥಾ ಕಾರ್ಯವೇ ಆಗಿದೆ. ಕಾರಣ - ಮೋಕ್ಷದಲ್ಲಿ ಸ್ವಸ್ವಜನಕ ಅಂಗಗಳಲ್ಲಿ ಅವರಿಗೆ ಲಯವು ಅಪೇಕ್ಷಿತವಾದ್ದರಿಂದ.

ಸೂರ್ಯಾದಿ ದೇವತೆಗಳು ಇತಸ್ತತಃ ಸಂಚಾರ ಮಾಡುವುದರಿಂದ ದೇವತೆಗಳಿಗೂ ಭಗವದಂಗಗಳಿಗೂ ಸದಾ ಆಶ್ರಯ-ಆಶ್ರಯಿಭಾವ ಇರುವು- ದಿಲ್ಲವಲ್ಲ? ಎಂದು ಶಂಕಿಸುವುದು ಸರಿಯಲ್ಲ. ಕಾರಣ ಸೂರ್ಯಾದಿ ದೇವತೆಗಳು ಒಂದು-ರೂಪದಿಂದ ಸಂಚಾರ ಮಾಡುತ್ತಿದ್ದರೂ ಸಹ ಮತ್ತೊಂದು ರೂಪದಿಂದ ಸ್ವಸ್ವಜನಕ ಅಂಗಗಳಲ್ಲಿ ಇದ್ದೇ ಇರುತ್ತಾರಾದ್ದರಿಂದ ಆಶ್ರಯ-ಆಶ್ರಯಿಭಾವವು ಉಪಪನ್ನ-ವಾಗುತ್ತದೆ. ಹೀಗಾಗಿ ರೂಪಾಂತರದಿಂದ ಅಂಗಗಳು ಸ್ವಾಶ್ರಯ- ವಾಗುವುದರಿಂದ ಮಿಥ್ಯೋಪಾಸನಾಪ್ರಸಂಗವೂ ಇಲ್ಲ.

ಆದ್ದರಿಂದ ಸ್ವಾಶ್ರಯತ್ವೇನ ಅಂಗೋಪಾಸನೆಯು ದೇವತೆಗಳಿಗೆ ಆವಶ್ಯಕವಾದ್ದರಿಂದ ಆತ್ಮತ್ವೋಪಾಸನವನ್ನು ಹೇಳಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

**ಆದಿತ್ಯಾಧಿಕರಣವು ಮುಗಿಯಿತು.**

ಅಧಿಕರಣ – 6

## ಆಸನಾಧಿಕರಣ

### ಸಂಗತಿ

**ಸೂ.ರ.:– अत्रासनादिनियमः साध्यते ॥**

ಭಗವಂತನ ಅಪರೋಕ್ಷಕ್ಕೆ ಸಾಧನವಾದ ಧ್ಯಾನಕ್ಕೆ ಆಸನಾದಿ ನಿಯಮವನ್ನು ಸಾಧಿಸುತ್ತಾರೆ ಆರನೇ ಈ ಆಸನಾಧಿಕರಣದಲ್ಲಿ.

### ಪೂರ್ವಪಕ್ಷ

**ಸೂ.ರ.:– ननु नासनं सर्वापेक्षितं किन्तु कृताकृतम् । भगवद्दर्शनार्थं ह्युपासनाद्यन्वेष्टव्यम् । उपासनादिकं च विनाऽप्यासनं सिद्ध्यति । न च मनसः सम्यक् भगवद्विपयत्वसिद्ध्यर्थमासनम् । तेन विनाऽपि तत्सिद्धेः । कथमन्यथा स्मर्तव्य इति सर्वदोपासनाभिधानं युज्यते । ततश्चासनस्यानावश्यकत्वात्तच्छास्त्रं पाक्षिकमनुपादानलक्षणमप्रामाण्यं प्राप्नोतीत्याशङ्कां परिहरत्सूत्रमाचष्टे ॥**

ಆಸನವು ಸರ್ವಾಪೇಕ್ಷಿತವಾಗಿಲ್ಲ, ಕಿಂತು ಕೃತಾಕೃತವಾಗಿದೆ. ಭಗವದ್ದರ್ಶನಕ್ಕಾಗಿ ತಾನೇ ಉಪಾಸನಾದಿಗಳು ಅನ್ವೇಷ್ಟವ್ಯವಾಗಿವೆ. ಆ ಉಪಾಸನಾದಿಗಳಾದರೂ ಆಸನವಿಲ್ಲದಿದ್ದರೂ ಸಹ ಸಿದ್ಧಿಸುತ್ತಿವೆ. ಆದ್ದರಿಂದ ಉಪಾಸನಾದಿಗಳಿಗಾಗಿ ಆಸನ ಅಪೇಕ್ಷಿತವಲ್ಲ.

ಹಾಗಲ್ಲ, ಮನಸ್ಸಿಗೆ ಸಮ್ಯಕ್ ಭಗವದ್ವಿಷಯತ್ವ ಸಿದ್ಧಿಸುವುದಕ್ಕಾಗಿ ಆಸನವು ಅಪೇಕ್ಷಿತವಾಗಿದೆಯಲ್ಲ? ಎಂದರೆ, ಅದೂ ಸರಿಯಲ್ಲ. ಆಸನವಿಲ್ಲದಿದ್ದರೂ ಸಹ ಮನಸ್ಸು ಭಗವದ್ವಿಷಯಕವಾಗಬಹುದು. ಹಾಗೊಂದುವೇಳೆ ಆಸನವು ಸರ್ವಥಾ ಬೇಕೇಬೇಕು ಎನ್ನುವುದಾದರೆ, ''ಸ್ಮರ್ತವ್ಯಃ ಸತತಂ ವಿಷ್ಣುಃ'' ಎಂಬುದಾಗಿ ಸರ್ವದಾ ಉಪಾಸನೆಯನ್ನು ಹೇಳಿದ್ದು ಹೇಗೆ ಯುಕ್ತವಾಗುತ್ತದೆ?

ಆದ್ದರಿಂದ ಆಸನವು ಆವಶ್ಯಕವಲ್ಲವಾದ್ದರಿಂದ ತತ್ಪ್ರತಿಪಾದಕಶಾಸ್ತ್ರವು ಪಾಕ್ಷಿಕವಾದ

ಅನುಪಾದಾನರೂಪವಾದ ಅಪ್ರಾಮಾಣ್ಯವನ್ನು ಹೊಂದುತ್ತದೆ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ आसीनः सम्भवात् ॐ (४-१-७)**

**ಸೂತ್ರಾರ್ಥ** :- ಜಿಜ್ಞಾಸುಃ = ಜಿಜ್ಞಾಸುವಾದವನು **ಆಸೀನಃ** = ಆಸನದಲ್ಲಿ ಕುಳಿತವನಾಗಿಯೇ ಉಪಾಸನಂ ಕುರ್ಯಾತ್ = ಉಪಾಸನೆಯನ್ನು ಮಾಡಬೇಕು. ಕುತಃ = ಏಕೆ? **ಸಂಭವಾತ್** = ಉಪಾಸನೆಯು ಆಸನದಲ್ಲಿದ್ದಾಗಲೇ ಯುಕ್ತ-ವಾಗುವುದರಿಂದ.

## ಸಿದ್ಧಾಂತ

ಸೂ.ರ.:– **एवं चासनयुक्तेनैव जिज्ञासुना विशेषत उपासनं कार्यम् । सत्येवासन उपासनस्य सम्यक् सम्भवात् । ध्यानार्थमेवासननियमाभि-धानात् । अत आसनस्यावश्यकत्वात्तदुपदेशावैयर्थ्यमिति सिद्धम् ॥**

ಜಿಜ್ಞಾಸುವಾದವನು ಆಸನಯುಕ್ತನಾಗಿಯೇ ವಿಶೇಷವಾಗಿ ಉಪಾಸನೆಯನ್ನು ಮಾಡಬೇಕು. ಕಾರಣ ಆಸನವಿದ್ದಾಗಲೇ ಉಪಾಸನೆಯು ಚೆನ್ನಾಗಿ ಉಪಪನ್ನ-ವಾಗುವುದರಿಂದ. ಧ್ಯಾನಕ್ಕಾಗಿಯೇನೇ ಆಸನನಿಯಮವನ್ನು ಹೇಳಿದ್ದರಿಂದ.

ಆದ್ದರಿಂದ ಆಸನವು ಆವಶ್ಯಕವಾದ್ದರಿಂದ ತದುಪದೇಶಕ್ಕೆ ವೈಯರ್ಥ್ಯವಿಲ್ಲ ಎಂದು ಸಿದ್ಧವಾಗುತ್ತದೆ.

## ಸೂತ್ರ - 8

ಸೂ.ರ.:– **ननु सर्वदोपासनं कार्यमासनं चापेक्षितमित्युक्त-मनुपपन्नम् । विरुद्धत्वेनोभयोरेकदा समावेशायोगात् । तत्रान्यतरस्मिन् त्याज्ये श्रुतिविहितत्वात्सर्वदोपासनमुपादायासनमेव त्यज्यते । तद्विधायकश्रुत्यभावादतो नासनमावश्यकमिति प्राप्ते सूत्रितम् ॥**

"ಸರ್ವದಾ ಉಪಾಸನೆಯು ಕಾರ್ಯವಾಗಿದೆ, ಆಸನವೂ ಅಪೇಕ್ಷಿತವಾಗಿದೆ" ಎಂದು ಹೇಳಿದ್ದು ಅನುಪಪನ್ನ, ಕಾರಣ ಎರಡೂ ವಿರುದ್ಧವಾದ್ದರಿಂದ ಸರ್ವದಾ

ಉಪಾಸನೆ - ಆಸನನಿಯಮ ಎರಡೂ ಏಕಕಾಲಕ್ಕೆ ಸಮಾವೇಶವಾಗಲು ಸಾಧ್ಯವಿಲ್ಲ-ವಾದ್ದರಿಂದ.

ಇದರಲ್ಲಿ ಎರಡರಲ್ಲಿ ಒಂದನ್ನು ಬಿಡಬೇಕಾದ ಪ್ರಸಂಗ ಬಂದಾಗ, ಶ್ರುತಿವಿಹಿತ-ವಾದ್ದರಿಂದ ಸರ್ವದೋಪಾಸನೆಯನ್ನು ಸ್ವೀಕರಿಸಿ ಆಸನವನ್ನೇ ಪರಿತ್ಯಾಗ ಮಾಡುತ್ತೇವೆ. ಆಸನನಿಯಮವಿಧಾಯಕ ಶ್ರುತಿ ಇಲ್ಲವಾದ್ದರಿಂದ. ಆದ್ದರಿಂದ ಆಸನವು ಆವಶ್ಯಕವಲ್ಲ ಎಂದು ಶಂಕೆ ಬಂದರೆ, ಪರಿಹಾರಕ್ಕಾಗಿ ಸೂತ್ರ ಹೇಳುತ್ತಾರೆ -

## ॐ ध्यानाच्च ॐ (೪-೧-೮)

**ಸೂತ್ರಾರ್ಥ** :- ಧ್ಯಾನಾಚ್ಚ = ಅವಿಚ್ಛಿನ್ನ ಸ್ಮೃತಿರೂಪ ಉಪಾಸನೆಯೇ ಧ್ಯಾನವಾದ್ದರಿಂದ, ತದಪೇಕ್ಷೆಯಿಂದಲೇನೇ ಆಸನನಿಯಮವನ್ನು ಅಂಗೀಕರಿಸಿದ್ದ-ರಿಂದ, ಸ್ಮರಣೋಪಾಸನವನ್ನು ಸ್ವೀಕರಿಸಿ ವ್ಯಭಿಚಾರ ಬರುವುದಿಲ್ಲ

**ಸೂ.ರ.:– एवं च स्मरणात्मकत्वं ध्यानात्मकत्वं चेत्युपासनस्य द्वैविध्यात् । आद्यस्य सार्वकालिकत्वेनासननियमाभावेऽपि द्वितीयस्य योग्यविज्ञेयध्यानत्वेनासनस्यावश्यकत्वमिति सिद्धम् ॥**

ಉಪಾಸನೆಯು ಸ್ಮರಣಾತ್ಮಕ ಹಾಗೂ ಧ್ಯಾನಾತ್ಮಕ ಎಂದು ಎರಡುವಿಧವಾಗಿದೆ. ಇದರಲ್ಲಿ ಮೊದಲನೆಯ ಸ್ಮರಣಾತ್ಮಕ ಉಪಾಸನೆಯು ಸಾರ್ವಕಾಲಿಕವಾದ್ದರಿಂದ ಅದಕ್ಕೆ ಆಸನನಿಯಮ ಇಲ್ಲದಿದ್ದರೂ ಸಹ, ಎರಡನೇ ಧ್ಯಾನಾತ್ಮಕ ಉಪಾಸನೆಯು ಯೋಗ್ಯವಿಜ್ಞೇಯಧ್ಯಾನರೂಪವಾದ್ದರಿಂದ ಅದಕ್ಕೆ ಆಸನವು ಆವಶ್ಯಕವಾಗಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 9

**ಸೂ.ರ.:– ननु न ध्यानार्थमासननियमः । तत्साध्यस्य चित्तविक्षेप परिहारस्य प्रत्याहारादिनाऽपि सम्भवादिति प्राप्ते समादधत्सूत्रमाह ॥**

ಧ್ಯಾನಕ್ಕಾಗಿ ಆಸನನಿಯಮ ಎನ್ನುವುದು ಸರಿಯಲ್ಲ, ಏಕೆಂದರೆ - ಆಸನ-ನಿಯಮದಿಂದ ಸಾಧ್ಯವಾದ ಚಿತ್ತವಿಕ್ಷೇಪಪರಿಹಾರವು ಪ್ರತ್ಯಾಹಾರಾದಿಗಳಿಂದಲೂ ಸಂಭವಿಸುವುದರಿಂದ ಎಂಬುದಾಗಿ ಆಕ್ಷೇಪ ಬಂದರೆ, ಅದರ ಸಮಾಧಾನಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

## ॐ अचलत्वं चापेक्ष्य ॐ (४-१-९)

ಸೂತ್ರಾರ್ಥ :- ನ ಕೇವಲಂ ಪ್ರತ್ಯಾಹಾರಾದಿನಾ ಮನೋವಿಕ್ಷೇಪಾಭಾವೋ ಭವತಿ = ಕೇವಲ ಪ್ರತ್ಯಾಹಾರಾದಿಗಳಿಂದ ಮನೋವಿಕ್ಷೇಪಾಭಾವ ಆಗುವುದಿಲ್ಲ. **ಕಿಂತು ಅಚಲತ್ವಂ ಚಾಪೇಕ್ಷ್ಯ** = ಶರೀರಾಚಲತ್ವವನ್ನೂ ಅಪೇಕ್ಷಿಸಿ ಪ್ರತ್ಯಾಹಾರಾದಿಗಳ ಜೊತೆಗೆ ಶರೀರಾಚಲತ್ವವೂ ಇದ್ದಾಗ ಮನೋವಿಕ್ಷೇಪಾಭಾವ ಸಾಧ್ಯವಾಗುತ್ತದೆ. ಅತಃ ತದರ್ಥಂ ಆಸೀನ ಏವ ಧ್ಯಾಯೇತ್ ಇತ್ಯರ್ಥಃ = ಆದ್ದರಿಂದ ಶರೀರಾಚಲತ್ವಕ್ಕಾಗಿ ಆಸೀನನಾಗಿಯೇ ಧ್ಯಾನ ಮಾಡಬೇಕು ಎಂದರ್ಥ.

ಸೂ.ರ.:– एवं च चित्तविक्षेपपरिहारस्यासनसाध्यशरीराचलत्वमपेक्ष्यैव प्रत्याहारादिना साध्यत्वात् । अचलं चेच्छरीरमिति (ब्रह्माण्डे) स्मृतेः । तथा चासनस्यावश्यकत्वमिति सिद्धम् ॥

ಚಿತ್ತವಿಕ್ಷೇಪಪರಿಹಾರವು ಆಸನಸಾಧ್ಯವಾದ ಶರೀರಾಚಲತ್ವವನ್ನು ಅಪೇಕ್ಷಿಸಿಯೇ ಪ್ರತ್ಯಾಹಾರಾದಿಗಳಿಂದ ಸಾಧ್ಯವಾಗಿದೆ.

ಅಚಲಂ ಚೇಚ್ಛರೀರಂ ಸ್ಯಾನ್ಮನಸಶ್ಚಾಪ್ಯಚಾಲನಮ್ ।
ಚಲನೇ ತು ಶರೀರಸ್ಯ ಚಂಚಲಂ ತು ಮನೋ ಭವೇತ್ ॥

ಎಂಬುದಾಗಿ ಸ್ಮೃತಿ (ಬ್ರಹ್ಮಾಂಡವಚನ) ಇರುವುದರಿಂದ. ಆದ್ದರಿಂದ ಆಸನವು ಆವಶ್ಯಕ ಎಂದು ಸಿದ್ಧವಾಗುತ್ತದೆ.

### ಸೂತ್ರ - 10

ಸೂ.ರ.:– स्मृतिभिरप्यासनस्यावश्यकत्वं समर्थयत्सूत्रमुपन्यस्यति ॥

ಸ್ಮೃತಿಗಳಿಂದಲೂ ಸಹ ಆಸನಕ್ಕೆ ಆವಶ್ಯಕತ್ವವನ್ನು ಸಮರ್ಥಿಸುವ ಸೂತ್ರವನ್ನು ಹೇಳುತ್ತಾರೆ –

## ॐ स्मरन्ति च ॐ (४-१-१०)

ಸೂತ್ರಾರ್ಥ :- **ಸ್ಮರಂತಿ ಚ** = ಸ್ಮೃತಿಕರ್ತೃಗಳಾದ ಕೃಷ್ಣಾದಿಗಳು "ಆಸನನಿಯಮವು ಆವಶ್ಯಕ" ಎಂಬ ಈ ಅರ್ಥವನ್ನು "ಸಮಂ ಕಾಯಶಿರೋಗ್ರೀವಂ..." ಎಂದು ಸ್ಮೃತಿಯಲ್ಲಿ ಹೇಳುತ್ತಾರೆ ಕೂಡ.

**ಸೂ.ರ.:– एवं च समं कायशिरोग्रीवमिति (गीता ६-१३.) वचनादासनस्यावश्यकत्वमिति सिद्धम् ॥**

ಸಮಂ ಕಾಯಶಿರೋಗ್ರೀವಂ ಧಾರಯನ್ನಚಲಂ ಸ್ಥಿರಃ ।
ಸಂಪ್ರೇಕ್ಷ್ಯ ನಾಸಿಕಾಗ್ರಂ ಸ್ವಂ ದಿಶಶ್ಚಾನವಲೋಕಯನ್ ॥ (ಗೀತಾ 6-13)

ಎಂಬುದಾಗಿ ಸ್ಮೃತಿ (ಗೀತಾ) ವಚನ ಇರುವುದರಿಂದಲೂ ಸಹ ಆಸನವು ಆವಶ್ಯಕ ಎಂದು ಸಿದ್ಧವಾಗುತ್ತದೆ.

## ಸೂತ್ರ - 11

**ಸೂ.ರ.:– नन्वेवं तर्हि पर्वताग्रे नदीतीर इत्यादिमनुस्मृतिवचनात् देशकालादिनियमोऽप्यङ्गीकार्यः स्यादित्यशङ्कां परिहरत्सूत्रमुपन्यस्यति ॥**

ಚಿತ್ತವಿಕ್ಷೇಪಪರಿಹಾರಕ್ಕಾಗಿ ಆಸನವು ಆವಶ್ಯಕ ಎನ್ನುವುದಾದರೆ, ''ಪರ್ವತಾಗ್ರೇ ನದೀತೀರೇ'' ಇತ್ಯಾದಿ ಮನುಸ್ಮೃತಿವಚನವಿರುವುದರಿಂದ ದೇಶ-ಕಾಲಾದಿನಿಯಮ-ವನ್ನೂ ಅಂಗೀಕರಿಸಬೇಕಾಗುತ್ತದೆಯಲ್ಲವೇ? ಎಂಬುದಾಗಿ ಶಂಕೆ ಬಂದರೆ, ಸಮಾಧಾನಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ यत्रैकाग्रता तत्राविशेषात् ॐ (४-१-११)**

**ಸೂತ್ರಾರ್ಥ** :- **ಯತ್ರ** = ಯಾವ ದೇಶದಲ್ಲಿ ಕಾಲದಲ್ಲಿ ಮತ್ತು ಆಸನದಲ್ಲಿ **ಏಕಾಗ್ರತಾ** = ಧ್ಯಾನಕ್ಕೆ ಏಕನಿಷ್ಠತೆ ಉಂಟಾಗುವುದೋ **ತತ್ರ ಏವ** = ಆ ದೇಶದಲ್ಲಿ ಕಾಲದಲ್ಲಿ ಆಸನದಲ್ಲಿಯೇ ಧ್ಯಾನಂ ಕುರ್ಯಾತ್ = ಧ್ಯಾನವನ್ನು ಮಾಡಬೇಕು. ಕುತಃ = ಏಕೆ? **ಅವಿಶೇಷಾತ್** = ದೇಶ-ಕಾಲಾದಿಗಳಿಂದ ಧ್ಯಾನ-ಜ್ಞಾನಗಳಲ್ಲಿ ವಿಶೇಷವಿಲ್ಲ-ವಾದ್ದರಿಂದ.

**ಸೂ.ರ.:– एवं च देशकालादिनियमस्य मनःप्रसादार्थत्वात् । तस्य यत्रैकाग्रता तत्रैव स्थातव्यत्वात् । तमेव देशं सेवेतेति (वाराहे.) वचनात् । ततश्चासनस्यावश्यकत्वादुपदेशावैयर्थ्यमिति सिद्धम् ॥**

ದೇಶಕಾಲಾದಿನಿಯಮವು ಮನಃಪ್ರಸಾದಕ್ಕಾಗಿ. ಅಂತಹ ಮನಃಪ್ರಸಾದವು

ಯಾವ ದೇಶಕಾಲಾದಿಗಳಲ್ಲಿ ಏಕಾಗ್ರತೆ ಮೂಡುವುದೋ ಆ ದೇಶಕಾಲಾದಿ-ಗಳಲ್ಲಿಯೇ ಉಂಟಾಗುವುದರಿಂದ

> ತಮೇವ ದೇಶಂ ಸೇವೇತ ತಂ ಕಾಲಂ ತಾಮುಪಸ್ಥಿತಿಮ್ ।
> ತಾನೇವ ಭೋಗಾನ್ಭುಂಜೀತ ಮನೋ ಯತ್ರ ಪ್ರಸೀದತಿ ॥
> ನ ಹಿ ದೇಶಾದಿಭಿಃ ಕಶ್ಚಿದ್ವಿಶೇಷಃ ಸಮುದೀರಿತಃ ।
> ಮನಃಪ್ರಸಾದನಾರ್ಥಂ ಹಿ ದೇಶಕಾಲಾದಿಚಿಂತನಾ ॥

ಎಂಬುದಾಗಿ ವಾರಾಹವಚನ ಇರುವುದರಿಂದ ಆಸನನಿಯಮವು ಆವಶ್ಯಕ ಎಂದು ತಿಳಿದುಬರುತ್ತದೆ. ಹೀಗಾಗಿ ಆಸನವು ಆವಶ್ಯಕವಾದ್ದರಿಂದ ತದುಪದೇಶಕ್ಕೆ ವೈಯರ್ಥ್ಯವಿಲ್ಲ ಎಂದು ಸಿದ್ಧವಾಗುತ್ತದೆ.

**ಆಸನಾಧಿಕರಣವು ಮುಗಿಯಿತು.**

ಅಧಿಕರಣ – 7

# ಆ ಪ್ರಾಯಣಾಧಿಕರಣ

## ಸಂಗತಿ

**ಸೂ.ರ.:– अत्र ध्यानस्य प्रायणान्तत्वं समर्थ्यते ॥**

ಧ್ಯಾನವು ಪ್ರಾಯಣಾಂತ (ಮೋಕ್ಷಪರ್ಯಂತ) ಕರ್ತವ್ಯವಾಗಿದೆ ಎಂದು ಸಮರ್ಥಿಸುತ್ತಾರೆ ಏಳನೇ ಈ ಆ ಪ್ರಾಯಣಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु मुमुक्षुणा न मोक्षपर्यन्तं ध्यानं कार्यम् । ध्यानस्य ज्ञानसाधनत्वेनाभिहितत्वात् । न चानन्दातिशयार्थं तदिति वाच्यम् । तस्य तद्धेतुत्वाभावात् । भावेऽपि न नियमेन कार्यम् । श्रवणादिनाऽपि तत्सम्भवात् । ततश्च शुकादीनां ज्ञानिनां तदाग्रहवैयर्थ्यमिति प्राप्ते सूत्रमाह ॥**

ಮುಮುಕ್ಷುವಾದವನು ಮೋಕ್ಷಪರ್ಯಂತವಾಗಿ ಧ್ಯಾನವನ್ನು ಮಾಡ-ಬೇಕಾಗಿಲ್ಲ. ಕಾರಣ – ಧ್ಯಾನವು ಜ್ಞಾನಸಾಧನತ್ವೇನ ಅಭಿಹಿತವಾದ್ದರಿಂದ, ಜ್ಞಾನ-ಪರ್ಯಂತ ಧ್ಯಾನ ಆವಶ್ಯಕ. ಆನಂದಾತಿಶಯಕ್ಕಾಗಿ ಧ್ಯಾನ ಬೇಕು ಎಂದು ಶಂಕಿಸುವುದು ಸರಿಯಲ್ಲ. ಧ್ಯಾನವು ಆನಂದಾತಿಶಯಕ್ಕೆ ಹೇತುವಾಗಿಲ್ಲವಾದ್ದರಿಂದ. ಒಂದುವೇಳೆ ಹೇತುವಾಗಿದ್ದರೂ ಸಹ ನಿಯಮೇನ ಕಾರ್ಯವಾಗಿಲ್ಲ. ಶ್ರವಣಾದಿ-ಗಳಿಂದಲೂ ಆನಂದಾತಿಶಯವು ಸಂಭವಿಸುವುದರಿಂದ. ಆದ್ದರಿಂದ ಶುಕಾದಿ ಜ್ಞಾನಿಗಳಿಗೆ ಇರುವ ಧ್ಯಾನಾಗ್ರಹವು ವ್ಯರ್ಥವೇ ಆಗಿದೆ ಎಂದು ಶಂಕೆ ಬಂದರೆ, ಸಮಾಧಾನ ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ आ प्रायणात्तत्रापि हि दृष्टम् ॐ (४-१-१२)**

**ಸೂತ್ರಾರ್ಥ** :- ಮುಮುಕ್ಷುಣಾ = ಮುಮುಕ್ಷುವಾದ ವ್ಯಕ್ತಿಯಿಂದ, **ಆಪ್ರಾಯಣಾತ್** = ಮೋಕ್ಷಪರ್ಯಂತವಾಗಿ, ಧ್ಯಾನಂ ಕರ್ತವ್ಯಮೇವ = ಧ್ಯಾನವು

ಕರ್ತವ್ಯವೇ ಆಗಿದೆ. ಕುತಃ = ಏಕೆ? ಹಿ = ಯಾವ ಕಾರಣ, **ತತ್ರಾಪಿ** = ಮೋಕ್ಷದಲ್ಲಿಯೂ ಸಹ **ದೃಷ್ಟಂ** = ಧ್ಯಾನವು ಶ್ರುತವಾಗಿದೆ ಸ್ಮೃತವೂ ಆಗಿದೆಯೋ, ತಸ್ಮಾತ್ = ಆ ಕಾರಣದಿಂದ ಎಂದರ್ಥ.

## ಸಿದ್ಧಾಂತ

**ಸೂ.ರ.:– एवं च ध्यानस्य ज्ञान इवानन्दातिशयेऽपि प्रधान-साधनत्वात् । स यो ह वै इति (प्र.५-१) श्रुतेः । श्रुणुयादित्यादि-स्मृतेश्च (ब्रह्माण्डे.) । अतो मोक्षपर्यन्तं ध्यानस्य कर्तव्यत्वेन ज्ञानि-नामपि तद्विचित्रफलेन मुक्तौ तारतम्यसत्वेन च ध्यानं कार्यमिति सिद्धम् ॥**

"ಸ ಯೋ ಹ ವೈ ತದ್ಭಗವನ್ಮನುಷ್ಯೇಷು ಪ್ರಾಯಣಾಂತಮೋಂಕಾರ-ಮಭಿಧ್ಯಾಯೀತ" (ಷಟ್ಪ್ರಶ್ನ 5–1)

ಶ್ರುಣುಯಾದ್ಯಾವದಜ್ಞಾನಂ ಮತಿರ್ಯಾವದಯುಕ್ತತಾ ।
ಧ್ಯಾನಂ ಚ ಯಾವದೀಕ್ಷಾ ಸ್ಯಾನ್ನೇಕ್ಷಾ ಕ್ವಚ ನ ಬಾಧ್ಯತೇ ॥ (ಬ್ರಹ್ಮಾಂಡವಚನ)

ಎಂಬುದಾಗಿ ಶ್ರುತಿ-ಸ್ಮೃತಿಗಳು ಇರುವುದರಿಂದ ಧ್ಯಾನವು ಜ್ಞಾನಕ್ಕೆ ಸಾಧನ-ವಾಗಿರುವಂತೆ ಆನಂದಾತಿಶಯಕ್ಕೂ ಪ್ರಧಾನ ಸಾಧನವಾಗಿದೆ. ಆದ್ದರಿಂದ ಧ್ಯಾನವು ಮೋಕ್ಷಪರ್ಯಂತವಾಗಿ ಕರ್ತವ್ಯವಾದ್ದರಿಂದ, ಜ್ಞಾನಿಗಳಿಗೂ ಆ ವಿಚಿತ್ರಫಲ-ತಾರತಮ್ಯಗಳು ಇರುವುದರಿಂದ ಧ್ಯಾನವು ಕಾರ್ಯವಾಗಿದೆ ಎಂದು ಸಿದ್ಧವಾಗುತ್ತದೆ.

**ಆ ಪ್ರಾಯಣಾಧಿಕರಣವು ಮುಗಿಯಿತು.**

ಅಧಿಕರಣ – ೮

# ತದಧಿಗಮಾಧಿಕರಣ

## ಸಂಗತಿ

ಸೂ.ರ.:– अत्र प्रासङ्गिकं समाप्य कर्मक्षयाख्यफलसिद्धिः समर्थ्यते ।

ಪ್ರಾಸಂಗಿಕವಾದ ವಿಚಾರಗಳನ್ನು ಸಮಾಪ್ತಿಗೊಳಿಸಿ ಕರ್ಮಕ್ಷಯರೂಪವಾದ ಫಲಸಿದ್ಧಿಯನ್ನು ಸಮರ್ಥಿಸುತ್ತಾರೆ ಎಂಟನೇ ಈ ತದಧಿಗಮಾಧಿಕರಣದಲ್ಲಿ.

## ಪೂರ್ವಪಕ್ಷ

ಸೂ.ರ.:– ननु न ज्ञानेन मोक्षो नापि द्वेषेण तमः । प्रगापादित-कर्मणां भावात् । न तानि ज्ञानविद्वेषजन्मनि भुज्यन्ते । विभिन्नानेक-शरीरभोग्यफलत्वात् । न च कायव्यूहेन युगपद्भोगः । विभिन्नदेश-कालविभागत्वात् । किं तर्हि क्रमेण भोगः । न च क्रमेण सर्वकर्मणां भोगेन क्षयानन्तरं सदसन्मोक्षावुपपद्येते । बहुकालान्तरितयोर्ज्ञान-विद्वेषयोर्जीर्णधान्यवत्क्षीणशक्तित्वेन मोक्षजनकत्वासम्भवात् । तद्भोगसमये पुनरनन्तकर्मानुष्ठानेन कर्मावसानासम्भवाच्च । न च ज्ञानद्वेषाभ्यामेवाभुक्तानामेव पुण्यपापानां क्षयः । नाभुक्तमिति स्मृति-विरोधात् । न च प्रायश्चित्तेन वा भुक्तकर्मणामेव ज्ञानेन क्षयः सम्भवः । विप्रतिपत्तेः । गृहदाहे दग्धदेहेष्वधिकारवत्कृतपापानामेव द्वादशाब्दादिकर्माधिकारित्वाभिप्रायेण ब्रह्महा द्वादशाब्दमित्यादि-वचनानां प्रवृत्तत्वेन कर्मक्षयार्थमप्रवृत्तत्वात् । अतो ज्ञानद्वेषाभ्यां सदसन्मोक्षासिद्धेरुक्तमयुक्तमिति प्राप्ते सूत्रितम् ॥

ಜ್ಞಾನದಿಂದ ಮೋಕ್ಷವಾಗಲೀ, ದ್ವೇಷದಿಂದ ತಮಸ್ಸಾಗಲೀ ಆಗಲು ಸಾಧ್ಯವಿಲ್ಲ

ಕಾರಣ - ಪ್ರಾಕ್ ಆಪಾದಿತಕರ್ಮಗಳು ಇರುವುದರಿಂದ. ಆ ಆಪಾದಿತಕರ್ಮಗಳು ಜ್ಞಾನ-ವಿದ್ವೇಷಗಳು ಹುಟ್ಟಿದ ಜನ್ಮದಲ್ಲಿಯೇ ಭೋಗಿಸಲ್ಪಡುತ್ತವೆ ಎಂದು ಹೇಳಲು ಬರುವುದಿಲ್ಲ. ಕಾರಣ ವಿಭಿನ್ನ-ಅನೇಕ ಶರೀರಗಳಿಂದ ಭೋಗ್ಯವಾದ ಫಲವುಳ್ಳ-ದ್ದಾದ್ದರಿಂದ.

ಕಾಯವ್ಯೂಹದಿಂದ ಯುಗಪತ್ ಭೋಗ ಮಾಡಲು ಸಾಧ್ಯವಿದೆಯಲ್ಲ? ಎಂದರೆ, ಅದೂ ಸರಿಯಲ್ಲ. ವಿಭಿನ್ನ ದೇಶಕಾಲವಿಭಾಗ ಉಳ್ಳದ್ದಾದ್ದರಿಂದ. ಹಾಗಾದರೆ ಅಂತಹ ಆಪಾದಿತಕರ್ಮಗಳ ಭೋಗ ಹೇಗೆ? ಕ್ರಮವಾಗಿ ಭೋಗವು ಕರ್ತವ್ಯ-ವಾಗಿದೆ. ಆದರೆ ಕ್ರಮವಾಗಿ ಎಲ್ಲ ಕರ್ಮಗಳ ಭೋಗ ಮಾಡಿ ಕ್ಷಯವಾದ ನಂತರ ಮೋಕ್ಷ-ತಮಸ್ಸುಗಳು ಉಪಪನ್ನವಾಗುವುದಿಲ್ಲ. ಬಹುಕಾಲಾಂತರಿತವಾದ ಜ್ಞಾನ-ವಿದ್ವೇಷಗಳು ಜೀರ್ಣಧಾನ್ಯದಂತೆ ಕ್ಷೀಣಶಕ್ತಿಕವಾಗುವುದರಿಂದ ಅವುಗಳು ಮೋಕ್ಷ-ತಮೋಜನಕವಾಗಲು ಸಾಧ್ಯವಿಲ್ಲ.

ಮತ್ತು ಆ ಕರ್ಮಗಳನ್ನು ಭೋಗಿಸುವ ಸಮಯದಲ್ಲಿ ಪುನಃ ಅನಂತಕರ್ಮ-ಗಳನ್ನು ಅನುಷ್ಠಾನ ಮಾಡುವುದರಿಂದ ಕರ್ಮಗಳ ಅವಸಾನವೇ ಸಾಧ್ಯವಾಗುವುದಿಲ್ಲ.

ಜ್ಞಾನ-ವಿದ್ವೇಷಗಳಿಂದಲೇನೇ ಅಭುಕ್ತವಾದ ಪುಣ್ಯ-ಪಾಪಗಳು ಕ್ಷಯವಾಗು-ತ್ತವೆ ಎಂದು ಹೇಳುವುದು ಸರಿಯಲ್ಲ. ಕಾರಣ - ''ನಾಭುಕ್ತಂ ಕ್ಷೀಯತೇ ಕರ್ಮ'' ಎಂಬ ಸ್ಮೃತಿವಿರೋಧ ಬರುವುದರಿಂದ.

ಪ್ರಾಯಶ್ಚಿತ್ತದಿಂದ ಭುಕ್ತವಾದ ಕರ್ಮಗಳದ್ದೇ ಜ್ಞಾನದಿಂದ ಕ್ಷಯವು ಸಂಭವಿಸ-ಬಹುದಲ್ಲ? ಎಂದರೆ, ಅದೂ ಸರಿಯಲ್ಲ. ವಿಪ್ರತಿಪತ್ತಿ ಇರುವುದರಿಂದ. ಯಾವ ರೀತಿಯಾಗಿ ಮನೆ ಸುಟ್ಟಾಗ ಇಷ್ಟಿಯನ್ನು ವಿಧಾನ ಮಾಡುತ್ತಾರೆ. ಆ ಇಷ್ಟಿಯಿಂದ ಜನ್ಯವಾದ ಪುಣ್ಯದಿಂದ ಹೊಸದಾಗಿ ನಿರ್ಮಾಣ ಮಾಡುವ ಮನೆಯಲ್ಲಿ ಸಂವ್ಯವಹಾರವೇ ಪ್ರಯೋಜನ. ಹೊರತು ಹಿಂದೆ ಸುಟ್ಟ ಮನೆಯ ದಾಹನಿವೃತ್ತಿ ಉಂಟಾಗುವುದಿಲ್ಲ.

ಅದರಂತೆಯೇ ''ಬ್ರಹ್ಮಹಾ ದ್ವಾದಶಾಬ್ದಂ ವ್ರತಂ ಚರೇತ್'' ಎಂದು ಬ್ರಹ್ಮಹತ್ಯಾಪ್ರಾಯಶ್ಚಿತ್ತಕ್ಕಾಗಿ ಮಾಡುವ ದ್ವಾದಶಾಬ್ದಿವ್ರತಾನುಷ್ಠಾನದಿಂದ ಜನ್ಯವಾದ ಪುಣ್ಯದಿಂದ ಲೋಕದಲ್ಲಿ ಸಂವ್ಯವಹಾರವೇ (ಜನರೊಡನೆ ಸಂಭಾಷಣ ಮಾಡುವುದು) ಪ್ರಯೋಜನ, ಹೊರತು ಬ್ರಹ್ಮಹತ್ಯಾದೋಷದ ನಿವೃತ್ತಿಯೇ ಆಗುವುದಿಲ್ಲ.

ಹೀಗೆ ವಿಪ್ರತಿಪತ್ತಿ ಇರುವುದರಿಂದ, "ಪ್ರಾಯಶ್ಚಿತ್ತದಿಂದ ಭುಕ್ತವಾದ ಕರ್ಮಗಳದ್ದೇ ಜ್ಞಾನದಿಂದ ಕ್ಷಯ" ಎಂಬ ಶಂಕೆ ಸಮಂಜಸವಲ್ಲ.

ಆದ್ದರಿಂದ ಜ್ಞಾನ-ವಿದ್ವೇಷಗಳಿಂದ ಮೋಕ್ಷ-ತಮಸ್ಸುಗಳು ಅಸಿದ್ಧವಾದ್ದರಿಂದ ಕರ್ಮಕ್ಷಯಾಖ್ಯಫಲಸಿದ್ಧಿ ಹೇಳಿದ್ದು ಯುಕ್ತವಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ तदधिगम उत्तरपूर्वाघयोरश्लेषविनाशौ तद्व्यपदेशात् ॐ**

**(४-१-१३)**

**ಸೂತ್ರಾರ್ಥ :- ತದಧಿಗಮೇ** = ತಸ್ಯ = ಬ್ರಹ್ಮನ ಅಧಿಗಮೇ = ಅಪರೋಕ್ಷ-ಜ್ಞಾನವಾದಾಗ **ಉತ್ತರಪೂರ್ವಾಘಯೋಃ** = ಅಪರೋಕ್ಷಜ್ಞಾನ ಉತ್ತರ - ಪೂರ್ವಕಾಲೀನವಾದ ಪಾಪಗಳಿಗೆ **ಅಶ್ಲೇಷವಿನಾಶೌ** = ಆಶ್ಲೇಷ-ವಿನಾಶಗಳು ಆಗುತ್ತವೆ. ಉತ್ತರಪಾಪದ ಅಶ್ಲೇಷವಾಗುತ್ತದೆ, ಪೂರ್ವಪಾಪದ ವಿನಾಶವಾಗುತ್ತದೆ. ಕುತಃ = ಏಕೆ? **ತದ್ವ್ಯಪದೇಶಾತ್** = ಆ ಅಶ್ಲೇಷ-ವಿನಾಶಗಳನ್ನು "ತದ್ಯಥಾ ಪುಷ್ಕರಪಲಾಶ ಆಪೋ ನ ಶ್ಲಿಷ್ಯಂತೇ" (ಛಾಂ. 4-14-3) ಎಂಬ ಶ್ರುತಿಯಲ್ಲಿ ಹೇಳಿದ್ದರಿಂದ.

## ಸಿದ್ಧಾಂತ

**ಸೂ.ರ.:- एवं च निर्दिष्टश्रुत्या ज्ञानद्वेषाभ्यां सदसन्मोक्षौ भवत इति सिद्धम् ॥**

"ತದ್ಯಥಾ ಪುಷ್ಕರಪಲಾಶ ಆಪೋ ನ ಶ್ಲಿಷ್ಯಂತೇ, ಏವಮೇವಂ ವಿದಿ ಪಾಪಂ ಕರ್ಮ ನ ಶ್ಲಿಷ್ಯತೇ" (ಛಾಂ.ಉ. 4-14-3)

"ತದ್ಯಥೇಷೀಕಾತೂಲಮಗ್ನೌ ಪ್ರೋತಂ ಪ್ರದೂಯೇತೈವಂ ಹೈವಾಸ್ಯ ಸರ್ವೇ ಪಾಪ್ಮಾನಃ ಪ್ರದೂಯಂತೇ" (ಛಾಂ.ಉ.5-24-3)

ಎಂಬುದಾಗಿ ಶ್ರುತಿ ಇರುವುದರಿಂದ ಅಪರೋಕ್ಷಜ್ಞಾನ ಉತ್ತರ-ಪೂರ್ವ ಪಾಪಗಳಿಗೆ ಅಶ್ಲೇಷ-ವಿನಾಶಗಳು ಇರುವುದರಿಂದ (ಉತ್ತರಪಾಪದ ಅಶ್ಲೇಷ ಪೂರ್ವಪಾಪದ ವಿನಾಶ ಇರುವುದರಿಂದ) ಜ್ಞಾನ-ವಿದ್ವೇಷಗಳಿಂದ ಮೋಕ್ಷ-ತಮಸ್ಸುಗಳು ಆಗುತ್ತವೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 14

**ಸೂ.ರ.:– एवं ब्रह्मज्ञानिनो मुक्तिसिद्ध्यर्थं ज्ञानादेवाघविनाशाश्लेषावुक्त्वा तत्समानन्यायत्वाद्भगवद्द्वेषिपुण्यस्यापि मिथ्याज्ञानादेव विनाशाश्लेषौ तमःसिद्ध्यर्थं वदत्सूत्रं पठति ॥**

ಈ ರೀತಿಯಾಗಿ ಬ್ರಹ್ಮಜ್ಞಾನಿಯಾದವನಿಗೆ ಮುಕ್ತಿಸಿದ್ಧಿಗಾಗಿ ಜ್ಞಾನದಿಂದಲೇ ಪಾಪಗಳ ವಿನಾಶ-ಅಶ್ಲೇಷಗಳನ್ನು ಹೇಳಿ, ತತ್ಸಮಾನನ್ಯಾಯದಿಂದ ಭಗವದ್-ದ್ವೇಷಿಗಳಿಗೆ ತಮಃಸಿದ್ಧಿಗಾಗಿ ಭಗವದ್‌ದ್ವೇಷಿಗಳ ಪುಣ್ಯಕ್ಕೂ ಸಹ ಮಿಥ್ಯಾಜ್ಞಾನ-ದಿಂದಲೇ ವಿನಾಶ-ಅಶ್ಲೇಷಗಳನ್ನು ಹೇಳುವ ಸೂತ್ರವನ್ನು ಹೇಳುತ್ತಾರೆ–

**ॐ इतरस्याप्येवमसंश्लेषः पाते तु ॐ (४-१-१४)**

**ಸೂತ್ರಾರ್ಥ :-** (ತು ಶಬ್ದವು ಅನುತ್ಥಾನವಾಚಿಯಾಗಿದೆ.) **ಇತರಸ್ಯ** = ಭಗವದ್‌ಜ್ಞಾನಿಯಿಂದ ಭಿನ್ನನಾದ ದ್ವೇಷಿಗೆ **ಪಾತೇ ತು** = ಅನುತ್ಥಾನ ತಮಃಪಾತ-ವಾಗುತ್ತಿರಲು (ತಮಸ್ಸು ಪ್ರತ್ಯಾಸನ್ನವಾಗುತ್ತಿರಲು) ತದರ್ಥಂ = ತಮಃಸಿದ್ಧಿಗಾಗಿ **ಇತರಸ್ಯ ಅಪಿ** = ಪಾಪದಿಂದ ಭಿನ್ನವಾದ ಪುಣ್ಯಕ್ಕೂ ಸಹ **ಏವಂ** = ಜ್ಞಾನಿಯ ಪಾಪದಂತೆ **ಅಸಂಶ್ಲೇಷಃ** = ಉತ್ತರಪುಣ್ಯದ ಅಸಂಶ್ಲೇಷ, ಪೂರ್ವಪುಣ್ಯದ ವಿನಾಶ ಆಗುತ್ತದೆ.

**ಸೂ.ರ.:– एवं चैवं सुकर्मणश्चापि पततस्तमसि ध्रुवमिति (आग्नेये.) द्वेषिकृतपूर्वोत्तरपुण्ययोर्द्वेषेण विनाशाश्लेषौ भवत इति श्रवणादुक्तं युक्तमिति सिद्धम् ॥**

ಯಥಾಽಶ್ಲೇಷೋ ವಿನಾಶಶ್ಚ ಮುಕ್ತಸ್ಯ ತು ವಿಕರ್ಮಣಃ ।
ಏವಂ ಸುಕರ್ಮಣಶ್ಚಾಪಿ ಪತತಸ್ತಮಸಿ ಧ್ರುವಮ್ ॥

ಎಂಬುದಾಗಿ ಆಗ್ನೇಯವಚನ ಇರುವುದರಿಂದ ದ್ವೇಷಿಯ ಪೂರ್ವ - ಉತ್ತರ ಪುಣ್ಯಗಳಿಗೆ ದ್ವೇಷದಿಂದ ವಿನಾಶ-ಅಶ್ಲೇಷಗಳು ಆಗುತ್ತವೆ ಎಂದು ಶ್ರುತವಾಗು-ತ್ತಿರುವುದರಿಂದ ಭಗವದ್‌ದ್ವೇಷಿಗೆ ತಮಃಸಿದ್ಧಿಯನ್ನು ಹೇಳಿದ್ದು ಯುಕ್ತವಾಗಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 15

**ಸೂ.ರ.:– ननु ब्रह्मज्ञानिद्वेषिणोर्ज्ञानादिनैव पापपुण्यक्षये ज्ञानाद्युदय एव सद्यो मोक्षादिप्रसङ्ग इत्याशङ्कां परिहरत्सूत्रं पठति ॥**

ಬ್ರಹ್ಮಜ್ಞಾನಿ-ದ್ವೇಷಿಗಳಿಗೆ ಜ್ಞಾನ-ದ್ವೇಷಗಳಿಂದಲೇನೇ ಪಾಪ-ಪುಣ್ಯಕ್ಷಯ-ವಾಗುವುದಾದರೆ, ಜ್ಞಾನಾದ್ಯುದಯವಾದಾಗಲೇನೇ ಸದ್ಯಃ ಮೋಕ್ಷಾದಿಪ್ರಸಂಗ ಬರುತ್ತದೆ? ಎಂಬುದಾಗಿ ಶಂಕೆ ಬಂದರೆ, ಅದನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ अनारब्धकार्ये एव तु पूर्वे तदवधेः ॐ (४-१-१५)**

**ಸೂತ್ರಾರ್ಥ :-** ತು ಶಬ್ದವು 'ಚ' ಎಂಬ ಅರ್ಥದಲ್ಲಿದೆ. **ಪೂರ್ವೇ** = ವಿಷ್ಣುದ್ವೇಷ-ಜ್ಞಾನ ಪೂರ್ವಕಾಲೀನವಾದ, **ಅನಾರಬ್ಧಕಾರ್ಯೇ** ಏವ = ಅಪ್ರಾರಬ್ಧವಾದ ಪುಣ್ಯ-ಪಾಪಗಳು ಮಾತ್ರವೇ, ವಿನಶ್ಯತಃ = ನಾಶವಾಗುತ್ತವೆ. ಕುತಃ = ಏಕೆ? **ತದವಧೇಃ ತು (ಚ)** = ಆ ಮೋಕ್ಷಕ್ಕೆ ಪ್ರಾರಬ್ಧಕರ್ಮನಿವೃತ್ತ್ಯವಧಿತ್ವವು ಶ್ರುತವಾಗುತ್ತಿರುವುದರಿಂದ ಹಾಗೂ ಸ್ಮೃತವಾಗುತ್ತಿರುವುದರಿಂದ.

**ಸೂ.ರ.:– एवं च ज्ञानद्वेषोदयानन्तरमेव मोक्षापत्तेरभावात् । अप्रारब्धानामेव प्राचीनपुण्यपापानां विनाशाङ्गीकारेण प्रारब्धभोगाय विलम्बस्य भाव्यत्वादुक्तं युक्तमेवेति सिद्धम् ॥**

ಜ್ಞಾನ-ದ್ವೇಷಗಳ ಉದಯಾನಂತರದಲ್ಲಿಯೇ ಮೋಕ್ಷವಾಗುವ ಪ್ರಸಂಗ ಇಲ್ಲ. ಕಾರಣ ಜ್ಞಾನದ್ವೇಷಗಳಿಂದ ಅಪ್ರಾರಬ್ಧವಾದ ಪ್ರಾಚೀನವಾದ ಪುಣ್ಯ-ಪಾಪಗಳಿಗೇನೇ ವಿನಾಶವನ್ನು ಅಂಗೀಕರಿಸಿದ್ದರಿಂದ, ಪ್ರಾರಬ್ಧಕರ್ಮಭೋಗಕ್ಕಾಗಿ ವಿಲಂಬವು ಭಾವ್ಯವಾದ್ದರಿಂದ, ಜ್ಞಾನದ್ವೇಷಗಳಿಂದ ಮೋಕ್ಷ-ತಮಸ್ಸಿದ್ಧಿಯನ್ನು ಹೇಳಿದ್ದು ಯುಕ್ತವಾಗಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 16

**ಸೂ.ರ.:–** ननु ज्ञानिकृतपूर्वोत्तरपुण्ययोरश्लेषविनाशौ विद्येते न वा । नाद्यः । इष्टविघातिनो ज्ञानस्यापुरुषार्थत्वप्रसङ्गात् । द्वितीये मोक्षाभाव-

**प्रसङ्गः । प्राचीनबहुपुण्यभोगसमये पुनः पुनः पुण्यानुष्ठानसम्भवेनापर्यवसानादिति प्राप्ते समादधत्सूत्रमाह ॥**

ಜ್ಞಾನಿಕೃತವಾದ ಪೂರ್ವ-ಉತ್ತರ ಪುಣ್ಯಗಳಿಗೆ ವಿನಾಶ-ಅಶ್ಲೇಷಗಳು ಇವೆಯೋ? ಇಲ್ಲವೋ? ಇವೆ ಎನ್ನುವುದಾದರೆ (ಪೂರ್ವಪುಣ್ಯದ ವಿನಾಶ, ಉತ್ತರಪುಣ್ಯದ ಅಶ್ಲೇಷವಾಗುವುದಾದರೆ) ಅಂತಹ ಇಷ್ಟವಿಘಾತಿಯಾದ ಜ್ಞಾನವು ಪುರುಷಾರ್ಥವಾಗದೇ ಹೋಗಬೇಕಾದ ಪ್ರಸಂಗ ಬರುತ್ತದೆ. ಇನ್ನು ಪೂರ್ವ-ಉತ್ತರ ಪುಣ್ಯಗಳಿಗೆ ವಿನಾಶ-ಅಶ್ಲೇಷಗಳು ಇಲ್ಲ ಎನ್ನುವುದಾದರೆ, ಮೋಕ್ಷ ಆಗದೇ ಹೋಗಬೇಕಾಗುತ್ತದೆ. ಕಾರಣ ಪ್ರಾಚೀನವಾದ ಬಹುಪುಣ್ಯವನ್ನು ಭೋಗ ಮಾಡುವ ಸಮಯದಲ್ಲಿ ಪುನಃ ಪುನಃ ಪುಣ್ಯಾನುಷ್ಠಾನಸಂಭವ ಇರುವುದರಿಂದ, ಪರ್ಯವಸಾನ ಇಲ್ಲವಾದ್ದರಿಂದ ಎಂಬುದಾಗಿ ಆಕ್ಷೇಪ ಬಂದರೆ, ಅದಕ್ಕೆ ಸಮಾಧಾನ ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ अग्निहोत्रादि तु तत्कार्यायैव तद्दर्शनात् ॐ (४-१-१६)**

**ಸೂತ್ರಾರ್ಥ** :- (ತು ಶಬ್ದವು ವಿಶೇಷದ್ಯೋತಕವಾಗಿದೆ.) **ಅಗ್ನಿಹೋತ್ರಾದಿ** = ಜಿಜ್ಞಾಸು-ಬ್ರಹ್ಮಜ್ಞಾನಿಕೃತವಾದ ಅಗ್ನಿಹೋತ್ರಾದಿ ಅಕಾಮ್ಯಕರ್ಮವು, **ತತ್ಕಾರ್ಯಾಯೈವ** = ಜ್ಞಾನ-ಮೋಕ್ಷ ಉಭಯಕಾರ್ಯಗಳಿಗಾಗಿಯೇ ಆಗುತ್ತದೆ. ಕುತಃ = ಏಕೆ? **ತದ್ದರ್ಶನಾತ್** ="ನ ಹಾಸ್ಯ..." ಎಂಬ ಶ್ರುತಿಯಲ್ಲಿ (ಬೃ.3-4-15) ಹಾಗೆ ಹೇಳಿದ್ದರಿಂದ.

**ಸೂ.ರ.:– एवं चाकाम्यानां पुण्यानामश्लेषविनाशाभावात् । तावता मोक्षस्यासम्भवाभावात् । प्राचीनपुण्यस्य ज्ञानजन्मन्युपयोगात् । उत्तरस्य तु ज्ञानकार्यमोक्षानुप्रवेशादुक्तं योग्यमिति सिद्धम् ॥**

ಅಕಾಮ್ಯವಾದ ಪುಣ್ಯಗಳಿಗೆ ಅಶ್ಲೇಷ-ವಿನಾಶಗಳು ಇಲ್ಲ. ಅಂದಮಾತ್ರಕ್ಕೆ ಮೋಕ್ಷವು ಅಸಂಭಾವಿತವೇನಲ್ಲ. ಜ್ಞಾನಕ್ಕಿಂತಲೂ ಪ್ರಾಚೀನವಾದ ಪುಣ್ಯವು ಜ್ಞಾನಕ್ಕೆ ಸಾಧನವಾಗುತ್ತದೆ. ಇನ್ನು ಜ್ಞಾನೋತ್ತರ ಪುಣ್ಯವು ಜ್ಞಾನಕಾರ್ಯವಾದ ಮೋಕ್ಷದ ಅತಿಶಯಕ್ಕೆ (ಆನಂದಾಭಿವೃದ್ಧಿಗೆ) ಸಾಧನವಾಗುತ್ತದೆ. ಆದ್ದರಿಂದ ಜ್ಞಾನದಿಂದ ಮೋಕ್ಷಸಿದ್ಧಿಯನ್ನು ಹೇಳಿರುವುದು ಯುಕ್ತವಾಗಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 17

**ಸೂ.ರ.:– काम्यपुण्यविषय इति द्वितीयपक्षं पराकुर्वत्सूत्रमुपन्यस्यति ॥**

ನಾಶ–ಅಶ್ಲೇಷಗಳು ಕಾಮ್ಯಪುಣ್ಯವಿಷಯಕವಾಗಿವೆ ಎಂಬ ಎರಡನೇ ಪಕ್ಷವನ್ನು ನಿರಾಕರಿಸುವ ಸೂತ್ರವನ್ನು ಹೇಳುತ್ತಾರೆ -

**ॐ अतोऽन्यदपीत्येकेषामुभयोः ॐ (४-१-१७)**

**ಸೂತ್ರಾರ್ಥ :- ಅತಃ** = ಪ್ರಾರಬ್ಧಕರ್ಮದಿಂದ **ಅನ್ಯತ್ ಅಪಿ** = ಭಿನ್ನವಾದ, ಜ್ಞಾನದ ಪೂರ್ವ–ಉತ್ತರಕಾಲೀನವಾದ ಅಪ್ರಾರಬ್ಧವಾದ ಅನಿಷ್ಟವಾದ ಕಾಮ್ಯ-ಪುಣ್ಯವೂ ಸಹ ವಿನಾಶಾಶ್ಲೇಷೌ ಪ್ರಾಪ್ನೋತಿ = ವಿನಾಶ–ಅಶ್ಲೇಷಗಳನ್ನು ಹೊಂದುತ್ತದೆ. **ಕುತಃ** = ಏಕೆ? ಯತಃ = ಯಾವ ಕಾರಣ **ಇತಿ** = ಈ ಪ್ರಕಾರವಾಗಿ **ಏಕೇಷಾಂ** = ಕೆಲವು ಶಾಖಿಗಳ ಶಾಖೆಗಳಲ್ಲಿ **ಉಭಯೋಃ** ಪರಿತ್ಯಾಗೇನ ಪಾಠೋಽಸ್ತಿ = ಜ್ಞಾನದ ಉತ್ತರ–ಪೂರ್ವಕಾಲೀನವಾದ ಅಪ್ರಾರಬ್ಧವಾದ ಅನಿಭೀಷ್ಟವಾದ ಕಾಮ್ಯಪುಣ್ಯಗಳ ಪರಿತ್ಯಾಗದಿಂದ ಪಾಠವಿದೆಯೋ, ಅತಃ = ಆ ಕಾರಣ ಎಂದರ್ಥ.

**ಸೂ.ರ.:– एवं च मुक्तावनुभवकारणादन्यदप्रारब्धमनभीष्टं काम्यं पुण्यं यत्तस्य विनाशोऽलेपश्च ज्ञानोत्तरं क्रियमाणस्येति तस्य पुत्रा दायमुपयन्तीति (शाट्यायन.) वचनादुक्तं योग्यमिति सिद्धम् ॥**

ಪ್ರಾರಬ್ಧಕರ್ಮದಿಂದ ಭಿನ್ನವಾದ, ಜ್ಞಾನಪೂರ್ವಕಾಲೀನವಾದ, ಅಪ್ರಾರಬ್ಧವಾದ, ಅನಭೀಷ್ಟವಾದ ಕಾಮ್ಯಪುಣ್ಯವೇನಿದೆಯೋ ಅದಕ್ಕೆ ನಾಶವಿದೆ. ಮತ್ತು ಜ್ಞಾನೋತ್ತರದಲ್ಲಿ ಕ್ರಿಯಮಾಣವಾದದ್ದರ ಅಲೇಪವಾಗುತ್ತದೆ.

''ತಸ್ಯ ಪುತ್ರಾ ದಾಯಮುಪಯಂತಿ ಸುಹೃದಃ ಸಾಧುಕೃತ್ಯಾಂ ದ್ವಿಷಂತಃ ಪಾಪಕೃತ್ಯಾಂ'' (ಶಾಟ್ಯಾಯನಶಾಖಾ)

ಎಂದು ವಚನವಿರುವುದರಿಂದ. ಆದ್ದರಿಂದ ನಾವು ಹೇಳಿದ್ದು ಯೋಗ್ಯವಾಗಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 18

**ಸೂ.ರ.:– ननु ज्ञानिकृतोत्तरकालीनाकाम्यपुण्यस्य कथं मोक्षानुप्रवेशः । कर्मणो नाशशिरस्काल्पफलत्वादित्याशङ्कां परिहरत्सूत्रं पठति ॥**

ಕರ್ಮವು ನಾಶಶಿರಸ್ಕ ಅಲ್ಪಫಲ ಉಳ್ಳದ್ದಾದ್ದರಿಂದ ಜ್ಞಾನಿಕೃತ ಉತ್ತರಕಾಲೀನವಾದ ಅಕಾಮ್ಯಪುಣ್ಯಕ್ಕೆ ಮೋಕ್ಷಾನುಪ್ರವೇಶ ಹೇಗೆ? ಎಂದು ಶಂಕೆ ಬಂದರೆ, ಪರಿಹಾರಕ್ಕಾಗಿ ಸೂತ್ರ ಹೇಳುತ್ತಾರೆ -

### ॐ यदेव विद्ययेति हि ॐ (४-१-१८)

**ಸೂತ್ರಾರ್ಥ** :- ಜ್ಞಾನಿಕೃತಂ ಅಲ್ಪಮಪಿ ಪುಣ್ಯಂ ಅಕ್ಷಯಫಲಂ ಭವತಿ = ಜ್ಞಾನಿಕೃತವಾದ ಅಲ್ಪವಾದ ಪುಣ್ಯವೂ ಸಹ ಅಕ್ಷಯಫಲ ಉಳ್ಳದ್ದಾಗುತ್ತದೆ. ಕುತಃ = ಏಕೆ? ಹಿ = ಯಾವ ಕಾರಣ **ಯದೇವ ವಿದ್ಯಯಾ** ಇತಿ ಶ್ರುತಿಃ (ಛಾಂ. 1-1-10) ಅಸ್ತಿ ಅತಃ = 'ಯದೇವ ವಿದ್ಯಯಾ ಕರೋತಿ' ಎಂಬುದಾಗಿ ಶ್ರುತಿಯು ಇದೆಯೋ ಆ ಕಾರಣ ಎಂದರ್ಥ.

**ಸೂ.ರ.:– एवं च ज्ञानिकृतस्यानन्तफलप्रतिपादकनिर्दिष्टश्रुतिसद्भावात् । तथा च ज्ञानिकृतकर्मणो मोक्षानुप्रवेश इति सिद्धम् ॥**

"ಯದೇವ ವಿದ್ಯಯಾ ಕರೋತಿ ಶ್ರದ್ಧಯೋಪನಿಷದಾ ತದೇವ ವೀರ್ಯವತ್ತರಂ ಭವತಿ" (ಛಾಂ. 1-1-10) ಎಂದು ಜ್ಞಾನಿಕೃತವಾದ ಅಲ್ಪಪುಣ್ಯಕ್ಕೆ ಅನಂತಫಲವನ್ನು ಪ್ರತಿಪಾದನೆ ಮಾಡುವ ನಿರ್ದಿಷ್ಟಶ್ರುತಿ ಇರುವುದರಿಂದ, ಜ್ಞಾನಿಕೃತವಾದ ಅಲ್ಪಕರ್ಮಕ್ಕೆ ಮೋಕ್ಷಾನುಪ್ರವೇಶ ಇದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 19

**ಸೂ.ರ.:– नन्वेवमपि द्वेषिज्ञानिनोर्न मोक्षतमसी सिद्ध्यतः । प्रारब्धप्रतिबन्धसद्भावादिति प्राप्ते सूत्रं पठति ॥**

ಆದರೂ ಸಹ ದ್ವೇಷಿ-ಜ್ಞಾನಿಗಳಿಗೆ ತಮಸ್ಸು-ಮೋಕ್ಷಗಳು ಸಿದ್ಧಿಸುವುದಿಲ್ಲ. ಕಾರಣ - ಪ್ರಾರಬ್ಧಪ್ರತಿಬಂಧ ಇರುವುದರಿಂದ ಎಂಬುದಾಗಿ ಆಕ್ಷೇಪ ಬಂದರೆ, ಪರಿಹಾರಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

## ॐ भोगेन त्वितरे क्षपयित्वाऽथ सम्पत्स्यते ॐ (४-१-१९)

**ಸೂತ್ರಾರ್ಥ** :- ಸೂತ್ರಗತವಾದ **ತು** ಶಬ್ದವು ಜ್ಞಾನಿಯಾದವನಿಗೆ ಪ್ರಾರಬ್ಧ-ಭೋಗೋಪಮರ್ದರೂಪವಿಶೇಷದ್ಯೋತಕವಾಗಿದೆ. ಜ್ಞಾನೀ = ಜ್ಞಾನಿಯಾದವನು **ಭೋಗೇನ** = ಭೋಗ ಮಾಡುವುದರಿಂದ ಇತರೇ = ಪ್ರಾರಬ್ಧಪುಣ್ಯಪಾಪಗಳನ್ನು **ಕ್ಷಪಯಿತ್ವಾ** = ನಾಶಪಡಿಸಿಕೊಂಡು, **ಅಥ** = ಅನಂತರದಲ್ಲಿ ನಿಯಮೇನ **ಸಂಪತ್ಸ್ಯತೇ** = ನಿಯಮೇನ ಬ್ರಹ್ಮನನ್ನು ಹೊಂದುತ್ತಾನೆ. ಏವಂ = ಇದೇ ರೀತಿಯಾಗಿ ಬ್ರಹ್ಮದ್ವಿಟ್ = ಬ್ರಹ್ಮದ್ವೇಷಿಯಾದವನು ಭೋಗ ಮಾಡುವುದರಿಂದ ಪ್ರಾರಬ್ಧ ಪುಣ್ಯ-ಪಾಪಗಳನ್ನು ನಾಶಪಡಿಸಿಕೊಂಡು ತಮಃ ಪ್ರಾಪ್ನೋತಿ = ತಮಸ್ಸನ್ನು ಹೊಂದುತ್ತಾನೆ ಎಂದರ್ಥ.

**ಸೂ.ರ.:– एवं चोभावपि ज्ञानिद्वेषिणौ भोगेन प्रारब्धकर्मणी क्षपयित्वा ब्रह्मतमसी प्राप्नुवतः । आरब्धेति स्मृतेः (ना.तं.) । अत उक्तं युक्तमिति सिद्धम् ॥**

ಆರಬ್ಧಪುಣ್ಯಪಾಪಸ್ಯ ಭೇಗೇನ ಕ್ಷಪಣಾದನು ।
ಪ್ರಾಪ್ನೋತ್ಯೇವ ತಮೋ ಘೋರಂ ಬ್ರಹ್ಮ ವಾ ನಾತ್ರ ಸಂಶಯಃ ॥
ಬ್ರಹ್ಮಣಾಂ ಶತಕಾಲಾತ್ತು ಪೂರ್ವಮಾರಬ್ಧಸಂಕ್ಷಯಃ ।
ನಿಯಮೇನ ಭವೇನ್ನಾತ್ರ ಕಾರ್ಯಾ ಕಾಚಿದ್ವಿಚಾರಣಾ ॥ (ನಾರಾಯಣತಂತ್ರ)

ಎಂಬುದಾಗಿ ಸ್ಮೃತಿ ಇರುವುದರಿಂದ ಜ್ಞಾನಿ-ದ್ವೇಷಿ ಇಬ್ಬರೂ ಸಹ ಭೋಗದಿಂದ ಪ್ರಾರಬ್ಧಕರ್ಮವನ್ನು ಕಳೆದುಕೊಂಡು (ನಾಶಪಡಿಸಿಕೊಂಡು) ಬ್ರಹ್ಮನನ್ನು - ತಮಸ್ಸನ್ನು ಹೊಂದುತ್ತಾರೆ. ಆದ್ದರಿಂದ ಜ್ಞಾನದಿಂದ ಮೋಕ್ಷಸಿದ್ಧಿ ದ್ವೇಷದಿಂದ ತಮಃಸಿದ್ಧಿಯನ್ನು ಹೇಳಿದ್ದು ಯುಕ್ತವಾಗಿದೆ ಎಂದು ಸಿದ್ಧವಾಗುತ್ತದೆ.

**ತದಧಿಗಮಾಧಿಕರಣವು ಮುಗಿಯಿತು.**

**ಇಲ್ಲಿಗೆ ಸೂತ್ರಾರ್ಥರತ್ನಾವಲೀ ವ್ಯಾಖ್ಯಾನಸಹಿತವಾದ ಬ್ರಹ್ಮಸೂತ್ರಗಳಲ್ಲಿ ನಾಲ್ಕನೇ ಅಧ್ಯಾಯದ ಮೊದಲನೇ ಪಾದವು ಮುಗಿಯಿತು.**

# चतुर्थाध्यायस्य द्वितीयः पादः

## ಪಾದಸಂಗತಿ

ಸೂ.ರ.:- देवानां मोक्ष उत्क्रान्तिश्चास्मिन्पादे उच्यते ।

ದೇವತೆಗಳ ಮೋಕ್ಷ ಹಾಗೂ ಇತರಜ್ಞಾನಿಗಳ ಉತ್ಕ್ರಾಂತಿಯನ್ನು ಹೇಳುತ್ತಾರೆ ಈ ಎರಡನೇ ಪಾದದಲ್ಲಿ.

*ಅಧಿಕರಣ – 1*

## ವಾಙ್ಮನೋಽಧಿಕರಣ

### ಅಧಿಕರಣಸಂಗತಿ

ಸೂ.ರ.:- अत्र वाचो मनसि लयः समर्थ्यते ।

ವಾಕ್‌ಗೆ ಮನಸ್ಸಿನಲ್ಲಿ (ವಾಗಭಿಮಾನಿನಿಯಾದ ಉಮೆಗೆ ಮನೋಭಿಮಾನಿಗಳಾದ ರುದ್ರದೇವರಲ್ಲಿ) ಲಯವನ್ನು ಸಮರ್ಥಿಸುತ್ತಾರೆ ಮೊದಲನೇ ಈ ವಾಙ್ ಮನೋಽಧಿಕರಣದಲ್ಲಿ.

ವಾಕ್ ಮನಸ್ಸಿನಲ್ಲಿ ಲೀನವಾಗುತ್ತದೆಯೋ? ಇಲ್ಲವೋ? ಎಂದು ಸಂದೇಹ.

### ಪೂರ್ವಪಕ್ಷ

ಸೂ.ರ.:- ननु न वाङ्मनसि लीयते । उभयोः समत्वात् । नियामकाभावात् । मनः पूर्वरूपमिति मनसः प्राधान्यमिव वाक् पूर्वरूपमिति वाचोऽपि प्राधान्यश्रवणात् । अतो वाचो मनसि लयाभावेन मोक्षाभावादनियम इत्युक्तव्याघात इति प्राप्ते सूत्रितम् ॥

ವಾಕ್ ಮನಸ್ಸಿನಲ್ಲಿ ಲೀನವಾಗುವುದಿಲ್ಲ. ಕಾರಣ ವಾಕ್-ಮನಸ್ಸು ಎರಡೂ ಸಮವಾದ್ದರಿಂದ. ಎರಡೂ ಸಮವಾದರೂ ಸಹ ವಾಕ್ ಮನಸ್ಸಿನಲ್ಲಿ ಲೀನವಾಗುತ್ತದೆ ಎನ್ನುವುದಕ್ಕೆ ನಿಯಾಮಕ ಯಾವುದೂ ಇಲ್ಲವಾದ್ದರಿಂದ. "ಮನಃ ಪೂರ್ವರೂಪಂ" ಎಂಬುದಾಗಿ ಮನಸ್ಸಿಗೆ ಪ್ರಾಧಾನ್ಯ ಶ್ರುತವಾದಂತೆ "ವಾಕ್ ಪೂರ್ವರೂಪಂ"

ಎಂಬುದಾಗಿ ವಾಕ್‌ಗೂ ಪ್ರಾಧಾನ್ಯ ಶ್ರುತವಾಗುತ್ತಿರುವುದರಿಂದ. ಆದ್ದರಿಂದ ವಾಕ್‌ಗೆ ಮನಸ್ಸಿನಲ್ಲಿ ಲಯ ಇಲ್ಲವಾದ್ದರಿಂದ ಮೋಕ್ಷವಿಲ್ಲವಾದ್ದರಿಂದ 'ಅನಿಯಮಃ' ಎಂದು ಹೇಳಿದ್ದರ ವ್ಯಾಘಾತ ಬರುತ್ತದೆ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

## ॐ वाङ्मनसि दर्शनाच्छब्दाच्च ॐ (४-२-१)

**ಸೂತ್ರಾರ್ಥ :- ವಾಕ್** = ವಾಗಭಿಮಾನಿನಿಯಾದ ಉಮಾ ಹಾಗೂ ಉಮಾಪದಗೃಹೀತರಾದ ವಾರುಣೀ ಸೌಪರ್ಣೀ ಇಬ್ಬರು **ಮನಸಿ** = ಮನೋಭಿ-ಮಾನಿಗಳಾದ ರುದ್ರದೇವರಲ್ಲಿ ಹಾಗೂ ರುದ್ರಶಬ್ದಿತ ಶೇಷಗರುಡರಲ್ಲಿ ವಿಲೀಯತೇ = ಲೀನವಾಗುತ್ತಾರೆ. ಕುತಃ = ಏಕೆ? ವಾಚೋ ಮನೋಽಧೀನತ್ವಾತ್ = ವಾಕ್ ಮನೋಽಧೀನವಾದ್ದರಿಂದ. ತತ್ ಕಥಂ = ಅದು ಹೇಗೆ ತಿಳಿಯುತ್ತದೆ ? **ದರ್ಶನಾತ್** = ವಾಕ್ ಮನೋಽಧೀನವಾದದ್ದು ಪ್ರತ್ಯಕ್ಷಸಿದ್ಧವಾದ್ದರಿಂದ. **ಶಬ್ದಾಚ್ಚ** = ಮತ್ತು ಹಾಗೆ ಶ್ರುತಿಯೂ ಇರುವುದರಿಂದ.

### ಸಿದ್ಧಾಂತ

**ಸೂ.ರ.:– एवं च तस्येति (छां. ६-१५-१) शब्दात् । प्रत्यक्षत एव वाचो मनोवशत्वदर्शनेन तत्र तल्लयस्य सम्भावितत्वात् । अत्र पूर्वोत्तर-वर्णदेवतात्वविषये गुणप्रधानभावे च मुनिमतविवाद एवोच्यते न स्वयं किञ्चिदभिधीयत इति वाङ्मनसयोः साम्याभावेनोभयोर्ग्राह्यत्वात् । विशेषानुक्तेः प्राधान्यविषये तु ऋषिपुत्रमतस्यैव ग्राह्यत्वात् । मनसेति युक्त्या मनःपूर्वकत्वस्य विशेषश्रवणात् । प्रत्यक्षानुसारित्वाच्च । अत एव ज्ञानिनां मोक्षनियमो युक्त इति सिद्धम् ॥**

"ತಸ್ಯ ಯಾವನ್ನ ವಾಙ್ಮನಸಿ ಸಂಪದ್ಯತೇ" (ಛಾಂ.ಉ. 6-15-1) ಎಂಬುದಾಗಿ ಶ್ರುತಿ ಇರುವುದರಿಂದ, ಪ್ರತ್ಯಕ್ಷವಾಗಿಯೂ ವಾಕ್‌ಗೆ ಮನೋವಶತ್ವ ಕಂಡಿದ್ದರಿಂದ, ಮನಸ್ಸಿನಲ್ಲಿ ವಾಕ್‌ನ ಲಯವು ಸಂಭಾವಿತವಾಗಿದೆ.

"ಮನಃ ಪೂರ್ವರೂಪಂ" ಹಾಗೂ "ವಾಕ್ ಪೂರ್ವರೂಪಂ" ಎಂಬುದಾಗಿ

ವ್ಯಾಮಿಶ್ರೋಕ್ತಿ ಇರುವುದರಿಂದ ಮನಸ್ಸಿಗೆ ಪ್ರಾಧಾನ್ಯನಿಶ್ಚಯವಾಗುವುದಿಲ್ಲ ಎಂದು ಶಂಕಿಸುವುದು ಸರಿಯಲ್ಲ. ಪೂರ್ವೋತ್ತರ ವರ್ಣದೇವತಾತ್ವ ವಿಷಯದಲ್ಲಿ ಮತ್ತು ಗುಣಪ್ರಧಾನಭಾವ ವಿಷಯದಲ್ಲಿ ಮುನಿಮತವಿವಾದವೇ ಹೇಳಲ್ಪಡುತ್ತದೆ ಹೊರತು ಸ್ವಯಂ ಯಾವುದನ್ನೂ ಹೇಳುವುದಿಲ್ಲ. ಹಾಗಾಗಿ ವಾಕ್-ಮನಸ್ಸುಗಳಲ್ಲಿ ಸಾಮ್ಯ ಇಲ್ಲವಾದ್ದರಿಂದ ಉಭಯವೂ ಗ್ರಾಹ್ಯವಾಗಿದೆ.

ಪ್ರಾಧಾನ್ಯವಿಷಯದಲ್ಲಿಯಾದರೂ ಸಾಮ್ಯವೇ ಇಲ್ಲ. ಋಷಿಪುತ್ರಮತವೇ ಗ್ರಾಹ್ಯವಾಗಿದ್ದರಿಂದ, "ಮನಸಾ ವಾ ಅಗ್ರೇ ಸಂಕಲ್ಪಯತ್ಯಥ ವಾಚಾ ವ್ಯಾಹರತಿ" ಎಂಬ ಯುಕ್ತಿಯಿಂದ ಮನಃಪೂರ್ವಕತ್ವವು ವಿಶೇಷವಾಗಿ ಶ್ರುತವಾಗುತ್ತಿರು-ವುದರಿಂದ, ಪ್ರತ್ಯಕ್ಷಾನುಸಾರಿಯೂ ಆಗಿದ್ದರಿಂದ.

ಆದ್ದರಿಂದ ಜ್ಞಾನಿಗಳಿಗೆ ಮೋಕ್ಷನಿಯಮ ಹೇಳಿದ್ದು ಯುಕ್ತವಾಗಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 2

**ಸೂ.ರ.:- ननु वाचो लयनिर्णयेऽपि न सर्वदेवानां मोक्षः । लयानिश्चयादित्याशङ्कां समादधत्सूत्रमाह ॥**

ವಾಕ್‌ಗೆ (ಮನಸ್ಸಿನಲ್ಲಿ) ಲಯನಿರ್ಣಯವಾದರೂ ಸಹ ಸರ್ವದೇವತೆಗಳಿಗೂ ಮೋಕ್ಷ ಸಾಧ್ಯವಿಲ್ಲ. ಲಯನಿಶ್ಚಯವಾಗದಿರುವುದರಿಂದ ಎಂಬ ಶಂಕೆಗೆ ಸಮಾಧಾನ ಹೇಳಲು ಸೂತ್ರ ಹೇಳುತ್ತಾರೆ -

### ॐ अत एव च सर्वाण्यनु ॐ (४-२-२)

**ಸೂತ್ರಾರ್ಥ** :- ಚ ಶಬ್ದವು ಅಪ್ಯರ್ಥಕವಾಗಿದೆ. **ಸರ್ವಾಣಿ ಚ** = ಎಲ್ಲ ದೇವತೆಗಳೂ ಸಹ **ಅನು** = ಯಥಾऽನುಕೂಲವಾಗಿ ತಮ್ಮ ತಮ್ಮ ಯೋಗ್ಯರಾದ ಉತ್ತಮ ದೇವತೆಗಳಲ್ಲಿ ಲಯ ಹೊಂದುತ್ತಾರೆ. ಕುತಃ = ಏಕೆ ? **ಅತ ಏವ** = 'ಅಗ್ನೌ' (ಗೌಪವನ) ಎಂದು ಶ್ರುತಿ ಇರುವುದರಿಂದಲೇ.

**ಸೂ.ರ.:- एवं च निर्दिष्टश्रुत्या यथाऽनुकूलं सर्वदेवानां लय-निर्णयेन युक्त एव ज्ञानिनां मोक्षनियम इति सिद्धम् ॥**

"ಅಗ್ನೌ ಸರ್ವೇ ದೇವಾ ವಿಲೀಯಂತೇಽಗ್ನಿರಿಂದ್ರೇ ಇಂದ್ರ ಉಮಾಯಾ-
ಮುಮಾ ರುದ್ರೇ ವಿಲೀಯತೇ ಏವಮನ್ಯಾನಿ ದೈವತಾನಿ ಯಥಾಽನುಕೂಲಮ್"

ಎಂಬ ನಿರ್ದಿಷ್ಟಶ್ರುತಿ ಇರುವುದರಿಂದ ಯಥಾನುಕೂಲವಾಗಿ ಎಲ್ಲ ದೇವತೆ-
ಗಳಿಗೂ ಲಯನಿರ್ಣಯವಾಗುವುದರಿಂದ ಜ್ಞಾನಿಗಳಿಗೆ ಮೋಕ್ಷನಿಯಮವು
ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ವಾಙ್ಮನೋಽಧಿಕರಣವು ಮುಗಿಯಿತು.

ಅಧಿಕರಣ – 2

# ಮನಃಪ್ರಾಣಾಧಿಕರಣ

## ಸಂಗತಿ

**ಸೂ.ರ.:– अत्र मनसः प्राणे लयः समर्थ्यते ।**

ಮನಸ್ಸಿಗೆ (ಮನೋಭಿಮಾನಿಗಳಾದ ರುದ್ರದೇವರಿಗೆ) ಪ್ರಾಣನಲ್ಲಿ ಲಯವನ್ನು ಸಮರ್ಥಿಸುತ್ತಾರೆ ಎರಡನೇ ಈ ಮನಃಪ್ರಾಣಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु न प्राणे मनो लीयते । तत्समत्वात् । दृश्यते हि प्राण इव मनसोऽपि प्रवर्तकत्वम् । न च मनसः प्राणोत्पन्नत्वात्तत्र लयः । तस्य भगवदुत्पन्नत्वश्रवणात् । ततश्च भगवति लयस्य प्रतिवादिनाऽनङ्गीकारात् । अङ्गीकृतस्य प्राणे लयस्यानुपपन्नत्वात् इति प्राप्ते सूत्रं पठति ॥**

ಮನಸ್ಸು ಪ್ರಾಣನಲ್ಲಿ ಲಯ ಹೊಂದುವುದಿಲ್ಲ. ಕಾರಣ ಮನಸ್ಸು ಪ್ರಾಣನಿಗೆ ಸಮವಾದ್ದರಿಂದ. ಪ್ರಾಣವು ಸರ್ವಪ್ರವೃತ್ತಿಹೇತುವಾಗಿದೆ. ಮನಸ್ಸೂ ಸಹ ಪ್ರತ್ಯಕ್ಷ-ವಾಗಿಯೇ ಅನ್ವಯ-ವ್ಯತಿರೇಕಗಳಿಂದ ಸರ್ವಪ್ರವೃತ್ತಿಕಾರಣವಾಗಿ ದೃಶ್ಯವಾಗುತ್ತದೆ.

ಮನಸ್ಸು ಪ್ರಾಣನಿಂದ ಉತ್ಪನ್ನವಾದ್ದರಿಂದ ಮನಸ್ಸಿಗೆ ಪ್ರಾಣನಲ್ಲಿಯೇ ಲಯ ಹೇಳಬೇಕು ಎಂದು ಶಂಕಿಸುವುದು ಸರಿಯಲ್ಲ. ಕಾರಣ "ತತ್ಪ್ರಾಕ್ ಶ್ರುತೇಶ್ಚ" ಎಂಬುದಾಗಿ ಮನಸ್ಸು ಭಗವಂತನಿಂದ ಉತ್ಪನ್ನವಾಗಿದೆ ಎಂದು ಶ್ರುತವಾಗುತ್ತಿರು-ವುದರಿಂದ.

ಆದ್ದರಿಂದ ಮನಸ್ಸಿಗೆ ಭಗವಂತನಲ್ಲಿ ಲಯವನ್ನು ಪ್ರತಿವಾದಿಯು ಅಂಗೀ-ಕರಿಸಿಲ್ಲ. ಇನ್ನು ಮನಸ್ಸಿಗೆ ಪ್ರಾಣನಲ್ಲಿ ಏನು ಲಯವನ್ನು ಅಂಗೀಕರಿಸಿದ್ದಾರೆ ಅದು ಅನುಪಪನ್ನವಾಗಿದೆ (ಎರಡೂ ಸಮವಾದ್ದರಿಂದ ಲಯವು ಅನುಪಪನ್ನ) ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

## ॐ तन्मनः प्राण उत्तरात् ॐ (४-२-३)

**ಸೂತ್ರಾರ್ಥ** :- **ತನ್ಮನಃ** = ಪೂರ್ವೋಕ್ತ ಮನೋಭಿಮಾನಿಗಳಾದ ರುದ್ರ-ದೇವರು, ಶೇಷದೇವರು ಹಾಗೂ ಗರುಡದೇವರು **ಪ್ರಾಣೇ** = ಪ್ರಾಣಶಬ್ದವಾಚ್ಯರಾದ ಚತುರ್ಮುಖ ಬ್ರಹ್ಮದೇವರಲ್ಲಿ ಲೀಯತೇ = ಲಯ ಹೊಂದುತ್ತಾರೆ. ಕುತಃ = ಏಕೆ? **ಉತ್ತರಾತ್** = "ಮನಃ ಪ್ರಾಣೇ" (ಛಾಂ. 6-15-1) ಎಂಬುದಾಗಿ ಉತ್ತರವಾಕ್ಯ ಇರುವುದರಿಂದ.

### ಸಿದ್ಧಾಂತ

**ಸೂ.ರ.:- एवं च मनः प्राण इति श्रवणात् । न च समत्वात्तत्र लयोऽनुपपन्नः । मन उत्क्रामदित्यादिना नीचोच्चभावश्रवणात् । न च तदनुत्पन्नत्वात्तत्र लयासम्भवः । वायोरिति (कौण्डिन्य.) रुद्रस्य तस्मादुत्पत्तिश्रवणेन मनःप्राणयोः साम्याभावात् । प्राणद्वारा भगव-दुत्पन्नत्वार्थकत्वेन भगवत उत्पन्नत्वोक्तिविरोधाभावात् । ततश्च मनः प्राणे लीयत इति सिद्धम् ॥**

"ಮನಃ ಪ್ರಾಣೇ" (ಛಾಂ.ಉ. 6-15-1) ಎಂಬುದಾಗಿ ಉತ್ತರವಾಕ್ಯವು ಶ್ರುತವಾಗುತ್ತಿರುವುದರಿಂದ ಮನಸ್ಸು ಪ್ರಾಣನಲ್ಲಿ ಲಯ ಹೊಂದುತ್ತದೆ.

ಪ್ರಾಣನಂತೆ ಮನಸ್ಸೂ ಪ್ರವೃತ್ತಿಹೇತುವಾದ್ದರಿಂದ, ಸಮವಾದ್ದರಿಂದ ಲಯ ಉಪಪನ್ನವಾಗುವುದಿಲ್ಲವಲ್ಲ ? ಎಂದು ಶಂಕಿಸುವುದು ಸರಿಯಲ್ಲ. "ಮನ ಉತ್ಕ್ರಾಮತ್" ಇತ್ಯಾದಿಯಾಗಿ ನೀಚೋಚ್ಚಭಾವ ಶ್ರುತವಾಗುತ್ತಿರುವುದರಿಂದ.

ಮನಸ್ಸು ಪ್ರಾಣನಿಂದ ಉತ್ಪನ್ನವಾಗದಿರುವುದರಿಂದ ಪ್ರಾಣನಲ್ಲಿ ಲಯ ಸಾಧ್ಯವಿಲ್ಲ ಎಂದು ಶಂಕಿಸುವುದು ಸರಿಯಲ್ಲ.

"ವಾಯೋರ್ವಾವ ರುದ್ರ ಉದೇತಿ ವಾಯೌ ವಿಲೀಯತೇ ತಸ್ಮಾದಾಹು-ರ್ವಾಯುರ್ದೇವಾನಾಂ ಶ್ರೇಷ್ಠಃ" (ಕೌಂಡಿನ್ಯಶ್ರುತಿ)

ಎಂಬುದಾಗಿ ಮನೋಭಿಮಾನಿಯಾದ ರುದ್ರನಿಗೆ ಪ್ರಾಣನಿಂದ ಉತ್ಪತ್ತಿಯು ಶ್ರುತವಾಗುತ್ತಿರುವುದರಿಂದ ಮನಸ್ಸು-ಪ್ರಾಣಗಳಲ್ಲಿ ಸಾಮ್ಯವಿಲ್ಲ. ಹಾಗಾದರೆ

ಭಗವಂತನಿಂದ ಉತ್ಪನ್ನತ್ವೋಕ್ತಿವಿರೋಧ ಬರುವುದಲ್ಲ? ಎಂದರೆ, ಅದೂ ಸರಿಯಲ್ಲ. ಪ್ರಾಣದ್ವಾರಾ ಭಗವಂತನಿಂದ ಉತ್ಪನ್ನ ಎಂದು ಅರ್ಥವಾದ್ದರಿಂದ ಯಾವ ಉಕ್ತಿವಿರೋಧವೂ ಬರುವುದಿಲ್ಲ.

ಆದ್ದರಿಂದ ಮನಸ್ಸು ಪ್ರಾಣನಲ್ಲಿ ಲಯ ಹೊಂದುತ್ತದೆ ಎಂದು ಸಿದ್ಧವಾಗುತ್ತದೆ.

**ಮನಃಪ್ರಾಣಾಧಿಕರಣವು ಮುಗಿಯಿತು.**

*ಅಧಿಕರಣ – 3*

# ಅಧ್ಯಕ್ಷಾಧಿಕರಣ

## ಸಂಗತಿ

**ಸೂ.ರ.:– अत्र प्राणशब्दोक्तचतुर्मुखस्येश्वरे लयः समर्थ्यते ।**

ಪ್ರಾಣಶಬ್ದವಾಚ್ಯನಾದ ಚತುರ್ಮುಖನಿಗೆ ಈಶ್ವರನಲ್ಲಿ ಲಯವನ್ನು ಸಮರ್ಥಿಸುತ್ತಾರೆ ಮೂರನೇ ಈ ಅಧ್ಯಕ್ಷಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु प्राणो न परमात्मनि लीयते । तस्यातदधीनत्वात् । तस्यानन्याधीनत्वे बहुश्रुतिसद्भावेन चक्षुरादिवदित्यादौ तदधीनत्वमुक्तमिति समाधानायोगात् । बहुबाधविरुद्धत्वेन वैपरीत्यस्यैवोचितत्वात् । महान्तमिति तस्य लयाभावोक्तेश्च । अतः प्राणस्य लयाभावान्न कस्यापि मोक्ष इति प्राप्ते सूत्रमाह ॥**

ಪ್ರಾಣನು (ಪ್ರಾಣಶಬ್ದವಾಚ್ಯನಾದ ಚತುರ್ಮುಖನು) ಪರಮಾತ್ಮನಲ್ಲಿ ಲಯ ಹೊಂದುವುದಿಲ್ಲ, ಕಾರಣ - ಪ್ರಾಣನು ಪರಮಾತ್ಮನ ಅಧೀನನಲ್ಲನಾದ್ದರಿಂದ. ಪ್ರಾಣನು ಪರಮಾತ್ಮನ ಅಧೀನನಲ್ಲ ಎಂಬ ವಿಷಯದಲ್ಲಿ ಬಹುಶ್ರುತಿ ಇರುವುದರಿಂದ "ಚಕ್ಷುರಾದಿವತ್ (2-4-11) ಇತ್ಯಾದಿಗಳಲ್ಲಿ ತದಧೀನತ್ವ ಹೇಳಿದೆ' ಎಂದು ಸಮಾಧಾನ ಹೇಳಲು ಯುಕ್ತವಾಗುವುದಿಲ್ಲ, ತದಧೀನತ್ವವು ಬಹುಬಾಧವಿರುದ್ಧವಾದ್ದರಿಂದ ವೈಪರೀತ್ಯವೇ ಉಚಿತವಾಗಿದೆ.

"ಮಹಾಂತಮಸ್ಯ ಮಹಿಮಾನಮಾಹುರನದ್ಯಮಾನೋ ಯದನನ್ನಮತ್ತಿ"

ಎಂಬುದಾಗಿ ಪ್ರಾಣನಿಗೆ ಲಯಾಭಾವವನ್ನು ಹೇಳಿದ್ದರಿಂದಲೂ ಸಹ. ಆದ್ದರಿಂದ ಪ್ರಾಣನಿಗೆ ಲಯವಿಲ್ಲದ್ದರಿಂದ ಯಾರಿಗೂ ಮೋಕ್ಷ ಸಾಧ್ಯವಿಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

## ॐ सोऽध्यक्षे तदुपगमादिभ्यः ॐ (४-२-४)

**ಸೂತ್ರಾರ್ಥ** :- **ಸಃ** = ಚತುರ್ಮುಖನು **ಅಧ್ಯಕ್ಷೇ** = ಅಧಿಪತಿಯಾದ ಪರಮಾತ್ಮನಲ್ಲಿ ಲೀಯತೇ = ಲಯ ಹೊಂದುತ್ತಾನೆ. ಕುತಃ = ಏಕೆ? **ತದುಪ-ಗಮಾದಿಭ್ಯಃ** = ಪರಮಾತ್ಮಪ್ರಾಪ್ತ್ಯಾದಿ ಪ್ರತಿಪಾದಕವಾದ ಸರ್ವಃ ಎಂದು ಶ್ರುತ್ಯಾದಿ-ಗಳಿದ್ದದ್ದರಿಂದ.

### ಸಿದ್ಧಾಂತ

**ಸೂ.ರ.:– एवं च हिरण्यगर्भस्य भगवदधीनत्वात् । निरवकाश-बहुश्रुतिसद्भावेन तदनिर्णयाभावात् । अनधीनत्वश्रुतीनां त्वीश्वरान्या-धीनत्वाभावपरत्वेन सावकाशत्वात् । प्राणस्य तेजसीति स्मृतेस्तेजसो द्वारमात्रपरत्वेन तत्र लयपरत्वाभावात् । अतो विरिञ्चस्य लयसद्भावा-द्युक्तः सर्वज्ञानिनां मोक्ष इति सिद्धम् ॥**

ಹಿರಣ್ಯಗರ್ಭನು ಭಗವದಧೀನನಾದ್ದರಿಂದ ಪ್ರಾಣನು ಪರಮಾತ್ಮನಲ್ಲಿ ಲಯ ಹೊಂದುತ್ತಾನೆ. ಪ್ರಾಣನು ಭಗವದಧೀನ ಎಂಬ ವಿಷಯದಲ್ಲಿ ನಿರವಕಾಶವಾದ ಬಹುಶ್ರುತಿ ಇರುವುದರಿಂದ ಅದನ್ನು ನಿರ್ಣಯ ಮಾಡಲು ಬರುವುದಿಲ್ಲ ಎಂದಲ್ಲ.

ಇನ್ನು ಅನಧೀನತ್ವ ಶ್ರುತಿಗಳಾದರೂ ಈಶ್ವರಾನ್ಯಾಧೀನತ್ವಾಭಾವಪರವಾದ್ದರಿಂದ ಸಾವಕಾಶವಾಗಿವೆ. ''ಪ್ರಾಣಸ್ತೇಜಸಿ'' ಎಂಬುದಾಗಿ ಶ್ರುತಿಯು ಪ್ರಾಣನಿಗೆ ತೇಜೋಭಿಮಾನಿನಿಯಾದ ರಮೆಯಲ್ಲಿ ಲಯ ಹೇಳುತ್ತಿರುವುದರಿಂದ ಪ್ರಾಣನಿಗೆ ಪರಮಾತ್ಮನಲ್ಲಿ ಲಯ ಹೇಗೆ? ಎಂಬ ಆಕ್ಷೇಪ ಸರಿಯಲ್ಲ, ಕಾರಣ–

ಪ್ರಾಣಸ್ಯ ತೇಜಸಿ ಲಯೋ ಮಾರ್ಗಮಾತ್ರಮುದಾಹೃತಮ್ ।
ಸರ್ವೇಶಿತುಶ್ಚ ಸರ್ವಾದೇಸ್ತಸ್ಯಾನ್ಯತ್ರ ಲಯಃ ಕಥಮ್ ॥

ಎಂಬುದಾಗಿ ಸ್ಮೃತಿ ಇರುವುದರಿಂದ ಪ್ರಾಣನಿಗೆ ತೇಜಸ್ಸಿನಲ್ಲಿ (ರಮೆಯಲ್ಲಿ) ಲಯವೆಂದರೆ ಅದು ಪರಮಾತ್ಮಪ್ರವೇಶಕ್ಕೆ ಮಾರ್ಗಮಾತ್ರವಾಗಿದೆ. ಹೀಗಾಗಿ ''ಪ್ರಾಣಸ್ತೇಜಸಿ'' ಎಂಬ ಶ್ರುತಿಯು ಪ್ರಾಣನಿಗೆ ತೇಜಸ್ಸಿನಲ್ಲಿ ಲಯವನ್ನು ಹೇಳುತ್ತಿಲ್ಲ.

ಆದ್ದರಿಂದ ವಿರಿಂಚನಿಗೆ ಪರಮಾತ್ಮನಲ್ಲಿ ಲಯ ಇರುವುದರಿಂದ ಎಲ್ಲ ಜ್ಞಾನಿಗಳಿಗೂ ಮೋಕ್ಷ ಹೇಳಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

**ಅಧ್ಯಕ್ಷಾಧಿಕರಣವು ಮುಗಿಯಿತು.**

ಅಧಿಕರಣ – 4

## ಭೂತಾಧಿಕರಣ

### ಸಂಗತಿ

**ಸೂ.ರ.:– अत्र प्राग्विशिष्योक्तेभ्योऽन्येषां देवानां पृथिव्यादि-समस्तभूतेषु लयः समर्थ्यते ॥**

ಹಿಂದೆ ವಿಶಿಷ್ಯ ಉಕ್ತರಾದವರಿಂದ (ವಿಶೇಷವಾಗಿ ಹೇಳಲ್ಪಟ್ಟವರಿಂದ) ಭಿನ್ನರಾದ ದೇವತೆಗಳಿಗೆ ಪೃಥಿವ್ಯಾದಿ ಸಮಸ್ತ ಭೂತಗಳಲ್ಲಿ ಲಯವನ್ನು ಸಮರ್ಥಿಸುತ್ತಾರೆ ನಾಲ್ಕನೇ ಈ ಭೂತಾಧಿಕರಣದಲ್ಲಿ.

### ಪೂರ್ವಪಕ್ಷ

**ಸೂ.ರ.:– नन्वग्नावेव सर्वेषां लयोऽस्तु । न तु सिद्धान्त्यभिमतो विभागेन भूतेषु लयः । अग्नौ सर्व इति (गौपवन.) श्रुतेः । विपर्यये च प्रमाणाभावात् । अतोऽशेषदेवानामग्नौ लयादुक्तमयुक्तमिति प्राप्ते सूत्रमाह ॥**

ಅಗ್ನಿಯಲ್ಲಿಯೇ ಎಲ್ಲ ದೇವತೆಗಳಿಗೆ ಲಯ ಇರಲಿ. ಹೊರತು ಸಿದ್ಧಾಂತಿಗೆ ಅಭಿಮತವಾದ ವಿಭಾಗೇನ ಭೂತಗಳಲ್ಲಿ ಲಯ ಬೇಡ. "ಅಗ್ನೌ ಸರ್ವೇ ದೇವಾ ವಿಲೀಯಂತೇ" ಎಂದು ಶ್ರುತಿ ಇರುವುದರಿಂದ ಮತ್ತು ವಿಪರ್ಯಯ ಲಯ-ವಿಷಯದಲ್ಲಿ ಪ್ರಮಾಣ ಇಲ್ಲವಾದ್ದರಿಂದ. ಆದ್ದರಿಂದ ಎಲ್ಲ ದೇವತೆಗಳಿಗೂ ಅಗ್ನಿಯಲ್ಲಿ ಲಯ ಇರುವುದರಿಂದ ಉಕ್ತವಾದದ್ದು ಯುಕ್ತವಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ भूतेषु तच्छ्रुतेः ॐ (४-२-५)**

**ಸೂತ್ರಾರ್ಥ** :- ವಿಶಿಷ್ಯೋಕ್ತೇಭ್ಯೋಽನ್ಯೇ ದೇವಾಃ = ವಿಶಿಷ್ಯ ಉಕ್ತರಾದವ-ರಿಂದ ಭಿನ್ನರಾದ ಇತರ ದೇವತೆಗಳು, **ಭೂತೇಷು** = ಪಂಚಭೂತಗಳಲ್ಲಿ ಲೀಯಂತೇ = ಲಯ ಹೊಂದುತ್ತಾರೆ. ಕುತಃ = ಏಕೆ? **ತಚ್ಛ್ರುತೇಃ** = 'ಭೂತೇಷು ದೇವಾಃ' (ಬೃಹಚ್ಛ್ರುತಿ) ಎಂದು ಶ್ರುತಿ ಇರುವುದರಿಂದ.

## ಸಿದ್ಧಾಂತ

ಸೂ.ರ.:– एवं च विशिष्योक्तेभ्योऽन्येषां योग्यतानुसारेण तत्तद्भूतेषु लयस्य भूतेष्विति श्रुतावुक्तत्वात् । भूतेष्विति निरवकाश-बहुवचनश्रवणबलेनाग्नाविति श्रुतेः सङ्कोचनीयत्वेन तदविरोधात् । ततश्च सर्वेषामग्नौ लयाभावेन पञ्चभूतेषु देवानां लय इति सिद्धम् ॥

ವಿಶಿಷ್ಯ ಉಕ್ತರಾದವರಿಂದ ಭಿನ್ನರಾದ ದೇವತೆಗಳಿಗೆ ಯೋಗ್ಯತಾನುಸಾರವಾಗಿ ಆ ಆ ಭೂತಗಳಲ್ಲಿ ಲಯವನ್ನು

"ಭೂತೇಷು ದೇವಾ ವಿಲೀಯಂತೇ ಭೂತಾನಿ ಪರೇ ..."

ಎಂಬ ಶ್ರುತಿಯಲ್ಲಿ ಹೇಳಿದ್ದರಿಂದ, **ಭೂತೇಷು** ಎಂಬ ನಿರವಕಾಶ ಬಹುವಚನ ಶ್ರವಣಬಲದಿಂದ 'ಅಗ್ನೌ' ಎಂಬ ಶ್ರುತಿಗೆ ಸಂಕೋಚ ಮಾಡಬೇಕಾದ್ದರಿಂದ ಅದರ ವಿರೋಧ ಬರುವುದಿಲ್ಲ. ಆದ್ದರಿಂದ ಎಲ್ಲ ದೇವತೆಗಳಿಗೂ ಅಗ್ನಿಯಲ್ಲಿ ಲಯ ಇಲ್ಲವಾದ್ದರಿಂದ, ಪಂಚಭೂತಗಳಲ್ಲಿ ದೇವತೆಗಳಿಗೆ ಲಯ ಎಂದು ಸಿದ್ಧವಾಗುತ್ತದೆ.

**ಭೂತಾಧಿಕರಣವು ಮುಗಿಯಿತು.**

ಅಧಿಕರಣ – 5

# ಏಕಸ್ಮಿನ್ನಧಿಕರಣ

## ಸಂಗತಿ

**ಸೂ.ರ.:– अत्र देवानां सर्वभूतेषु लयः समर्थ्यते ।**

ದೇವತೆಗಳಿಗೆ ಸರ್ವಭೂತಗಳಲ್ಲಿ ಲಯವನ್ನು ಸಮರ್ಥಿಸುತ್ತಾರೆ ಐದನೇ ಈ ಏಕಸ್ಮಿನ್ನಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– नन्वग्नावेव सर्वेषां देवानां लयो भवेत् । अग्नाविति (गौपवन.) श्रुतेः । सर्वेषां देवानामग्नावग्नेर्वायाविति लयाङ्गीकारेण भूतेषु लयस्याङ्गीकृतत्वात् । अतोऽधमानामुत्तमेषु लयाभिधानादित्युक्त-व्यवस्थाऽनुपपत्तिरिति प्राप्ते सूत्रमाह ॥**

'ಅಗ್ನೌ' (ಗೌಪವನಶ್ರುತಿ) ಎಂದು ಶ್ರುತಿ ಇರುವುದರಿಂದ ಅಗ್ನಿಯಲ್ಲಿಯೇ ಎಲ್ಲ ದೇವತೆಗಳಿಗೆ ಲಯವಾಗಲಿ. ಎಲ್ಲ ದೇವತೆಗಳಿಗೆ ಅಗ್ನಿಯಲ್ಲಿ, ಅಗ್ನಿಗೆ ವಾಯುವಿನಲ್ಲಿ ಎಂಬುದಾಗಿ ಲಯವನ್ನು ಅಂಗೀಕರಿಸಿದ್ದರಿಂದ ಭೂತಗಳಲ್ಲಿ ಲಯವು ಅಂಗೀಕೃತ-ವಾಗಿದೆ. ಆದ್ದರಿಂದ ಅಧಮರಿಗೆ ಉತ್ತಮರಲ್ಲಿ ಲಯ ಎಂಬ ಉಕ್ತವ್ಯವಸ್ಥೆಯು ಅನುಪಪನ್ನ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ नैकस्मिन् दर्शयतो हि ॐ (४-२-६)**

**ಸೂತ್ರಾರ್ಥ** :- **ಏಕಸ್ಮಿನ್** = ಒಂದು ಅಗ್ನಿಯಲ್ಲಿಯೇ ಸರ್ವೇ ದೇವಾಃ ನ ವಿಲೀಯಂತೇ = ಎಲ್ಲ ದೇವತೆಗಳು ಲಯ ಹೊಂದುವುದಿಲ್ಲ, ಕಿಂತು ಯಥಾ-ಯೋಗಂ ಸರ್ವಭೂತೇಷು = ಕಿಂತು ಯೋಗ್ಯತಾನುಸಾರವಾಗಿ ಸರ್ವಭೂತಗಳಲ್ಲಿ ಲಯ ಹೊಂದುತ್ತಾರೆ. ಕುತಃ = ಏಕೆ? ಹಿ = ಯಾವ ಕಾರಣ **ದರ್ಶಯತಃ** = 'ಪೃಥಿವ್ಯಾಮೃಭವಃ' ಎಂಬ, ಹಾಗೂ 'ಋಭವಃ ಪೃಥಿವ್ಯಾಂ' ಎಂಬ ಮಹೋಪನಿಷತ್-ಚತುರ್ವೇದಶಿಖೆಗಳು ಹಾಗೆ ಪ್ರತಿಪಾದಿಸುತ್ತಿವೆಯೋ, ತಸ್ಮಾತ್ = ಆ ಕಾರಣ.

## ಸಿದ್ಧಾಂತ

ಸೂ.ರ.:– एवं च निर्दिष्टश्रुतिभ्यां पञ्चस्वपि भूतेषु लयाभिधानात्। का तर्ह्यग्नाविति श्रुतेर्गतिरिति चेत्। एतच्छ्रुतिबलेनाग्नाविति श्रुतौ सर्वशब्दं सङ्कुच्याग्नौ सर्वदेवानां लययोग्यानामेव वक्तुमुचितत्वात्। अतोऽग्नावेव सर्वेषां लयाभावादुक्तव्यवस्था युक्तेति सिद्धम् ॥

"ಪೃಥಿವ್ಯಾಮೃಭವೋ ವಿಲೀಯಂತೇ ವರುಣೇऽಶ್ವಿನಾವಗ್ನಾವಗ್ನಯೋ ವಾಯಾವಿಂದ್ರಃ ಸೋಮ ಆದಿತ್ಯೋ ಬೃಹಸ್ಪತಿರಿತ್ಯಾಕಾಶ ಏವ ಸಾಧ್ಯಾ ವಿಲೀಯಂತೇ। ಮೃತ್ಯವಃ ಪೃಥಿವ್ಯಾಂ ವರುಣ ಆಪೋऽಗ್ನಯಸ್ತೇಜಸಿ ಮರುತಃ ಆಕಾಶೇ ವಿನಾಯಕಾ ವಿಲೀಯಂತೇ"

ಎಂಬುದಾಗಿ (ಮಹೋಪನಿಷತ್ - ಚತುರ್ವೇದಶಿಖಾ) ನಿರ್ದಿಷ್ಟ ಶ್ರುತಿಗಳಿಂದ ಪಂಚಭೂತಗಳಲ್ಲಿಯೂ ಲಯವನ್ನು ಹೇಳಿದ್ದರಿಂದ, ದೇವತೆಗಳಿಗೆ ಸರ್ವಭೂತಗಳಲ್ಲಿ ಲಯವಿದೆ.

ಹಾಗಾದರೇ 'ಅಗ್ನೌ ಸರ್ವೇ ದೇವಾ ವಿಲೀಯಂತೇ' ಎಂಬ ಶ್ರುತಿಗೆ ಗತಿಯೇನು? ಎಂದರೆ, ಈ ಶ್ರುತಿಬಲದಿಂದಾಗಿ 'ಅಗ್ನೌ' ಎಂಬ ಶ್ರುತಿಯಲ್ಲಿ ಸರ್ವಶಬ್ದವನ್ನು ಸಂಕೋಚ ಮಾಡಿ, ಅಗ್ನಿಯಲ್ಲಿ ಲಯಯೋಗ್ಯರಾದ ಎಲ್ಲ ದೇವತೆಗಳ ಲಯವನ್ನು ಹೇಳುವುದೇ ಉಚಿತವಾಗಿದೆ.

ಆದ್ದರಿಂದ ಅಗ್ನಿಯಲ್ಲಿಯೇ ಎಲ್ಲ ದೇವತೆಗಳಿಗೂ ಲಯವಿಲ್ಲವಾದ್ದರಿಂದ "ಅಧಮರಿಗೆ ಉತ್ತಮರಲ್ಲಿ ಲಯ" ಎಂದು ಹೇಳಿದ ವ್ಯವಸ್ಥೆಯು ಯುಕ್ತವಾಗಿದೆ ಎಂದು ಸಿದ್ಧವಾಗುತ್ತದೆ.

ಏಕಸ್ಮಿನ್ನಧಿಕರಣವು ಮುಗಿಯಿತು.

ಅಧಿಕರಣ - 6

# ಸಮನಾಧಿಕರಣ

## ಸಂಗತಿ

**ಸೂ.ರ.:– अत्र प्रकृतेर्विष्णौ लयाभावः साध्यते ।**

ಪ್ರಕೃತಿಗೆ (ಲಕ್ಷ್ಮೀದೇವಿಗೆ) ವಿಷ್ಣುವಿನಲ್ಲಿ ಲಯವಿಲ್ಲ ಎಂದು ಸಾಧಿಸುತ್ತಾರೆ ಆರನೇ ಈ ಸಮನಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु प्रकृतिः परमात्मनि लीयते । भगवदधीनत्वात् । न च तदनिर्णायकम् । 'तेजः परस्यां देवतायां' इति विशेषश्रुतेश्च । ततश्च भगवति लयसद्भावादधिकारिणां प्राणावसानत्वोक्तिरयुक्तेति प्राप्ते सूत्रितम्–**

ಪ್ರಕೃತಿಯು (ಲಕ್ಷ್ಮೀದೇವಿಯು) ಪರಮಾತ್ಮನಲ್ಲಿ ಲಯ ಹೊಂದುತ್ತಾಳೆ. ಕಾರಣ ಲಕ್ಷ್ಮಿಯು ಭಗವಂತನ ಅಧೀನಳಾದ್ದರಿಂದ. ಕೇವಲ ಅಧೀನತ್ವವು ಲಯಕ್ಕೆ ಹೇಗೆ ನಿರ್ಣಾಯಕವಾಗುತ್ತದೆ? ಎಂಬ ಶಂಕೆ ಬೇಡ.

"ತೇಜಃ ಪರಸ್ಯಾಂ ದೇವತಾಯಾಂ"

ಎಂಬುದಾಗಿ ಲಕ್ಷ್ಮೀದೇವಿಗೆ ಪರಮಾತ್ಮನಲ್ಲಿ ಲಯ ಹೇಳುವ ವಿಶೇಷಶ್ರುತಿಯೂ ಇರುವುದರಿಂದ ಅಧೀನತ್ವವು ಲಯಕ್ಕೆ ನಿರ್ಣಾಯಕವಾಗುತ್ತದೆ.

ಆದ್ದರಿಂದ ಪ್ರಕೃತಿಗೆ ಪರಮಾತ್ಮನಲ್ಲಿ ಲಯ ಇರುವುದರಿಂದ ಅಧಿಕಾರಿಗಳಿಗೆ ಪ್ರಾಣಾವಸಾನತ್ವವನ್ನು ಹೇಳಿದ್ದು ಯುಕ್ತವಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ समना चासृत्युपक्रमादमृतत्वं चानुपोष्य ॐ (४-२-७)**

(ಸೂತ್ರದಲ್ಲಿ ಮೊದಲನೇ ಚಕಾರವು ನಭಸ್ಸನ್ನು ಸಮಾಕರ್ಷ ಮಾಡುವುದಕ್ಕಾಗಿ ಇದೆ. ಇನ್ನು ಎರಡನೇ ಚಕಾರವು 'ದ್ವಾ ವಾ' ಎಂಬ ಶ್ರುತಿಸಮುಚ್ಚಾಯಕವಾಗಿದೆ.)

**ಸೂತ್ರಾರ್ಥ** :- ಲಕ್ಷ್ಮೀಃ ನ ಲೀಯತೇ = ಲಕ್ಷ್ಮಿಯು ಲಯ ಹೊಂದುವುದಿಲ್ಲ. ಕುತಃ = ಏಕೆ? ಯತಃ = ಯಾವ ಕಾರಣ ತಸ್ಯಾಃ = ಲಕ್ಷ್ಮಿಗೆ, **ಅನುಪೋಷ್ಯ** = ಪರಮಾತ್ಮನನ್ನು ಉಪಾಸಿಸದೆಯೇ **ಅಮೃತತ್ವಂ** = ನಿತ್ಯಮುಕ್ತತ್ವವಿದೆಯೋ ಆ ಕಾರಣ. ತತ್ ಕುತಃ ? = ಲಕ್ಷ್ಮಿಗೆ ನಿತ್ಯಮುಕ್ತತ್ವವೇ ಏಕೆ ? **ಅಸ್ಮೃತ್ಯುಪಕ್ರಮಾತ್** = ಎಂದಿಗೂ ಸಂಸಾರೋಪಕ್ರಮ ಇಲ್ಲವಾದ್ದರಿಂದ.

ಸೋಽಪಿ ಕುತಃ = ಲಕ್ಷ್ಮಿಗೆ ಸಂಸಾರೋಪಕ್ರಮಾಭಾವವಾದರೂ ಏಕೆ? ಯತಃ = ಯಾವ ಕಾರಣ ಸಮನಾ (ದೇಶತಃ ಕಾಲತಃ ಸಮೋ ನಾ ಪರಮಪುರುಷೋ ಯಸ್ಯಾಃ ಸಾ ಸಮನಾ) ದೇಶತಃ ಕಾಲತಃ ಪರಮಪುರುಷನು ಸಮನಾಗಿ ಉಳ್ಳವಳಾಗಿ ಸಮನಾ ಎನಿಸಿರುವಳೋ, ತಸ್ಮಾತ್ = ಆ ಕಾರಣ ಎಂದರ್ಥ.

## ಸಿದ್ಧಾಂತ

**ಸೂ.ರ.:- एवं च नित्यमुक्तत्वात् । संसारसम्बन्धाभावात् । विभुत्वात्परमात्मवत् । सीतारुक्मिण्यादिरूपेणापि नित्यत्वात् । द्वौ वा वेति (बृहत्.) श्रुतेः । ततश्च प्रकृतिर्न परमात्मनि लीयत इति सिद्धम् ॥**

ಪ್ರಕೃತಿಯು (ಲಕ್ಷ್ಮಿಯು) ನಿತ್ಯಮುಕ್ತಳಾದ್ದರಿಂದ, ಅವಳಿಗೆ ಸಂಸಾರಸಂಬಂಧ ಇಲ್ಲವಾದ್ದರಿಂದ, ಪರಮಾತ್ಮನಂತೆ ವಿಭುವಾಗಿರುವುದರಿಂದ, ಸೀತಾ-ರುಕ್ಮಿಣ್ಯಾದಿ ರೂಪದಿಂದಲೂ ನಿತ್ಯಳಾದ್ದರಿಂದ,

"ದ್ವೌ ವಾವ ಸ್ಮೃತ್ಯನುಪಕ್ರಮೌ ಪ್ರಕೃತಿಶ್ಚ ಪರಮಶ್ಚ ದ್ವಾವೇತೌ ನಿತ್ಯಮುಕ್ತೌ ನಿತ್ಯೌ ಚ ಸರ್ವಗತೌ ಚೈತೌ ಜ್ಞಾತ್ವಾ ವಿಮುಚ್ಯತೇ" (ಬೃಹಚ್ಛ್ರುತಿ)

ಎಂಬುದಾಗಿ ಶ್ರುತಿ ಇರುವುದರಿಂದ, ಪ್ರಕೃತಿಯು ಪರಮಾತ್ಮನಲ್ಲಿ ಲಯ ಹೊಂದುವುದಿಲ್ಲ ಎಂದು ಸಿದ್ಧವಾಗುತ್ತದೆ.

## ಸೂತ್ರ - 8

**ಸೂ.ರ.:- नैतावता साम्यमित्युक्तसाध्ये हेतुतया सूत्रं पठति ॥**

ಇಷ್ಟುಮಾತ್ರಕ್ಕೆ ಪ್ರಕೃತಿಗೆ ಈಶ್ವರನಿಂದ ಸಾಮ್ಯವಿಲ್ಲ ಎಂಬ ಸಾಧ್ಯವಿಚಾರದಲ್ಲಿ ಹೇತುವನ್ನಾಗಿ ಸೂತ್ರವನ್ನು ಹೇಳುತ್ತಾರೆ -

## ॐ तदपीतेः संसारव्यपदेशात् ॐ (४-२-८)

**ಸೂತ್ರಾರ್ಥ :- ತದಪೀತೇಃ** ತಸ್ಯಾಂ = ಪ್ರಕೃತಿಯಲ್ಲಿ, ಅಪೀತೇಃ = ಆಗುವ ಲಯಕ್ಕೆ, **ಸಂಸಾರವ್ಯಪದೇಶಾತ್** = 'ವಿಲೀನಃ' (ಸೌಪರ್ಣ) ಎಂಬುದಾಗಿ ಸಂಸಾರಹೇತುತ್ವವು ಶ್ರುತವಾಗುತ್ತಿರುವುದರಿಂದ, ನ ಮೋಚಕೇಶ್ವರಸಾಮ್ಯಂ ಪ್ರಕೃತೇಃ = ಪ್ರಕೃತಿಗೆ ಮೋಚಕನಾದ ಈಶ್ವರನಿಂದ ಸಾಮ್ಯವಿಲ್ಲ ಎಂದರ್ಥ.

**ಸೂ.ರ.:- एवं च मूलरूपवत्सीताद्यवताराणामपि नित्यत्वेन गर्भवासादिरूपसंसारसम्बन्धस्यासम्भवात् । न चैतावता साम्यम् । प्रकृतौ लीनस्य संसाराभिधानात् । परमात्मनि लीनस्य मुक्तत्वाभिधानात् । तथा च प्रकृतिर्भगवति न लीयत इति सिद्धम् ॥**

ಪ್ರಕೃತಿಯ ಮೂಲರೂಪದಂತೆ ಸೀತಾದ್ಯವತಾರಗಳೂ ನಿತ್ಯವಾದ್ದರಿಂದ ಪ್ರಕೃತಿಗೆ ಗರ್ಭವಾಸಾದಿರೂಪ ಸಂಸಾರಸಂಬಂಧ ಇರುವುದಿಲ್ಲ. ಅಂದಮಾತ್ರಕ್ಕೆ ಈಶ್ವರನಿಂದ ಸಾಮ್ಯವನ್ನು ಶಂಕಿಸುವುದು ಸರಿಯಲ್ಲ. ಕಾರಣ - ಪ್ರಕೃತಿಯಲ್ಲಿ ಲಯ ಹೊಂದಿದವನಿಗೆ ಸಂಸಾರವನ್ನು ಹೇಳಿದ್ದಾರೆ. ಆದರೆ ಪರಮಾತ್ಮನಲ್ಲಿ ಲಯ ಹೊಂದಿದವನಿಗೆ ಮುಕ್ತತ್ವವನ್ನು ಹೇಳಿದ್ದಾರೆ. ಈ ವಿಧವಾದ ವೈಷಮ್ಯ ಇದ್ದೇ ಇದೆ.

ಆದ್ದರಿಂದ ಪ್ರಕೃತಿಯು ಭಗವಂತನಲ್ಲಿ ಲಯ ಹೊಂದುವುದಿಲ್ಲ ಎಂದು ಸಿದ್ಧವಾಗುತ್ತದೆ.

### ಸೂತ್ರ - 9

**ಸೂ.ರ.:- हेत्वन्तरेण प्रकृतिपुरुषयोः सर्वसाम्यं प्रतिषेधत्सूत्रं व्याचष्टे ॥**

ಮತ್ತೊಂದು ಹೇತುವಿನಿಂದಲೂ ಸಹ ಪ್ರಕೃತಿ-ಪುರುಷರಲ್ಲಿ ಸರ್ವಸಾಮ್ಯವನ್ನು ನಿಷೇಧಿಸುವ ಸೂತ್ರವನ್ನು ಹೇಳುತ್ತಾರೆ -

## ॐ सूक्ष्मं प्रमाणतश्च तथोपलब्धेः ॐ (४-२-९)

**ಸೂತ್ರಾರ್ಥ :- ಸೂಕ್ಷ್ಮಂ** = ಪ್ರಕೃತಿಗಿಂತಲೂ ಸೂಕ್ಷ್ಮನಾದ ಬ್ರಹ್ಮನು **ಪ್ರಮಾಣತಶ್ಚ** = ಜ್ಞಾನ-ಆನಂದಾದಿ ಗುಣಪರಿಮಾಣದಿಂದಲೂ ಸಹ ಅಧಿಕಂ =

ಅಧಿಕನಾಗಿದ್ದಾನೆ. **ಕುತಃ** = ಏಕೆ? **ತಥೋಪಲಬ್ಧೇಃ** = 'ಸರ್ವತಃ' (ತುರಶ್ರುತಿ) ಎಂದು ಹಾಗೆ ತಿಳಿಸುವ ಶ್ರುತಿ ಇರುವುದರಿಂದ. ಅತೋಽಪಿ ಪ್ರಕೃತೇರ್ನ ಬ್ರಹ್ಮಸರ್ವಸಾಮ್ಯಮಿತ್ಯರ್ಥಃ = ಆ ಕಾರಣಕ್ಕಾಗಿಯೂ ಸಹ ಪ್ರಕೃತಿಗೆ ಬ್ರಹ್ಮನಿಂದ ಸರ್ವಸಾಮ್ಯ ಇಲ್ಲ.

**ಸೂ.ರ.:– एवं च प्रकृतेरपि परमात्मनः सूक्ष्मत्वस्य ज्ञानानन्दादि-गुणपरिमाणाधिक्यस्य चाभिधानात् । तथा च प्रकृतेर्न ब्रह्मसर्व-साम्यमिति सिद्धम् ॥**

ಪ್ರಕೃತಿಗಿಂತಲೂ ಪರಮಾತ್ಮನಿಗೆ ಸೂಕ್ಷ್ಮತ್ವವನ್ನು ಹಾಗೂ ಜ್ಞಾನ-ಆನಂದಾದಿ ಗುಣಪರಿಮಾಣಾಧಿಕ್ಯವನ್ನೂ ಹೇಳಿದ್ದರಿಂದ ಪ್ರಕೃತಿಗೆ ಬ್ರಹ್ಮನಿಂದ ಸರ್ವಸಾಮ್ಯ ಇಲ್ಲ ಎಂದು ಸಿದ್ಧವಾಗುತ್ತದೆ.

## ಸೂತ್ರ - 10

**ಸೂ.ರ.:– ननु यदि प्रकृतेर्न पुरुषेण सर्वसाम्यं तर्हि नित्य-मुक्तत्वादिसाम्यमपि न स्यात् । ब्रह्मादिवत् । ततश्च तयोः साम्य-वचनानामसाम्यवचनानां च सद्भावेन न किञ्चिदपि सिद्ध्यतीति प्राप्ते सूत्रमाह ॥**

ಒಂದುವೇಳೆ ಪ್ರಕೃತಿಗೆ ಪರಮಪುರುಷನಿಂದ ಸರ್ವಸಾಮ್ಯ ಇಲ್ಲ ಎನ್ನುವು-ದಾದರೆ ಹಾಗಾದರೆ ಬ್ರಹ್ಮಾದಿಗಳಂತೆ ನಿತ್ಯಮುಕ್ತತ್ವಾದಿಸಾಮ್ಯವೂ ಇಲ್ಲದೇ ಹೋಗ-ಬೇಕಾಗುತ್ತದೆ. ಆದ್ದರಿಂದ ಪ್ರಕೃತಿ-ಪುರುಷರಿಗೆ ಸಾಮ್ಯ ಹೇಳುವ ವಚನಗಳು ಹಾಗೂ ಅಸಾಮ್ಯವಚನಗಳು ಎರಡೂ ಇರುವುದರಿಂದ ಯಾವುದೂ ಸಿದ್ಧಿಸದೇ ಹೋಗ-ಬೇಕಾಗುತ್ತದೆ ಎಂಬುದಾಗಿ ಆಕ್ಷೇಪ ಬಂದರೆ, ಸಮಾಧಾನಕ್ಕಾಗಿ ಸೂತ್ರ ಹೇಳುತ್ತಾರೆ -

### ॐ नोपमर्देनातः ॐ (४-२-१०)

**ಸೂತ್ರಾರ್ಥ** :- **ಅತಃ** = ಸಾಮ್ಯ-ತದಭಾವಗಳು ಸಾಧಿತವಾದ್ದರಿಂದ **ನೋಪಮರ್ದೇನ** = ಸ್ವಾತಂತ್ರ್ಯಾದಿಗುಣಬಾಧದಿಂದಾಗಿ, ಪ್ರಕೃತಿಗೆ ಪರಮಾತ್ಮನಿಂದ ನಿತ್ಯಮುಕ್ತತ್ವಾದಿಗಳಿಂದಲೇನೇ ಸಾಮ್ಯ ಎಂದರ್ಥ.

### ॐ तदपीतेः संसारव्यपदेशात् ॐ (४-२-८)

**ಸೂತ್ರಾರ್ಥ :- ತದಪೀತೇಃ** ತಸ್ಯಾಂ = ಪ್ರಕೃತಿಯಲ್ಲಿ, ಅಪೀತೇಃ = ಆಗುವ ಲಯಕ್ಕೆ, **ಸಂಸಾರವ್ಯಪದೇಶಾತ್** = 'ವಿಲೀನಃ' (ಸೌಪರ್ಣ) ಎಂಬುದಾಗಿ ಸಂಸಾರಹೇತುತ್ವವು ಶ್ರುತವಾಗುತ್ತಿರುವುದರಿಂದ, ನ ಮೋಚಕೇಶ್ವರಸಾಮ್ಯಂ ಪ್ರಕೃತೇಃ = ಪ್ರಕೃತಿಗೆ ಮೋಚಕನಾದ ಈಶ್ವರನಿಂದ ಸಾಮ್ಯವಿಲ್ಲ ಎಂದರ್ಥ.

**ಸೂ.ರ.:- एवं च मूलरूपवत्सीताद्यवताराणामपि नित्यत्वेन गर्भवासादिरूपसंसारसम्बन्धस्यासम्भवात् । न चैतावता साम्यम् । प्रकृतौ लीनस्य संसाराभिधानात् । परमात्मनि लीनस्य मुक्तत्वाभिधानात् । तथा च प्रकृतिर्भगवति न लीयत इति सिद्धम् ॥**

ಪ್ರಕೃತಿಯ ಮೂಲರೂಪದಂತೆ ಸೀತಾದ್ಯವತಾರಗಳೂ ನಿತ್ಯವಾದ್ದರಿಂದ ಪ್ರಕೃತಿಗೆ ಗರ್ಭವಾಸಾದಿರೂಪ ಸಂಸಾರಸಂಬಂಧ ಇರುವುದಿಲ್ಲ. ಅಂದಮಾತ್ರಕ್ಕೆ ಈಶ್ವರನಿಂದ ಸಾಮ್ಯವನ್ನು ಶಂಕಿಸುವುದು ಸರಿಯಲ್ಲ. ಕಾರಣ - ಪ್ರಕೃತಿಯಲ್ಲಿ ಲಯ ಹೊಂದಿದವನಿಗೆ ಸಂಸಾರವನ್ನು ಹೇಳಿದ್ದಾರೆ. ಆದರೆ ಪರಮಾತ್ಮನಲ್ಲಿ ಲಯ ಹೊಂದಿದವನಿಗೆ ಮುಕ್ತತ್ವವನ್ನು ಹೇಳಿದ್ದಾರೆ. ಈ ವಿಧವಾದ ವೈಷಮ್ಯ ಇದ್ದೇ ಇದೆ.

ಆದ್ದರಿಂದ ಪ್ರಕೃತಿಯು ಭಗವಂತನಲ್ಲಿ ಲಯ ಹೊಂದುವುದಿಲ್ಲ ಎಂದು ಸಿದ್ಧವಾಗುತ್ತದೆ.

### ಸೂತ್ರ - 9

**ಸೂ.ರ.:- हेत्वन्तरेण प्रकृतिपुरुषयोः सर्वसाम्यं प्रतिषेधत्सूत्रं व्याचष्टे ॥**

ಮತ್ತೊಂದು ಹೇತುವಿನಿಂದಲೂ ಸಹ ಪ್ರಕೃತಿ-ಪುರುಷರಲ್ಲಿ ಸರ್ವಸಾಮ್ಯವನ್ನು ನಿಷೇಧಿಸುವ ಸೂತ್ರವನ್ನು ಹೇಳುತ್ತಾರೆ -

### ॐ सूक्ष्मं प्रमाणतश्च तथोपलब्धेः ॐ (४-२-९)

**ಸೂತ್ರಾರ್ಥ :- ಸೂಕ್ಷ್ಮಂ** = ಪ್ರಕೃತಿಗಿಂತಲೂ ಸೂಕ್ಷ್ಮನಾದ ಬ್ರಹ್ಮನು **ಪ್ರಮಾಣತಶ್ಚ** = ಜ್ಞಾನ-ಆನಂದಾದಿ ಗುಣಪರಿಮಾಣದಿಂದಲೂ ಸಹ ಅಧಿಕಂ =

ಅಧಿಕನಾಗಿದ್ದಾನೆ. ಕುತಃ = ಏಕೆ? **ತಥೋಪಲಬ್ಧೇಃ** = 'ಸರ್ವತಃ' (ತುರಶ್ರುತಿ) ಎಂದು ಹಾಗೆ ತಿಳಿಸುವ ಶ್ರುತಿ ಇರುವುದರಿಂದ. ಅತೋಽಪಿ ಪ್ರಕೃತೇರ್ನ ಬ್ರಹ್ಮಸರ್ವಸಾಮ್ಯಮಿತ್ಯರ್ಥಃ = ಆ ಕಾರಣಕ್ಕಾಗಿಯೂ ಸಹ ಪ್ರಕೃತಿಗೆ ಬ್ರಹ್ಮನಿಂದ ಸರ್ವಸಾಮ್ಯ ಇಲ್ಲ.

**ಸೂ.ರ.:– एवं च प्रकृतेरपि परमात्मनः सूक्ष्मत्वस्य ज्ञानानन्दादि-गुणपरिमाणाधिक्यस्य चाभिधानात् । तथा च प्रकृतेर्न ब्रह्मसर्व-साम्यमिति सिद्धम् ॥**

ಪ್ರಕೃತಿಗಿಂತಲೂ ಪರಮಾತ್ಮನಿಗೆ ಸೂಕ್ಷ್ಮತ್ವವನ್ನು ಹಾಗೂ ಜ್ಞಾನ-ಆನಂದಾದಿ ಗುಣಪರಿಮಾಣಾಧಿಕ್ಯವನ್ನೂ ಹೇಳಿದ್ದರಿಂದ ಪ್ರಕೃತಿಗೆ ಬ್ರಹ್ಮನಿಂದ ಸರ್ವಸಾಮ್ಯ ಇಲ್ಲ ಎಂದು ಸಿದ್ಧವಾಗುತ್ತದೆ.

## ಸೂತ್ರ - 10

**ಸೂ.ರ.:– ननु यदि प्रकृतेर्न पुरुषेण सर्वसाम्यं तर्हि नित्य-मुक्तत्वादिसाम्यमपि न स्यात् । ब्रह्मादिवत् । ततश्च तयोः साम्य-वचनानामसाम्यवचनानां च सद्भावेन न किञ्चिदपि सिद्ध्यतीति प्राप्ते सूत्रमाह ॥**

ಒಂದುವೇಳೆ ಪ್ರಕೃತಿಗೆ ಪರಮಪುರುಷನಿಂದ ಸರ್ವಸಾಮ್ಯ ಇಲ್ಲ ಎನ್ನುವು-ದಾದರೆ ಹಾಗಾದರೆ ಬ್ರಹ್ಮಾದಿಗಳಂತೆ ನಿತ್ಯಮುಕ್ತತ್ವಾದಿಸಾಮ್ಯವೂ ಇಲ್ಲದೇ ಹೋಗ-ಬೇಕಾಗುತ್ತದೆ. ಆದ್ದರಿಂದ ಪ್ರಕೃತಿ-ಪುರುಷರಿಗೆ ಸಾಮ್ಯ ಹೇಳುವ ವಚನಗಳು ಹಾಗೂ ಅಸಾಮ್ಯವಚನಗಳು ಎರಡೂ ಇರುವುದರಿಂದ ಯಾವುದೂ ಸಿದ್ಧಿಸದೇ ಹೋಗ-ಬೇಕಾಗುತ್ತದೆ ಎಂಬುದಾಗಿ ಆಕ್ಷೇಪ ಬಂದರೆ, ಸಮಾಧಾನಕ್ಕಾಗಿ ಸೂತ್ರ ಹೇಳುತ್ತಾರೆ –

**ॐ नोपमर्देनातः ॐ (४-२-१०)**

**ಸೂತ್ರಾರ್ಥ** :- **ಅತಃ** = ಸಾಮ್ಯ-ತದಭಾವಗಳು ಸಾಧಿತವಾದ್ದರಿಂದ **ನೋಪಮರ್ದೇನ** = ಸ್ವಾತಂತ್ರ್ಯಾದಿಗುಣಬಾಧದಿಂದಾಗಿ, ಪ್ರಕೃತಿಗೆ ಪರಮಾತ್ಮನಿಂದ ನಿತ್ಯಮುಕ್ತತ್ವಾದಿಗಳಿಂದಲೇನೇ ಸಾಮ್ಯ ಎಂದರ್ಥ.

ಸೂ.ರ.:– एवं चैतस्य विशेषगुणा ज्ञानानन्दादिपरिमाणाधिक्य-गुणादयस्तेषामनुपमर्देन नित्यमुक्तत्वादिना साम्याङ्गीकारे बाधकाभावात् । देशतः कालतश्चेति (भविष्यत्पर्वणि.) स्मृतेः । ततश्च प्रकृतेर्नित्य-मुक्तत्वादिना भगवतः साम्यमिति सिद्धम् ॥

ಪರಮಪುರುಷನ ವಿಶೇಷಗುಣಗಳಾದ ಜ್ಞಾನ ಆನಂದಾದಿ ಪರಿಮಾಣಾಧಿಕ್ಯಗುಣಾದಿಗಳು ಅವುಗಳನ್ನು ಹೊರತುಪಡಿಸಿ ನಿತ್ಯಮುಕ್ತತ್ವಾದಿಗಳಿಂದ ಸಾಮ್ಯವನ್ನು ಅಂಗೀಕಾರ ಮಾಡಿದರೆ ಬಾಧಕವಿಲ್ಲ.

ದೇಶತಃ ಕಾಲತಶ್ಚೈವ ಸಮಾ ಪ್ರಕೃತಿರೀಶ್ವರೇ ।
ಉಭಯೋರಪ್ಯಬದ್ಧತ್ವಂ ತದಬಂಧಃ ಪರಾತ್ಮನಃ ॥
ಸ್ವತ ಏವ ಪರೇಶಸ್ಯ ಸಾ ಚೋಪಾಸ್ತೇ ಸದಾ ಹರಿಮ್ ।
ಪ್ರಕೃತೇಃ ಪ್ರಾಕೃತಸ್ಯಾಪಿ ಯೇ ಗುಣಾಸ್ತೇ ತು ವಿಷ್ಣುನಾ ।
ನಿಯತಾ ನೈವ ಕೇನಾಪಿ ನಿಯತಾ ಹಿ ಹರೇರ್ಗುಣಾಃ ॥

ಎಂಬುದಾಗಿ ಭವಿಷ್ಯತ್ಪರ್ವವಚನ ಇರುವುದರಿಂದ. ಆದ್ದರಿಂದ ಪ್ರಕೃತಿಗೆ ನಿತ್ಯಮುಕ್ತತ್ವಾದಿಗಳಿಂದ ಭಗವಂತನ ಸಾಮ್ಯ ಎಂದು ಸಿದ್ಧವಾಗುತ್ತದೆ.

## ಸೂತ್ರ - 11

ಸೂ.ರ.:– श्रुतिरूपयुक्त्यन्तरेण किञ्चित्साम्यं प्रतिपादयत्सूत्रं पठति ॥

ಶ್ರುತಿರೂಪಯುಕ್ತ್ಯಂತರದಿಂದಲೂ ಕಿಂಚಿತ್‌ಸಾಮ್ಯವನ್ನು ಪ್ರತಿಪಾದಿಸುವ ಸೂತ್ರವನ್ನು ಹೇಳುತ್ತಾರೆ -

### ॐ अस्यैव चोपपत्तेरूष्मा ॐ (४-२-११)

**ಸೂತ್ರಾರ್ಥ** :- **ಊಷ್ಮಾ** = ಊಷ್ಮಾವತ್ತ್ವ-ಅನೂಷ್ಮಾವತ್ತ್ವ ಪ್ರತಿಪಾದಕವಾದ "ದ್ವಿಧಾ ಹೀದಂ" (ಸೌಪರ್ಣ) ಎಂಬ ಶ್ರುತಿಯೂ ಸಹ **ಅಸ್ಯೈವ** = ಕಿಂಚಿತ್ಸಾಮ್ಯ-ರೂಪ ಅರ್ಥಕ್ಕೇನೇ **ಉಪಪತ್ತೇಃ** = ಘಟಿಸುವುದಕ್ಕಾಗಿ ಉಪಪಾದಕವಾಗಿದೆ ಎಂದರ್ಥ.

ಸೂ.ರ.:- एवं चोष्माशब्देन घ्राणनाद्यविषयत्वाद्यनुकूलसामर्थ्य-स्योच्यमानत्वात् । चेतनजातस्योष्मावदनूष्मावदिति द्वैविध्यात् । तत्र चक्षुराद्यगोचरत्वानुकूलसामर्थ्यवत्त्वाद्भगवत ऊष्मनामवत्त्वोक्तत्वात् । अनूष्मवत्प्रकृतिः । तस्यां देशकालव्याप्तिनित्यमुक्तत्वादिसाम्यस्यो-पपत्तेः । तथा च प्रकृतेः किञ्चित्साम्यमिति सिद्धम् ॥

ಊಷ್ಮಶಬ್ದದಿಂದ ಘ್ರಾಣನಾದ್ಯವಿಷಯತ್ವಾದ್ಯನುಕೂಲಸಾಮರ್ಥ್ಯವು ಉಚ್ಯಮಾನವಾಗಿದೆ. ಊಷ್ಮಾವತ್-ಅನೂಷ್ಮಾವತ್ ಎಂದು ಚೇತನಜಾತವು ದ್ವಿವಿಧವಾಗಿದೆ. ಅದರಲ್ಲಿ ಚಕ್ಷುರಾದ್ಯಗೋಚರತ್ವಾನುಕೂಲಸಾಮರ್ಥ್ಯ ಉಳ್ಳವ-ನಾದ್ದರಿಂದ ಭಗವಂತನು ಊಷ್ಮಾ ನಾಮ ಉಳ್ಳವನಾಗಿದ್ದಾನೆ. ಇನ್ನು ಪ್ರಕೃತಿಯು ಅನೂಷ್ಮಾನಾಮ ಉಳ್ಳವಳಾಗಿದ್ದಾಳೆ. ಕಾರಣ ಅವಳಲ್ಲಿ ದೇಶಕಾಲವ್ಯಾಪ್ತಿ ನಿತ್ಯಮುಕ್ತ-ತ್ವಾದಿಸಾಮ್ಯವು ಉಪಪನ್ನವಾಗುವುದರಿಂದ. ಆದ್ದರಿಂದ ಪ್ರಕೃತಿಗೆ ಭಗವಂತನಿಂದ ಕಿಂಚಿತ್ ಸಾಮ್ಯವಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 12

ಸೂ.ರ.:- नन्वसमो वा एष पर इति (चतुर्वेदशिखायां.) साम्य-प्रतिषेधात् न प्रकृतेस्तस्य किञ्चित्साम्यमित्याक्षिप्य समादधत्सूत्रमाचष्टे ॥

"ಅಸಮೋ ವಾ ಏಷ ಪರೋ ನ ಹಿ ಕಶ್ಚಿದೇವಂ ದೃಶ್ಯತೇ...."

ಎಂಬುದಾಗಿ ಸಾಮ್ಯವನ್ನು ನಿಷೇಧಿಸಿದ್ದರಿಂದ ಪ್ರಕೃತಿಗೆ ಭಗವಂತನಿಂದ ಕಿಂಚಿತ್‌ಸಾಮ್ಯ ಇಲ್ಲ ಎಂದು ಆಕ್ಷೇಪ ಮಾಡಿಕೊಂಡು ಸಮಾಧಾನ ಹೇಳುವುದಕ್ಕಾಗಿ ಸೂತ್ರ ಹೇಳುತ್ತಾರೆ -

### ॐ प्रतिषेधादिति चेन्न शारीरात् ॐ (४-२-१२)

**ಸೂತ್ರಾರ್ಥ** :- **ಪ್ರತಿಷೇಧಾತ್** = ಈಶ್ವರನಿಗೆ ಅನ್ಯಸಾಮ್ಯವನ್ನು ನಿಷೇಧಿ-ಸಿದ್ದರಿಂದ, ಪ್ರಕೃತೇಃ ದೇಶಕಾಲವ್ಯಾಪ್ತ್ಯಾದಿನಾऽಪಿ ಪರಮಾತ್ಮಸಾಮ್ಯಂ **ನೇತಿ ಚೇನ್ನ** = ಪ್ರಕೃತಿಗೆ ದೇಶಕಾಲವ್ಯಾಪ್ತ್ಯಾದಿಗಳಿಂದಲೂ ಪರಮಾತ್ಮಸಾಮ್ಯ ಇಲ್ಲ ಎಂದು ಶಂಕೆ ಬಂದರೆ, ಅದು ಸರಿಯಲ್ಲ. ಕುತಃ = ಏಕೆ? ಯತಃ = ಯಾವ ಕಾರಣ **ಶಾರೀರಾತ್**

= ಜೀವನಿಂದ ಈಶ್ವರನಿಗೆ ಸಾಮ್ಯವು ನಿಷೇಧಿಸಲ್ಪಡುತ್ತದೆ ಹೊರತು ಪ್ರಕೃತಿಯಿಂದ ಸಾಮ್ಯ ನಿಷೇಧಿಸಲ್ಪಡುತ್ತಿಲ್ಲವೋ, ಅತಃ = ಆ ಕಾರಣ ಎಂದರ್ಥ.

**ಸೂ.ರ.:– एवं च शारीरादेव तत्र साम्यस्य प्रतिषिद्धत्वात् । शरीरमात्रमधिकृत्य तदभिमानितया स्थिताच्छरीरकृतोत्पत्तिनाशयुक्ताज्जीवादीश्वरस्य साम्यस्य प्रतिषिद्धत्वात् । न तु प्रकृतेरित्यवधारणार्थः । ततश्च प्रकृतेः किञ्चित्साम्यमिति सिद्धम् ॥**

"ಅಸಮೋ ವಾ ಏಷ ಪರಃ ..." ಎಂಬ ಶ್ರುತಿಯಲ್ಲಿ ಜೀವನಿಂದಲೇ ಸಾಮ್ಯವು ಪ್ರತಿಷಿದ್ಧವಾಗಿದೆ. ಕೇವಲ ಶರೀರವನ್ನು ಉದ್ದೇಶಿಸಿ ತದಭಿಮಾನಿಯಾಗಿ ಇರುವ, ಶರೀರಕೃತ ಉತ್ಪತ್ತಿ-ನಾಶಯುಕ್ತನಾದ ಜೀವನಿಂದ ಈಶ್ವರನಿಗೆ ಸಾಮ್ಯವು ಪ್ರತಿಷಿದ್ಧ-ವಾಗಿದೆ. ಹೊರತು ಪ್ರಕೃತಿಯಿಂದ ಸಾಮ್ಯವು ಪ್ರತಿಷಿದ್ಧವಾಗಿಲ್ಲ ಎಂದು ಅವಧಾರ-ಣಾರ್ಥ. ಆದ್ದರಿಂದ ಪ್ರಕೃತಿಗೆ ಈಶ್ವರನಿಂದ ಕಿಂಚಿತ್‌ಸಾಮ್ಯವು ಸಿದ್ಧವಾಗುತ್ತದೆ.

## ಸೂತ್ರ - 13

**ಸೂ.ರ.:– नन्वसमो वेति (चतुर्वेदशिखायां.) श्रुतेः सामान्यरूपत्वादत्र परमात्मनः शारीरेण साम्यं प्रतिषिध्यते न प्रकृतेरिति कुतः? इति प्राप्ते समादधत्सूत्रं व्याचष्टे ॥**

"ಅಸಮೋ ವಾ ಏಷ ಪರೋ..." ಎಂಬ ಚತುರ್ವೇದಶಿಖಾ ಶ್ರುತಿಯು ಸಾಮಾನ್ಯರೂಪವಾದ್ದರಿಂದ "ಈ ಶ್ರುತಿಯಲ್ಲಿ ಪರಮಾತ್ಮನಿಗೆ ಜೀವನಿಂದ ಸಾಮ್ಯ ನಿಷೇಧಿಸಲ್ಪಡುತ್ತದೆ ಹೊರತು ಪ್ರಕೃತಿಯಿಂದ ಸಾಮ್ಯ ನಿಷೇಧಿಸಲ್ಪಡುತ್ತಿಲ್ಲ" ಎಂದು ಹೇಗೆ ಹೇಳುತ್ತೀರಿ? ಎಂಬುದಾಗಿ ಆಕ್ಷೇಪ ಬಂದರೆ, ಸಮಾಧಾನಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

### ॐ स्पष्टो ह्येकेषाम् ॐ (४-२-१३)

**ಸೂತ್ರಾರ್ಥ** :- ಹಿ = ಯಾವ ಕಾರಣ ಏಕೇಷಾಂ ಶಾಖಾಸು = ಕೆಲವು ಶಾಖೆಗಳಲ್ಲಿ "ಅಥಾತಃ ಸಮಾಶ್ವಾಸಮಾಶ್ವಾಭಿಧೀಯಂತೇ" ಎಂಬುದಾಗಿ ಸಮಾಸ-ಮತ್ವವಾದವು ಸ್ಪಷ್ಟಃ = ಸ್ಪಷ್ಟವಾಗಿದೆಯೋ ಆ ಕಾರಣ ಎಂದರ್ಥ.

**ಸೂ.ರ.:– एवं च केनचिद्धर्मेण समाः सर्वधर्मैरसमाश्चेतना इति माध्यन्दिनायनानां समादिवादस्य स्पष्टत्वात् । ततश्च शारीराद्धि साम्यं प्रतिषिध्यत इति सिद्धम् ॥**

ಈ 'ಅಸಮೋ ವಾ' ಎಂಬ ಶ್ರುತಿಯು ಸಾಮಾನ್ಯರೂಪವಾಗಿದೆ ಎಂಬುವುದು ಸತ್ಯವೇ. ಆದರೂ ಸಹ ಜೀವನಿಂದ ಸಾಮ್ಯನಿಷೇಧ ಹೇಳಿದ್ದು ಯುಕ್ತವೇ ಆಗಿದೆ. ಕಾರಣ –

"ಅಥಾತಃ ಸಮಾಶ್ಚಾಸಮಾಶ್ಚಾಭಿಧೀಯಂತೇ ಸಮಾಸಮಾಶ್ಚಾಥ ಸಮಾನಿ ಬ್ರಹ್ಮಣೋ ರೂಪಾಣಿ ಯೈರುತ್ತಿಷ್ಠಿಃ ಸ್ಥಿರ್ಲಯೋ..."

ಎಂಬ ಸ್ಪಷ್ಟಶ್ರುತಿಯಲ್ಲಿ ಜೀವರಿಗೆ ಅಸಮತ್ವವನ್ನು ಹೇಳಿ ಪ್ರಕೃತಿಗೆ ಸಮಾಸಮತ್ವವನ್ನು ಹೇಳಿದ್ದಾರೆಯಾದ್ದರಿಂದ (ಮಾಧ್ಯಂದಿನಾಯನರ ಸಮಾದಿ-ವಾದವು ಸ್ಪಷ್ಟವಾದ್ದರಿಂದ), ಸಾಮಾನ್ಯಶ್ರುತಿಗೆ ವಿಶೇಷಶ್ರುತಿಯಿಂದ ಬಾಧವು ಉಪಪನ್ನವಾಗುವುದರಿಂದ. ಆದ್ದರಿಂದ 'ಅಸಮೋ ವಾ' ಎಂಬ ಶ್ರುತಿಯಲ್ಲಿ ಜೀವನಿಂದ ಸಾಮ್ಯವು ನಿಷೇಧಿಸಲ್ಪಡುತ್ತದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 14

**ಸೂ.ರ.:– न केवलं साम्यश्रुतेर्विशेषश्रुतिबलाच्च सङ्कोचः । किन्तु विशेषस्मृत्यापीत्याह सूत्रकृत् ॥**

ಕೇವಲ ಸಾಮ್ಯಶ್ರುತಿಗೆ ವಿಶೇಷಶ್ರುತಿಬಲದಿಂದಾಗಿ ಬಾಧ ಎಂದಷ್ಟೇ ಅಲ್ಲ, ಕಿಂತು ವಿಶೇಷಸ್ಮೃತಿ ಇರುವುದರಿಂದಲೂ ಸಹ ಎಂದು ಹೇಳುತ್ತಾರೆ ಸೂತ್ರಕಾರರು –

### ॐ स्मर्यते ॐ (४-२-१४)

ಸೂತ್ರಾರ್ಥ :- ಸ್ಮರ್ಯತೇ = ಭಗವಂತನಿಂದ ಇತರರಿಗೆ ಅಸಮತ್ವವು, ಲಕ್ಷ್ಮಿಗೆ ಸಮಾಸಮತ್ವವು ಕೃಷ್ಣನೇ ಮೊದಲಾದವರಿಂದ "ಮತ್ಸ್ಯಕೂರ್ಮವರಾಹಾದ್ಯಾಃ" ಎಂಬುದಾಗಿ ಸ್ಮೃತಿಯಲ್ಲಿಯೂ ಹೇಳಲ್ಪಟ್ಟಿದೆ ಕೂಡ.

**ಸೂ.ರ.:– एवं च विष्णोरभेदान्मत्स्याद्यवतराणां समत्वात् । ब्रह्मादिचेतनानामसमत्वात् । प्रकृतेस्तु समाऽसमात्वात् । तथा च**

**प्रकृतेर्नित्यमुक्तत्वादिना लयाभावाद्युक्तं प्राणावसानत्वमधिकारिणा-मिति सिद्धम् ॥**

ಮತ್ಸ್ಯಕೂರ್ಮವರಾಹಾದ್ಯಾಃ ಸಮಾ ವಿಷ್ಣೋರಭೇದತಃ ।
ಬ್ರಹ್ಮಾದ್ಯಾಸ್ತ್ವಸಮಾಃ ಪ್ರೋಕ್ತಾಃ ಪ್ರಕೃತಿಶ್ಚ ಸಮಾಸಮಾ ॥

ಎಂಬುದಾಗಿ (ವಾರಾಹವಚನ) ಸ್ಮೃತಿಯು ಹೇಳುವಂತೆ ಮತ್ಸ್ಯಾದಿ ಅವತಾರ-ರೂಪಗಳು ವಿಷ್ಣುವಿನಿಂದ ಅಭಿನ್ನವಾದ್ದರಿಂದ ಸಮ ಎನಿಸಿವೆ. ಇನ್ನು ಬ್ರಹ್ಮಾದಿ ಚೇತನರು ಅಸಮರು ಎನಿಸಿದ್ದಾರೆ. ಇನ್ನು ಪ್ರಕೃತಿಯಾದರೂ ಸಮಾಸಮಾ ಎನಿಸಿದ್ದಾಳೆ.

ಆದ್ದರಿಂದ ಪ್ರಕೃತಿಗೆ ನಿತ್ಯಮುಕ್ತತ್ವಾದಿಗಳಿರುವುದರಿಂದ ಭಗವಂತನಲ್ಲಿ ಲಯ ಇಲ್ಲವಾದ್ದರಿಂದ ಅಧಿಕಾರಿಗಳಿಗೆ ಪ್ರಾಣಾವಸಾನತ್ವವನ್ನು ಹೇಳಿದ್ದು ಯುಕ್ತವಾಗಿದೆ ಎಂದು ಸಿದ್ಧವಾಗುತ್ತದೆ.

**ಸಮನಾಧಿಕರಣವು ಮುಗಿಯಿತು.**

ಅಧಿಕರಣ – 7

# ಪರಾಧಿಕರಣ

## ಸಂಗತಿ

**ಸೂ.ರ.:– अत्र चतुर्मुखेतरदेवानां परमात्मनि लयः समर्थ्यते ।**

ಚತುರ್ಮುಖನನ್ನು ಬಿಟ್ಟು ಇತರ ದೇವತೆಗಳಿಗೆ ಪರಮಾತ್ಮನಲ್ಲಿ ಲಯವನ್ನು ಸಮರ್ಥಿಸುತ್ತಾರೆ ಏಳನೇ ಈ ಪರಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु न देवाः परमात्मनि लीयन्ते । तत्प्रतिबिम्बत्व-शून्यत्वात् । किन्तु प्राणे । तत्प्रतिबिम्बत्वात् । श्रूयते हि देवानां प्राणप्रतिबिम्बत्वं परमात्मप्रतिबिम्बत्वाभावश्च प्रतिबिम्ब इत्यादिना । हिरण्यगर्भेतरदेवानां तस्मिन्प्रविष्टानाममात्यभृत्यन्यायेन तस्य लयकाले बहिर्भावं कृत्वा तस्यैकस्यैव परमात्मनि लयात् । अतो न देवानां मोक्ष इति प्राप्ते सूत्रितम् ॥**

ದೇವತೆಗಳು ಪರಮಾತ್ಮನಲ್ಲಿ ಲಯ ಹೊಂದುವುದಿಲ್ಲ, ಕಾರಣ ದೇವತೆಗಳು ಪರಮಾತ್ಮನ ಪ್ರತಿಬಿಂಬರಾಗದ ಕಾರಣ. ಕಿಂತು ದೇವತೆಗಳು ಪ್ರಾಣನ ಪ್ರತಿಬಿಂಬ-ರಾದ್ದರಿಂದ ಪ್ರಾಣನಲ್ಲಿ ಲಯ ಹೊಂದುತ್ತಾರೆ.

"ಪ್ರತಿಬಿಂಬೋ ಹರೇಃ ಪ್ರಾಣಃ ಪ್ರಾಣಸ್ಯಾನ್ಯಾಃ ಕಲಾಃ ಕ್ರಮಾತ್"

ಎಂಬುದಾಗಿ ದೇವತೆಗಳು ಪ್ರಾಣನ ಪ್ರತಿಬಿಂಬರಾಗಿದ್ದಾರೆ ಹೊರತು ಪರಮಾತ್ಮನ ಪ್ರತಿಬಿಂಬರಲ್ಲ ಎಂದು ಶ್ರುತವಾಗುತ್ತಿದೆ.

ಹಿರಣ್ಯಗರ್ಭನಲ್ಲಿ ಪ್ರವಿಷ್ಟರಾದ ಇತರ ದೇವತೆಗಳಿಗೆ ಅಮಾತ್ಯಭೃತ್ಯ-ನ್ಯಾಯದಿಂದ ಲಯಕಾಲದಲ್ಲಿ ಅವರನ್ನು ಹೊರಗೆ ಹಾಕಿ ಆ ಪ್ರಾಣ ಒಬ್ಬನೇ ಪರಮಾತ್ಮನಲ್ಲಿ ಲಯ ಹೊಂದುತ್ತಾನೆ. ಆದ್ದರಿಂದ ದೇವತೆಗಳಿಗೆ (ಪರಮಾತ್ಮನಲ್ಲಿ ಲಯ ಇಲ್ಲದ ಕಾರಣ) ಮೋಕ್ಷ ಇಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

## ॐ तानि परे तथा ह्याह ॐ (४-२-१५)

**ಸೂತ್ರಾರ್ಥ** :- **ತಾನಿ** = ಎಲ್ಲ ದೇವತೆಗಳು ಚತುರ್ಮುಖದ್ವಾರಾ, **ಪರೇ** = ಪರಮಾತ್ಮನಲ್ಲಿ ಲೀಯಂತೇ = ಲಯ ಹೊಂದುತ್ತಾರೆ. ಕುತಃ = ಏಕೆ? ಹಿ = ಯಾವ ಕಾರಣ **ತಥಾ ಆಹ** = 'ಸರ್ವೇ ದೇವಾಃ' ಎಂಬ (ಕೌಷಾರವ) ಶ್ರುತಿಯು ಹಾಗೆ ಪ್ರತಿಪಾದಿಸಿದೆಯೋ ಆ ಕಾರಣ.

### ಸಿದ್ಧಾಂತ

**ಸೂ.ರ.:- एवं च प्राणस्य भगवतः प्रतिबिम्बत्वात् । सर्वे देवा इति श्रुतेः । अतो देवानां प्राणद्वारा परमात्मनि लयसद्भावादुक्तं युक्तमिति सिद्धम् ॥**

"ಪ್ರತಿಬಿಂಬೋ ಹರೇಃ ಪ್ರಾಣಃ ಪ್ರಾಣಸ್ಯಾನ್ಯಾಃ ಕಲಾಃ ಕ್ರಮಾತ್" ಎಂಬುದಾಗಿ ಪ್ರಮಾಣದಂತೆ ಪ್ರಾಣನು ಭಗವಂತನ ಪ್ರತಿಬಿಂಬನಾದ್ದರಿಂದ ಪ್ರಾಣನು ಪರಮಾತ್ಮ-ನಲ್ಲಿ ಲಯ ಹೊಂದುತ್ತಾನೆ. ಇತರ ದೇವತೆಗಳು ಆ ಪ್ರಾಣನ ಪ್ರತಿಬಿಂಬರಾದ್ದರಿಂದ "ಸರ್ವೇ ದೇವಾಃ ಪ್ರಾಣಮಾವಿಶ್ಯ ದೇವೇ ಮುಕ್ತಾ ಲಯಂ ಪರಮೇ ಯಾಂತ್ಯ-ಚಿಂತ್ಯೇ" ಎಂಬುದಾಗಿ ಕೌಷಾರವಶ್ರುತಿ ಹೇಳುವಂತೆ ಪ್ರಾಣದ್ವಾರಾ ಪರಮಾತ್ಮನಲ್ಲಿ ಲಯ ಹೊಂದುತ್ತಾರೆ.

ಆದ್ದರಿಂದ ಇತರ ದೇವತೆಗಳಿಗೆ ಪ್ರಾಣದ್ವಾರಾ ಪರಮಾತ್ಮನಲ್ಲಿ ಲಯ ಇರುವುದರಿಂದ ಅಧಿಕಾರಿಗಳಿಗೆ ಪ್ರಾಣಾವಸಾನತ್ವವನ್ನು ಹೇಳಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

**ಪರಾಧಿಕರಣವು ಮುಗಿಯಿತು.**

ಅಧಿಕರಣ - ೮

# ವಿಭಾಗಾಧಿಕರಣ

## ಸಂಗತಿ

**ಸೂ.ರ.:- अत्र देवादिमुक्तानामीश्वराधीनत्वं समर्थ्यते ।**

ದೇವಾದಿ ಮುಕ್ತರಿಗೆ ಈಶ್ವರಾಧೀನತ್ವವನ್ನು ಸಮರ್ಥಿಸುತ್ತಾರೆ ಎಂಟನೇ ಈ ವಿಭಾಗಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:- ननु मुक्ताः स्वतन्त्रा न पराधीनाः । मुक्तत्वात् । एते देवा इति (गौपवनश्रुतौ.) सायुज्यभाजां सत्यकामत्वश्रुतेश्च । अतो मुक्तानां स्वातन्त्र्यात्परमेश्वरस्य सर्वोत्तमत्वोक्तिर्विरुद्धेति प्राप्ते सूत्रमाह ॥**

ಮುಕ್ತರಾದವರು ಸ್ವತಂತ್ರರೇ ಹೊರತು ಪರಾಧೀನರಲ್ಲ. ಕಾರಣ - ಅವರು ಮುಕ್ತರಾದ್ದರಿಂದ. ಮತ್ತು - "ಏತೇ ದೇವಾ ಏತಮಾತ್ಮಾನಮನುವಿಶ್ಯ ಸತ್ಯಾಃ ಸತ್ಯಕಾಮಾಃ ..." ಎಂಬುದಾಗಿ ಸಾಯುಜ್ಯಮೋಕ್ಷವನ್ನು ಹೊಂದಿದವರಿಗೆ ಸತ್ಯಕಾಮತ್ವಶ್ರುತಿಯೂ ಇರುವುದರಿಂದ. ಆದ್ದರಿಂದ ಮುಕ್ತರಿಗೆ ಸ್ವಾತಂತ್ರ್ಯ ಇರುವುದರಿಂದ ಪರಮಾತ್ಮನಿಗೆ ಸರ್ವೋತ್ತಮತ್ವವನ್ನು ಹೇಳಿದ್ದು ವಿರುದ್ಧ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ अविभागो वचनात् ॐ (४-२-१६)**

**ಸೂತ್ರಾರ್ಥ :-** ಭಗವದಿಚ್ಛಾತದ್ಭಕ್ತೇಚ್ಛಾನಾಂ = ಭಗವದಿಚ್ಛಾ-ತದ್ಭಕ್ತೇಚ್ಛಾಗಳಿಗೆ **ಅವಿಭಾಗಃ** = ವಿಷಯೈಕ್ಯ ಇದೆ ನ ತು ವಿರೋಧಃ = ಹೊರತು ವಿರೋಧವಿಲ್ಲ. ಕುತಃ = ಏಕೆ? **ವಚನಾತ್** = 'ಏತೇ ದೇವಾಃ' ಎಂದು ಶ್ರುತಿ ಇರುವುದರಿಂದ.

## ಸಿದ್ಧಾಂತ

**ಸೂ.ರ.:- एवं च परतन्त्रा एव मुक्ताः । मुक्तत्वात् । स्वतन्त्रस्य संसारायोगात् । नापि मुक्तौ स्वातन्त्र्ये मुक्तिर्नाम घटते । न हि प्रेक्षापूर्वकारिणो निगडबद्धं स्वाधीनं सन्तं मुक्तौ स्वातन्त्र्यसम्भवे**

**मोचयन्ति । अपि तु मुक्तावपि स्वाधीनमेव । येनेह मुक्तौ स्वतन्त्रान् प्रेक्षापूर्वकारी परमेश्वरो मोचयतीति प्रतिपद्येमहि । न च श्रुतिविरोधः । श्रुत्या परमेश्वरकामानुसारिकामत्वरूपपारिभाषिकसत्यकामत्वस्यैवाभि-धानात् । कामेनेति (तै.आ.३-१५-४) श्रुतेः । मुक्तानामिति (ब्राह्मे) स्मृतेश्च । अतो मुक्तानां स्वातन्त्र्याभावेन परमेश्वरस्यैव सर्वोत्तमत्व-मिति सिद्धम् ॥**

ಮುಕ್ತರು ಪರತಂತ್ರರೇ ಆಗಿದ್ದಾರೆ. ಮುಕ್ತಿಯಲ್ಲಿ ಸ್ವಾತಂತ್ರ್ಯವಿರುವುದಾದರೆ ಮುಕ್ತಿ ಎನ್ನುವುದು ಕೂಡುವುದಿಲ್ಲ. ನಿಗಡಬದ್ಧನಾದವನು ಸ್ವಾಧೀನವಾಗಿ ಇರುವಾಗ ಅವನಿಗೆ ಮುಕ್ತಿಯಾದಾಗ ಸ್ವಾತಂತ್ರ್ಯ ಸಂಭವಿಸುವುದಾದರೆ ಪ್ರೇಕ್ಷಾಪೂರ್ವಕಾರಿಗಳು ಅವನನ್ನು ಮುಕ್ತಗೊಳಿಸುವುದಿಲ್ಲ. ಕಿಂತು ಮುಕ್ತಿಯಾದಾಗಲೂ ಸ್ವಾಧೀನನಾಗಿ ಇರುವುದನ್ನೇ ಅಪೇಕ್ಷಿಸುತ್ತಾರೆ.

ಒಂದುವೇಳೆ ಮುಕ್ತಿಯಾದಾಗ ಸ್ವತಂತ್ರನಾಗಿರುವುದನ್ನು ಅಪೇಕ್ಷಿಸುವುದಾಗಿದ್ದರೆ ಇಲ್ಲಿಯೂ ಸಹ ಪ್ರೇಕ್ಷಾಪೂರ್ವಕಾರಿಯಾದ ಪರಮೇಶ್ವರನು ಮುಕ್ತಿಯಲ್ಲಿ ಸ್ವತಂತ್ರರನ್ನಾಗಿಗೊಳಿಸಿ ಮುಕ್ತಗೊಳಿಸುತ್ತಾನೆ ಎಂದು ತಿಳಿಯಬಹುದಿತ್ತು.

ಹಾಗಾದರೆ (ಮುಕ್ತಿಯಲ್ಲಿ ಪಾರತಂತ್ರ್ಯವನ್ನು ಅಂಗೀಕರಿಸುವುದಾದರೆ) ಸತ್ಯ-ಕಾಮತ್ವ ಶ್ರುತಿವಿರೋಧ ಬರುವುದಲ್ಲ? ಎಂದರೆ, ಶ್ರುತಿವಿರೋಧ ಬರುವುದಲ್ಲ. ಕಾರಣ– ಶ್ರುತಿಯು ಪರಮೇಶ್ವರಕಾಮಾನುಸಾರಿಕಾಮತ್ವರೂಪವಾದ ಪಾರಿಭಾಷಿಕ-ವಾದ ಸತ್ಯಕಾಮತ್ವವನ್ನು ಪ್ರತಿಪಾದಿಸುತ್ತಿರುವುದರಿಂದ. ಅದಕ್ಕೆ ಪೋಷಕವಾಗಿ

"ಕಾಮೇನ ಮೇ ಕಾಮ ಆಗಾದ್ಧೃದಯಾದ್ಧೃದಯಂ ಮೃತ್ಯೋಃ" (ತೈ.ಆ. 3-15-4)

ಎಂಬುದಾಗಿ ಶ್ರುತಿ ಇರುವುದರಿಂದ. ಮತ್ತು

ಮುಕ್ತಾನಾಂ ಸತ್ಯಕಾಮತ್ವಂ ಸಾಮರ್ಥ್ಯಂ ಚ ಪರಸ್ಯ ತು ।
ಕಾಮಾನುಕೂಲಕಾಮತ್ವಂ ನಾನ್ಯತ್ತೇಷಾಂ ವಿಧೀಯತೇ ॥

ಎಂಬುದಾಗಿ ಸ್ಮೃತಿಯೂ (ಬ್ರಾಹ್ಮವಚನವೂ) ಇರುವುದರಿಂದ. ಆದ್ದರಿಂದ ಮುಕ್ತರಿಗೆ ಸ್ವಾತಂತ್ರ್ಯ ಇಲ್ಲವಾದ್ದರಿಂದ ಪರಮೇಶ್ವರನಿಗೇನೇ ಸರ್ವೋತ್ತಮತ್ವವಿದೆ ಎಂದು ಸಿದ್ಧವಾಗುತ್ತದೆ.

ವಿಭಾಗಾಧಿಕರಣವು ಮುಗಿಯಿತು.

ಅಧಿಕರಣ - 9

## ತದೋಽಕೋಽಧಿಕರಣ

### ಸಂಗತಿ

ಸೂ.ರ.:- अत्र देवानां मोक्षमुक्त्वा मनुष्याणां मुक्त्यर्थं देहोत्क्रमणस्याज्ञमरणविलक्षणत्वं समर्थ्यते ।

ಇಲ್ಲಿಯವರೆಗೆ ದೇವತೆಗಳ ಮೋಕ್ಷವನ್ನು (ಸ್ವೋತ್ತಮಪ್ರವೇಶದ್ವಾರಾ ದೇಹ-ಲಯವನ್ನು) ಹೇಳಿ, ಪ್ರಕೃತ ಮನುಷ್ಯರಿಗೆ ಮೋಕ್ಷವಾಗುವುದಕ್ಕಾಗಿ ದೇಹದಿಂದ ಉತ್ಕ್ರಮಣವು (ಚರಮದೇಹದಲ್ಲಿ ಸುಷುಮ್ನಾನಾಡಿಯ ಮೂಲಕ ಹೊರಹೋಗು-ವುದು) ಅಜ್ಞಾನಿಗಳ ಮರಣಕ್ಕಿಂತಲೂ ವಿಲಕ್ಷಣವಾಗಿದೆ ಎಂದು ಸಮರ್ಥಿಸುತ್ತಾರೆ ಒಂಭತ್ತನೇ ಈ ತದೋಽಕೋಽಧಿಕರಣದಲ್ಲಿ.

### ಪೂರ್ವಪಕ್ಷ

ಸೂ.ರ.:- ननु ज्ञानिचरममरणं प्रारब्धनिबन्धनत्वात्तत्पूर्वमरणवत्पृथग्जनमरणदर्शनसदृशम् । ततश्च ज्ञानिनां देहादुत्क्रमणस्य पामरमरणवदेव वैलक्षण्याभावान्न ज्ञानमतिशयवदिति प्राप्ते सूत्रं पठति ॥

ಜ್ಞಾನಿಯ ಚರಮಮರಣವು ಪ್ರಾರಬ್ಧನಿಬಂಧನವಾದ್ದರಿಂದ ಅದರ ಹಿಂದಿನ ಮರಣಗಳಂತೆ ಸಾಮಾನ್ಯಜನರ ಮರಣ ಸದೃಶವಾಗಿದೆ. ಆದ್ದರಿಂದ ಜ್ಞಾನಿಗಳ ದೇಹೋತ್ಕ್ರಮಣಕ್ಕೆ ಪಾಮರಮರಣಕ್ಕಿಂತಲೂ ವೈಲಕ್ಷಣ್ಯ ಇಲ್ಲವಾದ್ದರಿಂದ (ಜ್ಞಾನಿಯ ದೇಹೋತ್ಕ್ರಮಣವು ಅಜ್ಞಾನಿಮರಣದಂತೆಯೇ ಆದ್ದರಿಂದ) ಜ್ಞಾನವು ಅತಿಶಯ-ವುಳ್ಳದ್ದಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ तदोकोऽग्रज्वलनं तत्प्रकाशितद्वारो विद्यासामर्थ्यात् तच्छेषगत्यनुस्मृतियोगाच्च हार्दानुगृहीतः शताधिकया ॐ**

(४-२-१७)

**ಸೂತ್ರಾರ್ಥ** :- ತಸ್ಮಿನ್ = ಉತ್ಕ್ರಾಂತಿಕಾಲದಲ್ಲಿ **ತದೋಕೋಽಗ್ರಜ್ವಲನಂ** = ತಸ್ಯ - ಪರಮಾತ್ಮನ, ಓಕಸಃ - ಆಶ್ರಯಭೂತವಾದ ಹೃದಯದ, ಅಗ್ರೇ - ಅಗ್ರ-ಭಾಗದಲ್ಲಿ ಜ್ವಲನಂ ಭವತಿ - ಜ್ವಲನ (ಪ್ರಕಾಶ) ಉಂಟಾಗುತ್ತದೆ. ಅಥ = ಅನಂತರ **ತತ್ಪ್ರಕಾಶಿತದ್ವಾರಃ** = ಆ ಪ್ರಕಾಶದಿಂದ ವಿದ್ಯೋತಿತವಾದ ಮಾರ್ಗ ಉಳ್ಳವನಾಗಿ, ದೇಹಾಜ್ಜೀವ ಉತ್ಕ್ರಾಮತಿ = ದೇಹದಿಂದ ಜೀವನು ಉತ್ಕ್ರಾಂತನಾಗುತ್ತಾನೆ.

ನನು ಕಥಮೇತದ್ಯುಜ್ಯತೇ ? = ಇದು ಹೇಗೆ ಉಪಪನ್ನವಾಗುತ್ತದೆ? **ವಿದ್ಯಾ-ಸಾಮರ್ಥ್ಯಾತ್** = ಅಪರೋಕ್ಷಜ್ಞಾನಸಾಮರ್ಥ್ಯದಿಂದ ಅದು ಉಪಪನ್ನವಾಗುತ್ತದೆ, **ತಚ್ಛೇಷಗತ್ಯನುಸ್ಮೃತಿಯೋಗಾಚ್ಚ** = ವಿದ್ಯಾಂಗ ಪ್ರಾಪ್ಯ ಸ್ಮರಣ ಸಾಹಿತ್ಯದಿಂದಾಗಿಯೂ ಕೂಡ. ಕಿಂಚ = ಮತ್ತು **ಹಾರ್ದಾನುಗೃಹೀತಃ** = ಹೃದಯಸ್ಥ ಭಗವಂತನ ಅನುಗ್ರಹ ಪಡೆದವನಾಗಿ **ಶತಾಧಿಕಯಾ** = ಸುಷುಮ್ನಾ ನಾಡಿಯಿಂದ, ಯಾತಿ = ಹೊರಗೆ ಹೋಗುತ್ತಾನೆ (ಉತ್ಕ್ರಾಂತನಾಗುತ್ತಾನೆ).

## ಸಿದ್ಧಾಂತ

**ಸೂ.ರ.:– एवं च ज्ञानसामर्थ्यात् । तस्य हृदयस्याग्रं प्रद्योतते । परमात्मा तत्प्रकाशितद्वारं जीवमादाय सुषुम्नया नाड्या निष्क्रामति । प्राण एनमनुव्रजति । तस्य हैतस्येति (बृ.६-४-२) श्रुतेः । न च ज्ञान-सामर्थ्यात्पूर्वमरणस्याप्येवंविधत्वप्रसङ्गः । गत्यनुस्मरणरूपसहकारि-विरहात् । अतो ज्ञान्युत्क्रमणस्याज्ञमरणवैलक्षण्येन ज्ञानमाहात्म्यं युक्तमिति सिद्धम् ॥**

ಜ್ಞಾನಿಯ ಚರಮದೇಹದ ಮರಣಕಾಲದಲ್ಲಿ ಅಪರೋಕ್ಷಜ್ಞಾನದ ಸಾಮರ್ಥ್ಯ-ದಿಂದಾಗಿ ಜ್ಞಾನಿಯ ಹೃದಯದ ಅಗ್ರಭಾಗವು ಪ್ರಕಾಶಿಸಲ್ಪಡುತ್ತದೆ. ಆ ಪ್ರಕಾಶದಿಂದ ಪ್ರಕಾಶಿತವಾದ ದ್ವಾರ ಉಳ್ಳ ಜೀವನನ್ನು ಪರಮಾತ್ಮನು ಕರೆದುಕೊಂಡು ಸುಷುಮ್ನಾ-ನಾಡಿಯಿಂದ ಉತ್ಕ್ರಾಂತನಾಗುತ್ತಾನೆ. ಪ್ರಾಣನು ಅವನನ್ನು ಹಿಂಬಾಲಿಸುತ್ತಾನೆ. ಆದಕ್ಕೆ ಪೋಷಕವಾಗಿ "ತಸ್ಯ ಹೈತಸ್ಯ ಹೃದಯಸ್ಯಾಗ್ರಂ ಪ್ರದ್ಯೋತತೇ" (ಬೃ.ಉ. 6-4-2) ಎಂದು ಶ್ರುತಿ ಇರುವುದರಿಂದ.

ಅಪರೋಕ್ಷಜ್ಞಾನಸಾಮರ್ಥ್ಯದಿಂದ ಹೀಗಾಗುವುದಾದರೆ ಹಿಂದಿನ ಮರಣ-

ಗಳಲ್ಲಿಯೂ ಸಹ ಇದೇ ರೀತಿ ಆಗಲಿ ? ಎಂಬ ಶಂಕೆಗೆ ಅವಕಾಶವಿಲ್ಲ. ಆಗ ಗತ್ಯನುಸ್ಮರಣರೂಪ ಸಹಕಾರಿ ಇಲ್ಲದಿರುವುದರಿಂದ.

ಆದ್ದರಿಂದ ಜ್ಞಾನಿಯ ಉತ್ಕ್ರಮಣವು ಅಜ್ಞಾನಿಯ ಮರಣಕ್ಕಿಂತ ವಿಲಕ್ಷಣ-ವಾದ್ದರಿಂದ ಜ್ಞಾನಮಾಹಾತ್ಮ್ಯವು ಯುಕ್ತ ಎಂದು ಸಿದ್ಧವಾಗುತ್ತದೆ.

## ಸೂತ್ರ - 18

**ಸೂ.ರ.:– ननु यदि प्रकाशितनाडीद्वारो निष्क्रामति तर्ह्यज्ञव-न्नाड्यन्तस्तमसैव गमनं स्यात् । यद्यन्तरप्यस्ति प्रकाशस्तर्हि द्वारपद-वैयर्थ्यमित्याशङ्कां परिहरत्सूत्रं पठित्वा तच्छेषमात्रं पूरयति ॥**

ಜ್ಞಾನಿಯು ಒಂದುವೇಳೆ ಪ್ರಕಾಶಿತನಾಡೀದ್ವಾರ ಉಳ್ಳವನಾಗಿ ನಿಷ್ಕ್ರಾಂತ-ನಾಗುವುದಾದರೆ ಆಗ ಅಜ್ಞಾನಿಯಂತೆ ನಾಡಿಯ ಒಳಗೆ ಕತ್ತಲೆಯಿಂದಲೇ ಗಮನ ಮಾಡಬೇಕಾಗುತ್ತದೆ. ಒಂದುವೇಳೆ ಒಳಗೂ ಸಹ ಪ್ರಕಾಶ ಇರುವುದಾದರೆ ಆಗ ದ್ವಾರಪದವೈಯರ್ಥ್ಯ ಬರುತ್ತದೆ ಎಂಬುದಾಗಿ ಶಂಕೆ ಬಂದರೆ, ಆದನ್ನು ಪರಿಹರಿಸುವ ಸೂತ್ರವನ್ನು ಹೇಳಿ, ಆದರ ಶೇಷವನ್ನು ಮಾತ್ರ ಪೂರ್ತಿಗೊಳಿಸುತ್ತಾರೆ –

### ॐ रश्म्यनुसारी ॐ (४-२-१८)

**ಸೂತ್ರಾರ್ಥ :-** ರಶ್ಮ್ಯನುಸಾರೀ = ಅಂತಸ್ಥಿತ ಆದಿತ್ಯಪ್ರಕಾಶಾನುಸಾರಿ-ಯಾದವನಾಗಿ ಜೀವನು ನಿಷ್ಕ್ರಾಂತನಾಗುತ್ತಾನೆ.

**ಸೂ.ರ.:– एवं च ज्ञानिनो नाड्यन्तस्तु सौररश्मिप्रकाशेनेश्वर-मनुसृत्य देहाद्गमनात् द्वारपदावैयर्थ्यात् । सहस्रं वेति (पौत्रायण.) श्रुतेः । अत उक्तं युक्तमिति सिद्धम् ॥**

ಜ್ಞಾನಿಯು ನಾಡಿಯ ಒಳಗೆ ಸೌರರಶ್ಮಿಪ್ರಕಾಶದಿಂದ ಈಶ್ವರನನ್ನು ಅನುಸರಿಸಿ ದೇಹದಿಂದ ಉತ್ಕ್ರಾಂತನಾಗುತ್ತಾನೆಯಾದ್ದರಿಂದ ದ್ವಾರಪದವೈಯರ್ಥ್ಯವಿಲ್ಲ.

"ಸಹಸ್ರಂ ವಾ ಆದಿತ್ಯಸ್ಯ ರಶ್ಮಯಃ ಆಸು ನಾಡೀಷ್ವಾತತಾಸ್ತತ್ರ ಶ್ವೇತಃ ಸುಷುಮ್ನೋ ಬ್ರಹ್ಮಯಾನಃ ಸುಷುಮ್ನಾಯಾಮಾತತಸ್ತತ್ಪ್ರಕಾಶೇನೈಷ ನಿರ್ಗಚ್ಛತಿ"

ಎಂಬುದಾಗಿ ಪೌತ್ರಾಯಣಶ್ರುತಿ ಇರುವುದರಿಂದ. ಆದ್ದರಿಂದ ಹೇಳಿದ್ದು ಯುಕ್ತವಾಗಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 19

**ಸೂ.ರ.:– ननु किं सर्वज्ञानिनां रश्म्यनुसारेणोत्क्रमणं किं वा केषाञ्चित् । आद्ये रात्रौ पर्यवसितकर्मणां अपि ज्ञानिनामपेक्षितोत्क्रान्तिर्न स्यात् । रात्रौ रश्म्यभावात् । तथा च प्रतिबन्धककर्माभावेऽपि संसारानिवृत्तौ सदाऽनिवृत्तिप्रसङ्गः । न द्वितीयः । केषाञ्चित् ज्ञानिनामुत्क्रमणस्य अविलक्षणत्वापातादित्याक्षिप्य समादधत्सूत्रं पठति-**

ರಶ್ಮ್ಯನುಸಾರೇಣ ಉತ್ಕ್ರಮಣವನ್ನು ಎಲ್ಲ ಜ್ಞಾನಿಗಳಿಗೂ ಹೇಳುತ್ತೀರೋ? ಅಥವಾ ಕೆಲವು ಜ್ಞಾನಿಗಳಿಗೆ ಮಾತ್ರ ಹೇಳುತ್ತೀರೋ ?

ಎಲ್ಲ ಜ್ಞಾನಿಗಳಿಗೂ ಹೇಳುವುದು ಯುಕ್ತವಾಗುವುದಿಲ್ಲ. ಕಾರಣ ರಾತ್ರಿಯಲ್ಲಿ ಯಾವ ಜ್ಞಾನಿಗಳ ಪ್ರಾರಬ್ಧಕರ್ಮವು ಪರ್ಯವಸಿತವಾಗಿದೆ ಅಂತಹ ಜ್ಞಾನಿಗಳಿಗೆ ಅಪೇಕ್ಷಿತವಾದ ಉತ್ಕ್ರಾಂತಿಯು ಆಗದೇ ಹೋಗಬೇಕಾಗುತ್ತದೆ. ರಾತ್ರಿಯಲ್ಲಿ ಸೌರರಶ್ಮಿಗಳು ಇರುವುದಿಲ್ಲವಾದ್ದರಿಂದ. ಹಾಗಾಗಿ ಪ್ರತಿಬಂಧಕವಾದ ಕರ್ಮಗಳು ಇಲ್ಲದೇ ಹೋದರೂ ಸಹ ಸಂಸಾರನಿವೃತ್ತಿ ಆಗುವುದಿಲ್ಲ ಎಂದಾದರೆ, ಸಂಸಾರವು ಯಾವಾಗಲೂ ನಿವೃತ್ತವಾಗದೇ ಹೋಗಬೇಕಾಗುತ್ತದೆ.

ಇನ್ನು ಕೆಲವು ಜ್ಞಾನಿಗಳಿಗೆ ರಶ್ಮ್ಯನುಸಾರೇಣ ಉತ್ಕ್ರಮಣವನ್ನು ಹೇಳುವುದಾದರೆ ಅದೂ ಸರಿಯಾಗುವುದಿಲ್ಲ. ಕಾರಣ ಕೆಲವು ಜ್ಞಾನಿಗಳಿಗೆ ರಶ್ಮ್ಯನುಸಾರೇಣ ಉತ್ಕ್ರಮಣ, ಮತ್ತೆ ಕೆಲವು ಜ್ಞಾನಿಗಳಿಗೆ ಬೇರೆ ರೀತಿಯಿಂದ ಉತ್ಕ್ರಮಣ ಎಂಬ ವೈಲಕ್ಷಣ್ಯವು ಯುಕ್ತವಾಗುವುದಿಲ್ಲ- ವಾದ್ದರಿಂದ. ಅರ್ಥಾತ್ ಯಾವ ಜ್ಞಾನಿಗಳಿಗೆ ರಶ್ಮ್ಯನುಸಾರೇಣ ಉತ್ಕ್ರಮಣ ಇಲ್ಲವೋ ಅಂತಹ ಕೆಲವು ಜ್ಞಾನಿಗಳ ಉತ್ಕ್ರಮಣವು ವಿಲಕ್ಷಣವಲ್ಲದೇ ಹೋಗಬೇಕಾಗುತ್ತದೆ ಎಂಬುದಾಗಿ ಆಕ್ಷೇಪ ಬಂದರೆ, ಅದನ್ನು ನಿರಾಕರಿಸಿ ಸಮಾಧಾನ ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ निशि नेति चेन्न सम्बन्धात् ॐ (४-२-१९)**

**ಸೂತ್ರಾರ್ಥ** :- ನನು **ನಿಶಿ** = ರಾತ್ರಿಯಲ್ಲಿ, ಆದಿತ್ಯರಶ್ಮೀನಾಮಭಾವಾತ್ = ಆದಿತ್ಯರಶ್ಮಿಗಳು ಇಲ್ಲವಾದ್ದರಿಂದ, ಜ್ಞಾನಿನಃ ಉತ್ಕ್ರಮಣಂ **ನೇತಿ ಚೇನ್ನ** = ಜ್ಞಾನಿಗೆ ಉತ್ಕ್ರಮಣವು ಇಲ್ಲ ಎಂದು ಶಂಕೆ ಬಂದರೆ, ಅದು ಸರಿಯಲ್ಲ, ಕುತಃ = ಏಕೆ? **ಸಂಬಂಧಾತ್** = ಸೂರ್ಯರಶ್ಮಿಗಳ ಸಂಬಂಧ ಯಾವಾಗಲೂ ಇರುವುದರಿಂದ.

**ಸೂ.ರ.:- एवं च रात्रौ बाह्यादित्याभावेऽपि अन्तरादित्यस्य सत्त्वात् । तद्रश्मिसम्बन्धस्य सर्वदा नाडीषु सद्भावेन रात्रावेव मरणोपपत्तेः । तथा च ज्ञानिनां रात्रौ मरणं भवतीति सिद्धम् ॥**

ರಾತ್ರಿಯಲ್ಲಿ ಬಾಹ್ಯ ಆದಿತ್ಯ ಇಲ್ಲದಿದ್ದರೂ ಸಹ ಅಂತರಾದಿತ್ಯ ಇದ್ದೇ ಇರುತ್ತಾನೆ. ಹೀಗಾಗಿ ಅಂತರಾದಿತ್ಯನ ರಶ್ಮಿಸಂಬಂಧವು ನಾಡಿಗಳಲ್ಲಿ ಯಾವಾಗಲೂ ಇರುವುದರಿಂದ ರಾತ್ರಿಯಲ್ಲಿಯೇ ಮರಣವು ಉಪಪನ್ನವಾಗುತ್ತದೆ.

ಆದ್ದರಿಂದ ಜ್ಞಾನಿಗಳಿಗೆ ರಾತ್ರಿಯಲ್ಲಿ ಮರಣ ಉಂಟಾಗುತ್ತದೆ, ರಾತ್ರಿ-ಯಲ್ಲಿಯೂ ಉತ್ಕ್ರಾಂತಿಯು ಉಪಪನ್ನವಾಗುತ್ತದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 20

**ಸೂ.ರ.:- ननु नाडीरश्मिसम्बन्धः सर्वदाऽस्तीति नाम किम् । सदातन उत देहपातपूर्वकालीनः । आहोस्विद्यावद्देहभावी । पक्षत्रय-स्याप्यसम्भवः । सदा नाडीनामभावात् । कदाचिज्ज्ञानिनोऽपि तमसो-त्क्रान्तिप्रसङ्गात् । तन्नियमे प्रमाणाभावात् इति प्राप्ते समादधत्सूत्रमाह ॥**

'ನಾಡೀರಶ್ಮಿಸಂಬಂಧವು ಸರ್ವದಾ ಇರುತ್ತದೆ' ಎಂದರೆ ಅರ್ಥವೇನು ? ಸದಾತನ (ಯಾವಾಗಲೂ ಇರುವುದು) ಎಂದು ಅರ್ಥವೋ ? ಅಥವಾ ದೇಹಪಾತಪೂರ್ವಕಾಲೀನ (ದೇಹ ಬೀಳುವ ಮುಂಚೆ ಇರುವುದು) ಎಂದು ಅರ್ಥವೋ ? ಅಥವಾ ಯಾವದ್ದೇಹಭಾವಿ (ಎಲ್ಲಿಯವರೆಗೆ ದೇಹ ಇರುವುದೋ ಅಲ್ಲಿಯವರೆಗೂ ಇರುವುದು) ಎಂದು ಅರ್ಥವೋ ?

ಸದಾತನ ಎಂಬ ಮೊದಲನೇ ಪಕ್ಷ ಸರಿಯಲ್ಲ, ಕಾರಣ ನಾಡಿಗಳು ಸದಾ ಇರುವುದಿಲ್ಲವಾದ್ದರಿಂದ. ಇನ್ನು ದೇಹಪಾತಪೂರ್ವಕಾಲೀನ ಎಂಬ ಎರಡನೇ ಪಕ್ಷವೂ

ಯುಕ್ತವಲ್ಲ. ಕಾರಣ ಜ್ಞಾನಿಗೂ ಸಹ ಕೆಲವೊಮ್ಮೆ ಕತ್ತಲೆಯಲ್ಲಿ ಉತ್ಕ್ರಾಂತಿ ಆಗಬೇಕಾದ ಪ್ರಸಂಗ ಬರುತ್ತದೆ. ಯಾವದ್ದೇಹಭಾವಿ ಎಂಬ ಮೂರನೇ ಪಕ್ಷವೂ ಸರಿಯಲ್ಲ. ಕಾರಣ ಆ ವಿಷಯದಲ್ಲಿ ಪ್ರಮಾಣ ಇಲ್ಲವಾದ್ದರಿಂದ ಎಂಬುದಾಗಿ ಆಕ್ಷೇಪ ಬಂದರೆ, ಅದಕ್ಕೆ ಸಮಾಧಾನ ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ यावद्देहभावित्वाद्दर्शयति च ॐ (४-२-२०)**

**ಸೂತ್ರಾರ್ಥ :- ಯಾವದ್ದೇಹಭಾವಿತ್ವಾತ್** = ರಶ್ಮಿಸಂಬಂಧವು ಯಾವಚ್ಛರೀರ-ಭಾವಿಯಾದ್ದರಿಂದ ರಾತ್ರಾವಪಿ ಜ್ಞಾನಿನಃ ಉತ್ಕ್ರಮಣಂ ಯುಕ್ತಂ = ರಾತ್ರಿಯಲ್ಲಿಯೂ ಸಹ (ಜ್ಞಾನಿಗೆ) ಉತ್ಕ್ರಮಣವು ಯುಕ್ತವಾಗುತ್ತದೆ. ಕುತಃ = ಏಕೆ? **ಚ** (ಯತಃ) = ಯಾವ ಕಾರಣ, **ದರ್ಶಯತಿ** = ''ಸಂಸೃಷ್ಟಾ ವಾ ಏತೇ'' ಎಂಬ (ಮಾಧ್ಯಂದಿನಾಯನ) ಶ್ರುತಿಯು ಹಾಗೆ ಪ್ರತಿಪಾದಿಸುತ್ತಿದೆಯೋ ಆ ಕಾರಣ ಎಂದರ್ಥ.

**ಸೂ.ರ.:– एवं च निर्दिष्टश्रुत्या ज्ञानिनो रात्रौ मरणमस्तीति सिद्धम् ॥**

''ಸಂಸೃಷ್ಟಾ ವಾ ಏತೇ ರಶ್ಮಯಶ್ಚ ನಾಡ್ಯಶ್ಚ ನೈಷಾಂ ವಿಯೋಗೋ ಯಾವದಿದಂ ಶರೀರಮತ ಏತೈಃ ಪಶ್ಯತ್ಯೇತೈರುತ್ಕ್ರಾಮತ್ಯೇತೈಃ ಪ್ರವರ್ತತೇ''

ಎಂಬ ನಿರ್ದಿಷ್ಟಶ್ರುತಿಪ್ರಮಾಣ ಇರುವುದರಿಂದ ಜ್ಞಾನಿಗೆ ರಾತ್ರಿಯಲ್ಲಿ ಮರಣ (ಉಪಪನ್ನ) ಇದೆ ಎಂದು ಸಿದ್ಧವಾಗುತ್ತದೆ.

## ಸೂತ್ರ – 21

**ಸೂ.ರ.:– ननु व्यर्थोऽयं ज्ञानिनो रात्रावुत्क्रमणसम्भवप्रतिपादनायासः । दक्षिणे मरणादिति वचनात् । मोक्षार्थं तेषां दक्षिणायनोत्क्रान्त्ययोगात् । तद्वद्रात्रावप्युत्क्रान्त्यभावोपपत्तेरिति प्राप्ते सूत्रमाह ॥**

ಜ್ಞಾನಿಗೆ ರಾತ್ರಿಯಲ್ಲಿ ಉತ್ಕ್ರಮಣಸಂಭವಪ್ರತಿಪಾದನಾಯಾಸವು ವ್ಯರ್ಥವೇ ಆಗಿದೆ. ಕಾರಣ – ''ದಕ್ಷಿಣೇ ಮರಣಾದ್ಯಾತಿ ಸ್ವರ್ಗಂ ಬ್ರಹ್ಮೋತ್ತರಾಯಣೇ'' ಎಂಬುದಾಗಿ ವಚನ ಇರುವುದರಿಂದ, ಮೋಕ್ಷಕ್ಕಾಗಿ ಅವರಿಗೆ ದಕ್ಷಿಣಾಯನೋತ್ಕ್ರಾಂತಿ ಕೂಡುವುದಿಲ್ಲವಾದ್ದರಿಂದ ಅದರಂತೆ ರಾತ್ರಿಯಲ್ಲಿಯೂ ಸಹ ಉತ್ಕ್ರಾಂತ್ಯಭಾವವು

ಉಪಪನ್ನವಾಗುವುದರಿಂದ, ಎಂಬುದಾಗಿ ಆಕ್ಷೇಪ ಬಂದರೆ, ಸಮಾಧಾನಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

## ॐ अतश्चायनेऽपि हि दक्षिणे ॐ (४-२-२१)

**ಸೂತ್ರಾರ್ಥ :-** **ಚ** ಶಬ್ದವು ಪ್ರತಿಜ್ಞಾದ್ವಯಸಮುಚ್ಚಾಯಕವಾಗಿದೆ. **ಅಪಿ** = 'ದಕ್ಷಿಣೇ ಮರಣಾತ್' ಎಂದು ಸ್ಮೃತಿ ಇದ್ದರೂ ಸಹ **ದಕ್ಷಿಣೇ ಅಯನೇ** = ದಕ್ಷಿಣಾಯನ ಕಾಲದಲ್ಲಿ, ಜ್ಞಾನಿನಃ ಉತ್ಕ್ರಾಂತಿಃ ಯುಕ್ತಾ = ಜ್ಞಾನಿಗೆ ಉತ್ಕ್ರಾಂತಿಯು ಯುಕ್ತವಾಗುತ್ತದೆ. ಕುತಃ = ಏಕೆ ? **ಹಿ** = ಯಾವ ಕಾರಣ **ಅತಃ** = ಸೌರರಶ್ಮಿ-ಸಹಸ್ರನಾಡೀಸಂಬಂಧವು ಆಗಲೂ ಇರುವುದರಿಂದ. ಏವಂ = ಅದೇ ರೀತಿಯಾಗಿ **ಅತಃ** = ದಕ್ಷಿಣಾಯನ ದೃಷ್ಟಾಂತದಿಂದ ರಾತ್ರಿಯಲ್ಲಿ ಉತ್ಕ್ರಾಂತ್ಯಭಾವವನ್ನು ಹೇಳಬಾರದು.

**ಸೂ.ರ.:-** **एवं च दक्षिणे मरणादिति स्मृतेर्दक्षिणायनसंज्ञिक-नाडीमरणस्य स्वर्गहेतुत्वम् । उत्तरायणसंज्ञिकनाडीमरणस्य जनो-लोकादिहेतुत्वमित्यर्थत्वात् । शतं पञ्चैवेति (नारायणाध्यात्म.) वचनात् । ये सद्यो विष्णुलोकं गच्छन्ति ते सुषुम्नया निष्क्रामन्ति । त उत्तरायणरश्मिभिर्निर्गच्छन्तीति विवेकसद्भावात् । अतो ज्ञानिना-मुत्क्रमणस्याज्ञमरणवैलक्षण्यात्ज्ञानमाहात्म्यं युक्तमिति सिद्धम् ॥**

"ದಕ್ಷಿಣೇ ಮರಣಾದ್ಯಾತಿ ಸ್ವರ್ಗಂ ಬ್ರಹ್ಮೋತ್ತರಾಯಣೇ"

ಎಂಬ ಸ್ಮೃತಿಗೆ "ದಕ್ಷಿಣಾಯನಸಂಜ್ಞಿಕನಾಡೀಮರಣ ಸ್ವರ್ಗಹೇತುವಾಗಿದೆ. ಉತ್ತರಾಯಣಸಂಜ್ಞಿಕನಾಡೀಮರಣವು ಜನೋಲೋಕಾದಿಹೇತುವಾಗಿದೆ" ಎಂದು ಅರ್ಥ ತಿಳಿಯಬೇಕು. ಕಾರಣ -

> ಶತಂ ಪಂಚೈವ ಸೂರ್ಯಸ್ಯ ದಕ್ಷಿಣಾಯನರಶ್ಮಯಃ ।
> ತಾವಂತ ಏವ ನಿರ್ದಿಷ್ಟಾ ಉತ್ತರಾಯಣರಶ್ಮಯಃ ॥
> ತೇ ಸರ್ವೇ ದೇಹಸಂಬದ್ಧಾಃ ಸರ್ವದಾ ಸರ್ವದೇಹಿನಾಮ್ ।
> ಮಹರ್ಲೋಕಾದಿಗಂತಾರಃ ಉತ್ತರಾಯಣರಶ್ಮಿಭಿಃ ॥

ನಿರ್ಗಚ್ಛಂತೀತರೈಶ್ಚಾಪಿ ಯೈರೇಷ್ವನ್ಯೇತರಾ ಗತಿಃ ॥
ಉತ್ತರಂ ದಕ್ಷಿಣಮಿತಿ ತ ಏವ ತು ನಿಗದ್ಯತೇ ।
ನ ತು ಕಾಲವಿಶೇಷೋಽಸ್ತಿ ಜ್ಞಾನಿನಾಂ ನಿಯಮಾತ್ಫಲಮ್ ॥
ದದಾತಿ ಕಾಲೇಽನುಗುಣೇ ಫಲಂ ಕಿಂಚಿದ್ವಿಶಿಷ್ಯತೇ ।
ಆತ್ಯುತ್ತಮಾನಾಂ ಕೇಷಾಂಚಿನ್ನ ವಿಶೇಷೋಽಸ್ತಿ ಕಾಲತಃ ॥

ಎಂಬುದಾಗಿ ಆ ವಿಷಯದಲ್ಲಿ ಪ್ರಮಾಣ (ನಾರಾಯಣ ಅಧ್ಯಾತ್ಮವಚನ) ಇರುವುದರಿಂದ.

ಯಾರು ಸದ್ಯಃ ವಿಷ್ಣುಲೋಕವನ್ನು ಕುರಿತು ಹೋಗುವರೋ ಅವರು ಸುಷುಮ್ನಾ ನಾಡಿಯಿಂದ ನಿಷ್ಕ್ರಾಂತರಾಗುತ್ತಾರೆ. ಅವರು ಉತ್ತರಾಯಣ ರಶ್ಮಿಗಳಿಂದ ಹೋಗುತ್ತಾರೆ ಎಂಬುದಾಗಿ ವಿವೇಕ ಇರುವುದರಿಂದ.

ಆದ್ದರಿಂದ ಜ್ಞಾನಿಗಳ ಉತ್ಕ್ರಮಣವು ಅಜ್ಞಮರಣವಿಲಕ್ಷಣವಾದ್ದರಿಂದ ಜ್ಞಾನ-ಮಾಹಾತ್ಮ್ಯ ಹೇಳಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

**ತದೋಕೋಽಧಿಕರಣವು ಮುಗಿಯಿತು.**

ಅಧಿಕರಣ – 10

# ಯೋಗ್ಯಧಿಕರಣ

## ಸಂಗತಿ

**ಸೂ.ರ.:– अत्र गत्यनुस्मरणादेरावश्यकत्वं समर्थ्यते ।**

ಗತ್ಯನುಸ್ಮರಣಾದಿಗಳಿಗೆ ಆವಶ್ಯಕತ್ವವನ್ನು ಸಮರ್ಥಿಸುತ್ತಾರೆ ಹತ್ತನೇ ಈ ಯೋಗ್ಯಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु न गत्यर्थं विद्यागत्यनुस्मृती अपेक्षिते । अग्निर्ज्योतिरिति (भ.गी. ८-२४,२५) स्मृतौ केवलकालमरणाद्यधीनत्वस्योक्तत्वात् । लोके फलानुस्मरणाभावेऽपि फलदर्शनेन तथैवात्रापि कल्प्यत्वाच्च । ततश्च न ज्ञानं सम्पूर्णमोक्षसाधनमिति प्राप्ते सूत्रं पठति ॥**

ಗತಿಗಾಗಿ ವಿದ್ಯಾ-ಗತ್ಯನುಸ್ಮೃತಿಗಳು ಅಪೇಕ್ಷಿತವಾಗಿಲ್ಲ. ಕಾರಣ - "ಅಗ್ನಿರ್ಜ್ಯೋತಿರಹಃ ಶುಕ್ಲಃ ..." (ಭ.ಗೀ. 8-24,25) ಎಂದು ಸ್ಮೃತಿಯಲ್ಲಿ ಗತಿಗೆ ಕೇವಲ ಕಾಲಮರಣಾದ್ಯಧೀನತ್ವವನ್ನು ಹೇಳಿದ್ದರಿಂದ. ಲೋಕದಲ್ಲಿ ಫಲಾನುಸ್ಮರಣೆ ಇಲ್ಲದಿದ್ದರೂ ಸಹ ಫಲ ಕಂಡಿದ್ದರಿಂದ ಅದೇ ರೀತಿಯಾಗಿ ಇಲ್ಲಿಯೂ ಕಲ್ಪ್ಯವಾಗಿದೆ. ಆದ್ದರಿಂದ ಜ್ಞಾನವು ಸಂಪೂರ್ಣ ಮೋಕ್ಷಸಾಧನವಾಗಿಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ योगिनः प्रति स्मर्येते स्मार्ते चैते ॐ (४-२-२२)**

**ಸೂತ್ರಾರ್ಥ** :- **ಚ** = (ಯತಃ) ಯಾವ ಕಾರಣ **ಏತೇ** = ಬ್ರಹ್ಮಗತಿ-ಚಂದ್ರಗತಿಗಳು **ಯೋಗಿನಃ ಪ್ರತಿ** = ಜ್ಞಾನಯೋಗಿ-ಕರ್ಮಯೋಗಿಗಳನ್ನು ಕುರಿತು **ಸ್ಮರ್ಯೇತೇ** = ಸ್ಮೃತಿಯಿಂದ ಹೇಳಲ್ಪಡುತ್ತವೆಯೋ, **ಸ್ಮಾರ್ತೇ ಚ** = ಸ್ವಾನುಸ್ಮೃತಿ-ಸಾಧ್ಯವೂ ಆಗಿವೆ ಎಂದು "ಗತ್ಯನುಸ್ಮರಣಾದ್ಬ್ರಹ್ಮ" ಇತ್ಯಾದಿಯಾಗಿ (ಅಧ್ಯಾತ್ಮದಲ್ಲಿ) ಸ್ಮೃತ್ಯುಕ್ತವಾಗಿವೆಯೋ **ಅತಃ** = ಆ ಕಾರಣ **ತಯೋಃ ನ ಕೇವಲಂ ಕಾಲಾದಿಕೃತತ್ವಂ** = ಗತಿಗಳು ಕೇವಲ ಕಾಲಾದಿಕೃತವಾಗಿಲ್ಲ.

## ಸಿದ್ಧಾಂತ

**ಸೂ.ರ.:- एवं स्मृत्युक्ते एते गती ज्ञानकर्मयोगाभ्यामेव स्मर्येते । न कालस्मरणात् । अग्निर्ज्योतिरिति (भ.गी. ८-२४) श्लोके ब्रह्मविद इति विशेषणात् । धूमो रात्रिरिति (भ.गी. ८-२५.) श्लोके योगीति विशेषणात् । न च लोकानुसारिता । सर्वथा लोकानुसारित्वस्य छिदादावप्यभावेनादोषत्वात् । कथञ्चित्साम्यस्येहापि भावात् । अतो विशिष्टोत्क्रमणस्य विद्यादिसापेक्षत्वाद्युक्तं ज्ञानस्य सम्पूर्णमोक्ष-साधनत्वमिति सिद्धम् ॥**

ಸ್ಮೃತ್ಯುಕ್ತವಾದ ಈ ಬ್ರಹ್ಮಗತಿ-ಚಂದ್ರಗತಿಗಳು ಜ್ಞಾನಯೋಗ-ಕರ್ಮಯೋಗ-ಗಳಿಂದಲೇನೇ ಸ್ಮೃತವಾಗಿವೆ. ಹೊರತು ಕೇವಲ ಕಾಲಸ್ಮರಣದಿಂದ ಅಲ್ಲ, ಕಾರಣ -

ಅಗ್ನಿರ್ಜ್ಯೋತಿರಹಃ ಶುಕ್ಲಃ ಷಣ್ಮಾಸಾ ಉತ್ತರಾಯಣಮ್ ।
ತತ್ರ ಪ್ರಯಾತಾ ಗಚ್ಛಂತಿ ಬ್ರಹ್ಮ ಬ್ರಹ್ಮವಿದೋ ಜನಾಃ ॥ 24 ॥

ಧೂಮೋ ರಾತ್ರಿಸ್ತಥಾ ಕೃಷ್ಣಃ ಷಣ್ಮಾಸಾ ದಕ್ಷಿಣಾಯನಮ್ ।
ತತ್ರ ಚಾಂದ್ರಮಸಂ ಜ್ಯೋತಿರ್ಯೋಗೀ ಪ್ರಾಪ್ಯ ನಿವರ್ತತೇ ॥ 25 ॥

ಎಂಬ 24ನೇ ಶ್ಲೋಕದಲ್ಲಿ "ಬ್ರಹ್ಮವಿದಃ" ಎಂದು ವಿಶೇಷಣ ಕೊಟ್ಟದ್ದರಿಂದ. ಮತ್ತು 25ನೇ ಶ್ಲೋಕದಲ್ಲಿ "ಯೋಗೀ" ಎಂದು ವಿಶೇಷಣ ಕೊಟ್ಟದ್ದರಿಂದ.

ಲೋಕಾನುಸಾರಿತ್ವದ ಬಾಧಕವೂ ಇಲ್ಲ. ಸರ್ವಥಾ ಲೋಕಾನುಸಾರಿತ್ವವು ಛಿದಾದಿಗಳಲ್ಲಿಯೂ ಇಲ್ಲವಾದ್ದರಿಂದ ಅದು ದೋಷವಲ್ಲ. ಕಥಂಚಿತ್ ಸಾಮ್ಯವು ಇಲ್ಲಿಯೂ ಇದ್ದೇ ಇದೆ.

ಆದ್ದರಿಂದ ವಿಶಿಷ್ಟೋತ್ಕ್ರಮಣವು ವಿದ್ಯಾದಿಸಾಪೇಕ್ಷವಾದ್ದರಿಂದ ಜ್ಞಾನಕ್ಕೆ ಸಂಪೂರ್ಣಮೋಕ್ಷಸಾಧನತ್ವವು ಯುಕ್ತವಾಗಿದೆ ಎಂದು ಸಿದ್ಧವಾಗುತ್ತದೆ.

**ಯೋಗ್ಯಧಿಕರಣವು ಮುಗಿಯಿತು.**

**ಇಲ್ಲಿಗೆ ಸೂತ್ರಾರ್ಥರತ್ನಾವಲೀ ವ್ಯಾಖ್ಯಾನಸಹಿತವಾದ ಬ್ರಹ್ಮಸೂತ್ರಗಳಲ್ಲಿ ನಾಲ್ಕನೇ ಅಧ್ಯಾಯದ ಎರಡನೇ ಪಾದವು ಮುಗಿಯಿತು.**

# चतुर्थाध्यायस्य तृतीयः पादः

## ಪಾದಸಂಗತಿ

ಸೂ.ರ.:– मार्गो गम्यं चास्मिन्पाद उच्यते ।

ಬ್ರಹ್ಮನಾಡಿಯಿಂದ ಉತ್ಕ್ರಾಂತರಾದವರಿಗೆ ಬ್ರಹ್ಮಪ್ರಾಪ್ತಿಗಾಗಿ ಯಾವ ಮಾರ್ಗ-ವಿದೆಯೋ ಮತ್ತು ಆ ಮಾರ್ಗದಿಂದ ಹೋದವರಿಗೆ ಗಮ್ಯವಾದದ್ದು ಯಾವುದೋ ಅವೆರಡನ್ನೂ ಈ ಪಾದದಲ್ಲಿ ಹೇಳುತ್ತಾರೆ.

*ಅಧಿಕರಣ – 1*

## ಅರ್ಚಿರಾದ್ಯಧಿಕರಣ

### ಅಧಿಕರಣಸಂಗತಿ

ಸೂ.ರ.:– अत्र ज्ञानिप्राप्यमार्गः साध्यते ।

ಜ್ಞಾನಿಗಳಿಂದ ಪ್ರಾಪ್ಯವಾದ ಮಾರ್ಗವನ್ನು ಸಾಧಿಸುತ್ತಾರೆ ಮೊದಲನೇ ಈ ಅರ್ಚಿರಾದ್ಯಧಿಕರಣದಲ್ಲಿ.

ಬ್ರಹ್ಮಪ್ರಾಪ್ತಿಮಾರ್ಗವು ವಿಷಯ. ಆ ಬ್ರಹ್ಮಪ್ರಾಪ್ತಿಮಾರ್ಗವು ಅರ್ಚಿರಾದಿಯೋ (ಅರ್ಚಿರ್ಲೋಕವೇ ಆದಿಯಲ್ಲಿ ಉಳ್ಳದ್ದೋ?) ಅಥವಾ ವಾಯ್ವಾದಿಯೋ? (ವಾಯುಲೋಕವೇ ಆದಿಯಲ್ಲಿ ಉಳ್ಳದ್ದೋ?) ಎಂದು ಸಂದೇಹ.

### ಪೂರ್ವಪಕ್ಷ

ಸೂ.ರ.:– ननु द्वावेव मार्गौ । तत्र उभयोरपि प्राथम्यमिति पूर्वः पक्षः । 'तेऽर्चिषमभिसम्भवन्ति' (छां.५.१०.१) 'स वायुमागच्छति' (बृ.७.१०.१) इति श्रुतिद्वयस्यापि निरवकाशत्वात् । न चोभयोरपि प्राथम्यं विरुद्धम् । मार्गभेदेन द्वयोरपि प्राथम्योपपत्तेः । ततश्च गुरूप-देशात्प्राक् निर्णयाभावात्स्मरणानुपपत्तिरिति प्राप्ते सूत्रमाह ॥

ಎರಡು ಲೋಕಗಳಿಗೂ ಪ್ರಾಥಮ್ಯವಿದೆ ಎಂದು ಪೂರ್ವಪಕ್ಷ. ಕಾರಣ - ಕ್ರಮವಾಗಿ ಎರಡು ಲೋಕಗಳಿಗೂ ಪ್ರಾಥಮ್ಯ ಹೇಳುವ "ತೇऽರ್ಚಿಷಮಭಿ-ಸಂಭವಂತಿ" (ಛಾಂ.ಉ.5-10-1), "ಸ ವಾಯುಮಾಗಚ್ಛತಿ" (ಬೃ.ಉ. 7-10-1) ಎಂಬ ಎರಡು ಶ್ರುತಿಗಳೂ ನಿರವಕಾಶವಾದ್ದರಿಂದ.

ಎರಡು ಲೋಕಗಳಿಗೂ ಪ್ರಾಥಮ್ಯವು ವಿರುದ್ಧವಾಗುವುದಲ್ಲ? ಎಂದು ಶಂಕಿಸುವುದು ಸರಿಯಲ್ಲ. ಮಾರ್ಗಭೇದದಿಂದ ಎರಡು ಲೋಕಗಳಿಗೂ ಪ್ರಾಥಮ್ಯವು ಉಪಪನ್ನವಾಗುತ್ತದೆಯಾದ್ದರಿಂದ. ಅಂದರೆ ಒಂದು ಮಾರ್ಗದಲ್ಲಿ ಅರ್ಚಿಲೋಕವು ಪ್ರಥಮ, ಮತ್ತೊಂದು ಮಾರ್ಗದಲ್ಲಿ ವಾಯುಲೋಕವು ಪ್ರಥಮ ಎಂದರ್ಥ.

ಒಬ್ಬನೇ ಅಧಿಕಾರಿಗೆ ಎರಡೂ ಮಾರ್ಗಗಳು ವಿರುದ್ಧವಾಗುವುದಿಲ್ಲವೇ? ಎಂದರೆ, ಅಧಿಕಾರಿಭೇದದಿಂದ ಎರಡೂ ಮಾರ್ಗಗಳು ಉಪಪನ್ನವಾಗುತ್ತವೆ.

ಆದ್ದರಿಂದ ಗುರೂಪದೇಶಕ್ಕಿಂತ ಪೂರ್ವದಲ್ಲಿ ನಿರ್ಣಯವಾಗುವುದಿಲ್ಲ-ವಾದ್ದರಿಂದ ಗತ್ಯನುಸ್ಮರಣ ಅನುಪಪನ್ನ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

### ॐ अर्चिरादिना तत्प्रथितेः ॐ (४-३-१)

**ಸೂತ್ರಾರ್ಥ** :- ಉತ್ಕ್ರಾಂತೋ ಜ್ಞಾನೀ = ಉತ್ಕ್ರಾಂತನಾಗುವ ಜ್ಞಾನಿಯು, **ಅರ್ಚಿರಾದಿನಾ** ಮಾರ್ಗೇಣ = ಅರ್ಚಿರಾದಿಮಾರ್ಗದಿಂದ. ಗಚ್ಛತಿ = ಹೋಗುತ್ತಾನೆ. ಕುತಃ = ಏಕೆ? **ತತ್ಪ್ರಥಿತೇಃ** = "ತೇऽರ್ಚಿಷಮಭಿಸಂಭವಂತಿ" ಎಂಬ ಶ್ರುತಿಯಲ್ಲಿ ಆ ಅರ್ಥವು ಪ್ರಸಿದ್ಧವಾದ್ದರಿಂದ.

### ಸಿದ್ಧಾಂತ

**ಸೂ.ರ.:**- एवं च द्वावेव मार्गौ प्रथितावर्चिरादिर्विपश्चिताम् । धूमादिः कर्मिणां चैवेति (ब्रह्मतर्के.) स्मृतेः । तत्र द्वावग्नेः सुतौ एकस्मिन्पुरे संस्थितौ । तत्रैकोऽग्निनामकोऽपरो ज्योतिर्नामकः । तदुभयाधिष्ठितस्य लोकस्य प्रथमप्राप्तिः । प्रबलैतच्छ्रुतिविरोधेन स वायुमिति श्रुतेरर्चिरनन्तरार्थत्वोपपत्तेः । अत एक एव विपश्चितो मार्ग इति विनिर्णयादनुस्मृतिसम्भव इति सिद्धम् ॥

ಮಾರ್ಗಭೇದದಿಂದ ಎರಡಕ್ಕೂ ಪ್ರಥಮಪ್ರಾಪ್ಯತ್ವ ಹೇಳುವುದು ಸರಿಯಲ್ಲ. ಕಿಂತು ಒಂದೇ ಮಾರ್ಗ ಇರುವುದು. ಆದರಲ್ಲಿಯೂ ಅರ್ಚಿರ್ಲೋಕ ಪ್ರಥಮತಃ ಪ್ರಾಪ್ತವಾಗುತ್ತದೆ. ಅನಂತರ ವಾಯುಲೋಕದ ಪ್ರಾಪ್ತಿ. ಹೀಗೇಕೆ ಹೇಳುವುದು ? ಎಂದರೆ,

ದ್ವಾವೇವ ಮಾರ್ಗೌ ಪ್ರಥಿತಾವರ್ಚಿರಾದಿರ್ವಿಪಶ್ಚಿತಾಮ್ ।
ಧೂಮಾದಿಃ ಕರ್ಮಿಣಾಂ ಚೈವ .............................

ಎಂಬುದಾಗಿ (ಬ್ರಹ್ಮತರ್ಕ) ಸ್ಮೃತಿ ಇರುವುದರಿಂದ. ಆ ಅರ್ಚಿರ್ಲೋಕದಲ್ಲಿ ಇಬ್ಬರು ಅಗ್ನಿಸುತರು (ಒಂದೇ ಪುರದಲ್ಲಿ) ಇರುತ್ತಾರೆ. ಅವರಲ್ಲಿ ಒಬ್ಬನು ಅಗ್ನಿ ಎಂದು ಹೆಸರುಳ್ಳವನು. ಮತ್ತೊಬ್ಬನು ಜ್ಯೋತಿ ಎಂದು ಹೆಸರುಳ್ಳವನು. ಈ ಇಬ್ಬರಿಂದ ಅಧಿಷ್ಠಿತವಾದ ಅರ್ಚಿರ್ಲೋಕವು ಪ್ರಥಮತಃ ಪ್ರಾಪ್ತವಾಗುತ್ತದೆ. ಪ್ರಬಲವಾದ ಈ ಶ್ರುತಿಯ ವಿರೋಧ ಬರುವುದರಿಂದ "ಸ ವಾಯುಮಾಗಚ್ಛತಿ" ಎಂಬ ಶ್ರುತಿಗೆ ಅರ್ಚಿರನಂತರಾರ್ಥತ್ವವು ಉಪಪನ್ನವಾಗುತ್ತದೆ. ಆದ್ದರಿಂದ ಜ್ಞಾನಿಯಾದವನ ಮಾರ್ಗ ಒಂದೇ ಆಗಿದೆ ಎಂದು ನಿರ್ಣಯವಾಗುವುದರಿಂದ, ಗತ್ಯನುಸ್ಮರಣವು ಸಂಭಾವಿತ ಎಂದು ಸಿದ್ಧವಾಗುತ್ತದೆ.

**ಅರ್ಚಿರಾದ್ಯಧಿಕರಣವು ಮುಗಿಯಿತು.**

ಅಧಿಕರಣ – 2

## ವಾಯುಶಬ್ದಾಧಿಕರಣ

### ಸಂಗತಿ

**ಸೂ.ರ.:– अत्र वायोर्द्वितीयप्राप्यत्वं साध्यते ।**

ವಾಯುಲೋಕವು ದ್ವಿತೀಯಪ್ರಾಪ್ಯವಾಗಿದೆ ಎಂದು ಸಾಧಿಸುತ್ತಾರೆ ಎರಡನೇ ಈ ವಾಯುಶಬ್ದಾಧಿಕರಣದಲ್ಲಿ.

### ಪೂರ್ವಪಕ್ಷ

**ಸೂ.ರ.:– नन्वधिकारिविभेदेन मार्गभेदात् । वायुलोकस्येवाहर्लोकस्यापि द्वितीयप्राप्यत्वम् । स वायुमागच्छति (बृ.७-१०-१) अर्चिषोऽहरिति (छां.५-१०-१) चोभयत्रापि श्रुतिसद्भावात् । न चैकस्य पूर्वत्वं परस्यानन्तर्यमिति व्यवस्था । विशेषप्रमाणाभावात् । अतो मार्गनिर्णयाभावादनुस्मृत्ययोग इति प्राप्ते सूत्रितम् ॥**

ಅಧಿಕಾರಿಭೇದದಿಂದಾಗಿ ಮಾರ್ಗಭೇದ ಇರುವುದರಿಂದ ವಾಯುಲೋಕವು ದ್ವಿತೀಯಪ್ರಾಪ್ಯವಾಗುವಂತೆ ಅಹರ್ಲೋಕವೂ ದ್ವಿತೀಯಪ್ರಾಪ್ಯವೇ ಆಗಿದೆ. "ಸ ವಾಯುಮಾಗಚ್ಛತಿ" (ಬೃ. 7-10-1) "ಅರ್ಚಿಷೋಽಹಃ" (ಛಾಂ. 5-10-1) ಎಂಬುದಾಗಿ ಎರಡರ ವಿಷಯದಲ್ಲಿಯೂ ಶ್ರುತಿ ಇರುವುದರಿಂದ.

ಒಂದಕ್ಕೆ ಪೂರ್ವತ್ವ, ಮತ್ತೊಂದಕ್ಕೆ ಆನಂತರ್ಯ ಎಂಬ ವ್ಯವಸ್ಥೆಯು ಉಪಪನ್ನವಾಗುವುದಿಲ್ಲ, ಕಾರಣ ಆ ವಿಷಯದಲ್ಲಿ ವಿಶೇಷಪ್ರಮಾಣ ಇಲ್ಲವಾದ್ದರಿಂದ. ಆದ್ದರಿಂದ ಮಾರ್ಗನಿರ್ಣಯ ಇಲ್ಲವಾದ್ದರಿಂದ ಅನುಸ್ಮೃತಿಯು ಯುಕ್ತವಾಗುವುದಿಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ वायुशब्दादविशेषविशेषाभ्याम् ॐ (४-३-२)**

**ಸೂತ್ರಾರ್ಥ** :– "ಸುಪಾಂ ಸುಪೋ ಭವಂತಿ" ಎಂಬುದಾಗಿ ವಾರ್ತಿಕವಚನ

ಇರುವುದರಿಂದ ಪಂಚಮೀದ್ವಿವಚನಕ್ಕೆ ಪಂಚಮೀ ಏಕವಚನಾದೇಶವಾಗಿ 'ಅವಿಶೇಷ ವಿಶೇಷಾಭ್ಯಾಂ' ಎನ್ನುವುದಕ್ಕೆ 'ಅವಿಶೇಷವಿಶೇಷಾತ್' ಎಂದು ಅರ್ಥ ತಿಳಿಯುವುದು. ಹಾಗಾದರೆ–

ಏಕೇನೈವ ಮಾರ್ಗೇಣ ಬ್ರಹ್ಮ ಗಚ್ಛನ್ ಜ್ಞಾನೀ=ಒಂದೇ ಮಾರ್ಗದಿಂದ ಬ್ರಹ್ಮನನ್ನು ಹೊಂದುವ ಜ್ಞಾನಿಯು ತಸ್ಮಿನ್ ಮಾರ್ಗೇ=ಆ ಮಾರ್ಗದಲ್ಲಿ ಅರ್ಚಿಷೋಽನಂತರಂ ವಾಯುಮೇವ ಗಚ್ಛತಿ=ಅರ್ಚಿರ್ಲೋಕದ ಅನಂತರ ವಾಯುಲೋಕವನ್ನೇ ಹೊಂದುತ್ತಾನೆ. ನ ತು ಅಹಃ=ಹೊರತು ಅಹರ್ಲೋಕವನ್ನು ಹೊಂದುವುದಿಲ್ಲ.

ಕುತಃ=ಏಕೆ? **ಅವಿಶೇಷವಿಶೇಷಾಭ್ಯಾಂ** ಅವಿಶೇಷವಿಶೇಷರೂಪಾತ್ **ವಾಯುಶಬ್ದಾತ್**="ಸ ವಾಯುಮಾಗಚ್ಛತಿ" (ಬೃಹ.7.10.1) ಎಂಬುದಾಗಿ ಸಾಮಾನ್ಯಶ್ರುತಿ ಇರುವುದರಿಂದ, "ಸ ಇತೋ ಗತೋ ದ್ವಿತೀಯಾಂ ಗತಿಂ ವಾಯುಮಾಗಚ್ಛತಿ" ಎಂಬುದಾಗಿ ವಾಯುವಿಗೆ ದ್ವಿತೀಯಪ್ರಾಪ್ಯತ್ವವನ್ನು ಹೇಳುವ ವಿಶೇಷಶ್ರುತಿಯೂ ಇರುವುದರಿಂದ.

## ಸಿದ್ಧಾಂತ

**ಸೂ.ರ.:– एवं चार्चिष इति वायोः प्रथमप्राप्यत्वश्रुतेः । सामान्यश्रुतेश्च मुख्यप्राथम्यबाधेऽमुख्यप्राथम्यपरत्वात् । तद्यथा न हिंस्यादिति निषेधस्य यागीयपशुहिंसानिषेधपरत्वासम्भवेन बाह्यहिंसानिषेधपरत्वम् । तथा स इतो गत इति विशेषश्रुतेश्च । अतो मार्गनिर्णयेन युक्ता तदनुस्मृतिरिति सिद्धम् ॥**

ಮಾರ್ಗಭೇದದಿಂದಾಗಿ ವಾಯುಲೋಕ-ಅಹರ್ಲೋಕ ಎರಡಕ್ಕೂ ದ್ವಿತೀಯ ಪ್ರಾಪ್ಯತ್ವವನ್ನು ತಿಳಿಯುವುದು ಯುಕ್ತವಲ್ಲ. ಕಿಂತು ಒಂದೇ ಮಾರ್ಗ ಇದೆ. ಅದರಲ್ಲಿಯೂ ಅರ್ಚಿರ್ಲೋಕದ ಅನಂತರದಲ್ಲಿಯೇ ವಾಯುಲೋಕಕ್ಕೆ ಹೋಗುತ್ತಾನೆ.

ಹಾಗಾದರೆ ಅಹರ್ಲೋಕಕ್ಕೆ ದ್ವಿತೀಯಪ್ರಾಪ್ಯತ್ವವನ್ನು ಹೇಳುವ ಶ್ರುತ್ಯಂತರವಿರೋಧ ಬರುವುದಲ್ಲ? ಎಂದರೆ, ಅದು ಸರಿಯಲ್ಲ. ವಾಯುಲೋಕದ ಅನಂತರ

ಅಹರ್ಲೋಕಪ್ರಾಪ್ತಿ ಸಂಭಾವಿತವಾದ್ದರಿಂದ, ಶ್ರುತಿವಿರೋಧ ಬರುವುದಿಲ್ಲ. (ಅಹ-ರ್ಲೋಕಕ್ಕೆ ದ್ವಿತೀಯಪ್ರಾಪ್ಯತ್ವ ಹೇಳುವ ಶ್ರುತಿಯು ಸಾಮಾನ್ಯಶ್ರುತಿ ಆದ್ದರಿಂದ, ಮುಖ್ಯಪ್ರಾಥಮ್ಯ ಹೇಳಿದರೆ ಬಾಧ ಬರುವುದರಿಂದ ಅದು ಅಮುಖ್ಯಪ್ರಾಥಮ್ಯ-ಪರವಾಗಿದೆ.)

ಅದು ಹೇಗೆಂದರೆ - "ನ ಹಿಂಸ್ಯಾತ್ ಸರ್ವಾ ಭೂತಾನಿ" ಎಂಬ ನಿಷೇಧಕ್ಕೆ ಯಾಗೀಯಪಶುಹಿಂಸಾನಿಷೇಧಪರತ್ವ ಹೇಳಲು ಆಗುವುದಿಲ್ಲವಾದ್ದರಿಂದ ಬಾಹ್ಯ-ಹಿಂಸಾನಿಷೇಧಪರತ್ವವನ್ನು ಹೇಳುತ್ತೇವೆಯೋ ಅದರಂತೆ. ಮತ್ತು "ಸ ಇತೋ ಗತೋ ದ್ವಿತೀಯಾಂ ಗತಿಂ ವಾಯುಮಾಗಚ್ಛತಿ ವಾಯೋರಹರಹ್ನ ಆಪೂರ್ಯ-ಮಾಣಪಕ್ಷಮ್" ಎಂದು ವಿಶೇಷಶ್ರುತಿಯೂ ಇರುವುದರಿಂದ. ಆದ್ದರಿಂದ ವಾಯು-ಲೋಕಕ್ಕೆ ದ್ವಿತೀಯಪ್ರಾಪ್ಯತ್ವವು ಸಿದ್ಧಿಸುವುದರಿಂದ ಮಾರ್ಗನಿರ್ಣಯವಾಗುವುದ-ರಿಂದ ಅದರ ಅನುಸ್ಮೃತಿಯು ಯುಕ್ತವಾಗಿದೆ ಎಂದು ಸಿದ್ಧವಾಗುತ್ತದೆ.

ವಾಯುಶಬ್ದಾಧಿಕರಣವು ಮುಗಿಯಿತು.

ಅಧಿಕರಣ – 3

# ತಟಿದಧಿಕರಣ

## ಸಂಗತಿ

ಸೂ.ರ.:– अत्र तटिदभिमानिलोकस्य संवत्सराभिमानिलोकानन्तरप्राप्यत्वं साध्यते ।

ತಟಿದಭಿಮಾನಿಲೋಕವು ಸಂವತ್ಸರಾಭಿಮಾನಿಲೋಕದ ಅನಂತರ ಪ್ರಾಪ್ಯವಾಗಿದೆ ಎಂದು ಸಾಧಿಸುತ್ತಾರೆ ಮೂರನೇ ಈ ತಟಿದಧಿಕರಣದಲ್ಲಿ.

## ಪೂರ್ವಪಕ್ಷ

ಸೂ.ರ.:– ननु वरुणतटितोरुभयोरपि संवत्सरानन्तर्यम् । मासेभ्यः संवत्सरमिति (कौण्डिन्यश्रुतिः) तथा संवत्सरात्तटितमि (गौपवनश्रुतिः) त्युभयथाश्रुतेर्मार्गभेदेनोभयोरपि संवत्सरानन्तर्योपपत्तौ अन्यतर स्वीकारे कारणाभावात् । अतो मार्गनिर्णयाभावात्तदनुस्मरणानुपपत्तिरिति प्राप्ते सूत्रमाह ॥

ಸಂವತ್ಸರಾಭಿಮಾನಿಲೋಕದ ಅನಂತರ ವರುಣಲೋಕ-ತಟಿಲ್ಲೋಕ ಎರಡೂ ಪ್ರಾಪ್ಯವಾಗಿವೆ. ಕಾರಣ – "ಮಾಸೇಭ್ಯಃ ಸಂವತ್ಸರಂ" (ಕೌಂಡಿನ್ಯಶ್ರುತಿ) ಹಾಗೂ "ಸಂವತ್ಸರಾತ್ತಟಿತಮ್" (ಗೌಪವನಶ್ರುತಿ) ಎಂಬುದಾಗಿ ಉಭಯಥಾಶ್ರುತಿ ಇರುವುದರಿಂದ. ಮಾರ್ಗಭೇದದಿಂದ ಎರಡು ಲೋಕಗಳಿಗೂ ಸಂವತ್ಸರಾನಂತರ್ಯವು ಉಪಪನ್ನವಾಗುವಾಗ ಎರಡರಲ್ಲಿ ಒಂದನ್ನು ಮಾತ್ರ ಸ್ವೀಕರಿಸುವುದಕ್ಕೆ ವಿಶೇಷ ಕಾರಣವಿಲ್ಲ.

ಆದ್ದರಿಂದ ಮಾರ್ಗನಿರ್ಣಯವಿಲ್ಲವಾದ್ದರಿಂದ ಅದರ ಅನುಸ್ಮರಣವು ಅನುಪಪನ್ನ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ तटितोऽधि वरुणः सम्बन्धात् ॐ (४-३-३)**

**ಸೂತ್ರಾರ್ಥ :- ತಟಿತೋऽಧಿ** = ತಟಿಲ್ಲೋಕದ ಪ್ರಾಪ್ತ್ಯನಂತರದಲ್ಲಿ, ವರುಣಃ = ವರಣನು ವರುಣಲೋಕವು ಪ್ರಾಪ್ಯವಾಗಿದೆ. ಕುತಃ = ಏಕೆ? **ಸಂಬಂಧಾತ್** = ತಟಿಲ್ಲೋಕದ ಮೇಲೆ ವರುಣಲೋಕದ ಸಂಬಂಧ ಇರುವುದರಿಂದ.

## ಸಿದ್ಧಾಂತ

**ಸೂ.ರ.:- एवं च वरुणतटितोरुभयोरपि संवत्सरानन्तर्यं न ग्राह्यम्। किन्त्वेक एव मार्गः । तत्र संवत्सरानन्तरं तटितमेव गच्छति। न च श्रुत्यन्तरविरोधः । तटितोऽनन्तरं वरुणस्य प्राप्यत्वेन तदर्थत्वोपपत्तेः । तत्र तटित इत्युपरिसम्बन्धश्रुतेः । अतो मार्गैक्येनानुस्मरणमुपपद्यत इति सिद्धम् ॥**

ವರುಣಲೋಕ-ತಟಿಲ್ಲೋಕ ಎರಡಕ್ಕೂ ಸಂವತ್ಸರಾನಂತರ್ಯ ಗ್ರಾಹ್ಯವಾಗಿಲ್ಲ. ಕಿಂತು ಒಂದೇ ಮಾರ್ಗ ಇರುವುದು. ಅದರಲ್ಲಿ ಸಂವತ್ಸರಾನಂತರದಲ್ಲಿ ತಟಿಲ್ಲೋಕವನ್ನೇ ಹೊಂದುತ್ತಾನೆ.

ಹಾಗಾದರೆ ವರುಣನಿಗೆ ಸಂವತ್ಸರಾನಂತರ್ಯ ಹೇಳುವ ಶ್ರುತಿಯ ವಿರೋಧ ಬರುವುದಲ್ಲ ? ಎಂದರೆ, ಶ್ರುತಿವಿರೋಧ ಬರುವುದಿಲ್ಲ, ಕಾರಣ

"ತಟಿತಾ ಹ್ಯಾಯತೇ ವರುಣಲೋಕಸ್ತದುಪರಿ ಮುಕ್ತಾಮಯೋ ರಾಜತೇ ತತ್ರಾಸೌ ವರುಣೋ ರಾಜಾ ಸತ್ಯಾನೃತೇ ವಿವಿಂಚತಿ"

ಎಂಬುದಾಗಿ ಉಪರಿಸಂಬಂಧಶ್ರುತಿ ಇರುವುದರಿಂದ, ಸಂವತ್ಸರದ ಅನಂತರ ತಟಿಲ್ಲೋಕ, ತಟಿಲ್ಲೋಕದ ಅನಂತರ ವರುಣಲೋಕ ಪ್ರಾಪ್ಯ ಎಂದು ಅರ್ಥ ಹೇಳಲು ಬರುವುದರಿಂದ ಶ್ರುತಿವಿರೋಧ ಬರುವುದಿಲ್ಲ.

ಆದ್ದರಿಂದ ಒಂದೇ ಮಾರ್ಗ ಇರುವುದರಿಂದ (ಮಾರ್ಗೈಕ್ಯ ಇರುವುದರಿಂದ) ಅದರ ಅನುಸ್ಮರಣ ಉಪಪನ್ನವಾಗುತ್ತದೆ ಎಂದು ಸಿದ್ಧವಾಗುತ್ತದೆ.

ತಟಿದಧಿಕರಣವು ಮುಗಿಯಿತು.

ಅಧಿಕರಣ – 4

## ಆತಿವಾಹಿಕಾಧಿಕರಣ

### ಸಂಗತಿ

**ಸೂ.ರ.:– अत्रार्चिरनन्तरप्राप्यस्य वायोरातिवाहिकत्वं समर्थ्यते ।**

ಅರ್ಚಿರ್ಲೋಕದ ಅನಂತರದಲ್ಲಿ ಪ್ರಾಪ್ಯನಾದ ವಾಯುವಿಗೆ ಆತಿವಾಹಿಕತ್ವ-ವನ್ನು ಸಮರ್ಥಿಸುತ್ತಾರೆ ನಾಲ್ಕನೇ ಈ ಆತಿವಾಹಿಕಾಧಿಕರಣದಲ್ಲಿ.

### ಪೂರ್ವಪಕ್ಷ

**ಸೂ.ರ.:– ननु स वायुमागच्छतीति (बृ.७-१०-१) द्वितीयप्राप्यतयोक्तो वायुर्मुख्यः । वायुशब्दस्य तत्रैव मुख्यत्वात् । बाधकं विना मुख्यार्थत्यागायोगात् । मुख्यस्यापि प्राप्यत्वात् । अतो वायोरर्चिषानन्तरं प्राप्यत्वान्न तस्याधिक्यमिति प्राप्ते सूत्रं पठति ॥**

"ಸ ವಾಯುಮಾಗಚ್ಛತಿ" (ಬೃ.7-10-1) ಎಂಬುದಾಗಿ ಹಿಂದೆ ಅರ್ಚಿರ್ಲೋಕಾನಂತರದಲ್ಲಿ ಪ್ರಾಪ್ಯತ್ವೇನ ಉಕ್ತನಾದ (ದ್ವಿತೀಯಪ್ರಾಪ್ಯನಾದ) ವಾಯುವು ಮುಖ್ಯವಾಯುವೇ ಆಗಿದ್ದಾನೆ. ಕಾರಣ ವಾಯುಶಬ್ದವು ಆ ಮುಖ್ಯವಾಯುವಿನಲ್ಲಿಯೇ ಮುಖ್ಯವಾದ್ದರಿಂದ. ಯಾವ ಬಾಧಕವೂ ಇಲ್ಲದೇ ಮುಖ್ಯಾರ್ಥತ್ಯಾಗವು ಯುಕ್ತವಾಗುವುದಿಲ್ಲ. ಮುಖ್ಯವಾಯುವಿನಲ್ಲಿಯೂ ಪ್ರಾಪ್ಯತ್ವ ಇರುವುದರಿಂದ ಯಾವ ಬಾಧಕವಿಲ್ಲ.

ಆದ್ದರಿಂದ ಮುಖ್ಯವಾಯುವು ಅರ್ಚಿರ್ಲೋಕಾನಂತರದಲ್ಲಿ ಪ್ರಾಪ್ಯನಾದುದ-ರಿಂದ ಅವನಿಗೆ ಆಧಿಕ್ಯವಿಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ आतिवाहिकस्तल्लिङ्गात् ॐ (४-३-४)**

ಸೂತ್ರಾರ್ಥ :- ಪೂರ್ವಂ = ಹಿಂದೆ ದ್ವಿತೀಯಪ್ರಾಪ್ಯತ್ವೇನೋಕ್ತೋ ವಾಯುಃ = ಅರ್ಚಿರ್ಲೋಕಾನಂತರದಲ್ಲಿ ಪ್ರಾಪ್ಯತ್ವೇನ ಉಕ್ತನಾದ ವಾಯುವು **ಆತಿವಾಹಿಕಃ**

ಏವ ನ ಮುಖ್ಯಃ = ಆತಿವಾಹಿಕನೇ ಆಗಿದ್ದಾನೆ (ಅಮುಖ್ಯನೇ ಆಗಿದ್ದಾನೆ) ಹೊರತು ಮುಖ್ಯವಾಯು ಅಲ್ಲ. ಕುತಃ = ಏಕೆ? **ತಲ್ಲಿಂಗಾತ್** = ಪೂರ್ವಪ್ರಾಪ್ಯತ್ವಲಿಂಗ ಇರುವುದರಿಂದ.

## ಸಿದ್ಧಾಂತ

**ಸೂ.ರ.:– एवं च पूर्वगमनलिङ्गात् । पूर्वगमनमात्रस्यार्चिरादिगतत्वेनातिवाहिकत्वासाधकत्वेऽपि वायुत्वनिश्चयसहकृतस्य तत्साधकत्वमुपपन्नमेव । तद्यथा त्रिवर्णेतरत्वमात्रस्यान्त्यजादिगतत्वेन शूद्रत्वासाधकत्वेऽपि वर्णनिश्चयसहकृतस्य शूद्रत्वसाधकत्वमुपपद्यते । तथा चातिवाहिक एवायं वायुः द्वितीयप्राप्य इति मुख्यस्य मुख्यत्वमिति सिद्धम् ॥**

ಪೂರ್ವಗಮನಲಿಂಗ ಇರುವುದರಿಂದಾಗಿ (ಪೂರ್ವಪ್ರಾಪ್ಯತ್ವಲಿಂಗದಿಂದಾಗಿ) ಅರ್ಚಿರ್ಲೋಕಾನಂತರದಲ್ಲಿ ಪ್ರಾಪ್ಯನಾದ ವಾಯುವು ಆತಿವಾಹಿಕನೇ ಹೊರತು ಮುಖ್ಯವಾಯು ಅಲ್ಲ.

ಪೂರ್ವಗಮನಮಾತ್ರವು ಅರ್ಚಿರಾದಿಗಳಲ್ಲಿಯೂ ಇರುವುದರಿಂದ ಆತಿವಾಹಿಕತ್ವಕ್ಕೆ ಸಾಧಕವಾಗದಿದ್ದರೂ ಸಹ ವಾಯುತ್ವನಿಶ್ಚಯಸಹಕೃತವಾದ ಪೂರ್ವಗಮನಲಿಂಗಕ್ಕೆ ಆತಿವಾಹಿಕತ್ವಸಾಧಕತ್ವವು ಉಪಪನ್ನವೇ ಆಗುತ್ತದೆ. ಅದು ಹೇಗೆಂದರೆ – ಕೇವಲ ತ್ರಿವರ್ಣೇತರತ್ವವು ಅಂತ್ಯಜಾದಿಗಳಲ್ಲಿಯೂ ಇರುವುದರಿಂದ ಅದು ಶೂದ್ರತ್ವಕ್ಕೆ ಸಾಧಕವಾಗದಿದ್ದರೂ ಸಹ ವರ್ಣನಿಶ್ಚಯಸಹಕೃತವಾದ ತ್ರಿವರ್ಣೇತರತ್ವವು ಶೂದ್ರತ್ವಕ್ಕೆ ಸಾಧಕವಾಗುತ್ತದೆ. ಅದರಂತೆ ಎಂದು ಭಾವ.

ಆದ್ದರಿಂದ ದ್ವಿತೀಯಪ್ರಾಪ್ಯನಾದ ವಾಯುವು ಆತಿವಾಹಿಕನೇ ಆದ್ದರಿಂದ ಮುಖ್ಯವಾಯುವಿಗೆ ಮುಖ್ಯತ್ವವು (ಆಧಿಕ್ಯವು) ಉಪಪನ್ನವಾಗುತ್ತದೆ ಎಂದು ಸಿದ್ಧವಾಗುತ್ತದೆ.

## ಸೂತ್ರ – 5

**ಸೂ.ರ.:– ननु तथापि कथं पूर्वप्राप्यस्य वायोः अतिवाहिकत्व-**

सिद्धिः । मुख्यस्य प्राप्त्यभावापातात् । अथ द्यौर्वाव विद्युत्तत्पतिं वायुमुपगम्येति पुनरपि वायुप्राप्तिः श्रूयते । स मुख्यो भविष्यतीति न मुख्याप्राप्तिदोष उत्युच्यते तथाप्यनिवृत्तः संशयः । किं पूर्वोक्त आतिवाहिको मुख्यो वेत्यादि । मुख्यस्यापि प्रथमप्राप्तिसम्भवात् । न च विशेषहेतुरस्ति येन पूर्वोक्तस्यातिवाहिकत्वसिद्धिरिति प्राप्ते सूत्रं पठति ।

ಆದರೂ ಸಹ ಪೂರ್ವಪ್ರಾಪ್ಯನಾದ ವಾಯುವಿಗೆ ಆತಿವಾಹಿಕತ್ವವು ಹೇಗೆ ಸಿದ್ಧವಾಗುತ್ತದೆ? ಮುಖ್ಯವಾಯುವಿಗೆ ಪೂರ್ವಪ್ರಾಪ್ಯತ್ವವನ್ನು ಅಂಗೀಕರಿಸದೇ ಹೋದರೆ, ಆ ಮುಖ್ಯವಾಯುವಿನ ಪ್ರಾಪ್ತಿ ಎಂದಿಗೂ ಆಗದೇ ಹೋಗಬೇಕಾದ ಅತಿಪ್ರಸಂಗರೂಪ ಬಾಧಕ ಇರುವುದರಿಂದ.

"ದ್ಯೌರ್ವಾವ ವಿದ್ಯುತ್ ತತ್ಪತಿಂ ವಾಯುಮುಪಗಮ್ಯ" ಎಂಬುದಾಗಿ ಮುಂದೆಯೂ ಸಹ ವಾಯುಪ್ರಾಪ್ತಿಯು ಶ್ರುತವಾಗುತ್ತಿದೆ. ಆ ವಾಯುವು ಮುಖ್ಯವಾಯುವಾಗಬಹುದು. ಆದ್ದರಿಂದ ಮುಖ್ಯವಾಯುಪ್ರಾಪ್ತಿ ಆಗದೇ ಹೋಗಬೇಕಾದ ಅತಿಪ್ರಸಂಗದೋಷ ಬರುವುದಿಲ್ಲ ಎಂದು ಶಂಕಿಸುವುದು ಸರಿಯಲ್ಲ. ಹೀಗೆ ಹೇಳಿದರೂ ಸಹ ಪೂರ್ವೋಕ್ತವಾಯುವು ಆತಿವಾಹಿಕನೋ ಮುಖ್ಯನೋ? ಉತ್ತರೋಕ್ತನಾದ ವಾಯುವು ಆತಿವಾಹಿಕನೋ ಮುಖ್ಯನೋ? ಎಂಬ ಸಂಶಯವು ಹಾಗೆಯೇ ಉಳಿಯುತ್ತದೆ. ಆತಿವಾಹಿಕನಂತೆ ಮುಖ್ಯವಾಯುವಿಗೂ ಪ್ರಾಪ್ಯತ್ವವು ಸಂಭಾವಿತವಾದ್ದರಿಂದ ಸಂಶಯ ಉಳಿಯುತ್ತದೆ ಎಂದು ಭಾವ.

ಹೀಗಿರುವಾಗ ಯಾವ ವಿಶೇಷ ಕಾರಣವೂ ಇಲ್ಲ. ಒಂದುವೇಳೆ ವಿಶೇಷಕಾರಣ ಇದ್ದಿದ್ದರೆ ಪೂರ್ವೋಕ್ತವಾಯುವಿಗೆ ಆತಿವಾಹಿಕತ್ವವು ಸಿದ್ಧಿಸುತ್ತಿತ್ತು ಎಂಬುದಾಗಿ ಆಕ್ಷೇಪ ಬಂದರೆ, ಪರಿಹಾರಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

### ॐ उभयव्यामोहात्तत्सिद्धेः ॐ (४-३-५)

**ಸೂತ್ರಾರ್ಥ** :- ವ್ಯಾಮೋಹಾತ್ ಎನ್ನುವಲ್ಲಿಯ ಪಂಚಮಿಯು ಸಪ್ತಮ್ಯರ್ಥದಲ್ಲಿದೆ. **ಉಭಯವ್ಯಾಮೋಹಾತ್** = ಪೂರ್ವೋಕ್ತವಾಯುವು ಆತಿವಾಹಿಕನೋ ಮುಖ್ಯನೋ? ಉತ್ತರೋಕ್ತವಾಯುವು ಆತಿವಾಹಿಕನೋ ಮುಖ್ಯನೋ ? ಎಂದು ಸಂದೇಹ ಬಂದರೆ **ತತ್ಸಿದ್ಧೇಃ** = ಆ ದಿವಸ್ಪತಿತ್ವವಿಶೇಷಣದಿಂದ ಆ ಉತ್ತರೋಕ್ತನಾದ

ವಾಯುವಿಗೆ ಮುಖ್ಯತ್ವವು ಸಿದ್ಧಿಸುವುದರಿಂದ ಅನಿರ್ಣಯ ಇಲ್ಲ (ನಿರ್ಣಯ-ವಾಗುತ್ತದೆ).

**ಸೂ.ರ.:– एवं च न संशयानुवृत्तिदोषः । किं पूर्वोक्त आतिवाहिक उतापरः । तथा परत्रोक्त आतिवाहिक किं वापर इति संशयनिरासे कारणाभावात् ततश्चायमातिवाहिक इति निश्चयो न घटत इति चेन्न । उत्तरे दिवस्पतित्वविशेषणेन मुख्यवायुत्वनिश्चये परत्र परिशेषेण आति-वाहिकत्वनिश्चयोपपत्तेः । उत्क्रान्तस्त्विति (ब्रह्मतर्क.) स्मृतेश्च । अतः प्रथमप्राप्यस्यातिवाहिकत्वाद्युक्तं मुख्यस्य मुख्यत्वमिति सिद्धम् ॥**

ಸಂಶಯಾನುವೃತ್ತಿದೋಷ ಬರುವುದಿಲ್ಲ. ಹೌದು, ಪೂರ್ವೋಕ್ತವಾಯುವು **ಆತಿವಾಹಿಕನೋ** ಮುಖ್ಯನೋ? ಮತ್ತು ಉತ್ತರೋಕ್ತನಾದ ವಾಯುವು **ಆತಿವಾಹಿಕನೋ** ಮುಖ್ಯನೋ? ಎಂಬುದಾಗಿ ಸಂಶಯನಿರಾಸವಾಗುವುದರಲ್ಲಿ ಕಾರಣ ಇಲ್ಲವಾದ್ದರಿಂದ, ಪೂರ್ವೋಕ್ತನಾದ ವಾಯುವು ಆತಿವಾಹಕನೇ ಎಂಬ ನಿಶ್ಚಯವು ಕೂಡುವುದಿಲ್ಲವಲ್ಲ? ಎಂದು ಶಂಕೆ ಬಂದರೆ, ಅದು ಸರಿಯಲ್ಲ. ಮುಂದೆ "ದ್ಯೌರ್ವಾವ ವಿದ್ಯುತ್ ತತ್ಪತಿಂ ವಾಯುಮುಪಗಮ್ಯ" ಎಂಬುದಾಗಿ ದಿವಸ್ಪತಿತ್ವ ವಿಶೇಷಣ ಕೊಡುವುದರಿಂದ ಉತ್ತರೋಕ್ತನಾದ ವಾಯುವು ಮುಖ್ಯವಾಯುವೇ ಎಂದು ನಿಶ್ಚಯವಾಗುವುದರಿಂದ ಪೂರ್ವೋಕ್ತನಾದ ವಾಯುವು ಆತಿವಾಹಿಕನೇ ಎಂದು ನಿಶ್ಚಯವು ಉಪಪನ್ನವಾಗುತ್ತದೆ.

ಉತ್ಕ್ರಾಂತಸ್ತು ಶರೀರಾತ್ ಸ್ವಾದಗ್ನಿಪ್ರತ್ಯರ್ಚಿಷಮೇವ ತು ।
ತತೋ ಹಿ ವಾಯೋಃ ಪುತ್ರಂ ಚ ಯೋಽಸೌ ನಾಮ್ನಾಽತಿವಾಹಿಕಃ ॥
ತತೋಽಹಃ ಪೂರ್ವಪಕ್ಷಂ ಚಾಪ್ಯುದಕ್ ಸಂವತ್ಸರಂ ತಥಾ ।
ತಟಿತಂ ವರುಣಂ ಚೈವ ಪ್ರಜಾಪಂ ಸೂರ್ಯಮೇವ ಚ ॥
ಸೋಮಂ ವೈಶ್ವಾನರಂ ಚೇಂದ್ರಂ ಧ್ರುವಂ ದೇವೀಂ ದಿವಂ ತಥಾ ।
ತತೋ ವಾಯುಂ ಪರಂ ಪ್ರಾಪ್ಯ ತೇನೈತಿ ಪುರುಷೋತ್ತಮಮ್ ॥

ಎಂಬುದಾಗಿ ಬ್ರಹ್ಮತರ್ಕಸ್ಮೃತಿಯೂ ಇರುವುದರಿಂದ. ಆದ್ದರಿಂದ ಪೂರ್ವೋಕ್ತನಾದ ವಾಯುವಿಗೆ ಆತಿವಾಹಿಕತ್ವವು ನಿಶ್ಚಯವಾಗುವುದರಿಂದ ಮುಖ್ಯವಾಯುವಿಗೆ ಆಧಿಕ್ಯವು ಯುಕ್ತವಾಗಿದೆ ಎಂದು ಸಿದ್ಧವಾಗುತ್ತದೆ.

**ಆತಿವಾಹಿಕಾಧಿಕರಣವು ಮುಗಿಯಿತು.**

ಅಧಿಕರಣ – 5

# ವೈದ್ಯುತಾಧಿಕರಣ

## ಸಂಗತಿ

**ಸೂ.ರ.:– अत्र मुख्यवायोरन्तिमत्वं समर्थ्यते ।**

ಮುಖ್ಯವಾಯುವಿಗೆ ಅಂತಿಮತ್ವವನ್ನು ಸಮರ್ಥಿಸುತ್ತಾರೆ ಐದನೇ ಈ ವೈದ್ಯುತಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु वायोः परतो ब्रह्मणोऽर्वागगन्तव्योऽस्ति । तथाङ्गीकारे बाधकाभावात् । एवं च न वायोरस्ति ब्रह्मप्रापकत्वरूपं विशिष्टं माहात्म्यमिति प्राप्ते सूत्रमाह ॥**

ವಾಯುವಿನ ಅನಂತರ ಬ್ರಹ್ಮನ ಮುಂಚೆ (ವಾಯು-ಬ್ರಹ್ಮರ ಮಧ್ಯದಲ್ಲಿ) ಗಂತವ್ಯವಾದ ಲೋಕ ಒಂದಿದೆ. ಹಾಗೆ ಮಧ್ಯದಲ್ಲಿ ಗಂತವ್ಯಲೋಕವನ್ನು ಅಂಗೀ-ಕರಿಸಿದರೆ ಬಾಧಕ ಏನೂ ಇಲ್ಲವಾದ್ದರಿಂದ. ಆದ್ದರಿಂದ ವಾಯುವಿಗೆ ಬ್ರಹ್ಮಪ್ರಾಪಕತ್ವ ರೂಪವಾದ ವಿಶಿಷ್ಟಮಾಹಾತ್ಮ್ಯವು ಇಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ वैद्युतेनैव ततस्तच्छ्रुतेः ॐ (४-३-६)**

**ಸೂತ್ರಾರ್ಥ** :- ಜ್ಞಾನೀ = ಜ್ಞಾನಿಯು ವೈದ್ಯುತೇನೈವ = ವಿದ್ಯುತ್ಪತಿಯಾದ ವಾಯುವಿನಿಂದಲೇನೇ, ಬ್ರಹ್ಮ ಗಚ್ಛತಿ = ಬ್ರಹ್ಮನನ್ನು ಹೊಂದುತ್ತಾನೆ. ಮಧ್ಯೇ = ವಾಯು-ಬ್ರಹ್ಮರ ಮಧ್ಯದಲ್ಲಿ **ತತಃ** = ವಾಯೋರನ್ಯಃ ಪ್ರಾಪ್ಯಃ ನಾಸ್ತಿ = ವಾಯುವಿನಿಂದ ಭಿನ್ನನಾದ ಪ್ರಾಪ್ಯನಾದವನು ಯಾರೂ ಇಲ್ಲ. ಕುತಃ = ಏಕೆ? **ತಚ್ಛ್ರುತೇಃ** = ಆ ವಾಯುವಿಗೇನೇ "ಸ ಏನಾನ್ ಬ್ರಹ್ಮ ಗಮಯತಿ" (ಛಾಂ. 4-15-6) ಎಂದು ಬ್ರಹ್ಮಗಮಯಿತೃತ್ವಶ್ರುತಿ ಇರುವುದರಿಂದ.

## ಸಿದ್ಧಾಂತ

ಸೂ.ರ.:- एवं च नास्त्येव वायोरनन्तरप्राप्यः । यतो विद्युत्पतिना वायुनैव ब्रह्मप्राप्तिः । न तदन्येन तस्य ब्रह्मप्रापणसामर्थ्याभावात् । वायोः सामर्थ्ये प्रमाणत्वेन स एनानिति श्रुतिसद्भावात् । विद्युत्पति-रिति (बृहत्तन्त्र) स्मृतेश्च । अतो वायोरेवान्तिमप्राप्यत्वाद्युक्तं तस्याति शयेन प्राधान्यमिति सिद्धम् ॥

ವಾಯುವಿನ ಅನಂತರದಲ್ಲಿ ಪ್ರಾಪ್ಯನಾದವನು ಯಾರೂ ಇಲ್ಲವೇ ಇಲ್ಲ. ಯಾಕೆಂದರೆ ವಿದ್ಯುತ್ಪತಿಯಾದ ವಾಯುವಿನಿಂದಲೇನೇ ಬ್ರಹ್ಮಪ್ರಾಪ್ತಿಯು ಉಂಟಾ-ಗುತ್ತದೆ. ವಾಯುವಿನಿಂದ ಭಿನ್ನನಾದವನಿಂದ ಬ್ರಹ್ಮಪ್ರಾಪ್ತಿ ಆಗುವುದಿಲ್ಲ, ಕಾರಣ ವಾಯುಭಿನ್ನನಾದವನಿಗೆ ಬ್ರಹ್ಮಪ್ರಾಪಣಸಾಮರ್ಥ್ಯ ಇಲ್ಲವಾದ್ದರಿಂದ.

ವಾಯುವಿಗೆ ಬ್ರಹ್ಮಪ್ರಾಪಣಸಾಮರ್ಥ್ಯವಿದೆ ಎಂಬ ವಿಷಯದಲ್ಲಿ "ಸ ಏನಾನ್ ಬ್ರಹ್ಮ ಗಮಯತಿ" (ಛಾಂ. 4-15-6) ಎಂಬ ಶ್ರುತಿಯು ಪ್ರಮಾಣವಾಗಿದೆ. ಮತ್ತು,

ವಿದ್ಯುತ್ಪತಿರ್ವಾಯುರೇವ ನಯೇದ್ಬ್ರಹ್ಮ ನ ಚಾಪರಃ ।
ಕುತೋಽನ್ಯಸ್ಯ ಭವೇಚ್ಛಕ್ತಿಸ್ತಮೃತೇ ಪ್ರಾಣನಾಯಕಮ್ ॥

ಎಂಬುದಾಗಿ ಬೃಹತ್ತಂತ್ರಸ್ಮೃತಿಯೂ ಇದೆ. ಆದ್ದರಿಂದ ವಾಯುಮಾತ್ರವೇ ಅಂತಿಮಪ್ರಾಪ್ಯನಾದದ್ದರಿಂದ, ವಾಯುವಿಗೆ ಅತಿಶಯೇನ ಪ್ರಾಧಾನ್ಯವು ಯುಕ್ತ-ವಾಗಿದೆ ಎಂದು ಸಿದ್ಧವಾಗುತ್ತದೆ.

ವೈದ್ಯುತಾಧಿಕರಣವು ಮುಗಿಯಿತು.

ಅಧಿಕರಣ - 6

# ಕಾರ್ಯಾಧಿಕರಣ

## ಸಂಗತಿ

ಸೂ.ರ.:- अत्र पूर्वं विचारितेनार्चिरादिना मार्गेण गतानामल्पाधिकारिणां देवानां च गम्यं निरूप्यते ।

ಹಿಂದೆ ವಿಚಾರಿತವಾದ ಅರ್ಚಿರಾದಿಮಾರ್ಗದಿಂದ ಹೋದಂತಹ ಅಧಿಕಾರಿಗಳಿಗೆ ಮತ್ತು ದೇವತೆಗಳಿಗೆ ಗಮ್ಯ ಯಾರು ಎಂದು ನಿರೂಪಿಸುತ್ತಾರೆ ಆರನೇ ಈ ಕಾರ್ಯಾಧಿಕರಣದಲ್ಲಿ.

## ಪೂರ್ವಪಕ್ಷ

ಸೂ.ರ.:- नन्वर्चिरादिमार्गेण गतानां सर्वेषां कार्यब्रह्मप्राप्तिरेव न परप्राप्तिः । तत्प्राप्तेरेवोपपन्नत्वात् । देवव्यतिरिक्तानां परप्राप्त्ययोग्यत्वस्य ऋते देवानिति (अध्यात्म.) वचनात्सिद्धत्वादिति प्राप्ते सूत्रमाह ॥

ಅರ್ಚಿರಾದಿಮಾರ್ಗದಿಂದ ಹೋದಂತಹ ಎಲ್ಲರಿಗೂ ಸಹ ಕಾರ್ಯಬ್ರಹ್ಮ (ಚತುರ್ಮುಖಬ್ರಹ್ಮ) ಪ್ರಾಪ್ತಿಯೇ ಆಗುತ್ತದೆ ಹೊರತು ಪರಬ್ರಹ್ಮಪ್ರಾಪ್ತಿ ಅಲ್ಲ. ಕಾರಣ - ಕಾರ್ಯಬ್ರಹ್ಮಪ್ರಾಪ್ತಿಯೇ ಉಪಪನ್ನವಾಗುವುದರಿಂದ. ದೇವವ್ಯತಿರಿಕ್ತರಾದ ಅಧಿಕಾರಿಗಳಿಗೆ ಪರಬ್ರಹ್ಮಪ್ರಾಪ್ತಿಯ ಯೋಗ್ಯತೆ ಇಲ್ಲ ಎನ್ನುವುದು "ಋತೇ ದೇವಾನ್ ಪರಂ ಬ್ರಹ್ಮ ಕಃ ಪುಮಾನ್ ಪ್ರಾಪ್ನುಯಾತ್ ಕ್ವಚಿತ್" ಎಂಬ ಅಧ್ಯಾತ್ಮವಚನದಿಂದ ಸಿದ್ಧವಾದ್ದರಿಂದ, ಎಂಬುದಾಗಿ ಪೂರ್ವಪಕ್ಷ ಬಂದರೆ, ಅದಕ್ಕಾಗಿ ಸೂತ್ರ ಹೇಳಿದರು -

**ॐ कार्यं बादरिरस्य गत्युपपत्तेः ॐ (४-३-७)**

**ಸೂತ್ರಾರ್ಥ** :- ವಾಯುಃ = ವಾಯುದೇವರು **ಕಾರ್ಯಂ** = ಉತ್ಪತ್ತಿಯುಳ್ಳ ಚತುರ್ಮುಖಬ್ರಹ್ಮದೇವರನ್ನು ಕುರಿತು ಗಮಯತಿ = ಅಧಿಕಾರಿಗಳನ್ನು ಕೊಂಡೊಯ್ಯುತ್ತಾರೆ ಎನ್ನುವುದು "ಸ ಏನಾನ್ ಬ್ರಹ್ಮ ಗಮಯತಿ" ಎಂಬ ಶ್ರುತಿಯ ಅರ್ಥವಾಗಿದೆ ಎಂಬುದಾಗಿ, **ಬಾದರಿಃ** ಆಚಾರ್ಯಃ ಮನ್ಯತೇ = ಬಾದರಿ ಆಚಾರ್ಯರು ಅಭಿಪ್ರಾಯಪಡುತ್ತಾರೆ. ಕುತಃ = ಏಕೆ? **ಅಸ್ಯ** = ಚತುರ್ಮುಖನಿಗೇನೇ **ಗತ್ಯುಪಪತ್ತೇಃ** = ಪ್ರಾಪ್ಯತ್ವವು ಉಪಪನ್ನವಾಗುವುದರಿಂದ.

## ಸಿದ್ಧಾಂತ

**ಸೂ.ರ.:– एवं चोत्क्रान्तानां परप्राप्त्यनुपपत्तौ देवभिन्नत्वे सति बद्धत्वादिति युक्तिबलेन ब्रह्मश्रुतेरमुख्यार्थत्वाङ्गीकारात् । देवानां साक्षाद्ब्रह्मप्राप्तेर्देहलयानन्तरं मुक्तिदशायां वा ततः पूर्वं मानुषत्वेन जातानां देवानामुत्क्रान्त्यनन्तरं बन्धदशायामेवेत्यभ्युपगमात् । चतुर्मुखमुक्तेर्वागर्चिरादिमार्गेण गतानां कार्यं ब्रह्म गमयतीति बादरिर्मन्यत इति सिद्धम् ॥**

ಉತ್ಕ್ರಾಂತರಾದ ಅಧಿಕಾರಿಗಳಿಗೆ ಪರಬ್ರಹ್ಮಪ್ರಾಪ್ತಿಯು ಅನುಪಪನ್ನವಾಗುವಾಗ "ದೇವಭಿನ್ನತ್ವೇ ಸತಿ ಬದ್ಧತ್ವಾತ್" ಎಂಬ ಯುಕ್ತಿಬಲದಿಂದ "ಸ ಏನಾನ್ ಬ್ರಹ್ಮ ಗಮಯತಿ" ಎಂಬ ಬ್ರಹ್ಮಶ್ರುತಿಗೆ ಅಮುಖ್ಯಾರ್ಥತ್ವವನ್ನು ಅಂಗೀಕರಿಸಲಾಗಿದೆ (ಚತುರ್ಮುಖ ಬ್ರಹ್ಮಪ್ರಾಪ್ತಿಯನ್ನು ಹೇಳುತ್ತದೆ ಎಂದು ಅಂಗೀಕರಿಸಲಾಗಿದೆ).

ದೇವತೆಗಳಿಗೆ ಸಾಕ್ಷಾತ್ ಬ್ರಹ್ಮಪ್ರಾಪ್ತಿಯು ದೇಹಲಯಾನಂತರದಲ್ಲಿ ಅಥವಾ ಮುಕ್ತಿದಶಾದಲ್ಲಿ ಆಗುತ್ತದೆ. ದೇಹಲಯಕ್ಕಿಂತ ಪೂರ್ವದಲ್ಲಿ, ಮುಕ್ತಿಗಿಂತಲೂ ಪೂರ್ವದಲ್ಲಿ ಮಾನುಷರಾಗಿ ಹುಟ್ಟಿದ ದೇವತೆಗಳಿಗೆ ಉತ್ಕ್ರಾಂತ್ಯನಂತರದಲ್ಲಿ ಬಂಧ-ದಶಾದಲ್ಲಿಯೇ ಕಾರ್ಯಬ್ರಹ್ಮಪ್ರಾಪ್ತಿಯನ್ನು ಅಂಗೀಕರಿಸಿದ್ದರಿಂದ, ಚತುರ್ಮುಖ-ಬ್ರಹ್ಮನ ಮುಕ್ತಿಗಿಂತಲೂ ಮುಂಚೆ ಅರ್ಚಿರಾದಿಮಾರ್ಗದಿಂದ ಹೋದಂತಹ ಅಧಿಕಾರಿ-ಗಳನ್ನು ಕಾರ್ಯಬ್ರಹ್ಮನನ್ನು ಕುರಿತು ಕೊಂಡೊಯ್ಯುತ್ತಾರೆ ವಾಯುದೇವರು ಎಂಬುದಾಗಿ ಬಾದರಿ ಆಚಾರ್ಯರು ಅಭಿಪ್ರಾಯಪಡುತ್ತಾರೆ ಎಂದು ಸಿದ್ಧವಾಗುತ್ತದೆ.

## ಸೂತ್ರ – 8

**ಸೂ.ರ.:– कार्यस्यैव प्राप्तौ न केवलं युक्तिर्नापि स्मृतिः साधिका किन्तु विशेषश्रुतिरपीत्याह सूत्रकृत् ॥**

ಕಾರ್ಯಬ್ರಹ್ಮನೇ ಪ್ರಾಪ್ಯನಾಗಿದ್ದಾನೆ ಎಂಬ ವಿಷಯದಲ್ಲಿ ಕೇವಲ ಯುಕ್ತಿಯು ಮಾತ್ರ ಸಾಧಕವಾಗಿಲ್ಲ. ಕೇವಲ ಸ್ಮೃತಿಯು ಮಾತ್ರ ಸಾಧಕವಾಗಿಲ್ಲ, ಕಿಂತು ವಿಶೇಷಶ್ರುತಿಯೂ ಸಾಧಕವಾಗಿದೆ ಎಂದು ಹೇಳುತ್ತಾರೆ ಸೂತ್ರಕಾರರು –

## ॐ विशेषितत्वाच्च ॐ (४-३-८)

**ಸೂತ್ರಾರ್ಥ :- ವಿಶೇಷಿತತ್ವಾಚ್ಚ** = "ಯದಿ ಹ ವಾವ ..." ಎಂಬ ಕೌಷಾರವ-ಶ್ರುತಿಯಲ್ಲಿ ಪ್ರಾಪ್ತವ್ಯಬ್ರಹ್ಮನಿಗೆ ಚತುರ್ಮುಖಪದದಿಂದ ವಿಶೇಷಣ ನೀಡಿದ್ದರಿಂದಲೂ ಸಹ, ಕಾರ್ಯಬ್ರಹ್ಮನಿಗೆ ಪ್ರಾಪ್ಯತ್ವವನ್ನು ಹೇಳಿದ್ದು ಯುಕ್ತವಾಗಿದೆ.

**ಸೂ.ರ.:– एवं च यदि ह वावेति श्रुत्या परमात्मानमभिपश्यन्नपि देवभिन्नज्ञानिनो बन्धकाले चतुर्मुखाख्यमेव ब्रह्म प्राप्यत्वार्थकत्वेन प्रमाणबलादन्यज्ञानादन्यप्राप्तेरुक्तत्वाच्च । निर्दिष्टविशेषणसद्भावात् । अत उक्तं युक्तमिति सिद्धम् ॥**

"ಯದಿ ಹ ವಾವ ಪರಮಭಿಪಶ್ಯತಿ ಪ್ರಾಪ್ನೋತಿ ಬ್ರಹ್ಮಾಣಂ ಚತುರ್ಮುಖಂ ಪ್ರಾಪ್ನೋತಿ ಬ್ರಹ್ಮಾಣಂ ಚತುರ್ಮುಖಮ್"

ಎಂಬ ಕೌಷಾರವಶ್ರುತಿಯಿಂದ ಪರಮಾತ್ಮನನ್ನು ಕಂಡ ಜ್ಞಾನಿಯಾದರೂ ಸಹ ದೇವಭಿನ್ನಜ್ಞಾನಿಗೆ ಬಂಧಕಾಲದಲ್ಲಿ ಚತುರ್ಮುಖನಾಮಕನಾದ ಬ್ರಹ್ಮನೇ ಪ್ರಾಪ್ಯ-ನಾಗಿದ್ದಾನೆ ಎಂದು ಅರ್ಥ ಬರುವುದರಿಂದ, ಪ್ರಮಾಣಬಲಾತ್ ಅನ್ಯಜ್ಞಾನದಿಂದ ಅನ್ಯಪ್ರಾಪ್ತಿಯು ಉಕ್ತವಾದ್ದರಿಂದಲೂ ಸಹ, ಚತುರ್ಮುಖಬ್ರಹ್ಮಪ್ರಾಪ್ತಿಯಾಗುತ್ತದೆ ಎಂಬ ವಿಷಯದಲ್ಲಿ "ಚತುರ್ಮುಖಮೇವ ಬ್ರಹ್ಮಾಣಂ" ಎಂಬುದಾಗಿ ನಿರ್ದಿಷ್ಟ-ವಾದ ಚತುರ್ಮುಖವಿಶೇಷಣ ಇರುವುದರಿಂದ, ಚತುರ್ಮುಖಬ್ರಹ್ಮನೇ ಪ್ರಾಪ್ಯ-ನಾಗಿದ್ದಾನೆ ಎಂದು ಹೇಳಿದ್ದು ಯುಕ್ತವಾಗಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 9

**ಸೂ.ರ.:– ननु ब्रह्मविदाप्नोति परमिति (तै. २-१.) साक्षाद्-ब्रह्मप्राप्त्युक्तिविरोधो भवेत् । तस्याः कार्यब्रह्मप्राप्त्यनन्तरं समीप एव परप्राप्त्यर्थकत्वादिति प्राप्ते पराकुर्वत्सूत्रमाह ॥**

ಒಂದುವೇಳೆ ಜ್ಞಾನಿಗೆ ಕಾರ್ಯಬ್ರಹ್ಮಪ್ರಾಪ್ತಿಯನ್ನು ಹೇಳುವುದಾದರೆ "ಬ್ರಹ್ಮವಿದಾಪ್ನೋತಿ ಪರಂ" (ತೈ. 2-1) ಎಂಬುದಾಗಿ ಸಾಕ್ಷಾತ್ ಪರಬ್ರಹ್ಮಪ್ರಾಪ್ತಿಯು ಶ್ರುತವಾಗುತ್ತಿರುವುದರಿಂದ ಅದರ ವಿರೋಧ ಬರುವುದಿಲ್ಲವೇ? ಈ ಶ್ರುತಿಯು

ಕಾರ್ಯಬ್ರಹ್ಮಪ್ರಾಪ್ತಿಯ ಅನಂತರದಲ್ಲಿ ಸಮೀಪದಲ್ಲಿಯೇ ಪರಬ್ರಹ್ಮಪ್ರಾಪ್ತಿಯನ್ನು ತಿಳಿಸುತ್ತದೆ ಎಂಬುದಾಗಿ ಶಂಕೆ ಬಂದರೆ, ಪರಿಹಾರಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

## ॐ सामीप्यात्तु तद्व्यपदेशः ॐ (४-३-९)

**ಸೂತ್ರಾರ್ಥ** :- ಯತಃ = ಯಾವ ಕಾರಣ, **ತದ್ವ್ಯಪದೇಶಃ ತು** = "ಬ್ರಹ್ಮ-ವಿದಾಪ್ನೋತಿ ಪರಂ" ಎಂಬ ಪರಬ್ರಹ್ಮಪ್ರಾಪ್ತಿಶ್ರುತಿಯು **ಸಾಮೀಪ್ಯಾತ್** = ಜ್ಞಾನಿಯು ಚತುರ್ಮುಖನನ್ನು ಹೊಂದಿ ಶೀಘ್ರದಲ್ಲಿಯೇ ಪರಬ್ರಹ್ಮನನ್ನು ಹೊಂದುತ್ತಾನೆ ಎಂಬುದಾಗಿ ಕಾಲಸಾಮೀಪ್ಯದಿಂದಲೇ ತದನುಸಾರವಾಗಿಯೇ ಪ್ರವೃತ್ತವಾಗಿದೆಯೋ **ಅತೋ ನ ತದ್ವಿರೋಧಃ** = ಆ ಕಾರಣ ಆ ಪರಬ್ರಹ್ಮಪ್ರಾಪ್ತಿಶ್ರುತಿಯ ವಿರೋಧ ಬರುವುದಿಲ್ಲ.

**ಸೂ.ರ.:- एवं च निर्दिष्टश्रुतेः कार्यपरप्राप्त्योः कालसामीप्यान्निमित्तादेव प्रवृत्तत्वेन ज्ञानिनः समीपकाल एव कार्यं प्राप्याचिरेणैव परस्यापि प्राप्तेरित्यर्थकत्वात् । अवधारणशून्यत्वेन कार्यप्राप्तेर्निषेधाभावात् । सामान्यश्रुतेश्च विशेषश्रुत्या बाधोपपत्तेः । अतो ज्ञानिनां प्रलये पूर्वप्राप्तिसद्भावेन तस्य कार्यप्राप्तिरिति सिद्धम् ॥**

"ಬ್ರಹ್ಮವಿದಾಪ್ನೋತಿ ಪರಂ" ಎಂಬ ಶ್ರುತಿಯು ಕಾರ್ಯ-ಪರಪ್ರಾಪ್ತಿಗಳ ಮಧ್ಯದಲ್ಲಿ ಕಾಲಸಾಮೀಪ್ಯನಿಮಿತ್ತದಿಂದಲೇನೇ ಪ್ರವೃತ್ತವಾದ್ದರಿಂದ, ಜ್ಞಾನಿಯು ಸಮೀಪಕಾಲದಲ್ಲಿಯೇ ಕಾರ್ಯಬ್ರಹ್ಮನನ್ನು ಹೊಂದಿ ಶೀಘ್ರದಲ್ಲಿಯೇ ಪರಬ್ರಹ್ಮ-ನನ್ನೂ ಹೊಂದುತ್ತಾನೆ ಎಂದು ಅರ್ಥ ಉಳ್ಳದ್ದಾದ್ದರಿಂದ, ಅವಧಾರಣಶೂನ್ಯವಾದ ಕಾರಣ ಕಾರ್ಯಬ್ರಹ್ಮಪ್ರಾಪ್ತಿಯನ್ನು ನಿಷೇಧಿಸುತ್ತಿಲ್ಲವಾದ್ದರಿಂದ, ಸಾಮಾನ್ಯಶ್ರುತಿಗೆ ವಿಶೇಷಶ್ರುತಿಯಿಂದ ಬಾಧವು ಉಪಪನ್ನವಾಗುವುದರಿಂದ ಪರಬ್ರಹ್ಮಪ್ರಾಪ್ತಿಶ್ರುತಿ-ವಿರೋಧ ಬರುವುದಿಲ್ಲ.

ಆದ್ದರಿಂದ ಜ್ಞಾನಿಗಳಿಗೆ ಪ್ರಲಯಕಾಲದಲ್ಲಿ ಪೂರ್ವಪ್ರಾಪ್ತಿ ಇರುವುದರಿಂದ ಅವನಿಗೆ ಕಾರ್ಯಬ್ರಹ್ಮಪ್ರಾಪ್ತಿಯಾಗುತ್ತದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 10

**ಸೂ.ರ.:- ननु समीपत एव परं ब्रह्म प्राप्नोतीति कोऽर्थः ।**

प्रलयादर्वाक् उत प्रलय एव । नाद्यः । प्रथमं परप्राप्तौ बाधकत्वेनोक्तस्य बद्धत्वस्यात्रापि बाधकत्वसाम्यात् । तथात्वे वा प्रथममेव परप्राप्त्युपपत्तेः । न द्वितीयः । विशेषप्रमाणाभावादिति प्राप्ते परिहरत्सूत्रमुपन्यस्यति ॥

'ಸಮೀಪದಲ್ಲಿಯೇ ಪರಬ್ರಹ್ಮನನ್ನು ಹೊಂದುತ್ತಾನೆ' ಎಂದರೆ ಏನು ಅರ್ಥ ? ಪ್ರಲಯಕ್ಕಿಂತಲೂ ಮುಂಚೆ ಹೊಂದುತ್ತಾನೆ ಎಂದು ಅರ್ಥವೋ ? ಅಥವಾ ಪ್ರಲಯಕಾಲದಲ್ಲಿಯೇ ಹೊಂದುತ್ತಾನೆ ಎಂದು ಅರ್ಥವೋ ?

ಪ್ರಲಯಕ್ಕಿಂತಲೂ ಮುಂಚೆ ಹೊಂದುತ್ತಾನೆ ಎನ್ನುವುದು ಸರಿಯಲ್ಲ, ಕಾರಣ - ಮೊದಲು ಪರಬ್ರಹ್ಮಪ್ರಾಪ್ತಿಯಾಗುತ್ತದೆ ಎಂಬ ವಿಚಾರದಲ್ಲಿ ಬಾಧಕವಾಗಿ ಹೇಳಿದ ಬದ್ಧತ್ವ ಎನ್ನುವುದು ಈ ಪಕ್ಷದಲ್ಲಿಯೂ ಬಾಧಕವಾಗಿ ಇದೆ ಎನ್ನುವುದು ಸಮಾನವಾದ್ದರಿಂದ. ಹಾಗಾಗುವುದಾದರೆ ಮೊದಲೇ ಪರಬ್ರಹ್ಮಪ್ರಾಪ್ತಿಯು ಉಪಪನ್ನವಾಗುತ್ತದೆ. ಇನ್ನು ಪ್ರಲಯಕಾಲದಲ್ಲಿಯೇ ಹೊಂದುತ್ತಾನೆ ಎಂಬ ಎರಡನೇ ಪಕ್ಷವೂ ಸರಿಯಲ್ಲ, ಕಾರಣ ಆ ವಿಷಯದಲ್ಲಿ ವಿಶೇಷಪ್ರಮಾಣ ಇಲ್ಲವಾದ್ದರಿಂದ ಎಂದು ಶಂಕೆ ಬಂದರೆ, ಪರಿಹಾರಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ कार्यात्यये तदध्यक्षेण सहातः परमभिधानात् ॐ (४-३-१०)**

**ಸೂತ್ರಾರ್ಥ :- ಕಾರ್ಯಾತ್ಯಯೇ** = ಮಹಾಪ್ರಲಯಕಾಲದಲ್ಲಿ **ತದಧ್ಯಕ್ಷೇಣ ಸಹ** = ಕಾರ್ಯಸ್ವಾಮಿಯಾದ ಚತುರ್ಮುಖನ ಜೊತೆಗೆ **ಅತಃ** = ಚತುರ್ಮುಖಬ್ರಹ್ಮನ ಅನುಗ್ರಹದಿಂದ (ಪ್ರಸಾದದಿಂದ) **ಪರಂ** = ಉತ್ತಮಬ್ರಹ್ಮನನ್ನು ಜ್ಞಾನೀ ಗಚ್ಛತಿ = ಜ್ಞಾನಿಯು ಹೊಂದುತ್ತಾನೆ. **ಕುತಃ** = ಏಕೆ? **ಅಭಿಧಾನಾತ್** = ಆ ವಿಷಯದಲ್ಲಿ ವಿಶೇಷಶ್ರುತಿ ಇರುವುದರಿಂದ.

**ಸೂ.ರ.:-** एवं च सकलकार्यविलयानन्तरं कार्याधिपतिना चतुर्मुखेन सह तत्प्रसादान्मुमुक्षोः परप्राप्तेरभ्युपगमात् । प्रलये ज्ञानिनां लिङ्गशरीरान्मुक्तत्वेन तदभावेन बद्धत्वाविरोधात् । तत्र प्रमाणत्वेन ते हेति (सौपर्ण.) श्रुतिसद्भावात् । अतश्चतुर्मुखस्य कार्यप्रपञ्चाधिकृतत्वात्तद्ब्रह्मजिगमिषूणां तेनैव सह गमनं युक्तमिति सिद्धम् ॥

ಸಕಲಕಾರ್ಯವಿಲಯಾನಂತರದಲ್ಲಿ ಕಾರ್ಯಾಧಿಪತಿಯಾದ ಚತುರ್ಮುಖನ ಜೊತೆಗೆ ಚತುರ್ಮುಖನ ಪ್ರಸಾದದಿಂದ ಮುಮುಕ್ಷುವಿಗೆ ಪರಬ್ರಹ್ಮಪ್ರಾಪ್ತಿ-ಯಾಗುತ್ತದೆ ಎಂದು ಅಂಗೀಕರಿಸಿದ್ದರಿಂದ. ಪ್ರಲಯಕಾಲದಲ್ಲಿ ಜ್ಞಾನಿಗಳು ಲಿಂಗಶರೀರದಿಂದ ಮುಕ್ತರಾಗಿರುವುದರಿಂದ, ಲಿಂಗಶರೀರವಿಲ್ಲದ ಕಾರಣ ಬದ್ಧತ್ವದ ವಿರೋಧ ಬರುವುದಿಲ್ಲ. ಆ ವಿಷಯದಲ್ಲಿ ಪ್ರಮಾಣವಾಗಿ

"ತೇ ಹ ಬ್ರಹ್ಮಾಣಮಭಿಸಂಪದ್ಯ ಯದೈತದ್ವಿಲೀಯತೇಽಥ ಸಹ ಬ್ರಹ್ಮಣಾ ಪರಮಭಿಗಚ್ಛಂತಿ" (ಸೌಪರ್ಣಶ್ರುತಿಃ)

ಎಂದು ಶ್ರುತಿಯು ಇದೆ. ಆದ್ದರಿಂದ ಚತುರ್ಮುಖನು ಕಾರ್ಯಪ್ರಪಂಚಾಧಿ ಕೃತನಾದ್ದರಿಂದ ಆ ಬ್ರಹ್ಮನನ್ನು ಹೊಂದಬೇಕೆಂದು ಇಚ್ಛಿಸುವವರಿಗೆ ಚತುರ್ಮುಖನ ಜೊತೆಗೇನೇ ಗಮನವು ಯುಕ್ತ ಎಂದು ಸಿದ್ಧವಾಗುತ್ತದೆ.

## ಸೂತ್ರ - 11

**ಸೂ.ರ.:- स्मृत्याऽप्येतमर्थं साधयत्सूत्रमुपन्यस्य तां स्मृति-मुदाहरति ॥**

ಸ್ಮೃತಿಯಿಂದಲೂ ಸಹ ಈ ವಿಷಯವನ್ನು ಸಾಧಿಸುವ ಸೂತ್ರವನ್ನು ಹೇಳಿ, ಆ ಸ್ಮೃತಿಯನ್ನು ಉದಾಹರಿಸುತ್ತಾರೆ -

**ॐ स्मृतेश्च ॐ (४-३-११)**

**ಸೂತ್ರಾರ್ಥ** :- ಸ್ಮೃತೇಶ್ಚ = "ಬ್ರಹ್ಮಣಾ ಸಹ ತೇ ಸರ್ವೇ" ಎಂಬುದಾಗಿ ಸ್ಮೃತಿಯೂ ಇರುವುದರಿಂದ, ಜ್ಞಾನಿಯು ಚತುರ್ಮುಖನೊಂದಿಗೆ ಪರಬ್ರಹ್ಮನನ್ನು ಹೊಂದುತ್ತಾನೆ ಎಂದು ಸಿದ್ಧವಾಗುತ್ತದೆ.

**ಸೂ.ರ.:- एवं च निर्दिष्टश्रुत्या परात्मानो ज्ञानिनो ब्रह्मणां संवत्सरशतानन्तरं प्रलये सम्प्राप्ते सति चतुर्मुखेन सह ब्रह्म प्रविशन्तीति कार्यब्रह्मणा सह गमनं युक्तमिति सिद्धम् ॥**

ಬ್ರಹ್ಮಣಾ ಸಹ ತೇ ಸರ್ವೇ ಸಂಪ್ರಾಪ್ತೇ ಪ್ರತಿಸಂಚರೇ ।
ಪರಸ್ಯಾಂತೇ ಪರಾತ್ಮಾನಃ ಪ್ರವಿಶಂತಿ ಪರಂ ಪದಮ್ ॥

ಎಂದು ಸ್ಮೃತಿ ಇರುವುದರಿಂದ ಪರಾತ್ಮರಾದ ಜ್ಞಾನಿಗಳು ಬ್ರಹ್ಮದೇವರ ನೂರುವರ್ಷಗಳ ಅನಂತರದಲ್ಲಿ ಪ್ರಲಯವು ಪ್ರಾಪ್ತವಾಗುತ್ತಿರಲು ಚತುರ್ಮುಖ-ನೊಂದಿಗೆ ಪರಬ್ರಹ್ಮನನ್ನು ಪ್ರವೇಶಿಸುತ್ತಾರೆ. ಆ ಕಾರಣ ಜ್ಞಾನಿಗಳಿಗೆ ಕಾರ್ಯಬ್ರಹ್ಮನ ಜೊತೆಗೆ ಗಮನವು ಯುಕ್ತ ಎಂದು ಸಿದ್ಧವಾಗುತ್ತದೆ.

## ಸೂತ್ರ - 12

**ಸೂ.ರ.:– पूर्वपक्षान्तरं सूचयत्सूत्रमुपन्यस्यति ॥**

ಬಾದರಿ ಋಷಿಗಳ ಪೂರ್ವಪಕ್ಷದ ಅನಂತರ, ಮತ್ತೊಂದು ಪೂರ್ವಪಕ್ಷವನ್ನು ಸೂಚಿಸುವ ಸೂತ್ರವನ್ನು ಹೇಳುತ್ತಾರೆ -

**ॐ परं जैमिनिर्मुख्यत्वात् ॐ (४-३-१२)**

**ಸೂತ್ರಾರ್ಥ** :- ಜ್ಞಾನೀ = ಜ್ಞಾನಿಯು, ಪರಂ ಬ್ರಹ್ಮೈವ ಪ್ರಾಪ್ನೋತಿ ನ ತು ಕಾರ್ಯಬ್ರಹ್ಮ = ಪರಬ್ರಹ್ಮನನ್ನೇ ಹೊಂದುತ್ತಾನೆ ಹೊರತು ಕಾರ್ಯಬ್ರಹ್ಮನನ್ನು ಹೊಂದುವುದಿಲ್ಲ, ಕುತಃ = ಏಕೆ? **ಮುಖ್ಯತ್ವಾತ್** = ಬ್ರಹ್ಮಶಬ್ದವು ಪರಬ್ರಹ್ಮನಲ್ಲಿಯೇ ಮುಖ್ಯವಾದ್ದರಿಂದ ಇತಿ = ಎಂದು **ಜೈಮಿನಿಃ** = ಜೈಮಿನಿ ಆಚಾರ್ಯರು ಮನ್ಯತೇ = ಅಭಿಪ್ರಾಯಪಡುತ್ತಾರೆ.

**ಸೂ.ರ.:– एवं च स एनानिति (छां.४-१५-६.) श्रुतिवाक्ये ब्रह्मशब्दस्य परब्रह्मण्येव मुख्यत्वेन वायुरेनान् परं ब्रह्म गमयति न कार्यमिति जैमिन्याचार्यो मन्यत इति स्थितम् ॥**

"ಸ ಏನಾನ್ ಬ್ರಹ್ಮ ಗಮಯತಿ" (ಛಾಂ. 4-15-6) ಎಂಬುದಾಗಿ ಶ್ರುತಿವಾಕ್ಯದಲ್ಲಿ ಬ್ರಹ್ಮಶಬ್ದವು ಪರಬ್ರಹ್ಮನಲ್ಲಿಯೇ ಮುಖ್ಯವಾದ್ದರಿಂದ, "ವಾಯುಃ = ವಾಯುದೇವರು, ಏನಾನ್ = ಜ್ಞಾನಿಗಳನ್ನು, ಪರಂ ಬ್ರಹ್ಮ ಗಮಯತಿ = ಪರಬ್ರಹ್ಮನನ್ನು ಕುರಿತು ಕೊಂಡೊಯ್ಯುತ್ತಾರೆ, ನ ಕಾರ್ಯಂ = ಹೊರತು ಕಾರ್ಯಬ್ರಹ್ಮನನ್ನು ಕುರಿತು ಅಲ್ಲ" ಎಂಬುದಾಗಿ ಜೈಮಿನಿ ಆಚಾರ್ಯರು ಅಭಿಪ್ರಾಯಪಡುತ್ತಾರೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 13

**ಸೂ.ರ.:– ननु ब्रह्मशब्दस्य परब्रह्मणि मुख्यत्वेऽपि प्रागुक्तोपपत्तिश्रुतिस्मृतिविरोधात्तद्ग्रहणानुपपत्तेरमुख्यार्थकल्पना युक्तेत्याशङ्कां परिहरत्सूत्रमुपन्यस्यति ॥**

ಬ್ರಹ್ಮಶಬ್ದವು ಪರಬ್ರಹ್ಮನಲ್ಲಿ ಮುಖ್ಯವಾಗಿದ್ದರೂ ಸಹ, ಹಿಂದೆ ಹೇಳಿದ ಉಪಪತ್ತಿ-ಶ್ರುತಿ-ಸ್ಮೃತಿಗಳ ವಿರೋಧ ಬರುವುದರಿಂದ ಪರಬ್ರಹ್ಮನನ್ನು ಸ್ವೀಕರಿಸಲು ಬರುವುದಿಲ್ಲವಾದ್ದರಿಂದ ಅಮುಖ್ಯಾರ್ಥಕಲ್ಪನಾವೇ (ಅಮುಖ್ಯಬ್ರಹ್ಮನನ್ನು ಸ್ವೀಕರಿಸುವುದೇ) ಯುಕ್ತ ಎಂಬ ಶಂಕೆಯನ್ನು ಪರಿಹರಿಸುವ ಸೂತ್ರವನ್ನು ಹೇಳುತ್ತಾರೆ -

### ॐ दर्शनाच्च ॐ (४-३-१३)

**ಸೂತ್ರಾರ್ಥ** :- ಜ್ಞಾನೀ = ಜ್ಞಾನಿಯು ಪರಂ ಬ್ರಹ್ಮೈವ ಗಚ್ಛತಿ = ಪರಬ್ರಹ್ಮನನ್ನು ಕುರಿತೇ ಹೋಗುತ್ತಾನೆ. ಕುತಃ = ಏಕೆ? **ದರ್ಶನಾಚ್ಚ** = ಜ್ಞಾನಿಯಿಂದ ಶ್ರವಣಾದಿಗಳ ಮೂಲಕ ಪರಬ್ರಹ್ಮನೇ ದೃಷ್ಟನಾದದ್ದರಿಂದ (ಅಪರೋಕ್ಷೀಕೃತನಾದದ್ದರಿಂದ).

**ಸೂ.ರ.:– एवं च ज्ञानिभिः श्रवणादिसाधनैरपरोक्षतया परब्रह्मण एव ज्ञातत्वेनान्यस्यादृष्टत्वेन वायुस्तान् परं गमयतीत्युपपन्नमिति सिद्धम् ॥**

ಜ್ಞಾನಿಗಳು ಶ್ರವಣಾದಿ ಸಾಧನಗಳಿಂದ ಪರಬ್ರಹ್ಮನನ್ನೇ ಅಪರೋಕ್ಷವಾಗಿ ಕಂಡಿದ್ದರಿಂದ, ಇತರರು ದೃಷ್ಟರಾಗಿಲ್ಲವಾದ್ದರಿಂದ ''ವಾಯುದೇವರು ಜ್ಞಾನಿಗಳನ್ನು ಪರಬ್ರಹ್ಮನನ್ನು ಕುರಿತು ಕೊಂಡೊಯ್ಯುತ್ತಾರೆ'' ಎಂದು ಹೇಳಿದ್ದು ಉಪಪನ್ನ ಎಂದು ಸಿದ್ಧವಾಗುತ್ತದೆ.

## ಸೂತ್ರ - 14

**ಸೂ.ರ.:– हेत्वन्तरेण परप्राप्तिरेवोपपन्नेत्येतमर्थं प्रतिपादयत्सूत्रमुपन्यस्यति ॥**

ಮತ್ತೊಂದು ಹೇತುವಿನಿಂದಲೂ ಪರಬ್ರಹ್ಮಪ್ರಾಪ್ತಿಯೇ ಉಪಪನ್ನ ಎಂಬ ಅರ್ಥವನ್ನು ಪ್ರತಿಪಾದಿಸುವ ಸೂತ್ರವನ್ನು ಹೇಳುತ್ತಾರೆ -

## ॐ न च कार्ये प्रतिपत्यभिसन्धिः ॐ (४-३-१४)

**ಸೂತ್ರಾರ್ಥ** :- ಇತೋಽಪಿ ಜ್ಞಾನಿನಃ ಕಾರ್ಯಬ್ರಹ್ಮಪ್ರಾಪ್ತಿಃ ಅನುಪಪನ್ನಾ = ಈ ಕಾರಣಕ್ಕಾಗಿಯೂ ಜ್ಞಾನಿಗೆ ಕಾರ್ಯಬ್ರಹ್ಮಪ್ರಾಪ್ತಿಯು ಅನುಪಪನ್ನವಾಗಿದೆ. ಕುತಃ = ಏಕೆ? **ಚ** = ಯಾವ ಕಾರಣ **ಕಾರ್ಯೇ** = ಕಾರ್ಯಬ್ರಹ್ಮವಿಷಯದಲ್ಲಿ ಜ್ಞಾನಿನಃ = ಜ್ಞಾನಿಗೆ **ಪ್ರತಿಪತ್ಯಭಿಸಂಧಿಃ** = ಪ್ರತಿಪತ್ತಿ = ಉಪಾಸನೆ ಹಾಗೂ ಅಭಿಸಂಧಿ = ಹೊಂದಬೇಕೆಂಬ ಇಚ್ಛಾ ಎರಡೂ, **ನ** = ಇಲ್ಲವೋ ಆ ಕಾರಣ ಎಂದರ್ಥ.

**ಸೂ.ರ.:– एवं च ज्ञानिनां कार्य एव प्रतिपत्त्यभिसन्ध्योरभावात् । परविषये तु तयोरभावाभावात् । यदुपास्ते पुमानिति (पाद्मे.) स्मृतेः । ततश्च वायुः परमेव तान् गमयति न कार्यमिति सिद्धम् ॥**

ಜ್ಞಾನಿಗಳಿಗೆ ಕಾರ್ಯಬ್ರಹ್ಮವಿಷಯದಲ್ಲಿ ಪ್ರತಿಪತ್ತಿ-ಅಭಿಸಂಧಿಗಳೇ ಇಲ್ಲವಾದ್ದ-ರಿಂದ, ಇನ್ನು ಪರಬ್ರಹ್ಮವಿಷಯದಲ್ಲಿ ಪ್ರತಿಪತ್ತಿ-ಅಭಿಸಂಧಿಗಳು ಇರುವುದರಿಂದ, ಮತ್ತು

> ಯದುಪಾಸ್ತೇ ಪುಮಾನ್ ಜೀವನ್ ಯತ್ಪ್ರಾಪ್ತುಮಭಿವಾಂಛತಿ ।
> ಯಚ್ಚ ಪಶ್ಯತಿ ತೃಪ್ತಃ ಸಂಸ್ತತ್ಪ್ರಾಪ್ನೋತಿ ಮೃತೇರನು ॥

ಎಂಬುದಾಗಿ ಸ್ಮೃತಿಯೂ (ಪಾದ್ಮವಚನವೂ) ಇರುವುದರಿಂದ, ವಾಯು-ದೇವರು ಜ್ಞಾನಿಗಳನ್ನು ಪರಬ್ರಹ್ಮನನ್ನು ಕುರಿತೇ ಕೊಂಡೊಯ್ಯುತ್ತಾರೆ ಹೊರತು ಕಾರ್ಯಬ್ರಹ್ಮನನ್ನಲ್ಲ ಎಂದು ಸಿದ್ಧವಾಗುತ್ತದೆ.

### ಸೂತ್ರ - 15

**ಸೂ.ರ.:– अधिकारिभेदेनोभयप्राप्तिरिति सिद्धान्तयत्सूत्रमुपन्यस्यति ॥**

ಅಧಿಕಾರಿಭೇದದಿಂದ ಉಭಯಬ್ರಹ್ಮಪ್ರಾಪ್ತಿ ಎಂದು ಸಿದ್ಧಾಂತ ಮಾಡುವ ಸೂತ್ರವನ್ನು ಹೇಳುತ್ತಾರೆ -

## ॐ अप्रतीकालम्बनान्नयतीति बादरायण उभयथा च दोषात्तत्क्रतुश्च ॐ (४-३-१५)

**ಸೂತ್ರಾರ್ಥ** :- ವಾಯುಃ = ವಾಯುದೇವರು **ಅಪ್ರತೀಕಾಲಂಬನಾನ್** = ವ್ಯಾಪ್ತ್ಯೋಪಾಸಕರಾದ ಅಧಿಕಾರಿಗಳನ್ನು **ನಯತಿ** = ಪರಬ್ರಹ್ಮನನ್ನು ಕುರಿತು ಕೊಂಡೊಯ್ಯುತ್ತಾರೆ, ಅನ್ಯಾನ್ ಪ್ರತೀಕಾಲಂಬನಾನ್ = ಇತರರಾದ ಪ್ರತೀಕಾ-ಲಂಬನರಾದ ಅಧಿಕಾರಿಗಳನ್ನು (ಪ್ರತೀಕಶಬ್ದವಾಚ್ಯವಾದ ದೇಹದ ಒಳಗೆ ಉಪಾಸನೆ ಮಾಡುವ ಅಧಿಕಾರಿಗಳನ್ನು), ಕಾರ್ಯಂ ಬ್ರಹ್ಮ ನಯತಿ = ಕಾರ್ಯಬ್ರಹ್ಮನನ್ನು ಕುರಿತು ಕೊಂಡೊಯ್ಯುತ್ತಾರೆ **ಇತಿ** = ಎನ್ನುವುದು ''ಸ ಏನಾನ್ ಬ್ರಹ್ಮ ಗಮಯತಿ'' (ಛಾಂ. 4-15-6) ಎಂಬ ಶ್ರುತಿಯ ಅರ್ಥವಾಗಿದೆ ಎಂಬುದಾಗಿ **ಬಾದರಾಯಣಃ** = ಬಾದರಾಯಣಾಚಾರ್ಯರು ಅಭಿಪ್ರಾಯಪಡುತ್ತಾರೆ (ಸಿದ್ಧಾಂತ ಮಾಡುತ್ತಾರೆ), **ಕುತಃ** = ಏಕೆ? **ಉಭಯಥಾ ಚ ದೋಷಾತ್** = ಈ ವ್ಯವಸ್ಥೆಯನ್ನು ಅಂಗೀಕರಿಸದೇ ಎಲ್ಲ ಜ್ಞಾನಿಗಳಿಗೂ ಐಕ್ಯೈಕಪ್ರಾಪ್ತಿಯನ್ನು ಅಂಗೀಕರಿಸಿದರೆ (ಕಾರ್ಯಬ್ರಹ್ಮ-ಪರಬ್ರಹ್ಮ-ಪ್ರಾಪ್ತಿಯನ್ನು ಅಂಗೀಕರಿಸಿದರೆ) ಕಾರ್ಯಬ್ರಹ್ಮಪ್ರಾಪ್ತಿಪಕ್ಷ-ಪರಬ್ರಹ್ಮಪ್ರಾಪ್ತಿಪಕ್ಷ ಎರಡೂ ಪಕ್ಷಗಳಲ್ಲಿ ಹೇಳಿದ ದೋಷ ಬರಬೇಕಾಗುತ್ತದೆ.

ನನು ಯತ್ಪ್ರಾಪ್ತುಮಭಿವಾಂಛಂತಿ ತತ್ಪ್ರಾಪ್ನೋತೀತಿ (ಪಾದ್ಮ) ವಚನಾತ್ ತತ್ತದಿಚ್ಛಾಮಾತ್ರೇಣ ತತ್ತತ್ಪ್ರಾಪ್ತಿಸಂಭವಾನ್ನೋಕ್ತವ್ಯವಸ್ಥಾ ಅಂಗೀಕಾರ್ಯಾ ಇತ್ಯತ ಆಹ **ತತ್ಕ್ರತುಶ್ಚ** = ಹೌದು ಯತ್ಪ್ರಾಪ್ತುಮಭಿವಾಂಛಂತಿ ತತ್ಪ್ರಾಪ್ನೋತಿ ಎಂದು ಪಾದ್ಮವಚನ ಇರುವುದರಿಂದ ಆ ಆ ಬ್ರಹ್ಮಪ್ರಾಪ್ತಿಯನ್ನು ಇಚ್ಛಿಸುವ ಮಾತ್ರದಿಂದ ಆ ಆ ಬ್ರಹ್ಮಪ್ರಾಪ್ತಿಯು ಸಂಭವಿಸುವುದರಿಂದ ನೀವು ಹೇಳಿದ ವ್ಯವಸ್ಥೆಯು (ಅಧಿ ಕಾರಿಭೇದೇನ ಉಭಯಪ್ರಾಪ್ತಿಯು) ಅಂಗೀಕರಿಸಲು ಯೋಗ್ಯವಲ್ಲ ಎಂದು ಶಂಕೆ ಬಂದರೆ, ಅದಕ್ಕಾಗಿ ಹೇಳಿದರು - ತತ್ಕ್ರತುಶ್ಚ ಎಂದು. ಇದರಿಂದ

''ಸ ಯಥಾಕಾಮೋ ಭವತಿ ಯತ್ಕ್ರತುರ್ಭವತಿ ಯತ್ಕ್ರತುರ್ಭವತಿ ತತ್ಕರ್ಮ ಕುರುತೇ ಯತ್ಕರ್ಮ ಕುರುತೇ ತದಭಿಸಂಪದ್ಯತೇ'' (ಬೃ.ಉ. 6-4-5)

ಎಂಬ ಶ್ರುತಿಯನ್ನು ಗ್ರಹಣ ಮಾಡುತ್ತಿದ್ದಾರೆ.

**ಚ** = ಯಾವ ಕಾರಣ, 'ಸ ಯಥಾಕಾಮೋ ಭವತಿ' ಎಂಬ ಶ್ರುತಿಯು ತತ್ತತ್ಪ್ರಾಪ್ತಿ ಇಚ್ಛಾಮಾತ್ರದಿಂದ ತತ್ತತ್ಪ್ರಾಪ್ತಿಯನ್ನು ನಿಷೇಧಿಸಿ ತದ್‌ಜ್ಞಾನ-ಉಪಾಸನಾ-ಅಪರೋಕ್ಷ-ಗಳಿಂದಲೇನೇ ತತ್ಪ್ರಾಪ್ತಿಯನ್ನು ಹೇಳುತ್ತದೆಯೋ, ಆ ಕಾರಣ ತತ್ತದಿಚ್ಛಾಮಾತ್ರ-ದಿಂದಲೇ ತತ್ತತ್ಪ್ರಾಪ್ತಿಯು ಕೂಡುವುದಿಲ್ಲ ಎಂದರ್ಥ.

## ಸಿದ್ಧಾಂತ

ಸೂ.ರ.:– एवं च वायुः प्रतीकालम्बनान्मनुष्यांश्च कार्यं नयति । अप्रतीकालम्बनेषु ऋषीणां शतं राज्ञां शतं च परं नयतीति श्रुत्यर्थत्वात् । सर्वान्कार्यं नयतीत्यर्थत्वे सर्वान्परमेव नयतीत्यर्थत्वे च दोषसद्भावात् । न चेच्छावशेनैव कार्यपरप्राप्त्योस्सम्भवेनाप्रतीकालम्बनत्वादिविशेषाङ्गीकारो व्यर्थ इति वाच्यम् । स यथा काम इति श्रुतौ तत्प्राप्तीच्छूनामिच्छानुसारेण तत्प्राप्तिप्रतिषेधात् । प्रतीकालम्बनत्वादिविभागे प्रतीकमिति (गारुड.) स्मृतेः प्रमाणत्वेन सद्भावात् । अतो ज्ञानिनामधिकारिभेदेनोभयप्राप्तिरिति भगवान्बादरायणो मन्यत इति सिद्धम् ॥

ವಾಯುದೇವರು ಪ್ರತೀಕಾಲಂಬನರನ್ನು ಹಾಗೂ ಮನುಷ್ಯರನ್ನು ಕಾರ್ಯ-ಬ್ರಹ್ಮನನ್ನು ಕುರಿತು ಕೊಂಡೊಯ್ಯುತ್ತಾರೆ. ಅಪ್ರತೀಕಾಲಂಬನರಲ್ಲಿ ನೂರುಜನ ಋಷಿ-ಗಳನ್ನು ಹಾಗೂ ನೂರುಜನ ರಾಜರನ್ನು ಪರಬ್ರಹ್ಮನನ್ನು ಕುರಿತು ಕೊಂಡೊಯ್ಯು-ತ್ತಾರೆ ಎನ್ನುವುದು "ಸ ಏನಾನ್ ಬ್ರಹ್ಮ ಗಮಯತಿ" ಎಂಬ ಶ್ರುತಿಯ ಅರ್ಥವಾಗಿದೆ.

ಎಲ್ಲರನ್ನೂ ಕಾರ್ಯಬ್ರಹ್ಮನನ್ನು ಕುರಿತು ಕೊಂಡೊಯ್ಯುತ್ತಾರೆ ಎಂದು ಅರ್ಥ ಹೇಳಿದರೂ, ಎಲ್ಲರನ್ನೂ ಪರಬ್ರಹ್ಮನನ್ನು ಕುರಿತು ಕೊಂಡೊಯ್ಯುತ್ತಾರೆ ಎಂದು ಅರ್ಥ ಹೇಳಿದರೂ ದೋಷ ಬರುತ್ತದೆ. ಹಾಗಾಗಿ ಅಧಿಕಾರಿಭೇದದಿಂದ ಉಭಯಪ್ರಾಪ್ತಿ-ಯನ್ನು ಹೇಳಬೇಕು.

ಹೌದು, ಇಚ್ಛಾಮಾತ್ರದಿಂದಲೇ ಕಾರ್ಯ-ಪರಬ್ರಹ್ಮಪ್ರಾಪ್ತಿಗಳು ಸಂಭವಿಸು-ವುದರಿಂದ ಅಪ್ರತೀಕಾಲಂಬನತ್ವಾದಿ ವಿಶೇಷವನ್ನು ಅಂಗೀಕರಿಸುವುದು ವ್ಯರ್ಥ-ವಾಗಿದೆ ಎಂದು ಶಂಕಿಸುವುದು ಸರಿಯಲ್ಲ. ಕಾರಣ -

"ಸ ಯಥಾಕಾಮೋ ಭವತಿ ತತ್ಕ್ರತುರ್ಭವತಿ ತತ್ಕ್ರತುರ್ಭವತಿ ತತ್ಕರ್ಮ ಕುರುತೇ ಯತ್ಕರ್ಮ ಕುರುತೇ ತದಭಿಸಂಪದ್ಯತೇ" (ಬೃ.ಉ. 6-4-5)

ಎಂಬ ಶ್ರುತಿಯಲ್ಲಿ ತತ್ಪ್ರಾಪ್ತಿಯನ್ನು ಇಚ್ಛಿಸುವವರಿಗೆ ಇಚ್ಛಾನುಸಾರವಾಗಿ ತತ್ಪ್ರಾಪ್ತಿಯನ್ನು ನಿಷೇಧಿಸಿದ್ದರಿಂದ. ಮತ್ತು ಪ್ರತೀಕಾಲಂಬನ - ಅಪ್ರತೀಕಾಲಂಬನ ಎಂಬ ವಿಭಾಗವಿಷಯದಲ್ಲಿ

ಪ್ರತೀಕಂ ದೇಹ ಉದ್ದಿಷ್ಟೋ ಯೇಷಾಂ ತತ್ರೈವ ದರ್ಶನಮ್ ।
ನ ತು ವ್ಯಾಪ್ತತಯಾ ಕ್ವಾಪಿ ಪ್ರತೀಕಾಲಂಬನಾಸ್ತು ತೇ ॥
ಅಪ್ರತೀಕಾ ದೇವತಾಸ್ತು ಋಷೀಣಾಂ ಶತಮೇವ ಚ ।
ರಾಜ್ಞಾಂ ಚ ಶತಮುದ್ದಿಷ್ಟಂ ಗಂಧರ್ವಾಣಾಂ ಶತಂ ತಥಾ ॥
ಏತೇಽಧಿಕಾರಿಣೋ ವ್ಯಾಪ್ತದರ್ಶಿನೋಽನ್ಯೇ ನ ತು ಕ್ವಚಿತ್ ।
ಅಯೋಗ್ಯದರ್ಶನೇ ಯತ್ನಾತ್ ಭ್ರಂಶಃ ಪೂರ್ವಸ್ಯ ಚಾಪಿ ತು ॥
ಅಪ್ರತೀಕಾಶ್ರಯಾ ಯೇ ಹಿ ತೇ ಯಾಂತಿ ಪರಮೇವ ತು ।
ಸ್ವದೇಹೇ ಬ್ರಹ್ಮದೃಷ್ಟ್ಯೈವ ಗಚ್ಛೇದ್ಬ್ರಹ್ಮಸಲೋಕತಾಮ್ ।
ಬ್ರಹ್ಮಣಾ ಸಹ ಸಂಪ್ರಾಪ್ತೇ ಸಂಹಾರೇ ಪರಮಂ ಪದಮ್ ॥

ಎಂಬ ಸ್ಮೃತಿಯು (ಗಾರುಡವಚನವು) ಪ್ರಮಾಣವಾಗಿ ಇದೆ. ಆದ್ದರಿಂದ ಜ್ಞಾನಿಗಳಿಗೆ ಅಧಿಕಾರಿಭೇದದಿಂದ ಉಭಯಪ್ರಾಪ್ತಿಯಾಗುತ್ತದೆ ಎಂಬುದಾಗಿ ಭಗವಾನ್ ಬಾದರಾಯಣರು ಅಭಿಪ್ರಾಯಪಡುತ್ತಾರೆ (ಸಿದ್ಧಾಂತ ಮಾಡುತ್ತಾರೆ) ಎಂದು ಸಿದ್ಧವಾಗುತ್ತದೆ.

## ಸೂತ್ರ - 16

**ಸೂ.ರ.:– यदुक्तं नेच्छानुसारेण प्राप्तिरपि तु प्रतीकालम्बनादिक्रमेणैवेति न तद्युक्तम् । केचिदप्रतीकालम्बनाः केचित्प्रतीकालम्बना इति नियमे प्रमाणाभावेन यथेष्टमप्रतीकालम्बनत्वापादनस्यापि सम्भवादित्याशङ्कां परिहरत्सूत्रं पठति ॥**

ಇಚ್ಛಾನುಸಾರವಾಗಿ ತತ್ತತ್ಪ್ರಾಪ್ತಿಯಾಗುವುದಿಲ್ಲ. ಕಿಂತು ಪ್ರತೀಕಾಲಂಬನಾದಿ ಕ್ರಮದಿಂದಲೇ ತತ್ತತ್ಪ್ರಾಪ್ತಿಯಾಗುವುದು ಎಂದು ಏನು ಹೇಳಿದಿರಿ ಅದು ಸರಿಯಲ್ಲ. ಕಾರಣ - ಕೆಲವರು ಅಪ್ರತೀಕಾಲಂಬನರು ಕೆಲವರು ಪ್ರತೀಕಾಲಂಬನರು ಎಂಬ ನಿಯಮದಲ್ಲಿ ಪ್ರಮಾಣ ಇಲ್ಲವಾದ್ದರಿಂದ, ಯಥೇಷ್ಟತದಾಪಾದನವೂ ಸಂಭವಿಸುವುದರಿಂದ ಎಂದು ಶಂಕೆ ಬಂದರೆ, ಪರಿಹಾರಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

### ॐ विशेषं च दर्शयति ॐ (४-३-१६)

**ಸೂತ್ರಾರ್ಥ :-** ಚ = ಯಾವ ಕಾರಣ, "ಅಂತಃಪ್ರಕಾಶಾಃ..." (ಚತುರ್ವೇದಶಿಖಾ) ಎಂಬ ಶ್ರುತಿಯು ವಿಶೇಷಂ = ಕೆಲವರು ಅಪ್ರತೀಕಾಲಂಬನರು, ಕೆಲವರು

ಪ್ರತೀಕಾಲಂಬನರು ಎಂದು ವಿಶೇಷವನ್ನು ಭೇದವನ್ನು **ದರ್ಶಯತಿ** = ಪ್ರತಿಪಾದಿಸುತ್ತದೆಯೋ ಆ ಕಾರಣದಿಂದಲೂ ಸಹ ಅಧಿಕಾರಿಭೇದೇನ ತತ್ತತ್ಪ್ರಾಪ್ತಿಯನ್ನು ಹೇಳಿದ್ದು ಯುಕ್ತವಾಗಿದೆ.

**ಸೂ.ರ.:– एवं चान्तःप्रकाशा इति श्रुत्या प्रतीकाप्रतीकालम्बनयोर्विशेषभेदस्य प्रतिपादितत्वात् । अतोऽप्रतीकालम्बनानित्याद्युक्तं युक्तमिति सिद्धम् ॥**

"ಅಂತಃಪ್ರಕಾಶಾಃ ಬಹಿಃಪ್ರಕಾಶಾಃ ಸರ್ವಪ್ರಕಾಶಾಃ । ದೇವಾ ವಾವ ಸರ್ವಪ್ರಕಾಶಾಃ ಋಷಯೋಽಂತಃಪ್ರಕಾಶಾಃ ಮಾನುಷಾ ಏವ ಬಹಿಃಪ್ರಕಾಶಾಃ" (ಚತುರ್ವೇದಶಿಖಾ)

ಎಂಬ ಶ್ರುತಿಯಿಂದ ಪ್ರತೀಕಾಲಂಬನ-ಅಪ್ರತೀಕಾಲಂಬನರಲ್ಲಿ ವಿಶೇಷವು (ಭೇದವು) ಪ್ರತಿಪಾದಿತವಾದ್ದರಿಂದ, ಪ್ರತೀಕಾಲಂಬನ-ಅಪ್ರತೀಕಾಲಂಬನ ಎಂದು ಮಾಡಿದ ವಿಭಾಗವು ಯುಕ್ತವಾಗಿದೆ.

ಆದ್ದರಿಂದ ವಾಯುದೇವರು ಅಪ್ರತೀಕಾಲಂಬನ ಅಧಿಕಾರಿಗಳನ್ನು ಪರಬ್ರಹ್ಮನನ್ನು ಕುರಿತು ಕೊಂಡೊಯ್ಯುತ್ತಾರೆ, ಪ್ರತೀಕಾಲಂಬನ ಅಧಿಕಾರಿಗಳನ್ನು ಕಾರ್ಯಬ್ರಹ್ಮನನ್ನು ಕುರಿತು ಕೊಂಡೊಯ್ಯುತ್ತಾರೆ ಎಂದು ವಿಭಾಗ ಮಾಡಿ ಬಾದರಾಯಣ ಆಚಾರ್ಯರು ಸಿದ್ಧಾಂತ ಮಾಡಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

**ಕಾರ್ಯಾಧಿಕರಣವು ಮುಗಿಯಿತು.**

# चतुर्थाध्यायस्य चतुर्थः पादः

## ಪಾದಸಂಗತಿ

**ಸೂ.ರ.:– भोगमाहास्मिन्पादे ।**

ನಾಲ್ಕನೆಯ ಈ ಪಾದದಲ್ಲಿ ಭೋಗವನ್ನು ಪ್ರತಿಪಾದಿಸುತ್ತಾರೆ.

*ಅಧಿಕರಣ – 1*

## ಸಂಪದ್ಯಾಧಿಕರಣ

### ಅಧಿಕರಣಸಂಗತಿ

**ಸೂ.ರ.:– अत्र मुक्तस्य ब्रह्मानतिक्रमेणैव भोग्यानुभवः साध्यते ॥**

ಮುಕ್ತನಿಗೆ ಬ್ರಹ್ಮಾನತಿಕ್ರಮೇಣ ಭೋಗ್ಯಾನುಭವವನ್ನು (ಮುಕ್ತನು ಬ್ರಹ್ಮನನ್ನು ಅತಿಕ್ರಮಿಸದೇ ಮುಕ್ತಿಯಲ್ಲಿ ಭೋಗ ಮಾಡುತ್ತಾನೆ ಎಂದು) ಸಾಧಿಸುತ್ತಾರೆ ಮೊದಲನೇ ಈ ಸಂಪದ್ಯಾಧಿಕರಣದಲ್ಲಿ.

### ಪೂರ್ವಪಕ್ಷ

**ಸೂ.ರ.:– ननु मुक्तो ब्रह्मातिक्रम्य मुक्तौ भोगान्भुङ्क्ते । एतं सेतुं तीर्त्वेति (छां.८-४-२) ब्रह्मातिक्रमानन्तरं रूपाविर्भावस्योक्तत्वेनानतिक्रम्य स्थितस्य स्वरूपानुभवायोगात् । अतो मुक्तस्य ब्रह्मातिक्रमनियमान्न तद्गम्यमिति प्राप्ते सूत्रमाह ॥**

ಮುಕ್ತನಾದವನು ಬ್ರಹ್ಮನನ್ನು ಅತಿಕ್ರಮಿಸಿ ಮುಕ್ತಿಯಲ್ಲಿ ಭೋಗಗಳನ್ನು ಭುಂಜಿಸುತ್ತಾನೆ. ಕಾರಣ – "ಏತಂ ಸೇತುಂ ತೀರ್ತ್ವಾ" ಎಂಬುದಾಗಿ ಬ್ರಹ್ಮಾತಿಕ್ರಮಾನಂತರದಲ್ಲಿ ಸ್ವರೂಪಾವಿರ್ಭಾವವನ್ನು ಹೇಳಿದ್ದರಿಂದ, ಅತಿಕ್ರಮಿಸದೇ ಇದ್ದವನಿಗೆ ಸ್ವರೂಪಾನುಭವವು ಕೂಡುವುದಿಲ್ಲವಾದ್ದರಿಂದ. ಆದ್ದರಿಂದ ಮುಕ್ತನಾದವನಿಗೆ ಬ್ರಹ್ಮಾತಿಕ್ರಮನಿಯಮವಿರುವುದರಿಂದ ಬ್ರಹ್ಮನು ಗಮ್ಯನಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

## ॐ सम्पद्याविहाय स्वेन शब्दात् ॐ (४-४-१)

**ಸೂತ್ರಾರ್ಥ** :- ಜ್ಞಾನೀ = ಜ್ಞಾನಿಯು ಸಂಪದ್ಯ = ಬ್ರಹ್ಮನನ್ನು ಹೊಂದಿ **ಅವಿಹಾಯ** = ಬ್ರಹ್ಮನನ್ನು ಅತಿಕ್ರಮಿಸದೇ ಸ್ವೇನ = ಆವಿರ್ಭೂತಸ್ವರೂಪದಿಂದ ಇದ್ದವನಾಗಿ, ಭೋಗಾನ್ ಭುಂಕ್ತೇ = ಭೋಗಗಳನ್ನು ಭುಂಜಿಸುತ್ತಾನೆ. ಕುತಃ = ಏಕೆ? **ಶಬ್ದಾತ್** = ಸ ಯ ಏವಂವಿತ್ (ಸೌಪರ್ಣಶ್ರುತಿ) ಎಂದು ಶ್ರುತಿ ಇರುವುದರಿಂದ.

### ಸಿದ್ಧಾಂತ

**ಸೂ.ರ.:– एवं च ब्रह्म सम्पद्याविहायैव भोगान्भुङ्क्ते । स एवमिति श्रुतेः । परञ्ज्योतिरिति श्रुतेश्च । एतमिति (छां. ८-४-२) श्रुतेर्ब्रह्मप्राप्तयेऽन्यतरणस्यैव तदर्थत्वेनाविरोधात् । अतो मुक्तस्य ब्रह्मातिक्रमाभावात्तदेव गम्यमिति सिद्धम् ॥**

"ಸ ಯ ಏವಂವಿದೇವಂ ಮನ್ವಾನ ಏವಂ ಪಶ್ಯನ್ನಾತ್ಮಾನಮಭಿಸಂಪದ್ಯೈತೇ-ನಾತ್ಮನಾ ಯಥಾಕಾಮಂ ಸರ್ವಾನ್ ಕಾಮಾನನುಭವತಿ" (ಸೌಪರ್ಣಶ್ರುತಿ)

ಎಂಬುದಾಗಿ ಶ್ರುತಿ ಇರುವುದರಿಂದ, ಮತ್ತು

"ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ"

(ಛಾಂ.ಉ. 8-3-4)

ಎಂಬುದಾಗಿ ಮತ್ತೊಂದು ಶ್ರುತಿಯೂ ಇರುವುದರಿಂದ, ಮುಕ್ತನು ಬ್ರಹ್ಮನನ್ನು ಹೊಂದಿ ಬ್ರಹ್ಮನನ್ನು ಅತಿಕ್ರಮಿಸದೇ ಭೋಗಗಳನ್ನು ಭುಂಜಿಸುತ್ತಾನೆ.

ಇನ್ನು "ಏತಂ ಸೇತುಂ ತೀರ್ತ್ವಾ" ಎಂಬುದಾಗಿ ಛಂದೋಗಶ್ರುತಿಗೆ ಬ್ರಹ್ಮ-ಪ್ರಾಪ್ತಿಗಾಗಿ ಅನ್ಯತರಣ ಎಂದು ಅರ್ಥವಾದ್ದರಿಂದ ಆ ಶ್ರುತಿಯ ವಿರೋಧವೂ ಬರುವುದಿಲ್ಲ, ಆದ್ದರಿಂದ ಮುಕ್ತನಿಗೆ ಬ್ರಹ್ಮಾತಿಕ್ರಮ ಇಲ್ಲವಾದ್ದರಿಂದ ಬ್ರಹ್ಮನೇ ಗಮ್ಯ-ನಾಗಿದ್ದಾನೆ ಎಂದು ಸಿದ್ಧವಾಗುತ್ತದೆ.

ಸಂಪದ್ಯಾಧಿಕರಣವು ಮುಗಿಯಿತು.

*ಅಧಿಕರಣ – 2*

# ಮುಕ್ತಾಧಿಕರಣ

## ಸಂಗತಿ

**ಸೂ.ರ.:– अत्र ब्रह्म प्राप्य तदविहायैव भोगभोक्तुर्मुक्तत्वं साध्यते ।**

ಬ್ರಹ್ಮನನ್ನು ಹೊಂದಿ ಬ್ರಹ್ಮನನ್ನು ಅತಿಕ್ರಮಿಸದೆಯೇ ಭೋಗ ಮಾಡುವವನಿಗೆ ಮುಕ್ತತ್ವವನ್ನು ಸಾಧಿಸುತ್ತಾರೆ ಎರಡನೇ ಈ ಮುಕ್ತಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु स तत्र पर्येतीति श्रुत्युक्तो न मुक्तः । पर्येतीति क्रियाप्रतीतेः । मुक्तस्य कृतकृत्यत्वेन क्रियाऽसम्भवात् । न चामुक्तस्याप्येवंविधभोगासम्भवः । प्रागसम्भवेऽपि भगवत्प्राप्त्यनन्तरं सम्भवात् । न च श्रुत्युक्तस्यामुक्तत्वे स्वेन रूपेणेति (छां.८-३-४) वाक्यविरोधः । तत्र निर्गुणोपासकस्य स्वरूपाविर्भावाभिधानात् । स तत्रेति (छां.८-१२-३) दहरविद्योपासकस्यामुक्तस्यैव भोगाभिधानात् । अतः श्रुत्युक्तस्यामुक्तत्वान्न मुक्तस्य भोग इति प्राप्ते सूत्रितम् ॥**

"ಸ ತತ್ರ ಪರ್ಯೇತಿ..." (ಛಾಂ. 8–12–3) ಎಂಬ ಶ್ರುತ್ಯುಕ್ತನಾದವನು ಮುಕ್ತನಲ್ಲ. ಕಾರಣ ಅಲ್ಲಿ 'ಪರ್ಯೇತಿ' ಎಂಬುದಾಗಿ ಕ್ರಿಯೆಯು ಪ್ರತೀತ-ವಾಗುತ್ತಿರುವುದರಿಂದ. ಮುಕ್ತನಿಗಾದರೂ ಕೃತಕೃತ್ಯನಾಗಿರುವ ಕಾರಣ ಕ್ರಿಯೆಯು ಸಂಭವಿಸುವುದಿಲ್ಲ.

ಶ್ರುತ್ಯುಕ್ತನಾದವನು ಅಮುಕ್ತ ಎನ್ನುವುದಾದರೆ, ಅಮುಕ್ತನಾದವನಿಗೆ ಈ ವಿಧವಾದ ಭೋಗವು ಸಂಭವಿಸುವುದಿಲ್ಲವಲ್ಲ? ಎಂದರೆ, ಅದು ಸರಿಯಲ್ಲ, ಕಾರಣ – ಈ ವಿಧವಾದ ಭೋಗವು ಮೊದಲು ಸಂಭವಿಸದಿದ್ದರೂ ಸಹ ಭಗವತ್ಪ್ರಾಪ್ತ್ಯ-ನಂತರದಲ್ಲಿ ಸಂಭವಿಸುತ್ತದೆ.

ಶ್ರುತ್ಯುಕ್ತನಾದವನು ಅಮುಕ್ತ ಎಂದಾದರೆ "ಸ್ವೇನ ರೂಪೇಣಾಭಿನಿಷ್ಪದ್ಯತೇ"

(ಛಾಂ. 8-3-4) ಎಂಬ ವಾಕ್ಯದ ವಿರೋಧ ಬರುವುದಲ್ಲ ? ಎಂದರೆ, ಅದೂ ಸರಿಯಲ್ಲ. ಅಲ್ಲಿ (ಸ್ವೇನರೂಪೇಣ ಎನ್ನುವಲ್ಲಿ) ನಿರ್ಗುಣೋಪಾಸಕನಿಗೆ ಸ್ವರೂಪಾವಿರ್ಭಾವವನ್ನು ಹೇಳಿದ್ದರಿಂದ, "ಸ ತತ್ರ" ಎನ್ನುವಲ್ಲಿಯಾದರೂ ದಹರ-ವಿದ್ಯೋಪಾಸಕನಾದ ಅಮುಕ್ತನಿಗೇನೇ ಭೋಗವನ್ನು ಹೇಳಿದ್ದರಿಂದ ವಾಕ್ಯವಿರೋಧ ಬರುವುದಿಲ್ಲ.

ಆದ್ದರಿಂದ "ಸ ತತ್ರ ಪರ್ಯೇತಿ" ಎಂಬ ಶ್ರುತ್ಯುಕ್ತನಾದವನು ಮುಕ್ತನಲ್ಲ-ವಾದ್ದರಿಂದ, ಮುಕ್ತನಿಗೆ ಭೋಗ ಇಲ್ಲ ಎಂಬುದಾಗಿ ಪೂರ್ವಪಕ್ಷವು ಪ್ರಾಪ್ತವಾದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರ ಹೇಳುತ್ತಾರೆ -

## ॐ मुक्तः प्रतिज्ञानात् ॐ (४-४-२)

**ಸೂತ್ರಾರ್ಥ** :- ಸ ತತ್ರ ಪರ್ಯೇತಿ ಇತಿ ಶ್ರುತೌ **ಮುಕ್ತಃ** ಏವೋಚ್ಯತೇ = 'ಸ ತತ್ರ ಪರ್ಯೇತಿ' ಎಂಬ ಶ್ರುತಿಯಲ್ಲಿ ಮುಕ್ತನೇ ಪ್ರತಿಪಾದ್ಯನಾಗಿದ್ದಾನೆ. ಕುತಃ = ಏಕೆ? **ಪ್ರತಿಜ್ಞಾನಾತ್** = ಮುಕ್ತನಿಂದ ಭಿನ್ನನಾದವನಿಗೆ ದಿವ್ಯಭೋಗವನ್ನು ನಿಷೇಧಿಸಿ, 'ಅಹರಹಃ' ಎಂಬ (ಬೃಹತ್) ಶ್ರುತಿಯಲ್ಲಿ ಮುಕ್ತನಿಗೇನೇ ಬ್ರಹ್ಮಪ್ರಾಪ್ತಿಯಿಂದ ದಿವ್ಯಭೋಗವನ್ನು ಹೇಳಿದ್ದರಿಂದ.

### ಸಿದ್ಧಾಂತ

**ಸೂ.ರ.:- एवं च निर्दिष्टश्रुतौ मुक्तस्यैवोक्तत्वात् । मुक्तत्वं विनैतद्भोगासम्भवात् । स्वरूपाविर्भावोक्तेश्च । एकप्रकरणत्वसम्भवे भिन्नप्रकरणत्वकल्पनाऽयोगात् । अन्यथाऽतिप्रसङ्गात् । अतो युक्त एव मुक्तस्य भोग इति सिद्धम् ॥**

"ಸ ತತ್ರ ಪರ್ಯೇತಿ" ಎಂಬ ಶ್ರುತಿಯಲ್ಲಿ ಮುಕ್ತನೇ ಪ್ರತಿಪಾದ್ಯನಾಗಿದ್ದಾನೆ. ಕಾರಣ ಮುಕ್ತತ್ವವಿಲ್ಲದೇ ಈ ವಿಧವಾದ ಭೋಗ ಕೂಡುವುದಿಲ್ಲವಾದ್ದರಿಂದ.

ಅಮುಕ್ತನಾದವನಿಗೇನೇ ಬ್ರಹ್ಮಪ್ರಾಪ್ತಿಯಿಂದ ದಿವ್ಯಭೋಗ ಉಪಪನ್ನ ಎಂದು ಹೇಳಲು ಬರುವುದಿಲ್ಲ, ಕಾರಣ -

"ಅಹರಹರೇನಮನುಪ್ರವಿಶತ್ಯುಪಸಂಕ್ರಮೇ ಚ ನ ತತ್ರ ಮೋದತೇ ..."

ಎಂಬ (ಬೃಹತ್) ಶ್ರುತಿಯಲ್ಲಿ ಬ್ರಹ್ಮನನ್ನು ಹೊಂದಿದವರಾಗಿದ್ದರೂ ಸಹ ಸುಪ್ತರಾದವರು ಮುಕ್ತರಲ್ಲದ ಕಾರಣ ಅವರಿಗೆ ದಿವ್ಯಭೋಗವನ್ನು ನಿಷೇಧಿಸಿ, ಮುಕ್ತನಿಗೇನೇ ಬ್ರಹ್ಮಪ್ರಾಪ್ತಿಯಿಂದ ದಿವ್ಯಭೋಗಸದ್ಭಾವವನ್ನು ಹೇಳಿದ್ದರಿಂದ.

ಮತ್ತು "ಸ್ವೇನ ರೂಪೇಣಾಭಿನಿಷ್ಪದ್ಯತೇ" ಎಂಬುದಾಗಿ ಸ್ವರೂಪಾವಿರ್ಭಾವ-ವನ್ನೂ ಹೇಳಿದ್ದರಿಂದ. ಹಾಗೂ ಏಕಪ್ರಕರಣತ್ವವು ಸಂಭವಿಸುವಾಗ ಭಿನ್ನಪ್ರಕರಣತ್ವ-ಕಲ್ಪನಾ ಕೂಡುವುದಿಲ್ಲ. ಆದ್ದರಿಂದ "ಸ ತತ್ರ ಪರ್ಯೇತಿ" ಎಂಬ ಶ್ರುತ್ಯುಕ್ತನಾದವನು ಮುಕ್ತನೇ ಆದ್ದರಿಂದ, ಮುಕ್ತನಿಗೆ ಭೋಗವು ಉಪಪನ್ನ ಎಂದು ಸಿದ್ಧವಾಗುತ್ತದೆ.

**ಮುಕ್ತಾಧಿಕರಣವು ಮುಗಿಯಿತು.**

ಅಧಿಕರಣ – 3

# ಆತ್ಮಾಧಿಕರಣ

## ಸಂಗತಿ

**ಸೂ.ರ.:– अत्र मुक्तप्राप्यस्य ज्योतिषो ब्रह्मत्वं साध्यते ।**

ಮುಕ್ತಪ್ರಾಪ್ಯನಾದ ಜ್ಯೋತಿಃಶಬ್ದವಾಚ್ಯನಾದವನಿಗೆ ಬ್ರಹ್ಮತ್ವವನ್ನು ಸಾಧಿಸುತ್ತಾರೆ ಮೂರನೇ ಈ ಆತ್ಮಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु परंज्योति (छां. ८-३-४.) शब्दोक्तो न विष्णुः । किन्त्वादित्यो भवेत् । स तेजसीति (प्र.५-५.) श्रुत्या समाख्यानात् । एवं च न मुक्तस्य ब्रह्मसमीपे भोग इति प्राप्ते सूत्रमाह ॥**

''ಪರಂಜ್ಯೋತಿರುಪಸಂಪದ್ಯ'' (ಛಾಂ.8–3–4) ಎಂಬ ಪರಂಜ್ಯೋತಿಃ-ಶಬ್ದದಿಂದ ವಾಚ್ಯನಾದವನು ವಿಷ್ಣು ಅಲ್ಲ. ಕಿಂತು ಆದಿತ್ಯನಾಗುತ್ತಾನೆ. ''ಸ ತೇಜಸಿ ಸೂರ್ಯೇ ಸಂಪನ್ನೋ ಯಥಾ ಪಾದೋದರಸ್ತ್ವಚಾ ವಿನಿರ್ಮುಚ್ಯತ ಏವಂ ಹೈವ ಸ ಪಾಪ್ಮನಾ ವಿನಿರ್ಮುಕ್ತಃ'' (ಪ್ರ. 5.5) ಎಂಬ ಶ್ರುತಿಯಿಂದ ಸಮಾಖ್ಯಾ ಬರುವುದ-ರಿಂದ. ಆದ್ದರಿಂದ ಮುಕ್ತನಿಗೆ ಬ್ರಹ್ಮಸಮೀಪದಲ್ಲಿ ಭೋಗವಿಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರ ಹೇಳುತ್ತಾರೆ –

**ॐ आत्मा प्रकरणात् ॐ (४-४-३)**

**ಸೂತ್ರಾರ್ಥ** :- ಪರಂಜ್ಯೋತಿಃಶಬ್ದೇನ = ಪರಂಜ್ಯೋತಿಃಶಬ್ದದಿಂದ **ಆತ್ಮಾ** = ಪರಮಾತ್ಮನೇ ಪ್ರತಿಪಾದ್ಯನಾಗುತ್ತಾನೆ. ನ ತು ಸೂರ್ಯಃ = ಹೊರತು ಸೂರ್ಯನು ಪ್ರತಿಪಾದ್ಯನಾಗುವುದಿಲ್ಲ. ಕುತಃ = ಏಕೆ? **ಪ್ರಕರಣಾತ್** = ಪರಮಾತ್ಮ ಪ್ರಕರಣವಾದ್ದರಿಂದ.

## ಸಿದ್ಧಾಂತ

ಸೂ.ರ.:- एवं च य आत्मेति (छां.८-१-५.) भगवत एवारभ्याधीतत्वेनास्य तत्प्रकरणत्वात् । प्रकरणस्य समाख्यातो बलवत्त्वात् । सूर्यमण्डलप्राप्त्यनन्तरं पापकर्मविनाशाङ्गीकारेण स तेजसीति वाक्यस्य किंस्तुघ्नप्राप्तिपूर्वकालिकसूर्यप्राप्तिपरत्वेन सावकाशत्वात् । परंज्योतिःशब्दस्यान्यत्राभावाच्च । अतः परंज्योतिर्ब्रह्मैवेति तत्प्राप्याविहायैव मुक्तो भोगान्भुङ्क्त इति सिद्धम् ॥

"ಯ ಆತ್ಮಾಽಪಹತಪಾಪ್ಮಾ" (ಛಾಂ. 8-1-5) ಎಂಬುದಾಗಿ ಭಗವಂತನೇ ಆಭ್ಯಾಧೀತನಾದ್ದರಿಂದ ಇದು ಪರಮಾತ್ಮಪ್ರಕರಣವಾಗಿದೆ. ಪ್ರಕರಣವು ಸಮಾಖ್ಯಾ-ಗಿಂತಲೂ ಪ್ರಬಲವಾಗಿರುತ್ತದೆ. ಆದ್ದರಿಂದ ಪರಂಜ್ಯೋತಿಃಶಬ್ದದಿಂದ ವಿಷ್ಣುವೇ ವಾಚ್ಯ.

ಸೂರ್ಯಮಂಡಲಪ್ರಾಪ್ತ್ಯನಂತರದಲ್ಲಿ ಪಾಪಕರ್ಮವಿನಾಶವನ್ನು ಅಂಗೀ-ಕರಿಸಿದ್ದರಿಂದ 'ಸ ತೇಜಸಿ' ಎಂಬ ವಾಕ್ಯವು ಕಿಂಸ್ತುಘ್ನಪ್ರಾಪ್ತಿ ಪೂರ್ವಕಾಲಿಕ-ಸೂರ್ಯಪ್ರಾಪ್ತಿಪರವಾದ್ದರಿಂದ ಸಾವಕಾಶವಾಗಿದೆ. ಮತ್ತು ಪರಂಜ್ಯೋತಿಃಶಬ್ದವು ವಿಷ್ಣು ಬಿಟ್ಟು ಇತರರಲ್ಲಿ ಇಲ್ಲವೂ ಇಲ್ಲ. ಆದ್ದರಿಂದ ಪರಂಜ್ಯೋತಿಃಶಬ್ದವಾಚ್ಯ-ನಾದವನು ಬ್ರಹ್ಮನೇ ಆದ್ದರಿಂದ ಅವನನ್ನು ಹೊಂದಿ ಅವನನ್ನು ಬಿಡದೆಯೇ ಮುಕ್ತನು ಭೋಗವನ್ನು ಭುಂಜಿಸುತ್ತಾನೆ ಎಂದು ಸಿದ್ಧವಾಗುತ್ತದೆ.

ಆತ್ಮಾಧಿಕರಣವು ಮುಗಿಯಿತು.

ಅಧಿಕರಣ – 4

# ಅವಿಭಾಗಾಧಿಕರಣ

## ಸಂಗತಿ

**ಸೂ.ರ.:– अत्र सायुज्यभाजां भगवद्भुक्तभोगभोक्तृत्वं समर्थ्यते ।**

ಸಾಯುಜ್ಯಮೋಕ್ಷವನ್ನು ಹೊಂದಿದವರಿಗೆ ಭಗವದ್‌ಭುಕ್ತಭೋಗಭೋಕ್ತೃತ್ವ-ವನ್ನು (ಭಗವಂತನಿಂದ ಭುಕ್ತವಾದ ಭೋಗವನ್ನೇ ಭುಂಜಿಸುತ್ತಾರೆ ಎಂದು) ಸಮರ್ಥಿಸುತ್ತಾರೆ ನಾಲ್ಕನೇ ಈ ಅವಿಭಾಗಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु मुक्ताः परमात्मनाऽभुक्तभोगान् भुञ्जते । अवाप्तऽ महापुरुषार्थत्वात् । अन्यथा कदाचिन्मुक्तानां भोगेच्छायामप्यवाप्त-कामत्वेन परमात्मनस्तदनिच्छायां मुक्तानां भोगो न स्यात् । परमात्म भोगं विना तेषां भोगायोगात् । ततश्च भगवदभुक्तभोगभोक्तृत्वान्न तस्य सर्वभोक्तृत्वमिति प्राप्ते सूत्रमाह ॥**

ಮುಕ್ತರು (ಸಾಯುಜ್ಯಮೋಕ್ಷವನ್ನು ಹೊಂದಿದವರು) ಪರಮಾತ್ಮನಿಂದ ಭುಕ್ತ-ವಾಗದ ಭೋಗಗಳನ್ನೇ ಭುಂಜಿಸುತ್ತಾರೆ. ಕಾರಣ ಮಹಾಪುರುಷಾರ್ಥವನ್ನು ಹೊಂದಿದವರಾದ್ದರಿಂದ. ಅನ್ಯಥಾ (ಪರಮಾತ್ಮನಿಂದ ಭುಕ್ತವಾದ ಭೋಗಗಳನ್ನೇ ಭುಂಜಿಸುವುದಾದರೆ) ಕೆಲವೊಮ್ಮೆ ಮುಕ್ತರಿಗೆ ಭೋಗೇಚ್ಛಾ ಬಂದಾಗಲೂ ಸಹ ಅವಾಪ್ತಕಾಮನಾದ್ದರಿಂದ ಪರಮಾತ್ಮನಿಗೆ ಅದರ ಬಗ್ಗೆ ಇಚ್ಛಾ ಬರದಿದ್ದಾಗ ಮುಕ್ತರಿಗೆ ಭೋಗ ಆಗದೇ ಹೋಗಬೇಕಾಗುತ್ತದೆ. ಪರಮಾತ್ಮನ ಭೋಗವಿಲ್ಲದೇ ಅವರಿಗೆ ಭೋಗ ಇಲ್ಲವಾದ್ದರಿಂದ. ಆದ್ದರಿಂದ ಮುಕ್ತರು ಭಗವಂತನಿಂದ ಭುಕ್ತವಾಗದ ಭೋಗವನ್ನು ಭುಂಜಿಸುತ್ತಾರಾದ್ದರಿಂದ ಅವರಿಗೆ ಸರ್ವಭೋಕ್ತೃತ್ವ ಇಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

## ॐ अविभागेन दृष्टत्वात् ॐ (४-४-४)

**ಸೂತ್ರಾರ್ಥ :- ಅವಿಭಾಗೇನ** = ವಿಭಾಗವಿಲ್ಲದೇ=ಪರಮಾತ್ಮಭೋಗ ಬಿಡದೇ, ಅಂದರೆ ಪರಮಾತ್ಮನಿಂದ ಭುಕ್ತವಾದ ಭೋಗಗಳೇ ಮುಕ್ತರಿಂದ ಕ್ರಮವಾಗಿ ಭುಂಜಿಸಲ್ಪಡುತ್ತವೆ. **ಕುತಃ** = ಏಕೆ? **ದೃಷ್ಟತ್ವಾತ್** = "ಯಾನೇವಾಹಂ" (ಚತುರ್ವೇದಶಿಖಾ) ಎಂದು ಶ್ರುತಿ ಇರುವುದರಿಂದ.

## ಸಿದ್ಧಾಂತ

**ಸೂ.ತ.:- एवं च परमात्मभुक्तानेव भोगान्भुञ्जन्ते मुक्ताः । यानेवाहं शृणोमीति श्रुतेः । मुक्ताः प्राप्येति (भविष्यत्पर्वणि.) स्मृतेश्च । अतो मुक्तानां भगवद्भुक्तभोगभोक्तृत्वाद्युक्तं तस्य सर्व-भोक्तृत्वमिति सिद्धम् ॥**

"ಯಾನೇವಾಹಂ ಶೃಣೋಮಿ ಯಾನ್ ಪಶ್ಯಾಮಿ ಯಾಂಜಿಂಘ್ರಾಮಿ ತಾನೇವೈತ ಇದಂ ಶರೀರಂ ವಿಮುಚ್ಯಾನುಭವಂತಿ" (ಚತುರ್ವೇದಶಿಖಾ)

ಎಂಬುದಾಗಿ ಶ್ರುತಿ ಇರುವುದರಿಂದ, ಮತ್ತು

ಮುಕ್ತಾಃ ಪ್ರಾಪ್ಯ ಪರಂ ವಿಷ್ಣುಂ ತದ್ಭೋಗಾಂಲ್ಲೇಶತಃ ಕ್ವಚಿತ್ ।
ಬಹಿಷ್ಠಾನ್ಭುಂಜತೇ ನಿತ್ಯಂ ನಾಽನಂದಾದೀನ್ ಕಥಂಚನ ॥

(ಭವಿಷ್ಯತ್ಪರ್ವವಚನ)

ಎಂಬುದಾಗಿ ಸ್ಮೃತಿಯೂ ಇರುವುದರಿಂದ, ಮುಕ್ತರು ಪರಮಾತ್ಮನಿಂದ ಭುಕ್ತ-ವಾದ ಭೋಗಗಳನ್ನು ಭೋಗ ಮಾಡುತ್ತಾರೆ. ಆದ್ದರಿಂದ ಮುಕ್ತರು ಭಗವದ್-ಭುಕ್ತಭೋಗಭೋಕ್ತೃಗಳಾದ್ದರಿಂದ ಅವರಿಗೆ ಸರ್ವಭೋಕ್ತೃತ್ವ ಯುಕ್ತವಾಗಿದೆ ಎಂದು ಸಿದ್ಧವಾಗುತ್ತದೆ.

ಅವಿಭಾಗಾಧಿಕರಣವು ಮುಗಿಯಿತು.

ಅಧಿಕರಣ – 5

# ಬ್ರಾಹ್ಮಾಧಿಕರಣ

## ಸಂಗತಿ

**ಸೂ.ರ.:– अत्र ब्रह्मप्राप्तस्य सायुज्यमुक्तस्य भोगः समर्थ्यते ।**

ಬ್ರಹ್ಮನನ್ನು ಹೊಂದಿದ, ಸಾಯುಜ್ಯಮೋಕ್ಷವನ್ನು ಹೊಂದಿದ ಮುಕ್ತರಿಗೆ ಭೋಗವನ್ನು ಸಮರ್ಥಿಸುತ್ತಾರೆ ಐದನೇ ಈ ಬ್ರಾಹ್ಮಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु न मुक्तानां भोगो युक्तः । शरीराभावात् । तेषां देहसद्भावाङ्गीकारे मुक्तत्वव्याघातात् । अतो मुक्तौ भोगासम्भवादपुरुषार्थत्वमिति प्राप्ते सूत्रितम् ॥**

ಮುಕ್ತರಿಗೆ ಭೋಗವು ಉಪಪನ್ನವಾಗುವುದಿಲ್ಲ, ಕಾರಣ – ಅವರಿಗೆ ಭೋಗ-ಸಾಧನವಾದ ಶರೀರವೇ ಇರುವುದಿಲ್ಲವಾದ್ದರಿಂದ. ಅವರಿಗೆ ದೇಹ ಇದೆ ಎಂದು ಅಂಗೀಕರಿಸುವುದಾದರೆ ಮುಕ್ತತ್ವವು ವ್ಯಾಹತವಾಗಬೇಕಾಗುತ್ತದೆ. ಆದ್ದರಿಂದ ಮುಕ್ತಿಯಲ್ಲಿ ಭೋಗವು ಅಸಂಭಾವಿತವಾದ್ದರಿಂದ ಅದು ಪುರುಷಾರ್ಥವಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ ब्राह्मेण जैमिनिरुपन्यासादिभ्यः ॐ (४-४-५)**

**ಸೂತ್ರಾರ್ಥ** :- **ಬ್ರಾಹ್ಮೇಣ** = ಬ್ರಹ್ಮಸಂಬಂಧಿಯಾದ ದೇಹದಿಂದಲೇ, ಮುಕ್ತೋ ಭೋಗಾನ್ ಭುಂಕ್ತೇ = ಮುಕ್ತನು ಭೋಗಗಳನ್ನು ಭುಂಜಿಸುತ್ತಾನೆ. ಕುತಃ = ಏಕೆ? **ಉಪನ್ಯಾಸಾದಿಭ್ಯಃ** = "ಬ್ರಹ್ಮಣಾ ...." ಎಂದು (ಮಾಧ್ಯಂದಿನಾಯನ) ಶ್ರುತಿ ಇರುವುದರಿಂದ, ಆದಿಪದೋಕ್ತವಾದ "ಆದತ್ತೇ ..." ಎಂದು ಸ್ಮೃತಿಯೂ ಇರುವುದರಿಂದ, ಜೊತೆಗೆ ಯುಕ್ತಿಯೂ ಇರುವುದರಿಂದ ಇತಿ **ಜೈಮಿನಿಃ** ಆಚಾರ್ಯೋ ಮನ್ಯತೇ = ಎಂಬುದಾಗಿ ಜೈಮಿನಿ ಆಚಾರ್ಯರು ಅಭಿಪ್ರಾಯಪಡುತ್ತಾರೆ.

## ಸಿದ್ಧಾಂತ

**ಸೂ.ರ.:– एवं च मुक्तानां स्वदेहाभावेऽपि ब्राह्मेण देहेन भोगस्य युक्तत्वात् । निर्दिष्टश्रुतिस्मृत्योश्च । जैमिन्युक्तस्यापि प्रामाणिकत्वेन बादरायणोक्तेरविरोधात् । अतो मुक्तौ भोगसम्भवाद्युक्तं मुक्तेः पुरुषार्थत्वमिति सिद्धम् ॥**

ಮುಕ್ತರಿಗೆ ದೇಹ ಇಲ್ಲದೇ ಹೋದರೂ ಸಹ ಬ್ರಹ್ಮಸಂಬಂಧಿಯಾದ ದೇಹದಿಂದ ಭೋಗವು ಯುಕ್ತವಾಗಿದೆ. ಕಾರಣ ಈ ವಿಷಯದಲ್ಲಿ

"ಸ ವಾ ಏಷ ಬ್ರಹ್ಮನಿಷ್ಠ ಇದಂ ಶರಿರಂ ಮರ್ತ್ಯಮತಿಸೃಜ್ಯ ಬ್ರಹ್ಮಾಭಿಸಂಪದ್ಯ ಬ್ರಹ್ಮಣಾ ಪಶ್ಯತಿ ಬ್ರಹ್ಮಣಾ ಶೃಣೋತಿ ಬ್ರಹ್ಮಣ್ಯೆವೇದಂ ಸರ್ವಮನುಭವತಿ" (ಮಾಧ್ಯಂದಿನಾಯನ ಶ್ರುತಿ)

ಎಂಬ ಶ್ರುತಿ ಹಾಗೂ

ಆದತ್ತೇ ಹರಿಹಸ್ತೇನ ಹರಿದೃಷ್ಟ್ಯೈವ ಪಶ್ಯತಿ ।
ಗಚ್ಛೇಚ್ಚ ಹರಿಪಾದೇನ ಮುಕ್ತಸ್ಯೈಷಾ ಸ್ಥಿತಿರ್ಭವೇತ್ ॥

ಎಂಬ ಸ್ಮೃತಿಗಳು ಪ್ರಮಾಣವಾಗಿ ಇರುವುದರಿಂದ. ಜೈಮಿನಿಗಳು ಹೇಳುವ ಈ ವಿಷಯವೂ ಪ್ರಾಮಾಣಿಕವಾದ್ದರಿಂದ ಬಾದರಾಯಣೋಕ್ತಿಗೆ ವಿರೋಧ ಇಲ್ಲ. ಆದ್ದರಿಂದ ಮುಕ್ತಿಯಲ್ಲಿ ಭೋಗವು ಸಂಭವಿಸುವುದರಿಂದ ಮುಕ್ತಿಗೆ ಪುರುಷಾರ್ಥತ್ವವು ಯುಕ್ತವಾಗಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ – 6

**ಸೂ.ರ.:– एवं देहाभावमभ्युपगम्य मुक्तस्य भोगं समर्थ्य देहसद्भावमभ्युपगम्यापि तत्समर्थयत्सूत्रमुपन्यस्यति ॥**

ಈ ರೀತಿಯಾಗಿ ಮುಕ್ತರಿಗೆ ದೇಹಾಭಾವವನ್ನು ಅಂಗೀಕರಿಸಿ ಭೋಗವನ್ನು ಸಮರ್ಥಿಸಿ, ಪ್ರಕೃತ ದೇಹಸದ್ಭಾವವನ್ನು ಅಂಗೀಕರಿಸಿ ಭೋಗವನ್ನು ಸಮರ್ಥಿಸುವ ಸೂತ್ರವನ್ನು ಹೇಳುತ್ತಾರೆ –

## ॐ चितिमात्रेण तदात्मकत्वादित्यौडुलोमिः ॐ (४-४-६)

**ಸೂತ್ರಾರ್ಥ :- ಚಿತಿಮಾತ್ರೇಣ** = ಕೇವಲ ಜ್ಞಾನಾತ್ಮಕವಾದ ದೇಹದಿಂದ, ಮುಕ್ತೋ ಭೋಗಾನ್ ಭುಂಕ್ತೇ = ಮುಕ್ತನು ಭೋಗಗಳನ್ನು ಭುಂಜಿಸುತ್ತಾನೆ. **ತದಾತ್ಮಕತ್ವಾತ್** = ಚಿನ್ಮಾತ್ರದೇಹವೇ ಮುಕ್ತಸ್ವರೂಪವಾದ್ದರಿಂದ. ತಸ್ಯ ಚ ಸಂಸೃತ್ಯಹೇತುತ್ವಾತ್ = ಆ ಚಿನ್ಮಾತ್ರದೇಹವಾದರೂ ಸಂಸೃತಿಗೆ ಹೇತುವಾಗಿಲ್ಲ. **ಇತಿ ಔಡುಲೋಮಿಃ** = ಎಂಬುದಾಗಿ ಔಡುಲೋಮಿ ಆಚಾರ್ಯರು ಅಭಿಪ್ರಾಯ ಪಡುತ್ತಾರೆ.

**ಸೂ.ರ.:- एवं च मुक्तानां चिन्मात्रेण पृथग्विद्यमानत्वात् । तेषां शरीरस्य चैतन्यस्वरूपेण पृथग्विद्यमानत्वात् । तेषां चिदात्मकत्वा- चितिमात्रशरीरस्य च मुक्तस्वरूपत्वात्स्वरूपस्य चाकृत्रिमत्त्वेन संसारानापादकत्वात् । सर्वदेहपरित्यागेन ब्रह्मदेहाद्भिन्नचितिमात्रेण मुक्ता भुज्यन्ते । सर्वं वेति (उद्दालक.) श्रुतेः । इत्यौडुलोमिराचार्यो मन्यते । अतो मुक्तौ भोगः सम्भवतीति सिद्धम् ॥**

ಮುಕ್ತರಿಗೆ ಭೋಗವು ಅಸಂಭಾವಿತವಲ್ಲ, ಕಾರಣ ಅವರಿಗೆ ಬ್ರಹ್ಮದೇಹದಿಂದ ಅತಿರಿಕ್ತವಾದ ಸ್ವದೇಹ ಇರುವುದರಿಂದ. ಹಾಗಾದರೆ ದೇಹ ಇರುವುದಾದರೆ ಮುಕ್ತತ್ವವು ಕೂಡುವುದಿಲ್ಲ ಎಂದು ಶಂಕಿಸುವುದು ಸರಿಯಲ್ಲ, ಕಾರಣ ಮುಕ್ತರ ಆ ದೇಹ ಚಿತಿಮಾತ್ರವಾದ್ದರಿಂದ (ಚಿನ್ಮಯ-ಜ್ಞಾನಾತ್ಮಕವಾದ್ದರಿಂದ). ದೇಹವು ಚಿತಿಮಾತ್ರವಾದರೂ ಸಹ ಸಂಸಾರಿತ್ವ ಏಕೆ ಬರುವುದಿಲ್ಲ ? ಎಂದರೆ, ಚಿತಿಮಾತ್ರವೇ ಮುಕ್ತಸ್ವರೂಪವಾದ್ದರಿಂದ. ಕೃತ್ರಿಮಶರೀರವು ಸಂಸಾರಕ್ಕೆ ಆಪಾದಕವೇ ಹೊರತು ಚಿತಿಮಾತ್ರಶರೀರವು ಸಂಸಾರಕ್ಕೆ ಆಪಾದಕವಲ್ಲ.

ಮುಕ್ತಜೀವರಿಗೆ ಚಿನ್ಮಾತ್ರತ್ವವೇ ಏಕೆ? ಎಂದರೆ,

"ಸರ್ವಂ ವಾ ಏತದಚಿತ್ತ್ವರಿತ್ಯಜ್ಯ ಚಿನ್ಮಾತ್ರ ಏವೈಷ ಭವತಿ ಚಿನ್ಮಾತ್ರ ಏವಾ- ವತಿಷ್ಠತೇ ತಾಮೇತಾಂ ಮುಕ್ತಿರಿತ್ಯಾಚಕ್ಷತೇ" (ಉದ್ದಾಲಕಶ್ರುತಿ)

ಎಂದು ಶ್ರುತಿ ಇರುವುದರಿಂದ, ಎಂಬುದಾಗಿ ಔಡುಲೋಮಿ ಆಚಾರ್ಯರು ಅಭಿಪ್ರಾಯಪಡುತ್ತಾರೆ. ಆದ್ದರಿಂದ ಮುಕ್ತಿಯಲ್ಲಿ ಭೋಗವು (ಸಂಭಾವಿತ) ಸಂಭವಿ ಸುತ್ತದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 7

**ಸೂ.ರ.:– ननु न सूत्रद्वयोक्तपरिहारौ युज्येते । देहभावाभावयो-विरुद्धत्वादित्याशङ्कां पराकुर्वत्सूत्रं पठति ॥**

ಎರಡು ಸೂತ್ರಗಳಲ್ಲಿ ಹೇಳಿದ ಪರಿಹಾರಗಳು ಉಪಪನ್ನವಾಗುವುದಿಲ್ಲ. ಕಾರಣ - ದೇಹಭಾವ - ಅಭಾವಗಳು ವಿರುದ್ಧವಾದದ್ದರಿಂದ ಎಂಬ ಶಂಕೆಯನ್ನು ಪರಿಹರಿಸುವ ಸೂತ್ರವನ್ನು ಹೇಳುತ್ತಾರೆ -

**ॐ एवमुपन्यासात् पूर्वभावादविरोधं बादरायणः ॐ (४-४-७)**

**ಸೂತ್ರಾರ್ಥ :–** ಏವಂ = ಔಡುಲೋಮ್ಯುಕ್ತ ಪ್ರಕಾರವು **ಉಪನ್ಯಾಸಾತ್** = 'ಸ ವಾ ಏಷ' (ಸೌಪರ್ಣ) ಎಂಬ ಶ್ರುತಿಯಲ್ಲಿ ಉಕ್ತವಾದ್ದರಿಂದ **ಪೂರ್ವಭಾವಾತ್** = ಈ ಹಿಂದೆ ಹೇಳಿದ ಜೈಮಿನ್ಯುಕ್ತಪಕ್ಷದಲ್ಲಿಯೂ ಪ್ರಮಾಣ ಇರುವುದರಿಂದ **ಅವಿರೋಧಂ** = ಎರಡೂ ಪಕ್ಷಗಳಲ್ಲಿಯೂ ಅವಿರೋಧವನ್ನು **ಬಾದರಾಯಣಃ** = ಬಾದರಾಯಣಾಚಾರ್ಯರು ತಿಳಿಯುತ್ತಾರೆ (ಎರಡೂ ಪಕ್ಷಗಳಲ್ಲಿ ವಿರೋಧವಿಲ್ಲ ಎಂದು ಬಾದರಾಯಣರು ಅಭಿಪ್ರಾಯಪಡುತ್ತಾರೆ).

**ಸೂ.ರ.:– एवं बादरायणाचार्य उभयमतयोरविरोधं मन्यते । सर्वं वा इति (उद्दालक.) श्रुतौ मुक्तस्य चिच्छरीरमात्रोक्तावपि स वा एष इति श्रुतौ (सौपर्ण.) औडुलोम्युक्तचिच्छरीरभोगस्याप्युपन्यासात् । चिन्मात्रस्य ब्राह्मेण भोग इति जैमिन्युक्तस्य च प्रमाणेषु भावेन प्रमिते च विरोधाभावात् । प्रथमस्य चिन्मात्रदेहविषयत्वात् । द्वितीयस्य तु जडदेहाभावविषयत्वात् । अतो मुक्तौ भोगसम्भवाद्युक्तं मुक्तेः पुरुषार्थत्वमिति सिद्धम् ॥**

ಬಾದರಾಯಣಾಚಾರ್ಯರು ಜೈಮಿನಿ-ಔಡುಲೋಮಿ ಎರಡು ಮತ-ಗಳಲ್ಲಿಯೂ ಅವಿರೋಧವನ್ನು ತಿಳಿಯುತ್ತಾರೆ. ಕಾರಣ - "ಸರ್ವಂ ವಾ ಏತದಚಿತ್ಪರಿತ್ಯಜ್ಯ ಚಿನ್ಮಾತ್ರ ಏವೈಷ ಭವತಿ" ಎಂಬ ಉದ್ದಾಲಕಶ್ರುತಿಯಲ್ಲಿ ಮುಕ್ತನಿಗೆ ಚಿಚ್ಛರೀರಮಾತ್ರವನ್ನು ಹೇಳಿದ್ದರೂ ಸಹ

''ಸ ವಾ ಏಷ ಏತಸ್ಮಾನ್ಮರ್ತ್ಯಾದ್ವಿಮುಕ್ತಃ ಚಿನ್ಮಾತ್ರೀಭವತ್ಯಥ ತೇನೈವ ರೂಪೇಣ ಅಭಿಪಶ್ಯತ್ಯಭಿಶ್ರುಣೋತ್ಯಭಿಮನುತೇऽಭಿವಿಜಾನಾತಿ ತಾಮಾಹುರ್ಮುಕ್ತಿಃ''

ಎಂಬ ಸೌಪರ್ಣಶ್ರುತಿಯಲ್ಲಿ ಔಡುಲೋಮ್ಯುಕ್ತವಾದ ಚಿಚ್ಛರೀರಭೋಗವನ್ನೂ ಹೇಳಿದ್ದರಿಂದ. ಚಿನ್ಮಾತ್ರನಾದ ಮುಕ್ತನಿಗೆ ಬ್ರಾಹ್ಮದೇಹದಿಂದ ಭೋಗ ಎಂಬ ಜೈಮಿನ್ಯುಕ್ತವಾದದ್ದರಲ್ಲಿಯೂ ಪ್ರಮಾಣ ಇರುವುದರಿಂದ, ಪ್ರಮಿತವಾದ ವಿಚಾರ-ದಲ್ಲಿ ವಿರೋಧ ಬರುವುದಿಲ್ಲ. ಆದರಲ್ಲಿ ಮೊದಲನೇ ಶ್ರುತಿಯು ಚಿನ್ಮಾತ್ರದೇಹ-ವಿಷಯಕವಾಗಿದೆ, ಎರಡನೇ ಶ್ರುತಿಯು ಜಡದೇಹಾಭಾವವಿಷಯಕವಾಗಿದೆ.

ಆದ್ದರಿಂದ ಮುಕ್ತಿಯಲ್ಲಿ ಭೋಗವು ಸಂಭವಿಸುವುದರಿಂದ ಮುಕ್ತಿಗೆ ಪುರುಷಾರ್ಥತ್ವವು ಯುಕ್ತವಾಗಿದೆ ಎಂದು ಸಿದ್ಧವಾಗುತ್ತದೆ.

ಬ್ರಾಹ್ಮಾಧಿಕರಣವು ಮುಗಿಯಿತು.

ಅಧಿಕರಣ - 6

## ಸಂಕಲ್ಪಾಧಿಕರಣ

### ಸಂಗತಿ

**ಸೂ.ರ.:- अत्र मुक्तस्य सङ्कल्पमात्रसाध्यभोगः समर्थ्यते ॥**

ಮುಕ್ತರಿಗೆ ಸಂಕಲ್ಪಮಾತ್ರಸಾಧ್ಯವಾದ ಭೋಗವನ್ನು ಸಮರ್ಥಿಸುತ್ತಾರೆ ಆರನೇ ಈ ಸಂಕಲ್ಪಾಧಿಕರಣದಲ್ಲಿ.

### ಪೂರ್ವಪಕ್ಷ

**ಸೂ.ರ.:- ननु तत्तदुपायसाध्यसाधनसाध्यो मुक्तभोगः । ओकसि स्थितभोगत्वात् । पृथिव्याद्योकसि स्थितसंसारिभोगवत् । अन्यथा लोकविरोधात् । ततश्च सङ्कल्पसाध्यत्वाभावान्मुक्तेरपुरुषार्थत्वमिति प्राप्ते सूत्रितम् ॥**

ಮುಕ್ತರ ಭೋಗವು ತತ್ತದುಪಾಯಸಾಧ್ಯಸಾಧನಸಾಧ್ಯವಾಗಿದೆ. ಓಕದಲ್ಲಿ (ಒಂದು ಲೋಕದಲ್ಲಿ) ಇರುವ ಭೋಗವಾದ್ದರಿಂದ, ಪೃಥಿವ್ಯಾದಿ ಓಕದಲ್ಲಿ ಇರುವ ಸಂಸಾರಿಗಳ ಭೋಗದಂತೆ. ಒಂದುವೇಳೆ ಮುಕ್ತರ ಭೋಗವನ್ನು ತತ್ತದುಪಾಯ-ಸಾಧ್ಯಸಾಧನಸಾಧ್ಯ ಎಂದು ಅಂಗೀಕರಿಸದೇ ಹೋದರೆ ಲೋಕವಿರೋಧ ಬರುತ್ತದೆ. ಆದ್ದರಿಂದ ಮುಕ್ತರ ಭೋಗ ಸಂಕಲ್ಪಮಾತ್ರಸಾಧ್ಯವಾಗದ ಕಾರಣ ಮುಕ್ತಿಯು ಪುರುಷಾರ್ಥವಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ सङ्कल्पादेव च तच्छ्रुतेः ॐ (४-४-८)**

**ಸೂತ್ರಾರ್ಥ :-** ಚ ಶಬ್ದವು ವಿರುದ್ಧಪಕ್ಷವ್ಯಾವೃತ್ತ್ಯರ್ಥವಾಗಿದೆ. ಸಂಕಲ್ಪಾದೇವ = ತಮ್ಮ ಇಚ್ಛಾನುಸಾರವಾಗಿಯೇ ಮುಕ್ತಾಃ ಭೋಗಾನ್ ಭುಂಜತೇ = ಮುಕ್ತರು ಭೋಗಗಳನ್ನು ಭುಂಜಿಸುತ್ತಾರೆ. ಕುತಃ = ಏಕೆ? ತಚ್ಛ್ರುತೇಃ = ಆ ವಿಷಯದಲ್ಲಿ "ಸ ಯದಿ ಪಿತೃಲೋಕಕಾಮೋ ಭವತಿ" ಎಂದು ಶ್ರುತಿ ಇರುವುದರಿಂದ.

## ಸಿದ್ಧಾಂತ

ಸೂ.ರ.:- एवं च मुक्तानां भोगादिषु प्रयत्ननिरपेक्षत्वात् । स यदि पितृलोककाम इति (छां.८-२-१) श्रुतेः । न च लोकविरोधः । निर्दोषे भगवदोकसि तथात्वस्यैव युक्तत्वात् । अतो मुक्तभोगस्य सङ्कल्पमात्रसाध्यत्वाद्युक्तं मुक्तेः पुरुषार्थत्वमिति सिद्धम् ॥

ಮುಕ್ತರಿಗೆ ಭೋಗಾದಿಗಳಲ್ಲಿ ತತ್ತದುಪಾಯಸಾಧ್ಯಸಾಧನಾಪೇಕ್ಷೆಯು ಇಲ್ಲ. ಕಿಂತು ಸಂಕಲ್ಪಮಾತ್ರದಿಂದಲೇ ಭೋಗಸಿದ್ಧಿಯಾಗುತ್ತದೆ. ಏಕೆ? "ಸ ಯದಿ ಪಿತೃಲೋಕಕಾಮೋ ಭವತಿ ಸಂಕಲ್ಪಾದೇವಾಸ್ಯ ಪಿತರಃ ಸಮುತ್ತಿಷ್ಠಂತಿ" ಎಂಬುದಾಗಿ ಶ್ರುತಿ (ಛಾಂದೋಗ್ಯ 8-2-1) ಇರುವುದರಿಂದ. ಲೋಕವಿರೋಧವೂ ಬರುವುದಿಲ್ಲ. ಕಾರಣ ನಿರ್ದೋಷವಾದ ಭಗವದೋಕದಲ್ಲಿ ಸಂಕಲ್ಪಮಾತ್ರಸಾಧ್ಯಭೋಗವೇ ಯುಕ್ತವಾದ್ದರಿಂದ. ಆದ್ದರಿಂದ ಮುಕ್ತರ ಭೋಗವು ಸಂಕಲ್ಪಮಾತ್ರಸಾಧ್ಯವಾದ್ದರಿಂದ ಮುಕ್ತಿಗೆ ಪುರುಷಾರ್ಥತ್ವವು ಯುಕ್ತ ಎಂದು ಸಿದ್ಧವಾಗುತ್ತದೆ.

ಸಂಕಲ್ಪಾಧಿಕರಣವು ಮುಗಿಯಿತು.

ಅಧಿಕರಣ – 7

# ಅನನ್ಯಾಧಿಪತ್ಯಧಿಕರಣ

## ಸಂಗತಿ

**ಸೂ.ರ.:– अत्र ब्रह्मप्राप्तिमतां मुक्तानां स्वाधमनियम्यत्वराहित्येन भोगः साध्यते ।**

ಬ್ರಹ್ಮಪ್ರಾಪ್ತಿಯನ್ನು ಹೊಂದಿದ ಮುಕ್ತರಿಗೆ ಸ್ವಾಧಮನಿಯಮ್ಯತ್ವ ಇಲ್ಲದೇ ಭೋಗವನ್ನು ಸಾಧಿಸುತ್ತಾರೆ ಏಳನೇ ಈ ಅನನ್ಯಾಧಿಪತ್ಯಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु मुक्ताः स्वावरनियम्याः । सर्वाधिपतिसदननिविष्टत्वात् । राजसदननिविष्टामात्यादिवत् । दृश्यन्ते ह्यमात्या अपि राजशासननिविष्टा नीचैरपि प्रतिहारैर्नियम्यमानाः । अन्यथा लोकविरोधः स्यात् । अतो मुक्तस्याधमनियम्यत्वान्मुक्तेः संसारसमानधर्मत्वमिति प्राप्ते सूत्रितम् ॥**

ಮುಕ್ತರು ಸ್ವಾವರನಿಯಮ್ಯರಾಗಿದ್ದಾರೆ. ಸರ್ವಾಧಿಪತಿಸದನದಲ್ಲಿ ಇರುವವರಾದ್ದರಿಂದ. ರಾಜಸದನನಿವಿಷ್ಟರಾದ ಅಮಾತ್ಯಾದಿಗಳಂತೆ. ರಾಜಸದನನಿವಿಷ್ಟರಾದ ಅಮಾತ್ಯರೂ ಸಹ ತಮಗಿಂತ ನೀಚರಾದ ಪ್ರತಿಹಾರರಿಂದ ನಿಯಮ್ಯಮಾನರಾಗುವುದು ಕಂಡಿದೆ. ಅನ್ಯಥಾ ಲೋಕವಿರೋಧ ಬರುತ್ತದೆ. ಆದ್ದರಿಂದ ಮುಕ್ತರು ಅಧಮನಿಯಮ್ಯರಾಗುವುದರಿಂದ ಮುಕ್ತಿಯು ಸಂಸಾರಸಮಾನಧರ್ಮವಾಗಿದೆ ಎಂದು ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ अत एव चानन्याधिपतिः ॐ (४-४-९)**

**ಸೂತ್ರಾರ್ಥ :–** ಚ ಶಬ್ದವು ವಿರುದ್ಧಶಂಕಾವ್ಯಾವರ್ತಕವಾಗಿದೆ. **ಮುಕ್ತಃ ಅನನ್ಯಾಧಿಪತಿಃ** = ಮುಕ್ತನು ಸ್ವೋತ್ತಮಸ್ವಕೀಯಾನ್ಯ ಅಧಿಪತಿಯಿಂದ ಯುಕ್ತ-

ನಾಗುವುದಿಲ್ಲ (ಪರಮಾತ್ಮ-ಸ್ವೋತ್ತಮದೇವತೆ-ಆಚಾರ್ಯರನ್ನು ಬಿಟ್ಟು ಉಳಿದ ನೀಚರು ಮುಕ್ತರಿಗೆ ಅಧಿಪತಿಗಳಾಗಿ ಇರುವುದಿಲ್ಲ.) ಕುತಃ = ಏಕೆ? **ಅತ ಏವ** = ಸತ್ಯಸಂಕಲ್ಪರಾದ್ದರಿಂದಲೇನೇ ಎಂದರ್ಥ.

## ಸಿದ್ಧಾಂತ

**ಸೂ.ರ.:– एवं च सर्वेषां परमात्माधिपतित्वात् । प्राणादि-नामपर्यन्तदेवानां क्रमेणाधिपतित्वात् । यैर्ज्ञानं सुप्रतिष्ठितं तेषा-माचार्याणामप्यधिपतित्वात् । ततोऽन्यस्य नीचाधिपतित्वाभावात् । सत्यसङ्कल्पत्वात् । लोके स्वावरनियम्यत्वं ह्यनपेक्षितमेव भवति । तच्च मुक्तस्य सत्यसङ्कल्पत्वादेव न युज्यते । परमोऽधिपतिरिति (वाराह.) स्मृतेः । अतो मुक्तस्याधमाधिपतिशून्यत्वाद्युक्तं मुक्तेः संसारवैलक्षण्य-मिति सिद्धम् ॥**

ಎಲ್ಲ ಮುಕ್ತರೂ ಪರಮಾತ್ಮನೇ ಅಧಿಪತಿಯಾಗಿ ಉಳ್ಳವರಾಗಿದ್ದಾರೆ. ಮತ್ತು ಪ್ರಾಣಾದಿನಾಮಪರ್ಯಂತವಾಗಿ ದೇವತೆಗಳು ಕ್ರಮವಾಗಿ ಅಧಿಪತಿಗಳಾಗಿರುತ್ತಾರೆ. ಮತ್ತು ಯಾರಿಂದ ಜ್ಞಾನವು ಸುಪ್ರತಿಷ್ಠಿತವಾಗಿದೆಯೋ ಅಂತಹ ಆಚಾರ್ಯರೂ ಸಹ ಅಧಿಪತಿಗಳಾಗಿರುತ್ತಾರೆ. ಈ ಪರಮಾತ್ಮ-ಸ್ವೋತ್ತಮದೇವತೆ – ಆಚಾರ್ಯರನ್ನು ಬಿಟ್ಟು ಉಳಿದ ನೀಚರು ಅಧಿಪತಿಯಾಗಿರುವುದಿಲ್ಲ, ಕಾರಣ ಮುಕ್ತರು ಸತ್ಯಸಂಕಲ್ಪ-ರಾದ್ದರಿಂದ.

ಪರಮೋಽಧಿಪತಿಸ್ತೇಷಾಂ ವಿಷ್ಣುರೇವ ನ ಸಂಶಯಃ ।
ಬ್ರಹ್ಮಾದಿಮಾನುಷಾಂತಾನಾಂ ಸರ್ವೇಷಾಂ ಅವಿಶೇಷತಃ ॥
ತತಃ ಪ್ರಾಣಾದಿನಾಮಾಂತಾಃ ಸರ್ವೇಽಪಿ ಪತಯಃ ಕ್ರಮಾತ್ ।
ಆಚಾರ್ಯಾಶ್ಚೈವ ಸರ್ವೇಽಪಿ ಯೈರ್ಜ್ಞಾನಂ ಸುಪ್ರತಿಷ್ಠಿತಮ್ ॥
ಏತೇಭ್ಯೋಽನ್ಯಃ ಪತಿರ್ನೈವ ಮುಕ್ತಾನಾಂ ನಾತ್ರ ಸಂಶಯಃ ।

ಎಂಬುದಾಗಿ (ವಾರಾಹವಚನ) ಸ್ಮೃತಿಯೂ ಇರುವುದರಿಂದ. ಆದ್ದರಿಂದ ಮುಕ್ತರು ನೀಚಾಧಿಪತಿಶೂನ್ಯರಾದ್ದರಿಂದ ಮುಕ್ತಿಗೆ ಸಂಸಾರವೈಲಕ್ಷಣ್ಯವು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಅನನ್ಯಾಧಿಪತ್ಯಧಿಕರಣವು ಮುಗಿಯಿತು.

ಅಧಿಕರಣ – ೮

# ಅಭಾವಾಧಿಕರಣ

## ಸಂಗತಿ

**ಸೂ.ರ.:– अत्र परमेश्वरं प्राप्तानां भोगानुपपत्तिः परिह्रियते ॥**

ಪರಮೇಶ್ವರನನ್ನು ಹೊಂದಿದ ಮುಕ್ತರಿಗೆ ಭೋಗಾನುಪಪತ್ತಿಯನ್ನು ಪರಿಹರಿಸುತ್ತಾರೆ ಎಂಟನೇ ಈ ಅಭಾವಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु न मुक्तानां भोगो युज्यते । देहभावाभावयोर्विरोधात् । मुक्तस्य बाह्यदेहाङ्गीकारे दुःखप्रसङ्गात् । तदनङ्गीकारे भोगासम्भवः । अशरीरेण भोगायोगात् । न च चिच्छरीरेण भोगोपपत्तिः । सुप्त्यादौ विद्यमानस्य तस्यापि भोगायतनत्वादर्शनात् । न ब्राह्मेण देहेन तदुपपत्तिः । परदेहस्य परं प्रति भोगायतनत्वायोगात् । अतः कथमपि मुक्तानां निर्दुःखभोगायोगादपुरुषार्थत्वं मुक्तेरिति प्राप्ते सूत्रमाह ॥**

ಮುಕ್ತರಿಗೆ ಭೋಗವು ಉಪಪನ್ನವಾಗುವುದಿಲ್ಲ. ಕಾರಣ ದೇಹಭಾವ-ಅಭಾವಗಳಲ್ಲಿ ವಿರೋಧ ಇರುವುದರಿಂದ. ಮುಕ್ತನಿಗೆ ಬಾಹ್ಯ(ಜಡ)ದೇಹವನ್ನು ಅಂಗೀಕರಿಸಿದರೆ ದುಃಖ ಬರಬೇಕಾದ ಪ್ರಸಂಗ ಬರುತ್ತದೆ. ಬಾಹ್ಯದೇಹವನ್ನು ಅಂಗೀಕರಿಸದೇ ಹೋದರೆ ಭೋಗವು ಸಂಭವಿಸುವುದಿಲ್ಲ. ಶರೀರರಹಿತನಾದವನಿಗೆ ಭೋಗ ಕೂಡುವುದಿಲ್ಲವಾದ್ದರಿಂದ.

ಇಲ್ಲ, ಚಿಚ್ಛರೀರದಿಂದ ಭೋಗವು ಉಪಪನ್ನವಾಗಬಹುದಲ್ಲ? ಎಂದರೆ ಅದೂ ಸರಿಯಲ್ಲ. ಸುಪ್ತ್ಯಾದಿಗಳಲ್ಲಿ ಇರುವಂತಹ ಆ ಚಿಚ್ಛರೀರಕ್ಕೂ ಸಹ ಭೋಗಾಯತನತ್ವ ಕಂಡಿಲ್ಲವಾದ್ದರಿಂದ. ಹಾಗಾದರೆ ಬ್ರಹ್ಮಸಂಬಂಧಿಯಾದ ದೇಹದಿಂದ ಭೋಗವು ಉಪಪನ್ನವಾಗಬಹುದಲ್ಲ? ಎಂದರೆ, ಅದೂ ಸರಿಯಲ್ಲ. ಮತ್ತೊಬ್ಬನ ಶರೀರವು

ಮತ್ತೊಬ್ಬನನ್ನು ಕುರಿತು ಭೋಗಾಯತನವಾಗುವುದಿಲ್ಲವಾದ್ದರಿಂದ. ಆದ್ದರಿಂದ ಯಾವ ರೀತಿಯಿಂದಲೂ ಮುಕ್ತನಿಗೆ ನಿರ್ದುಃಖಭೋಗ ಕೂಡುವುದಿಲ್ಲವಾದ್ದರಿಂದ ಮುಕ್ತಿಯು ಪುರುಷಾರ್ಥವಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

## ॐ अभावं बादरिराह ह्येवम् ॐ (४-४-१०)

**ಸೂತ್ರಾರ್ಥ** :– ಏವಂ = ಪ್ರಾಕೃತದೇಹಾಭಾವವನ್ನು ಅಂಗೀಕರಿಸಿ ಚಿನ್ಮಾತ್ರದೇಹದಿಂದ ಮುಕ್ತನಿಗೆ ಭೋಗ ಇದೆ ಎಂಬುದಾಗಿ, **ಬಾದರಿಃ** = ಬಾದರಿ ಆಚಾರ್ಯರು ಅಭಿಪ್ರಾಯಪಡುತ್ತಾರೆ. ಕುತಃ = ಏಕೆ? ಹಿ = ಯಾವ ಕಾರಣ, **ಅಭಾವಂ** = ಪ್ರಾಕೃತಶರೀರಾಭಾವವನ್ನು "ಅಶರೀರೋ ವಾವ" (ಕೌಂಠರವ್ಯ) ಎಂಬ ಶ್ರುತಿಯು **ಆಹ** = ಹೇಳುತ್ತದೆಯೋ ತಸ್ಮಾತ್ = ಆ ಕಾರಣ ಎಂದರ್ಥ.

### ಸಿದ್ಧಾಂತ

**ಸೂ.ರ.:– एवं च चिन्मात्रदेहसद्भावात् । सुप्त्यादौ विद्यमानस्याज्ञानाद्यावृतत्वेन तदा भोगायतनत्वाभावेऽप्यज्ञाननिवृत्त्यनन्तरं तत्सम्भवात् । न हि प्रतिबद्धकारणं कार्यं न जनयतीत्येतावता तदुपरमेऽपि कार्यं न जनयतीति साम्प्रतम् । न च दुःखप्रसङ्गः । बाह्यदेहाभावात् । अशरीरो वावेत्याम्नानादिति बादरिराचार्यो मन्यते । तथा च युक्त एव मुक्तानां भोग इति सिद्धम् ॥**

ಮುಕ್ತನಿಗೆ ಚಿನ್ಮಾತ್ರದೇಹ ಇರುವುದರಿಂದ ಭೋಗವು ಉಪಪನ್ನ. ಸುಪ್ತ್ಯಾದಿಗಳಲ್ಲಿ ಆ ಚಿಚ್ಛರೀರವು ಇದ್ದರೂ ಸಹ ಆಗ ಅದು ಅಜ್ಞಾನಾದ್ಯಾವೃತವಾಗಿರುವುದರಿಂದ ಆಗ ಅದಕ್ಕೆ ಭೋಗಾಯತನತ್ವ ಇಲ್ಲದೇ ಹೋದರೂ ಸಹ, ಅಜ್ಞಾನನಿವೃತ್ಯನಂತರದಲ್ಲಿ ಆ ಚಿಚ್ಛರೀರಕ್ಕೆ ಭೋಗಾಯತನತ್ವ ಸಂಭವಿಸುತ್ತದೆ. ಪ್ರತಿಬದ್ಧವಾದ ಕಾರಣವು ಕಾರ್ಯವನ್ನು ಹುಟ್ಟಿಸುವುದಿಲ್ಲ ಎಂದಮಾತ್ರಕ್ಕೆ ಪ್ರತಿಬಂಧಕನಿವೃತ್ಯನಂತರವೂ ಸಹ ಕಾರ್ಯವನ್ನು ಹುಟ್ಟಿಸುವುದಿಲ್ಲ ಎಂದಲ್ಲ.

ಹಾಗಾದರೆ ದುಃಖಪ್ರಸಂಗ ಬರುವುದಲ್ಲ? ಎಂದರೆ, ಬರುವುದಿಲ್ಲ. ಕಾರಣ

ದುಃಖಾಪಾದಕವಾದ ಬಾಹ್ಯದೇಹ ಇರುವುದಿಲ್ಲವಾದ್ದರಿಂದ. "ಅಶರೀರೋ ವಾವ" ಎಂದು ಶ್ರುತಿ ಇರುವುದರಿಂದ ಎಂಬುದಾಗಿ ಬಾದರಿ ಆಚಾರ್ಯರು ಅಭಿಪ್ರಾಯ ಪಡುತ್ತಾರೆ. ಆದ್ದರಿಂದ ಮುಕ್ತರಿಗೆ ಭೋಗವು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 11

**ಸೂ.ರ.:– मुक्तानां देहसद्भावमभ्युपगच्छत्सूत्रमुपन्यस्यति ॥**

ಮುಕ್ತರಿಗೆ ದೇಹಸದ್ಭಾವವನ್ನು ಅಂಗೀಕರಿಸುವ ಸೂತ್ರವನ್ನು ಹೇಳುತ್ತಾರೆ –

**ॐ भावं जैमिनिर्विकल्पाम्नानात् ॐ (४-४-११)**

**ಸೂತ್ರಾರ್ಥ :– ಜೈಮಿನಿಃ** = ಜೈಮಿನಿ ಆಚಾರ್ಯರು ಮುಕ್ತಾನಾಂ **ಭಾವಂ** ಮನ್ಯತೇ = ಮುಕ್ತರಿಗೆ ಚಿನ್ಮಾತ್ರಾತಿರಿಕ್ತದೇಹಸದ್ಭಾವವನ್ನು ತಿಳಿಯುತ್ತಾರೆ. ಕುತಃ = ಏಕೆ? **ವಿಕಲ್ಪಾಮ್ನಾನಾತ್** = ವಿಕಲ್ಪಸ್ಯ = ಉಭಯವಿಧದೇಹವನ್ನು, ಆಮ್ನಾನಾತ್ = 'ಚಿತಾ ವಾಽಚಿತಾ ವಾ' ಎಂಬ ಉದ್ದಾಲಕಶ್ರುತಿಯಿಂದ ಪ್ರತಿಪಾದನೆ ಮಾಡಿದ್ದರಿಂದ.

**ಸೂ.ರ.:– एवं च जैमिनिराचार्यः कदाचिन्मुक्तस्यापि कस्यचिदुत्तमस्य भोगार्थमिच्छया प्राकृतदेहस्यापि भावं मन्यते । तत्र श्रुतिप्रमाणसद्भावात् । ततश्च मुक्तानां भोगोऽस्तीति सिद्धम् ॥**

ಜೈಮಿನಿ ಆಚಾರ್ಯರು ಕೆಲವೊಮ್ಮೆ ಮುಕ್ತರಿಗೂ ಸಹ ಕೆಲವು ಉತ್ತಮ ಪದಾರ್ಥಗಳ ಭೋಗಕ್ಕಾಗಿ ಇಚ್ಛೆಯಿಂದ ಪ್ರಾಕೃತದೇಹವೂ ಬರುತ್ತದೆ ಎಂದು ಅಭಿಪ್ರಾಯಪಡುತ್ತಾರೆ. ಆ ವಿಷಯದಲ್ಲಿ ಶ್ರುತಿಪ್ರಮಾಣ ಇರುವುದರಿಂದ. ಆದ್ದರಿಂದ ಮುಕ್ತರಿಗೆ ಭೋಗವು ಇದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 12

**ಸೂ.ರ.:– नन्वेतन्मतद्वयस्य परस्परविरुद्धत्वात् । शरीरभावाभावयोरसम्भवात्किं तत्स्वमतमित्याकाङ्क्षायां सूत्रं पठति ॥**

ಈ ಎರಡೂ ಮತಗಳು ಪರಸ್ಪರ ವಿರುದ್ಧವಾದದ್ದರಿಂದ, ಶರೀರಭಾವ-ಅಭಾವಗಳು ಅಸಂಭಾವಿತವಾದ್ದರಿಂದ, ಇವುಗಳಲ್ಲಿ ಯಾವುದು ಸ್ವಮತವಾಗಿದೆ?

(ಬಾದರಾಯಣರಿಗೆ ಸಮ್ಮತವಾಗಿದೆ?) ಎಂದು ಶಂಕೆ ಬಂದರೆ, ಬಾದರಾಯಣರ ಅಭಿಪ್ರಾಯ ತಿಳಿಸುವ ಸೂತ್ರವನ್ನು ಹೇಳುತ್ತಾರೆ -

**ॐ द्वादशाहवदुभयं बादरायणोऽतः ॐ (४-४-१२)**

**ಸೂತ್ರಾರ್ಥ** :- **ಬಾದರಾಯಣಃ** = ವೇದವ್ಯಾಸರು **ಉಭಯಂ** = ಪ್ರಾಕೃತದೇಹಭಾವ - ಅಭಾವರೂಪವಾದ ಉಭಯವಿಧ ಮತವನ್ನು ಸ್ವಮತವನ್ನಾಗಿ ತಿಳಿಯುತ್ತಾರೆ. ಕುತಃ = ಏಕೆ? **ಅತಃ** = ಪ್ರಮಾಣ ಇರುವುದರಿಂದ. ಕಥಮೇತ-ದ್ಯುಜ್ಯತೇ = ಇದು ಹೇಗೆ ಉಪಪನ್ನವಾಗುತ್ತದೆ? **ದ್ವಾದಶಾಹವತ್** = ಯಾವ ರೀತಿಯಾಗಿ ದ್ವಾದಶಾತ್ಮಕವಾದ ಕ್ರತುವು ಅಹೀನ-ಸತ್ರ ಉಭಯಾತ್ಮಕವಾಗುವುದೋ ಅದರಂತೆ ಎಂದರ್ಥ.

**ಸೂ.ರ.:- एवं च शरीरभावाभावयोरसम्भवाभावात् । प्रत्युत द्वादशाहपरिसमाप्यस्य यागस्येच्छयैककर्तृत्वेऽहीनत्वमनेकेषां कर्तृत्वे सत्रत्त्वमिव मुक्तानामिच्छया शरीरभावाभावयोरुपपत्तेः । ततश्च मतद्वयस्याविरोध इति सिद्धम् ॥**

ಶರೀರ ಭಾವ-ಅಭಾವಗಳಲ್ಲಿ ಅಸಂಭವ ಇಲ್ಲ. ಪ್ರತ್ಯುತ ದ್ವಾದಶಾಹ-ಪರಿಸಮಾಪ್ಯವಾದ ಯಾಗವು ಏಕಕರ್ತೃಕವಾದಾಗ ಅಹೀನವಾಗುತ್ತದೆ, ಅನೇಕ-ಕರ್ತೃಕವಾದಾಗ ಸತ್ರವಾಗುತ್ತದೆ ಹೇಗೋ ಅದರಂತೆಯೇ ಮುಕ್ತರಿಗೆ ಇಚ್ಛೆಯಿಂದ ಶರೀರಭಾವ-ಅಭಾವಗಳು ಉಪಪನ್ನವಾಗುತ್ತವೆ. ಆದ್ದರಿಂದ ಎರಡೂ ಮತಗಳಲ್ಲಿ ವಿರೋಧವಿಲ್ಲ ಎಂದು ಸಿದ್ಧವಾಗುತ್ತದೆ.

## ಸೂತ್ರ - 13

**ಸೂ.ರ.:- ननु भवतु देहभावाभावयोविरोधः तथाऽपि कथं भोगोपपत्तिः । सदेहत्वे दुःखादिः स्यात् । न चेद्भोगायोग इत्यनुपपत्ते-रुक्तत्वादिति प्राप्ते समादधत्सूत्रमाह ।**

ದೇಹಭಾವ-ಅಭಾವಗಳಲ್ಲಿ ವಿರೋಧವಿಲ್ಲ ಎನ್ನುವುದು ಇರಲಿ. ತಥಾಪಿ ಭೋಗವು ಹೇಗೆ ಉಪಪನ್ನವಾಗುತ್ತದೆ ? ಕಾರಣ - ದೇಹ ಇದ್ದರೆ ದುಃಖಾದಿಗಳು

ಪ್ರಸಕ್ತವಾಗುತ್ತವೆ. ದೇಹ ಇಲ್ಲದಿದ್ದರೆ ಭೋಗ ಕೂಡುವುದಿಲ್ಲ ಎಂಬ ಅನುಪಪತ್ತಿ-ಯನ್ನು ಹಿಂದೆ ಹೇಳಿದ್ದೇವೆಯಲ್ಲ? ಎಂಬುದಾಗಿ ಆಕ್ಷೇಪ ಬಂದರೆ, ಸಮಾಧಾನ ಹೇಳುವ ಸೂತ್ರವನ್ನು ಹೇಳುತ್ತಾರೆ –

### ॐ तन्वभावे सन्ध्यवदुपपत्तेः ॐ (४-४-१३)

**ಸೂತ್ರಾರ್ಥ :– ಸಂಧ್ಯವತ್** = ಯಾವ ರೀತಿಯಾಗಿ ಸ್ವಪ್ನಾವಸ್ಥೆಯಲ್ಲಿ ಬಾಹ್ಯದೇಹ ಇಲ್ಲದೇ ಇದ್ದರೂ ಸಹ (ಸ್ವಪ್ನಾವಸ್ಥೆಯಲ್ಲಿ ಬಾಹ್ಯದೇಹ ಇದ್ದರೂ ಸಹ ಆ ಬಾಹ್ಯದೇಹದ ಮೇಲೆ ಅಭಿಮಾನ ಇರುವುದಿಲ್ಲ, ಆ ಅಭಿಪ್ರಾಯದಲ್ಲಿ ಬಾಹ್ಯ ದೇಹ ಇಲ್ಲ ಎಂಬ ಮಾತು) ಭೋಗಸಂಬಂಧವಾಗುವುದೋ ತದ್ವನ್ಮುಕ್ತಾವಪಿ = ಅದರಂತೆ ಮುಕ್ತಿಯಲ್ಲಿಯೂ ಸಹ **ತನ್ವಭಾವೇ ಅಪಿ** = ಪ್ರಾಕೃತದೇಹ ಇಲ್ಲದಿದ್ದರೂ ಸಹ **ಉಪಪತ್ತೇಃ** = ಭೋಗವು ಯುಕ್ತವಾದದ್ದರಿಂದ ದೇಹಾಭಾವಪಕ್ಷವು ಕೂಡುತ್ತದೆ ಎಂದರ್ಥ.

**ಸೂ.ರ.:–** एवं च शरीराभावेऽपि भोगस्य स्वप्नवदुपपत्तेः सन्ध्यं तृतीयमिति (बृ.६-३-९) श्रुतेः । अत उक्तं युक्तमिति सिद्धम् ॥

ಸ್ವಪ್ನದಂತೆ (ಸ್ವಪ್ನಾವಸ್ಥೆಯಲ್ಲಿ ಪ್ರಾಕೃತದೇಹ ಇದ್ದರೂ ಅದರಮೇಲೆ ಅಭಿಮಾನ ಇರುವುದಿಲ್ಲವಾದ್ದರಿಂದ, ಆ ಅಭಿಪ್ರಾಯದಲ್ಲಿ ಪ್ರಾಕೃತದೇಹ ಇಲ್ಲದಿದ್ದರೂ ಸಹ ಭೋಗಸಂಬಂಧವಾಗುವಂತೆ) ಮುಕ್ತಿಯಲ್ಲಿ ಪ್ರಾಕೃತಶರೀರ ಇಲ್ಲದಿದ್ದರೂ ಸಹ ಭೋಗವು ಉಪಪನ್ನವಾಗುತ್ತದೆ. ''ಸಂಧ್ಯಂ ತೃತೀಯಂ ಸ್ವಪ್ನಸ್ಥಾನಂ'' (ಬೃ.ಉ. 6–3–9) ಎಂದು ಶ್ರುತಿ ಇರುವುದರಿಂದ. ಆದ್ದರಿಂದ ಮುಕ್ತರಿಗೆ ಭೋಗ ಹೇಳಿದ್ದು ಯುಕ್ತವಾಗಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ – 14

देहसद्भावेऽपि सुतरां भोगोपपत्तिरिति भावेन सूत्रमाह–

ಈ ರೀತಿಯಾಗಿ ಮುಕ್ತರಿಗೆ ಶರೀರ ಇಲ್ಲದಿದ್ದರೂ ಸಹ ಸ್ವಪ್ನದಂತೆ ಭೋಗವು ಉಪಪನ್ನ ಎಂದು ತಿಳಿಸಿ, ಪ್ರಕೃತ ಮುಕ್ತರಿಗೆ ದೇಹವು ಇದ್ದಾಗಲಂತೂ ಭೋಗವು ಸುತರಾಂ ಉಪಪನ್ನ ಎಂಬ ಅಭಿಪ್ರಾಯದಿಂದ ಸೂತ್ರವನ್ನು ಹೇಳುತ್ತಾರೆ–

### ॐ भावे जाग्रद्वत् ॐ (४-४-१४)

**ಸೂತ್ರಾರ್ಥ** :– ಜಾಗ್ರದ್ವತ್ = ಯಾವ ರೀತಿಯಾಗಿ ಜಾಗ್ರದವಸ್ಥೆಯಲ್ಲಿ ದೇಹವಿದ್ದರೂ ಭೋಗವು ಸಂಭವಿಸುವುದೋ, ತದ್ವನ್ಮುಕ್ತಾವಪಿ = ಅದರಂತೆ ಮುಕ್ತಿಯಲ್ಲಿಯೂ ಸಹ ಭಾವೇ = ಪ್ರಾಕೃತದೇಹ ಇದ್ದರೂ ಸಹ ಭೋಗವು ಕೂಡುತ್ತದೆ.

**ಸೂ.ರ.:– एवं च यथा जग्रदवस्थायां देहसद्भावे भोगसम्भवः तथा मुक्तावपि देहसद्भावे भोगोपपत्तिः ।**

**स्वेच्छया वा शरीराणि तेजोरूपाणि कानिचित् ।**
**स्वीकृत्य जागरितवद्भुक्त्वा त्यागः कदाचन ॥**

**इति (ब्रह्मवैवर्त) स्मृतेः । अतो मुक्तानां भोगोऽस्तीति सिद्धम् ।**

ಯಾವ ರೀತಿಯಾಗಿ ಜಾಗ್ರದವಸ್ಥೆಯಲ್ಲಿ ದೇಹವಿದ್ದಾಗ ಭೋಗವು ಸಂಭವಿಸು-ವುದೋ ಅದೇ ರೀತಿಯಾಗಿ ಮುಕ್ತಿಯಲ್ಲಿಯೂ ಸಹ ದೇಹವಿದ್ದರೂ ಭೋಗವು ಉಪಪನ್ನವಾಗುತ್ತದೆ.

> ಸ್ವಪ್ನಸ್ಥಾನಾಂ ಯಥಾ ಭೋಗೋ ವಿನಾ ದೇಹೇನ ಯುಜ್ಯತೇ ।
> ಏವಂ ಮುಕ್ತಾವಪಿ ಭವೇದ್ವಿನಾ ದೇಹೇನ ಭೋಜನಮ್ ॥
> ಸ್ವೇಚ್ಛಯಾ ವಾ ಶರೀರಾಣಿ ತೇಜೋರೂಪಾಣಿ ಕಾನಿಚಿತ್ ।
> ಸ್ವೀಕೃತ್ಯ ಜಾಗರಿತವದ್ಭುಕ್ತ್ವಾ ತ್ಯಾಗಃ ಕದಾಚನ ॥

ಎಂಬುದಾಗಿ (ಬ್ರಹ್ಮವೈವರ್ತವಚನ) ಸ್ಮೃತಿ ಇರುವುದರಿಂದ. ಸ್ವಪ್ನಸ್ಥಾನಾಪನ್ನ-ರಾದವರಿಗೆ ದೇಹವಿಲ್ಲದಿದ್ದರೂ ಸಹ (ದೇಹವಿದ್ದರೂ ದೇಹಾಭಿಮಾನ ಇಲ್ಲದ ಕಾರಣ ದೇಹವಿಲ್ಲದಿದ್ದರೂ ಸಹ) ಹೇಗೆ ಭೋಗವು ಸಂಭವಿಸುವುದೋ ಅದರಂತೆ ಮುಕ್ತಿ-ಯಲ್ಲಿಯೂ ದೇಹವಿಲ್ಲದಿದ್ದರೂ ಸಹ ಭೋಗವು ಸಂಭವಿಸುತ್ತದೆ.

ಅಥವಾ ಜಾಗ್ರದವಸ್ಥೆಯಲ್ಲಿ ದೇಹವಿದ್ದಾಗ ಭೋಗ ಸಂಭವಿಸುವಂತೆ ಮುಕ್ತಿಯಲ್ಲಿಯೂ ಸಹ ಮುಕ್ತರು ಕೆಲವೊಮ್ಮೆ ಸ್ವೇಚ್ಛೆಯಿಂದ ತೇಜೋರೂಪವಾದ ಶರೀರಗಳನ್ನು ತೆಗೆದುಕೊಂಡು ಭೋಗ ಮಾಡುತ್ತಾರೆ. ಆದ್ದರಿಂದ ಮುಕ್ತರಿಗೆ ಭೋಗವಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 15

**ಸೂ.ರ.:– ननु शरीरदशायां जाग्रद्वन्मुक्तानां बाह्यदेहेन**

**भोगोऽभिमतः । तथा सति दुःखमपि भवेदिति प्राप्ते समादधत्सूत्रं पठति ॥**

ಶರೀರದಶಾದಲ್ಲಿ ಜಾಗ್ರದವಸ್ಥೆಯಲ್ಲಿಯಂತೆ ಮುಕ್ತರಿಗೆ ಬಾಹ್ಯದೇಹದಿಂದ ಭೋಗವಿದೆ ಎಂದು ಸಮ್ಮತಿಸಲಾಗಿದೆ. ಹಾಗಾದ ಪಕ್ಷದಲ್ಲಿ (ಮುಕ್ತರಿಗೆ ಬಾಹ್ಯದೇಹವನ್ನು ಒಪ್ಪಿದಲ್ಲಿ) ದುಃಖವೂ ಆಗಬೇಕಾಗುತ್ತದೆ ಎಂಬುದಾಗಿ ಆಕ್ಷೇಪ ಬಂದರೆ, ಸಮಾಧಾನ ಹೇಳುವ ಸೂತ್ರವನ್ನು ಹೇಳುತ್ತಾರೆ –

**ॐ प्रदीपवदावेशस्तथा हि दर्शयति ॐ (४-४-१५)**

**ಸೂತ್ರಾರ್ಥ** :– **ಪ್ರದೀಪವತ್** = ಯಾವ ರೀತಿಯಾಗಿ ದೀಪಕ್ಕೆ ದೀಪಿಕಾದಿಪ್ರವೇಶ, ತದ್ಗತತೈಲಾದಿಭೋಗ, ಕಾಷ್ಠಾರ್ದಿಗಳ ಅಭೋಗ (ಭೋಗಾ-ಭಾವ) ಉಂಟೋ ತದ್ವತ್ = ಅದರಂತೆ ಮುಕ್ತಾನಾಂ = ಮುಕ್ತರಿಗೆ **ಆವೇಶಃ** = ಜಡಶರೀರಪ್ರವೇಶ, ಅದರಲ್ಲಿ ಸಾಧುಭೋಗಾನುಭವ, ದುಃಖಾದ್ಯನುಭವಾಭಾವವೂ ಇದೆ. ಕುತಃ = ಏಕೆ? ಹಿ = ಯಾವ ಕಾರಣ 'ತೀರ್ಣೋ ಹಿ' (ಬೃ. 6-3-22) ಎಂಬ ಶ್ರುತಿಯು **ತಥಾ ದರ್ಶಯತಿ** = ಹಾಗೆ ಪ್ರತಿಪಾದನೆ ಮಾಡುತ್ತದೆಯೋ ತಸ್ಮಾತ್ = ಆ ಕಾರಣ ಎಂದರ್ಥ.

**ಸೂ.ರ.:– एवं चोक्तनिदर्शनवन्मुक्तस्य बाह्यशरीरानुप्रवेशेऽपि न दुःखानुभवप्राप्तिः । किन्तु साधूनेव भोगाननुभवन्ति । अतो मुक्तानां निर्दुःखभोगानुभव इति सिद्धम् ॥**

ಪ್ರದೀಪವು ದೀಪಿಕಾದಿಗಳಲ್ಲಿ ಪ್ರವೇಶ ಮಾಡಿದರೂ ತದ್ಗತತೈಲಾದಿಭೋಗ-ಗಳನ್ನು ಮಾತ್ರ ಮಾಡುವಂತೆ, ಮುಕ್ತನು ಬಾಹ್ಯಶರೀರದಲ್ಲಿ ಪ್ರವೇಶ ಮಾಡಿದರೂ ಸಹ ಅದರಲ್ಲಿ ಸುಖದ ಭೋಗ ಮಾತ್ರ ಅವನಿಗೆ ಇರುತ್ತದೆ. ಪ್ರದೀಪಕ್ಕೆ ಕಾಷ್ಠಾರ್ದಿಗಳ ಭೋಗ ಇಲ್ಲದಿರುವಂತೆ ಮುಕ್ತನಿಗೆ ದುಃಖಾದಿಗಳ ಭೋಗ ಇಲ್ಲ. ಆದ್ದರಿಂದ ಮುಕ್ತರಿಗೆ ನಿರ್ದುಃಖಭೋಗಾನುಭವ ಇದೆ ಎಂದು ಸಿದ್ಧವಾಗುತ್ತದೆ.

## ಸೂತ್ರ – 16

**ಸೂ.ರ.:– ननु तीर्णो ही(बृ. ६-३-२२)त्येतद्वाक्यं स्वर्गादिविषयं**

**किं न स्यात् । बाधकाभावात् । तथा च न मुक्तानामदुःखत्वे प्रमाण-मेतत् । स्वर्गलोके इत्यादिना स्वर्गे दुःखाभावसिद्धेरिति प्राप्ते सूत्रितम् ॥**

"ತೀರ್ಣೋ ಹಿ" (ಬೃ. 6-3-22) ಎಂಬ ಈ ವಾಕ್ಯವು ಸ್ವರ್ಗಾದಿವಿಷಯಕ ಎಂದೇಕೆ ಆಗಬಾರದು? ಹಾಗೆ ಹೇಳಿದರೆ ಬಾಧಕ ಇಲ್ಲವಾದ್ದರಿಂದ. ಆದ್ದರಿಂದ ಮುಕ್ತರಿಗೆ ದುಃಖವಿಲ್ಲ ಎಂಬ ವಿಷಯದಲ್ಲಿ ಈ ವಾಕ್ಯವು ಪ್ರಮಾಣವಾಗುವುದಿಲ್ಲ. ಸ್ವರ್ಗದಲ್ಲಿ ದುಃಖವಿಲ್ಲ ಎಂದು ಹೇಗೆ ಸಿದ್ಧವಾಗುತ್ತದೆ? ಎಂದರೆ, "ಸ್ವರ್ಗೇ ಲೋಕೇ" ಇತ್ಯಾದಿ ಪ್ರಮಾಣಗಳಿಂದ ಸ್ವರ್ಗದಲ್ಲಿ ದುಃಖಾಭಾವವು ಸಿದ್ಧಿಸುತ್ತದೆ ಎಂಬುದಾಗಿ ಶಂಕೆ ಬಂದರೆ, ಸಮಾಧಾನ ಹೇಳುವ ಸೂತ್ರವನ್ನು ಹೇಳುತ್ತಾರೆ -

**ॐ स्वाप्ययसम्पत्योरन्यतरापेक्षमाविष्कृतं हि ॐ (४-४-१६)**

**ಸೂತ್ರಾರ್ಥ** :- "ಸ್ವರ್ಗೇ ಲೋಕೇ" (ಕಠ 1-12) ಎಂಬ ವಾಕ್ಯವು **ಸ್ವಾಪ್ಯಯಸಂಪತ್ಯೋರನ್ಯತರಾಪೇಕ್ಷಂ** = ಸುಷುಪ್ತಿ-ಮುಕ್ತಿ ಅನ್ಯತರವಿಷಯಕ-ವಾಗಿದೆ. ಕುತಃ = ಏಕೆ ? **ಹಿ** = ಯಾವ ಕಾರಣ ಈ ವಾಕ್ಯಕ್ಕೆ "ಅತ್ರ ಪಿತಾऽಪಿತಾ" ಎಂಬ (ಬೃ. 6-3-22) ಶ್ರುತಿಯಿಂದ ಸುಪ್ತಿ-ಮುಕ್ತಿವಿಷಯಕತ್ವವು **ಆವಿಷ್ಕೃತಂ** = ಪ್ರಕಟೀಕೃತವಾಗಿದೆಯೋ, ತಸ್ಮಾತ್ = ಆ ಕಾರಣ ಎಂದರ್ಥ.

**ಸೂ.ರ.:- एवं चोक्तं युक्तमिति मुक्तानां निर्दुःखभोगानुभवो युक्त एवेत्युपपन्नं मोक्षस्य पुरुषार्थत्वमिति सिद्धम् ॥**

"ತೀರ್ಣೋ ಹಿ" (ಬೃ. 6-3-22) ಎಂಬ ವಾಕ್ಯವು ಸ್ವರ್ಗಲೋಕವಿಷಯಕ-ವಲ್ಲ, ಕಿಂತು ಸುಷುಪ್ತಿ-ಮುಕ್ತಿ ಅನ್ಯತರವಿಷಯಕವಾಗಿದೆ. ಅದು ಹೇಗೆ ಹೇಳುತ್ತೀರಿ ? ಎಂದರೆ, "ಅತ್ರ ಪಿತಾऽಪಿತಾ ಭವತ್ಯನನ್ವಾಗತಂ ಪುಣ್ಯೇನಾನನ್ವಾಗತಂ ಪಾಪೇನ " (ಬೃ. 6-3-22) ಎಂಬ ಶ್ರುತಿಯಿಂದ "ತೀರ್ಣೋ ಹಿ" ಎಂಬ ವಾಕ್ಯಕ್ಕೆ ಸುಷುಪ್ತಿ-ಮುಕ್ತಿವಿಷಯಕತ್ವವು ಆವಿಷ್ಕೃತವಾಗಿದೆಯಾದ್ದರಿಂದ. ಹೀಗಾಗಿ ನಾವು ಹೇಳಿದ ಸಮಾಧಾನ ಯುಕ್ತವೇ.

ಆದ್ದರಿಂದ ಮುಕ್ತರಿಗೆ ನಿರ್ದುಃಖಭೋಗಾನುಭವವು ಯುಕ್ತವೇ ಆಗಿದೆ-ಯಾದ್ದರಿಂದ ಮುಕ್ತಿಗೆ ಪುರುಷಾರ್ಥತ್ವವು ಉಪಪನ್ನವಾಗಿದೆ ಎಂದು ಸಿದ್ಧವಾಗುತ್ತದೆ.

ಅಭಾವಾಧಿಕರಣವು ಮುಗಿಯಿತು.

ಅಧಿಕರಣ - 9

## ಜಗದ್ವ್ಯಾಪಾರಾಧಿಕರಣ

### ಸಂಗತಿ

**ಸೂ.ರ.:- अत्र ब्रह्मप्राप्तस्य मुक्तस्य भोगेयत्ता समर्थ्यते ।**

ಬ್ರಹ್ಮನನ್ನು ಹೊಂದಿದ ಮುಕ್ತನಿಗೆ ಭೋಗದಲ್ಲಿ ಇಯತ್ತಾವನ್ನು ಸಮರ್ಥಿಸುತ್ತಾರೆ ಒಂಭತ್ತನೇ ಈ ಜಗದ್ವ್ಯಾಪಾರಾಧಿಕರಣದಲ್ಲಿ.

### ಪೂರ್ವಪಕ್ಷ

**ಸೂ.ರ.:- ननु मुक्ता अपि पारमेश्वरजगद्व्यापारमाप्नुवन्ति । सर्वान्कामानिति (ऐ.आ.५-४) श्रुतेः । न च सर्वशब्दसङ्कोचः । बाधकाभावात् । अन्यथा सत्यकामत्वव्याघातः । कामिताप्राप्तौ दुःखप्रसङ्गश्च । अतो मुक्तानां जगज्जन्मादिकर्तृत्वादयुक्तं लक्षणसूत्रमिति प्राप्ते सूत्रमाह ॥**

ಮುಕ್ತರೂ ಸಹ ಪರಮೇಶ್ವರ ಮಾಡುವ ಜಗದ್ವ್ಯಾಪಾರವನ್ನು (ಹೊಂದುತ್ತಾರೆ) ಮಾಡುತ್ತಾರೆ. ''ಸರ್ವಾನ್ ಕಾಮಾನ್'' (ಐ.ಆ. 5-4) ಎಂದು ಶ್ರುತಿ ಇರುವುದರಿಂದ. ಈ ಶ್ರುತಿಯಲ್ಲಿ ಇರುವ ಸರ್ವಶಬ್ದಕ್ಕೆ ಜಗದ್ವ್ಯಾಪಾರ ಬಿಟ್ಟು ಉಳಿದ ಕಾಮಿತಪದಾರ್ಥಗಳನ್ನು ಪಡೆಯುತ್ತಾರೆ ಎಂಬುದಾಗಿ ಸಂಕೋಚ ಮಾಡಬಹುದಲ್ಲ? ಎಂದರೆ, ಅದು ಸರಿಯಲ್ಲ. ಮುಕ್ತರಿಗೆ ಜಗದ್ವ್ಯಾಪಾರವನ್ನೂ ಅಂಗೀಕರಿಸಿದರೆ ಯಾವ ಬಾಧಕವಿಲ್ಲವಾದ್ದರಿಂದ ಸರ್ವಶಬ್ದಕ್ಕೆ ಸಂಕೋಚ ಮಾಡಬೇಕಾದದ್ದಿಲ್ಲ. ಒಂದುವೇಳೆ ಮುಕ್ತರಿಗೆ ಜಗದ್ವ್ಯಾಪಾರವನ್ನು ಅಂಗೀಕರಿಸದೇ ಹೋದರೆ ಸತ್ಯಕಾಮತ್ವವು ವ್ಯಾಹತವಾಗಬೇಕಾಗುತ್ತದೆ. ಮತ್ತು ಮುಕ್ತರಿಗೆ ಕಾಮಿತವಾದದ್ದು ಪ್ರಾಪ್ತಿಯಾಗಲಿಲ್ಲ ಎಂದಾದರೆ ದುಃಖ ಆಗಬೇಕಾದ ಪ್ರಸಂಗವೂ ಬರುತ್ತದೆ. ಆದ್ದರಿಂದ ಮುಕ್ತರೂ ಜಗಜ್ಜನ್ಮಾದಿಕರ್ತೃಗಳಾದ್ದರಿಂದ ಓಂ ಜನ್ಮಾದ್ಯಸ್ಯ ಯತಃ ಓಂ ಎಂಬ ಲಕ್ಷಣಸೂತ್ರವು ಯುಕ್ತವಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರ ಹೇಳುತ್ತಾರೆ -

## ॐ जगद्व्यापारवर्जम् ॐ (४-४-१७)

**ಸೂತ್ರಾರ್ಥ :–** ಮುಕ್ತಃ = ಮುಕ್ತನು ಜಗದ್ವ್ಯಾಪಾರವರ್ಜಂ = ಜಗತ್ತಿನ ಸೃಷ್ಟ್ಯಾದಿ ವ್ಯಾಪಾರವನ್ನು ಹೊರತುಪಡಿಸಿ ಸರ್ವಾನ್ ಕಾಮಾನ್ ಆಪ್ನೋತಿ = ಎಲ್ಲ ಕಾಮ್ಯವಿಷಯಗಳನ್ನೂ ಪಡೆಯುತ್ತಾನೆ.

**ಸೂ.ರ.:–** एवं च मुक्तानां सर्वकामावाप्तौ प्रमाणाभावात् । सर्वान्कामानिति श्रुतेर्योग्यकामावाप्तेरेवार्थाभिधायकत्वात् । अतो मुक्तानां जगद्व्यापाराभावाद्युक्तं लक्षणसूत्रमति सिद्धम् ॥

ಮುಕ್ತರು ಅಸಂಕುಚಿತವಾದ ಎಲ್ಲ ಕಾಮಗಳನ್ನೂ ಹೊಂದುತ್ತಾರೆ ಎಂಬ ವಿಷಯದಲ್ಲಿ ಪ್ರಮಾಣ ಇಲ್ಲವಾದ್ದರಿಂದ, "ಸರ್ವಾನ್ ಕಾಮಾನ್" ಎಂಬ ಶ್ರುತಿಯು ಯೋಗ್ಯವಾದ ಎಲ್ಲ ಕಾಮಗಳನ್ನೂ ಹೊಂದುತ್ತಾರೆ (ಹೊರತು ಅಯೋಗ್ಯವಾದ ಜಗದ್ವ್ಯಾಪಾರಗಳನ್ನು ಅಲ್ಲ) ಎಂಬ ಅರ್ಥವನ್ನು ಪ್ರತಿಪಾದಿಸು-ತ್ತಿರುವುದರಿಂದ, ಮುಕ್ತರಿಗೆ ಜಗದ್ವ್ಯಾಪಾರವನ್ನು ಹೊರತುಪಡಿಸಿ ಎಲ್ಲ ಕಾಮಾವಾಪ್ತಿ ಇದೆ. ಆದ್ದರಿಂದ ಮುಕ್ತರಿಗೆ ಜಗದ್ವ್ಯಾಪಾರ ಇಲ್ಲವಾದ್ದರಿಂದ ಲಕ್ಷಣಸೂತ್ರವು ಯುಕ್ತವಾಗಿದೆ ಎಂದು ಸಿದ್ಧವಾಗುತ್ತದೆ.

### ಸೂತ್ರ - 18

**ಸೂ.ರ.:–** ननु सर्वान्कामानिति (ऐ. आ. ५-४.) श्रुतेरीश्वरपरत्वेन जीवपरत्वाभावात् । अनया श्रुत्या मुक्तस्य जगद्व्यापारासिद्धिरित्येवोत्तरस्य युक्तत्वादिति प्राप्ते सूत्रितम् ॥

ಹೌದು, "ಸರ್ವಾನ್ ಕಾಮಾನ್" ಎಂಬ ಶ್ರುತಿಯು ಈಶ್ವರಪರವಾಗಿದೆಯೇ ಹೊರತು ಜೀವಪರ ಅಲ್ಲ. ಆದ್ದರಿಂದ ಈ ಶ್ರುತಿಯಿಂದ ಮುಕ್ತರಿಗೆ ಜಗದ್ವ್ಯಾಪಾರವು ಸಿದ್ಧವಾಗುವುದಿಲ್ಲ ಎಂಬ ಉತ್ತರವೇ ಯುಕ್ತವಾಗುತ್ತದೆಯಲ್ಲವೇ ? ಎಂದು ಶಂಕೆ ಬಂದರೆ, ಸಮಾಧಾನಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

## ॐ प्रकरणादसन्निहितत्वाच्च ॐ (४-४-१८)

**ಸೂತ್ರಾರ್ಥ** :– ಚ ಶಬ್ದವು ಸಾಧ್ಯಸಮುಚ್ಚಾಯಕವಾಗಿದೆ. ಸರ್ವಾನ್ ಕಾಮಾನ್ ಇತಿ ಶ್ರುತೌ ಜೀವ ಉಚ್ಯತೇ = 'ಸರ್ವಾನ್ ಕಾಮಾನ್' ಎಂಬ ಶ್ರುತಿಯಲ್ಲಿ ಜೀವನೇ ವಾಚ್ಯನಾಗಿದ್ದಾನೆ. ಕುತಃ = ಏಕೆ? **ಪ್ರಕರಣಾತ್** = ಈ ವಾಕ್ಯವು ಜೀವಪ್ರಕರಣವಾದ್ದರಿಂದ, ತಥಾ ಚ ನ ತತ್ರಾಸಂಕೋಚೇನ ಜೀವಸ್ಯ ಸರ್ವಕಾಮಭೋಗ ಉಪಯುಜ್ಯತೇ ಕಿಂತು ಸಂಕೋಚೇನೈವ = ಆದ್ದರಿಂದ ಶ್ರುತಿಯಲ್ಲಿ ಸಂಕೋಚವಿಲ್ಲದೇ ಜೀವನಿಗೆ ಸರ್ವಕಾಮಭೋಗ ಪ್ರತಿಪಾದ್ಯವಾಗುತ್ತಿಲ್ಲ, ಕಿಂತು ಸಂಕೋಚ ಮಾಡಿಯೇ ಸರ್ವಕಾಮಭೋಗ ಹೇಳಬೇಕು. ಕುತಃ = ಏಕೆ? **ಅಸನ್ನಿಹಿತತ್ವಾತ್** = ಜೀವರು ಜಗದ್ವ್ಯಾಪಾರಸಾಮರ್ಥ್ಯವಿದೂರರಾದ್ದರಿಂದ.

**ಸೂ.ರ.:– एवं च सर्वान्कामानिति श्रुतेः सङ्कोचेनैव जीवपरत्वमित्युत्तरस्य युक्तत्वात् । श्रुतेर्जीवपरत्वात् । शरीरभेदादुत्क्रम्येति जीवप्रकरणात् । श्रुतेः सङ्कोचः कुत इति चेत् । जीवस्य तादृशसामर्थ्यविधुरत्वात् । स्वाधिकानन्दसंप्राप्ताविति (वाराह.) स्मृतेश्च । अतो मुक्तानां जगद्व्यापाराभावाद्युक्तं लक्षणसूत्रमिति सिद्धम् ॥**

'ಸರ್ವಾನ್ ಕಾಮಾನ್' ಎಂಬ ಶ್ರುತಿಗೆ ಸಂಕೋಚ ಮಾಡಿಯೇ ಜೀವಪರತ್ವವನ್ನು ಹೇಳಬೇಕು ಎಂಬ ಉತ್ತರವೇ ಯುಕ್ತವಾಗಿದೆ. ಯಾಕೆ? 'ಸರ್ವಾನ್ ಕಾಮಾನ್' ಎಂಬ ಶ್ರುತಿಯು (ಜೀವಪ್ರಕರಣವಾದ ಕಾರಣ) ಜೀವಪರವಾದ್ದರಿಂದ. ಜೀವಪ್ರಕರಣತ್ವವೇ ಹೇಗೆ ? ಎಂದರೆ, 'ಶರೀರಭೇದಾತ್ ಉತ್ಕ್ರಮ್ಯ' ಎಂದು ಜೀವಪ್ರಕರಣತ್ವ ತಿಳಿದುಬರುತ್ತದೆ. ಹೀಗೆ ಶ್ರುತಿಯು ಜೀವಪರವಾದ್ದರಿಂದ ಸಂಕೋಚ ಮಾಡಲೇಬೇಕು.

ಸಂಕೋಚ ಮಾಡಲು (ಕಾರಣವೇನು ?) ಬಾಧಕವೇನು ? ಎಂದರೆ, ಜೀವನಿಗೆ ಅಂತಹ ಜಗದ್ವ್ಯಾಪಾರಸಾಮರ್ಥ್ಯ ಇಲ್ಲವಾದ್ದರಿಂದ,

ಸ್ವಾಧಿಕಾನಂದಸಂಪ್ರಾಪ್ತೌ ಸೃಷ್ಟ್ಯಾದಿವ್ಯಾಪೃತಿಷ್ವಪಿ ।
ಮುಕ್ತಾನಾಂ ನೈವ ಕಾಮಃ ಸ್ಯಾದನ್ಯಾನ್ ಕಾಮಾಂಸ್ತು ಭುಂಜತೇ ॥
ತದ್ಯೋಗ್ಯತಾ ನೈವ ತೇಷಾಂ ಕದಾಚಿತ್ಕ್ವಾಪಿ ವಿದ್ಯತೇ ।
ನ ಚಾಯೋಗ್ಯಂ ವಿಮುಕ್ತೋಽಪಿ ಪ್ರಾಪ್ನುಯಾನ್ನ ಚ ಕಾಮಯೇತ್ ॥

ಎಂಬುದಾಗಿ (ವಾರಾಹ) ಸ್ಮೃತಿಯೂ ಇರುವುದರಿಂದ ಶ್ರುತಿಗೆ ಸಂಕೋಚ

ಮಾಡಲೇಬೇಕು. ಆದ್ದರಿಂದ ಮುಕ್ತರಿಗೆ ಜಗದ್ವ್ಯಾಪಾರ ಇಲ್ಲವಾದ್ದರಿಂದ ಲಕ್ಷಣ-ಸೂತ್ರವು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 19

ಸೂ.ರ.:– नन्वस्त्येव मुक्तानां जगदैश्वर्यम् । सर्वेऽस्मै देवा इति (तै.उ.१-५) प्रत्यक्षोपदेशादित्याक्षिप्य समादधत्सूत्रं व्याचष्टे ॥

ಮುಕ್ತರಿಗೆ ಜಗದೈಶ್ವರ್ಯವು ಇದ್ದೇ ಇದೆ. ಕಾರಣ "ತಾ ಯೋ ವೇದ, ಸ ವೇದ ಬ್ರಹ್ಮ ಸರ್ವೇಽಸ್ಮೈ ದೇವಾ ಬಲಿಮಾವಹಂತಿ" (ತೈ.ಉ. 1-5) ಎಂಬುದಾಗಿ ಪ್ರತ್ಯಕ್ಷೋಪದೇಶ ಇರುವುದರಿಂದ ಎಂದು ಶಂಕೆ ಬಂದರೆ, ಸಮಾಧಾನ ಹೇಳುವ ಸೂತ್ರವನ್ನು ಹೇಳುತ್ತಾರೆ -

**ॐ प्रत्यक्षोपदेशादिति चेन्नाधिकारिकमण्डलस्थोक्तेः ॐ**

**(४-४-१९)**

**ಸೂತ್ರಾರ್ಥ** :– ಮುಕ್ತಾನಾಂ ಜಗದೈಶ್ವರ್ಯಮಸ್ತೀತ್ಯಂಗೀಕಾರ್ಯಂ = ಮುಕ್ತರಿಗೆ ಜಗದೈಶ್ವರ್ಯ ಇದೆ ಎಂದು ಅಂಗೀಕರಿಸಲೇಬೇಕು. ಕುತಃ = ಏಕೆ? **ಪ್ರತ್ಯಕ್ಷೋಪದೇಶಾತ್** = "ತಾ ಯೋ ವೇದ" (ತೈ.ಉ. 1-5) ಎಂಬ ಶ್ರುತಿಯು ಸ್ಪಷ್ಟವಾಗಿ ಮುಕ್ತರಿಗೆ ಅಖಿಲದೇವತಾಪೂಜ್ಯತ್ವವನ್ನು ಪ್ರತಿಪಾದನೆ ಮಾಡುತ್ತಿರು-ವುದರಿಂದ, **ಇತಿ ಚೇತ್**, ನ = ಎಂದು ಶಂಕೆ ಬಂದರೆ ಅದು ಸರಿಯಲ್ಲ. ಕುತಃ = ಏಕೆ? **ಆಧಿಕಾರಿಕಮಂಡಲಸ್ಥೋಕ್ತೇಃ** = ಈ ವಾಕ್ಯದಲ್ಲಿ ಮುಕ್ತಹಿರಣ್ಯಗರ್ಭನಿಗೇನೇ ಮುಕ್ತಸ್ವಸ್ವಾಧಿಕಾರನಿಯುಕ್ತದೇವತಾಸಮೂಹಪೂಜ್ಯತ್ವವನ್ನು ಹೇಳಿದ್ದರಿಂದ.

ಸೂ.ರ.:– एवं चानया श्रुत्या सर्वमुक्तानां सर्वजगदैश्वर्य-सिद्ध्यङ्गीकारे तस्याश्चतुर्मुखविषयत्वेन बाधकात् । चतुर्मुखस्य तदङ्गी-कारे तस्य मुक्ताधिकारिमण्डलाधिपत्यस्यैवाभिधानेन सर्वाधिपत्यानभि-धानात् । आत्मेत्येव परमिति (गारुड.) वचनाच्च । तथा चोक्तं युक्तमिति सिद्धम् ॥

"ತಾ ಯೋ ವೇದ" ಎಂಬ ಈ ಶ್ರುತಿಯಿಂದ ಎಲ್ಲ ಮುಕ್ತರಿಗೂ ಸರ್ವಜಗದೈಶ್ವರ್ಯಸಿದ್ಧಿಯನ್ನು ಅಂಗೀಕರಿಸುವುದಾದರೆ, ಶ್ರುತಿಯು ಚತುರ್ಮುಖವಿಷಯವಾದ್ದರಿಂದ ಬಾಧಕವಿದೆ. ಇನ್ನು ಚತುರ್ಮುಖನಿಗೆ ಅದನ್ನು ಅಂಗೀಕರಿಸಿದರೆ, ಚತುರ್ಮುಖನಿಗೆ ಮುಕ್ತಾಧಿಕಾರಿಮಂಡಲಾಧಿಪತ್ಯವನ್ನೇ ಹೇಳಿದ್ದರಿಂದ ಸರ್ವಾಧಿಪತ್ಯವನ್ನು ಹೇಳಿಲ್ಲವಾದ್ದರಿಂದ ಬಾಧಕವಿಲ್ಲ.

ಆತ್ಮೇತ್ಯೇವ ಪರಂ ದೇವಮುಪಾಸ್ಯ ಹರಿಮವ್ಯಯಮ್ ।
ಕೇಚಿದತ್ರೈವ ಮುಚ್ಯಂತೇ ನೋತ್ಕ್ರಾಮಂತಿ ಕದಾಚನ ॥

ಇತ್ಯಾದಿಯಾಗಿ ಗಾರುಡವಚನ ಇರುವುದರಿಂದ. ಆದ್ದರಿಂದ ಮುಕ್ತರಿಗೆ ಜಗದ್ವ್ಯಾಪಾರ ಬಿಟ್ಟು ಸರ್ವಕಾಮಾವಾಪ್ತಿಯನ್ನು ಹೇಳಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 20

**ಸೂ.ರ.:– ननु ब्रह्मादिदेवानां मुक्तनियामकत्वमेव कुतोऽङ्गीक्रियते । संसारिनियामकत्वमपि किं न स्यादित्याशङ्कां परिहरत्सूत्रमुपन्यस्यति ॥**

ಬ್ರಹ್ಮಾದಿದೇವತೆಗಳಿಗೆ ಮುಕ್ತನಿಯಾಮಕತ್ವವನ್ನೇ ಏಕೆ ಅಂಗೀಕರಿಸಬೇಕು ? ಸಂಸಾರಿನಿಯಾಮಕತ್ವವೂ ಏಕೆ ಬರಬಾರದು? ಎಂದು ಶಂಕೆ ಬಂದರೆ, ಪರಿಹಾರಕ್ಕಾಗಿ ಸೂತ್ರ ಹೇಳುತ್ತಾರೆ –

### ॐ विकारावर्त्ति च तथा हि दर्शयति ॐ (४-४-२०)

**ಸೂತ್ರಾರ್ಥ** :– ಚ ಶಬ್ದವು ನಞ್ ಅನ್ನು ಅನುಕರ್ಷಣ ಮಾಡುತ್ತದೆ. ಮುಕ್ತಾನಾಂ = ಮುಕ್ತರಿಗೆ **ವಿಕಾರಾವರ್ತಿ ಚ (ನ)** = (ವಿಕಾರಂ ಸಂಸಾರಂ ಆವರ್ತಯತಿ ಪ್ರವರ್ತಯತಿ ಇತಿ ವಿಕಾರಾವರ್ತಿ) ಸಂಸಾರವಿಷಯಕವ್ಯಾಪಾರವು ಕೂಡುವುದಿಲ್ಲ, ಕುತಃ = ಏಕೆ? **ಹಿ** = ಯಾವ ಕಾರಣ, "ಇಮಂ ಮಾನವಮಾವರ್ತಂ ನಾವರ್ತಂತೆ" (ಛಾಂ.ಉ. 4-15-6) ಎಂಬ ಶ್ರುತಿಯು **ತಥಾ ದರ್ಶಯತಿ** = ಆ ರೀತಿಯಾಗಿ ಪ್ರತಿಪಾದಿಸುತ್ತಿದೆಯೋ ತಸ್ಮಾತ್ = ಆ ಕಾರಣ ಎಂದರ್ಥ.

ಸೂ.ರ.:- एवं च निर्दिष्टश्रुत्या स्वाधिकारेणेति (वाराह.) वचनेन च मुक्तानां संसारविषयकव्यापाराणां निषेधात् । अतो मुक्तानां जगद्व्यापाराभावाद्युक्तं लक्षणसूत्रमिति सिद्धम् ॥

"ಇಮಂ ಮಾನವಮಾವರ್ತಂ ನಾವರ್ತಂತೆ" (ಛಾಂ.ಉ. 4-15-6) ಎಂಬ ಶ್ರುತಿಯಿಂದ ಹಾಗೂ

ಸ್ವಾಧಿಕಾರೇಣ ವರ್ತಂತೇ ದೇವಾ ಮುಕ್ತಾವಪಿ ಸ್ಫುಟಮ್ ।
ಬಲಿಂ ಹರಂತಿ ಮುಕ್ತಾಯ ವಿರಿಂಚಾಯ ತು ಪೂರ್ವವತ್ ॥

ಎಂಬ (ವಾರಾಹ) ವಚನದಿಂದಲೂ ಸಹ ಮುಕ್ತರಿಗೆ ಸಂಸಾರವಿಷಯಕ-ವ್ಯಾಪಾರವನ್ನು ನಿಷೇಧಿಸಿದ್ದರಿಂದ ಬ್ರಹ್ಮಾದಿಗಳಿಗೆ ಮುಕ್ತನಿಯಾಮಕತ್ವವನ್ನು ಅಂಗೀಕರಿಸಲೇಬೇಕು. ಆದ್ದರಿಂದ ಮುಕ್ತರಿಗೆ ಜಗದ್ವ್ಯಾಪಾರ ಇಲ್ಲವಾದ್ದರಿಂದ ಲಕ್ಷಣಸೂತ್ರವು ಯುಕ್ತವಾಗಿದೆ ಎಂದು ಸಿದ್ಧವಾಗುತ್ತದೆ.

ಜಗದ್ವ್ಯಾಪಾರಾಧಿಕರಣವು ಮುಗಿಯಿತು.

ಅಧಿಕರಣ – 10

## ಸ್ಥಿತ್ಯಧಿಕರಣ

### ಸಂಗತಿ

**ಸೂ.ರ.:– अत्र ब्रह्मप्राप्तानां मुक्तानां भोगादिना वृद्धिह्रासौ निराक्रियेते ।**

ಬ್ರಹ್ಮನನ್ನು ಹೊಂದಿದ ಮುಕ್ತರಿಗೆ ಭೋಗಾದಿಗಳಿಂದ ವೃದ್ಧಿಹ್ರಾಸಗಳನ್ನು ನಿರಾಕರಿಸುತ್ತಾರೆ ಹತ್ತನೇ ಈ ಸ್ಥಿತ್ಯಧಿಕರಣದಲ್ಲಿ.

### ಪೂರ್ವಪಕ್ಷ

**ಸೂ.ರ.:– ननु मुक्तानामप्यानन्दादीनां वृद्धिह्रासौ विद्येते । एतत्सामेत्यादिना (तै.उ.३-१०) तस्याप्युपासनादिश्रवणात् । किञ्च भोगानां स्त्रीभिर्वा यानैर्वे (छां.८-१२-३)त्यादिना वृद्धिह्रासौ दृश्येते । कारणानुगुणत्वात्कार्यस्यानन्दादीनामपि तावङ्गीकर्तव्यौ । मुक्तानामपि वृद्ध्यादिसद्भावात्संसारसमानधर्मत्वेन मुक्तेरपुरुषार्थत्वमिति प्राप्ते सूत्रं पठति ॥**

ಮುಕ್ತರ ಆನಂದಾದಿಗಳಿಗೂ ಸಹ ವೃದ್ಧಿಹ್ರಾಸಗಳು ಇವೆ. ಕಾರಣ – "ಏತತ್ಸಾಮ ಗಾಯನ್ನಾಸ್ತೇ" (ತೈ.ಉ. 3.10) ಇತ್ಯಾದಿಯಾಗಿ ಮುಕ್ತರಿಗೂ ಉಪಾಸನಾದಿಗಳು ಶ್ರುತವಾಗುತ್ತಿರುವುದರಿಂದ, ಮತ್ತು "ಸ್ತ್ರೀಭಿರ್ವಾ ಯಾನೈರ್ವಾ" (ಛಾಂ.8–12–3) ಇತ್ಯಾದಿಯಾಗಿ ಮುಕ್ತರ ಭೋಗಗಳಿಗೆ ವೃದ್ಧಿಹ್ರಾಸಗಳು ಕಾಣಲ್ಪಡುತ್ತವೆ ಕೂಡ. ಕಾರ್ಯವು ಕಾರಣಾನುಗುಣವಾಗಿರುತ್ತದೆಯಾದ್ದರಿಂದ ಮುಕ್ತರ ಆನಂದಾದಿಗಳಿಗೆ ವೃದ್ಧಿಹ್ರಾಸಗಳನ್ನು ಅಂಗೀಕರಿಸಲೇಬೇಕು. ಹೀಗಾಗಿ ಮುಕ್ತರ ಆನಂದಾದಿಗಳಲ್ಲಿಯೂ ವೃದ್ಧಿಹ್ರಾಸಗಳು ಇರುವುದರಿಂದ, ಮುಕ್ತಿಯು ಸಂಸಾರಸಮಾನಧರ್ಮವಾದ್ದರಿಂದ ಅದು ಪುರುಷಾರ್ಥವಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

## ॐ स्थितिमाह दर्शयतश्चैवं प्रत्यक्षानुमाने ॐ (४-४-२१)

**ಸೂತ್ರಾರ್ಥ** :– ಮುಕ್ತರಿಗೆ ಯಥಾಪ್ರಕಾರವೇ ಅವಸ್ಥಿತಿ ಇರುತ್ತದೆ ಹೊರತು ವೃದ್ಧಿಹ್ರಾಸಗಳು ಇರುವುದಿಲ್ಲ, ಕುತಃ = ಏಕೆ? ಯತಃ = ಯಾವ ಕಾರಣ, "ಸ ಏಷ ಏತಸ್ಮಿನ್ ಬ್ರಹ್ಮಣಿ" ಇತ್ಯಾದಿ ಶ್ರುತಿಯು, **ಸ್ಥಿತಿಮಾಹ** = ಏಕಪ್ರಕಾರವಾಗಿಯೇ ಅವಸ್ಥಾನವನ್ನು ಹೇಳುತ್ತಿದೆ, ನ ಕೇವಲಮೇತಾವತ್ = ಕೇವಲ ಇಷ್ಟೇ ಅಲ್ಲ, ಕಿಂತು **ಪ್ರತ್ಯಕ್ಷಾನುಮಾನೇ ಚ** = ಜ್ಞಾನಿಗಳ ಪ್ರತ್ಯಕ್ಷ ಹಾಗೂ ಕಾರಣಾಭಾವ ಲಿಂಗಗಳೂ ಸಹ, **ಏವಂ** = ಶ್ರುತ್ಯುಕ್ತವಾದ ಅರ್ಥವನ್ನು **ದರ್ಶಯತಃ** = ತಿಳಿಸುತ್ತಿವೆಯೋ, ಅತಃ = ಆ ಕಾರಣ ಎಂದರ್ಥ.

### ಸಿದ್ಧಾಂತ

**ಸೂ.ರ.:– एवं च जाबालश्रुतेः महतां प्रत्यक्षान्मुक्तो न वृद्ध्यादिमान् तत्कारणशून्यत्वादिति लिङ्गाच्च । तथा चैवमेकप्रकारेणावस्थानस्य ज्ञापितत्वात् । न ह्रास इति (ब्रह्मवैवर्त.) स्मृतेश्च । अतो मुक्तानां वृद्ध्याद्यभावेन न संसारसमानधर्मत्वं मुक्तेरिति सिद्धम् ॥**

"ಸ ಏಷ ಏತಸ್ಮಿನ್ಬ್ರಹ್ಮಣಿ ಸಂಪನ್ನೋ ನ ಜಾಯತೇ ನ ಮ್ರಿಯತೇ ನ ಹೀಯತೇ ನ ವರ್ಧತೇ ಸ್ಥಿತ ಏವ ಸರ್ವದಾ ಭವತಿ ದರ್ಶನ್ನೇವ ಬ್ರಹ್ಮ ದರ್ಶನ್ನೇವಾತ್ಮಾನಂ ತಸ್ಯೈವಂ ದರ್ಶತೋ ನಾಪತ್ತಿರ್ನ ವಿಪತ್ತಿಃ"

ಎಂಬುದಾಗಿ ಜಾಬಾಲಶ್ರುತಿ ಇರುವುದರಿಂದ, ಮತ್ತು ಮಹಾತ್ಮರ ಪ್ರತ್ಯಕ್ಷದಿಂದ, ಹಾಗೂ "ಮುಕ್ತೋ ನ ವೃದ್ಧಿಹ್ರಾಸಮಾನ್ ತತ್ಕಾರಣಶೂನ್ಯತ್ವಾತ್" ಎಂಬ ಲಿಂಗದಿಂದಾಗಿಯೂ ಸಹ ಮುಕ್ತರ ಆನಂದಾದಿಗಳಲ್ಲಿ ವೃದ್ಧಿಹ್ರಾಸಗಳಿಲ್ಲ ಎಂದು ತಿಳಿಯುತ್ತದೆ. ಈ ರೀತಿಯಾಗಿ ಏಕಪ್ರಕಾರವಾಗಿಯೇ ಅವಸ್ಥಾನವು ಜ್ಞಾಪಿತವಾಗುತ್ತದೆ.

ನ ಹ್ರಾಸೋ ನ ಚ ವೃದ್ಧಿರ್ವಾ ಮುಕ್ತಾನಾಂ ವಿದ್ಯತೇ ಕ್ವಚಿತ್ ।
ವಿದ್ವತ್ಪ್ರತ್ಯಕ್ಷಸಿದ್ಧತ್ವಾತ್ಕಾರಣಾಭಾವತೋಽನುಮಾ ॥
ಹರೇರುಪಾಸನಾ ಚಾತ್ರ ಸದೈವ ಸುಖರೂಪಿಣೀ ।
ನ ತು ಸಾಧನಭೂತಾ ಸಾ ಸಿದ್ಧಿರೇವಾತ್ರ ಸಾ ಯತಃ ॥

ಎಂಬುದಾಗಿ (ಬ್ರಹ್ಮವೈವರ್ತವಚನವೂ) ಸ್ಮೃತಿಯೂ ಅದನ್ನು ತಿಳಿಸುತ್ತದೆ.

ಆದ್ದರಿಂದ ಮುಕ್ತರಿಗೆ ವೃದ್ಧಿಹ್ರಾಸಗಳು ಇಲ್ಲವಾದ್ದರಿಂದ ಆದಕ್ಕೆ ಸಂಸಾರಸಮಾನ-ಧರ್ಮತ್ವ ಇಲ್ಲ ಎಂದು ಸಿದ್ಧವಾಗುತ್ತದೆ.

## ಸೂತ್ರ - 22

**ಸೂ.ರ.:– ननु न मुक्तानन्दादिवृद्धौ ह्रासे च कारणाभावः । कदाचिद्भोगवृद्धेः कदाचित्तदभावस्य प्रमितत्वात् । किञ्च मा भूध्रासो वृद्धिस्तु भविष्यति । तस्य सत्यकामत्वेन कामिताशेषप्राप्त्या वृद्धिसम्भवात् । न च नासौ कामयतीति युक्तम् । आनन्दवृद्धेरिष्टत्वेन कामनानङ्गीकारायोगादिति प्राप्ते सूत्रं पठति ॥**

ಮುಕ್ತರ ಆನಂದಾದಿಗಳ ವೃದ್ಧಿಯಲ್ಲಿ ಹಾಗೂ ಹ್ರಾಸದಲ್ಲಿ ಕಾರಣ ಇಲ್ಲ ಎನ್ನುವುದು ಸರಿಯಲ್ಲ. ಕಾರಣ - ಕೆಲವೊಮ್ಮೆ ವೃದ್ಧಿ ಆಗುವುದು, ಕೆಲವೊಮ್ಮೆ ಆಗದಿರುವುದು ಪ್ರಮಿತವಾದ್ದರಿಂದ. ಮತ್ತು ಹ್ರಾಸವಾಗುವುದು ಬೇಡ. ಆದರೆ ವೃದ್ಧಿ ಮಾತ್ರ ಆಗೇ ಆಗುತ್ತದೆ. ಕಾರಣ - ಮುಕ್ತರು ಸತ್ಯಕಾಮರಾದ್ದರಿಂದ ಕಾಮಿತ ಅಶೇಷಪ್ರಾಪ್ತಿಯಾಗುವುದರಿಂದ ವೃದ್ಧಿಯು ಸಂಭವಿಸುತ್ತದೆ. ಈ ಮುಕ್ತರು ಇಚ್ಛಿಸುವುದೇ ಇಲ್ಲ ಎಂದು ಹೇಳುವುದು ಸರಿಯಲ್ಲ. ಏಕೆಂದರೆ ಆನಂದವೃದ್ಧಿಯು ಇಷ್ಟವಾದ್ದರಿಂದ, ಕಾಮನಾ ಅನಂಗೀಕಾರ ಯುಕ್ತವಾಗುವುದಿಲ್ಲ ಎಂಬುದಾಗಿ ಶಂಕೆ ಬಂದರೆ, ಸಮಾಧಾನಕ್ಕಾಗಿ ಸೂತ್ರ ಹೇಳುತ್ತಾರೆ -

### ॐ भोगमात्रसाम्यलिङ्गाच्च ॐ (४-४-२२)

**ಸೂತ್ರಾರ್ಥ** :– ಭೋಗಮಾತ್ರಸಾಮ್ಯಲಿಂಗಾಚ್ಚ = ಅನ್ಯತ್ರ ಅವಿಶೇಷ-ವಿಲ್ಲದೇ ಭೋಗಮಾತ್ರಕ್ಕೆ ವಿಶೇಷ ಇದ್ದಾಗಲೂ ಸಹ ಮುಕ್ತನಿಗೆ ಸಾಮ್ಯಶಬ್ದಿತ ಏಕಪ್ರಕಾರೋಕ್ತಿರೂಪವಾದ ಲಿಂಗದಿಂದ "ಭೋಗವಿಶೇಷವು ವೃದ್ಧ್ಯಾದಿಗಳಿಗೆ ಕಾರಣವಲ್ಲ" ಎಂದು ತಿಳಿಯುವುದರಿಂದ, ಮುಕ್ತನು ವೃದ್ಧ್ಯಾದಿಗಳುಳ್ಳವನಲ್ಲ.

**ಸೂ.ರ.:– एवं चैतमानन्दमयमिति (तै. उ. २-८) श्रुतौ भोगानां वृद्धौ ह्रासे च मुक्तानन्दसाम्याभिधानेन मुक्तिभोगानां वृद्धिह्रासयो-स्तदानन्दवृद्धिह्रासौ प्रत्यकारणत्वात् । योग्यस्य प्राप्तत्वात् । अयोग्य-**

**कामनायाश्च न चायोग्यं विमुक्तोऽपीत्यनेन निषिद्धत्वेन कामानङ्गीकारस्यायुक्तत्वात् । अवृद्धिह्रासरूपत्वमिति (कूर्म.) वचनात् । कादाचित्कविशेषस्य त्वभ्युपगन्तव्यत्वात् । अतो मुक्तानां वृद्ध्याद्यभावेन न संसारसमानधर्मत्वं मुक्तेरिति सिद्धम् ॥**

"ಏತಮಾನಂದಮಯಮಾತ್ಮಾನಮನುವಿಶ್ಯ ನ ಜಾಯತೇ ನ ಮ್ರಿಯತೇ ನ ಹ್ರಸತೇ ನ ವರ್ಧತೇ ಯಥಾಕಾಮಂ ಚರತಿ ಯಥಾಕಾಮಂ ಪಿಬತಿ ಯಥಾಕಾಮಂ ರಮತೇ ಯಥಾಕಾಮಮುಪರಮತೇ" (ತೈ.ಉ. 2-8)

ಎಂಬ ಶ್ರುತಿಯಲ್ಲಿ ಭೋಗಗಳ ವೃದ್ಧಿ-ಹ್ರಾಸಗಳಲ್ಲಿ ಮುಕ್ತಾನಂದಸಾಮ್ಯವನ್ನು ಹೇಳಿದ್ದರಿಂದ ಮುಕ್ತಿಭೋಗಗಳ ವೃದ್ಧಿ-ಹ್ರಾಸಗಳು ಮುಕ್ತರ ಆನಂದವೃದ್ಧಿ-ಹ್ರಾಸಗಳನ್ನು ಕುರಿತು ಕಾರಣವಾಗುವುದಿಲ್ಲ.

ಸತ್ಯಕಾಮತ್ವವನ್ನು ಹೇಳಿದ್ದೇವೆಯಲ್ಲ? ಎಂದರೆ, ಮುಕ್ತರಿಗೆ ಯೋಗ್ಯವಾದ ಎಲ್ಲವೂ ಪ್ರಾಪ್ತವಾಗಿದೆ. ಇನ್ನು ಅಯೋಗ್ಯಕಾಮನಾವನ್ನು "ನ ಚಾಯೋಗ್ಯಂ ವಿಮುಕ್ತೋಽಪಿ" ಎಂಬುವ ವಚನದಿಂದ ನಿಷೇಧಿಸಿದ್ದರಿಂದ, ಕಾಮ ಅನಂಗೀಕಾರವು (ಕಾಮಿತ ಅಪ್ರಾಪ್ತಿಯು) ಯುಕ್ತವಲ್ಲ.

ಅವೃದ್ಧಿಹ್ರಾಸರೂಪತ್ವಂ ಮುಕ್ತಾನಾಂ ಪ್ರಾಯಿಕಂ ಭವೇತ್ ।
ಕಾದಾಚಿತ್ಕವಿಶೇಷಸ್ತು ನೈವ ತೇಷಾಂ ನಿಷಿಧ್ಯತೇ ॥

ಎಂದು ಕೂರ್ಮವಚನ ಇರುವುದರಿಂದ. ಕಾದಾಚಿತ್ಕವಿಶೇಷವು ಅಭ್ಯುಪಗಂತವ್ಯವಾಗಿದೆ.

ಆದ್ದರಿಂದ ಮುಕ್ತರಿಗೆ ವೃದ್ಧ್ಯಾದಿಗಳು ಇಲ್ಲವಾದ್ದರಿಂದ ಮುಕ್ತಿಯು ಸಂಸಾರ-ಸಮಾನಧರ್ಮವಾಗುವುದಿಲ್ಲ. ಹೀಗಾಗಿ ಅದು ಪುರುಷಾರ್ಥವೇ ಎಂದು ಸಿದ್ಧವಾಗುತ್ತದೆ.

ಸ್ಥಿತ್ಯಧಿಕರಣವು ಮುಗಿಯಿತು.

ಅಧಿಕರಣ - 11

# ಅನಾವೃತ್ಯಧಿಕರಣ

## ಸಂಗತಿ

**ಸೂ.ರ.:– अत्र ब्रह्म प्राप्य भोगान् भुञ्जानस्य मुक्तस्यापुनरावृत्तिः समर्थ्यते ।**

ಬ್ರಹ್ಮನನ್ನು ಹೊಂದಿ ಭೋಗಗಳನ್ನು ಭುಂಜಿಸುವ ಮುಕ್ತನಿಗೆ ಪುನರಾವೃತ್ತಿ ಇಲ್ಲ ಎಂದು ಸಮರ್ಥಿಸುತ್ತಾರೆ ಹನ್ನೊಂದನೇ ಈ ಅನಾವೃತ್ಯಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु मुक्तः पुनरावृत्तिमान् । स्वस्थानं विहायान्यत्र गमनात् । स्वर्गादिगतवत् । न च स्वर्गं गतस्य युगमन्वन्तरादिमात्रवासित्वाद्युक्ता पुनरावृत्तिर्न मुक्तस्य तस्यानन्तकालवासित्वादिति वाच्यम् । समस्तस्यापि कालस्य कदाचित्समाप्तिसम्भवात् । न च कालस्यानन्तत्वात्समाप्त्ययोगः । अनन्तस्यापि कालस्य भारतयुद्धे त्रयोदश्याः पञ्चदशीत्ववदेकैकस्यास्तिथेरनेकतिथ्यात्मकत्वेन समाप्तिसम्भवात् । अतः पुनरावृत्तिसद्भावादपुरुषार्थता मुक्तेरिति प्राप्ते सूत्रं पठति ॥**

ಮುಕ್ತನು ಪುನರಾವೃತ್ತಿ ಉಳ್ಳವನಾಗಿದ್ದಾನೆ. ಕಾರಣ - ಸ್ವಸ್ಥಾನವನ್ನು ಬಿಟ್ಟು ಬೇರೆಡೆ ಹೋಗುತ್ತಾನಾದ್ದರಿಂದ. ಸ್ವರ್ಗಾದಿಗಳಲ್ಲಿ ಇರುವ ವ್ಯಕ್ತಿ ಸ್ವಸ್ಥಾನವನ್ನು ಬಿಟ್ಟು ಬೇರೆಡೆ ಹೋಗುತ್ತಾನಾದ್ದರಿಂದ ಅವನು ಪುನರಾವೃತ್ತಿ ಉಳ್ಳವನಾಗಿರುವಂತೆ.

ಸ್ವರ್ಗಕ್ಕೆ ಹೋದವನು ಯುಗ-ಮನ್ವಂತರಾದಿಮಾತ್ರವಾಸಿಯಾದ್ದರಿಂದ ಅವನಿಗೆ ಪುನರಾವೃತ್ತಿಯು ಯುಕ್ತವಾಗಿದೆ. ಆದರೆ ಮುಕ್ತನು ಅನಂತಕಾಲವಾಸಿಯಾದ್ದರಿಂದ ಮುಕ್ತನಿಗೆ ಪುನರಾವೃತ್ತಿಯು ಯುಕ್ತವಲ್ಲ ಎಂದು ಶಂಕೆ ಬಂದರೆ, ಅದು ಸರಿಯಲ್ಲ, ಸಮಸ್ತವಾದ ಕಾಲಕ್ಕೂ ಕೆಲವೊಮ್ಮೆ ಸಮಾಪ್ತಿ ಸಂಭವಿಸುವುದರಿಂದ.

ಕಾಲವು ಅನಂತವಾದ್ದರಿಂದ ಸಮಾಪ್ತಿ ಕೂಡುವುದಿಲ್ಲ ಎಂದು ಹೇಳುವುದು ಸರಿಯಲ್ಲ. ಕಾಲವು ಅನಂತವಾದರೂ ಸಹ ಭಾರತಯುದ್ಧದಲ್ಲಿ ತ್ರಯೋದಶಿಯು ಪಂಚದಶಿ-ಯಾದಂತೆ, ಏಕೈಕ (ಒಂದೊಂದು) ತಿಥಿಯೂ ಅನೇಕ ತಿಥ್ಯಾತ್ಮಕವಾಗುವುದರಿಂದ ಸಮಾಪ್ತಿಯು ಸಂಭಾವಿತವಾಗಿದೆ. ಆದ್ದರಿಂದ ಮುಕ್ತಿಗೆ ಪುನರಾವೃತ್ತಿ ಇರುವುದರಿಂದ ಅದು ಪುರುಷಾರ್ಥವಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ अनावृत्तिः शब्दात् अनावृत्तिः शब्दात् ॐ (४-४-२३)**

**ಸೂತ್ರಾರ್ಥ :–** ಮುಕ್ತಸ್ಯ = ಮುಕ್ತನಾದವನಿಗೆ, **ಅನಾವೃತ್ತಿಃ** = ಪುನರಾ-ವೃತ್ತಿಯು ಇಲ್ಲ, ಕುತಃ = ಏಕೆ? **ಶಬ್ದಾತ್** = "ನ ಚ ಪುನರಾವರ್ತತೇ" (ಛಾಂ. 8-15-1) ಎಂದು ಶ್ರುತಿ ಇರುವುದರಿಂದ. ದ್ವಿರುಕ್ತಿಯು, ಹೇಳಿದ ಅರ್ಥವು ಹೀಗೆಯೇ ಎಂದು ಅವಧಾರಣಾರ್ಥಕವಾಗಿದೆ.

## ಸಿದ್ಧಾಂತ

**ಸೂ.ರ.:– एवं च मुक्तो न पुनरावृत्तिमान् । न च पुनरावर्तते न च पुनरावर्तत इति शब्दात् । सर्वान्कामानिति (ऐ.आ.२-५-१-१५) श्रुतेश्च । किञ्च सत्यकामस्य मुक्तस्य न मुक्तेः परावृत्तिर्युक्ता । कामनाविरहात् । अनन्तकालस्थायित्वाच्च न पुनरावृत्तिः । न चानन्तस्यापि कालस्य समाप्त्यनन्तरं परावृत्तिरस्त्विति वाच्यम् । अनन्तकालसमाप्तिमभिधायानन्तरमिति पुनः कालसद्भावोक्ते-र्व्याहतत्वात् । अतो मुक्तानां पुनरावृत्तेरभावायुक्तं मुक्तेः पुरुषार्थत्वमिति सिद्धम् ॥**

ಮುಕ್ತನಾದವನು ಪುನರಾವೃತ್ತಿ ಉಳ್ಳವನಲ್ಲ, ಕಾರಣ – "ನ ಚ ಪುನರಾ-ವರ್ತತೇ ನ ಚ ಪುನರಾವರ್ತತೇ" (ಛಾಂ.ಉ. 8-15-1) ಎಂಬುದಾಗಿ ಶ್ರುತಿ ಇರುವುದರಿಂದ. ಮತ್ತು "ಸರ್ವಾನ್ ಕಾಮಾನಾಪ್ತ್ವಾಽಮೃತಃ ಸಮಭವತ್ಸಮ-ಭವತ್" (ಐ.ಆ. 2-5-1-15) ಎಂಬುದಾಗಿಯೂ ಶ್ರುತಿ ಇರುವುದರಿಂದ. ಮತ್ತು

ಸತ್ಯಕಾಮನಾದ ಮುಕ್ತನಿಗೆ ಮುಕ್ತಿಯಿಂದ ಪುನರಾವೃತ್ತಿಯು ಯುಕ್ತವೂ ಅಲ್ಲ. ಹಿಂದಿರುಗಬೇಕು ಎಂಬ ಕಾಮನಾ ಬರುವುದಿಲ್ಲವಾದ್ದರಿಂದ. ಮೋಕ್ಷವು ಅನಂತ-ಕಾಲದವರೆಗೆ ಸ್ಥಾಯಿಯಾದ್ದರಿಂದಲೂ ಸಹ ಮುಕ್ತನಿಗೆ ಪುನರಾವೃತ್ತಿ ಇಲ್ಲ.

ಕಾಲವು ಅನಂತವಾಗಿದ್ದರೂ ಸಹ ಸಮಾಪ್ತಿಯ ಅನಂತರದಲ್ಲಿ ಪುನರಾವೃತ್ತಿ ಆಗಲಿ ಎಂದು ಶಂಕಿಸುವುದು ಸರಿಯಲ್ಲ. ಅನಂತಕಾಲಸಮಾಪ್ತಿಯನ್ನು ಹೇಳಿ "ಅನಂತರದಲ್ಲಿ" ಎಂಬುದಾಗಿ ಮತ್ತೆ ಕಾಲಸದ್ಭಾವವನ್ನು ಹೇಳುವುದರಿಂದ ವ್ಯಾಹತವಾಗುತ್ತದೆ.

ಆದ್ದರಿಂದ ಮುಕ್ತರಿಗೆ ಪುನರಾವೃತ್ತಿಯು ಇಲ್ಲವಾದ್ದರಿಂದ ಮುಕ್ತಿಗೆ ಪುರುಷಾರ್ಥತ್ವವು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಅನಾವೃತ್ತ್ಯಧಿಕರಣವು ಮುಗಿಯಿತು.

ಇಲ್ಲಿಗೆ ಸೂತ್ರಾರ್ಥರತ್ನಾವಲೀ ವ್ಯಾಖ್ಯಾನಸಹಿತವಾದ ಬ್ರಹ್ಮಸೂತ್ರಗಳಲ್ಲಿ
ನಾಲ್ಕನೇ ಅಧ್ಯಾಯದ ನಾಲ್ಕನೇ ಪಾದವು ಮುಗಿಯಿತು.

ಇಲ್ಲಿಗೆ ನಾಲ್ಕನೇ ಅಧ್ಯಾಯವು ಮುಗಿಯಿತು.

*ಗ್ರಂಥವು ಸಮಾಪ್ತವಾಯಿತು.*

# ಅಕಾರಾದಿಕ್ರಮೇಣ ಬ್ರಹ್ಮಸೂತ್ರಾಣಿ

## अथ चतुर्थोऽध्यायः

### अ

| सूत्राणि | अ. | पा. | सू. |
|---|---|---|---|
| **स** | | | |
| सङ्कल्पादेव च तच्छ्रुतेः | ४ | ४ | ८ |
| समना चासृत्युपक्रमादमृतत्वं चानुपोष्य | ४ | २ | ७ |
| सम्पद्याविहाय स्वेन शब्दात् | ४ | ४ | १ |
| सामीप्यात्तु तद्व्यपदेशः | ४ | ३ | ९ |
| सूक्ष्मं प्रमाणतश्च तथोपलब्धेः | ४ | २ | ९ |
| सोऽध्यक्षे तदुपगमादिभ्यः | ४ | २ | ४ |
| स्थितिमाह दर्शयतश्चैवं प्रत्यक्षानुमाने | ४ | ४ | २१ |
| स्पष्टो ह्येकेषां | ४ | २ | १३ |
| स्मरन्ति च | ४ | १ | १० |
| स्मर्यते च | ४ | २ | १४ |
| स्मृतेश्च | ४ | ३ | ११ |
| स्वाप्ययसम्पत्त्योरन्यतरापेक्षमाविष्कृतं हि | ४ | ४ | १६ |

ಬ್ರಹ್ಮಸೂತ್ರಗಳ ಅಧ್ಯಯನದ ಸೌಕರ್ಯಕ್ಕಾಗಿ ಭಾಷ್ಯ-ಟೀಕಾ-ಟಿಪ್ಪಣೀಗ್ರಂಥಗಳಲ್ಲದೇ ಸೂತ್ರಗಳನ್ನೇ ವಿವರಿಸುವ ಕೆಲವು ಸ್ವತಂತ್ರ ಗ್ರಂಥಗಳೂ ಇವೆ.

ಅಂತಹ ಸ್ವತಂತ್ರಗ್ರಂಥಗಳಲ್ಲಿ ಸೂತ್ರಾರ್ಥರತ್ನಾವಲೀ ಎನ್ನುವುದು ಬಹಳ ಉಪಯುಕ್ತವಾದ ಗ್ರಂಥವಾಗಿದೆ. ಇದರಲ್ಲಿ ಪ್ರತಿಯೊಂದು ಸೂತ್ರಕ್ಕೂ ಪೀಠಿಕಾರೂಪದಲ್ಲಿ ಸಂಗತಿ-ಪೂರ್ವಪಕ್ಷಗಳನ್ನು ಹೇಳಿ, ನಂತರ ಸೂತ್ರಾರ್ಥವನ್ನು ತಿಳಿಸಿ, ಕೊನೆಗೆ ಸಿದ್ಧಾಂತವನ್ನು ನಿರೂಪಿಸುತ್ತಾರೆ. ಇದರಿಂದ ಪ್ರತಿಯೊಂದು ಸೂತ್ರದ ಮತ್ತು ಅಧಿಕರಣದ ಅಭಿಪ್ರಾಯವನ್ನು ತಿಳಿದುಕೊಳ್ಳಲು ತುಂಬ ಸಹಾಯವಾಗುತ್ತದೆ.

ಈ ಗ್ರಂಥವು ತತ್ವಪ್ರಕಾಶಿಕೆಯ ಸಂಗ್ರಹರೂಪವಾಗಿದ್ದು, ಬ್ರಹ್ಮಸೂತ್ರಗಳಲ್ಲಿ ಪ್ರತಿಪಾದಿತವಾದ ತತ್ವಗಳನ್ನು ತಿಳಿದುಕೊಳ್ಳಲು ತುಂಬ ಸಹಾಯಕವಾಗಿದೆ.

ವಿದ್ವಾನ್ ಕಾಂತೇಶಾಚಾರ್ಯ ಕದರಮಂಡಲಗಿ ಇವರು ಈ ಗ್ರಂಥದ ಕನ್ನಡ ಅನುವಾದವನ್ನು ಮಾಡಿದ್ದಾರೆ. ಇವರು ಈ ಮೊದಲೇ ಖಂಡನತ್ರಯಗಳು, ವಾದಾವಲೀ ಮೊದಲಾದ ಗ್ರಂಥಗಳ ಕನ್ನಡ ಅನುವಾದವನ್ನು ಸುಂದರವಾಗಿ ಮಾಡಿದ್ದಾರೆ.

ಸಂಸ್ಕೃತ ಗ್ರಂಥಗಳನ್ನು ಮೂಲದಿಂದಲೇ ತಿಳಿದುಕೊಳ್ಳಲು ಶ್ರಮವಾಗುತ್ತಿರುವ ಈ ಕಾಲದಲ್ಲಿ ಅವುಗಳ ಕನ್ನಡ ಅನುವಾದವನ್ನು ಮಾಡಿ ಸಜ್ಜನರಿಗೆ ತಿಳಿಸಿಕೊಡುವ ಕಾರ್ಯವು ಬಹಳ ಉಪಯುಕ್ತವಾದ ಕಾರ್ಯವಾಗಿದೆ.

ಕಾಂತೇಶಾಚಾರ್ಯರು ಈ ಕನ್ನಡ ಅನುವಾದ ಕಾರ್ಯವನ್ನು ಮುಂದುವರೆಸಲಿ ಎಂದು ಹಾರೈಸುವೆವು.

ಪ್ರೊ. ಕೆ.ಟಿ. ಪಾಂಡುರಂಗೀ
ಅಧ್ಯಕ್ಷರು
ದ್ವೈತವೇದಾಂತ ಅಧ್ಯಯನ ಮತ್ತು ಸಂಶೋಧನ ಕೇಂದ್ರ